ಮನೋಹರ ಗ್ರಂಥಮಾಲೆಯ ೧೦೯–೧೧೦ನೆಯ ಕುಸುಮ

# ಮರ್ಯಾದೆ ಮಹಲು

(ಸಾಮಾಜಿಕ ಕಾದಂಬರಿ)



ಬರೆದವರು :

'ಅಶ್ವತ್ಥ'

ಅಗಸ್ಟ-ಅಕ್ಟೋಬರ
೧೯೫೧



ಬೆಲೆ :
೩—೮—೦

ಮನೋಹರ ಗ್ರಂಥಪ್ರಕಾಶನ ಸಮಿತಿ, ಧಾರವಾಡ

ಸಾಹಿತ್ಯವಿಷಯದಲ್ಲಿ ಸಲಹೆಗಾರರು:

ಶ್ರೀ. ದ. ರಾ. ಬೇಂದ್ರೆ, ಎಂ.ಎ.

ಶ್ರೀ. ವಿ. ಕೃ. ಗೋಕಾಕ, ಬಿ.ಎ. (ಆಕ್ಸ್‌ಫರ್ಡ್)

ಶ್ರೀ. ರಂ. ಶ್ರೀ. ಮುಗಳಿ, ಎಂ.ಎ., ಬಿ.ಟಿ.

ಸಂಪಾದಕ :

**ಜಿ. ಬಿ. ಜೋಶಿ**

ವ್ಯವಸ್ಥಾಪಕ ಸಂಪಾದಕ:

**ಪ್ರಲ್ಹಾದ ಜಿ. ಕಾಟೋಟಿ**

( ೨೦೦೦ ಪ್ರತಿಗಳು )



ಮುದ್ರಕರು :
ಎಂ. ಎ. ಕಾಮತ, ಬಿ.ಎಸ್‌ಸಿ.
ಹಿಂದಮಾತಾ ಮುದ್ರಣಾಲಯ
ಧಾರವಾಡ.

ಪ್ರಕಾಶಕರು :
ಜಿ. ಬಿ. ಜೋಶಿ
ಮನೋಹರ ಗ್ರಂಥಮಾಲಾ
ಧಾರವಾಡ.

# ಕೃತಜ್ಞತೆ

ಅಗಸ್ಟ ಹದಿನೈದರಿಂದ ಪ್ರಾರಂಭವಾದ ಗ್ರಂಥಮಾಲೆಯ ಹತ್ತೊಂಬತ್ತನೆಯ ಹೊಸ ವರುಷವು ಶ್ರೀ. 'ಅಶ್ವತ್ಥ'ರ (ಕೆ. ಎ. ಎನ್. ರಾವ) ಸಾಮಾಜಿಕ ಕಾದಂಬರಿಯಾದ ಈ 'ಮರ್ಯಾದೆ ಮಹಲಿ'ನಿಂದ ಮೊದಲುಗೊಂಡಿದೆ. ಕಳೆದ ಈ ಹದಿನೆಂಟು ವರುಷಗಳಲ್ಲಿ ಗ್ರಂಥಮಾಲೆಯ ಮೇಲಿನ ಆದರದಿಂದ ಲೇಖಕರು ಗ್ರಂಥಗಳನ್ನು ಬರೆದುಕೊಟ್ಟು, ಗ್ರಾಹಕರು ಸಹೃದಯತೆಯಿಂದ ಸಹಾಯ ಸಲ್ಲಿಸಿ, ವರ್ಷ ವರ್ಷಕ್ಕೂ ಪರಿಸ್ಥಿತಿ ತಂದೊಡ್ಡಿದ ವಿಘ್ನಗಳಿಗೆ ಮುಗ್ಗರಿಸದಂತೆ ಗ್ರಂಥಮಾಲೆಯನ್ನು ಕಾಪಾಡಿಕೊಂಡು ಬಂದಿದ್ದಾರೆ; ಅದನ್ನು ಬೆಳೆಸಿದ್ದಾರೆ; ಅದಕ್ಕೆ ಹೆಚ್ಚಿನ ಗೌರವ ತಂದು ಕೊಟ್ಟಿದ್ದಾರೆ. ಅದಕ್ಕಾಗಿ ನಾನು ಆ ಎಲ್ಲ ಮಹನೀಯರಿಗೂ ನನ್ನ ಕೃತಜ್ಞತೆಯ ವಂದನೆಗಳನ್ನು ಅರ್ಪಿಸುತ್ತೇನೆ.

ಶ್ರೀ. ಕೆ. ಎ. ಎನ್. ರಾವ ಅವರು ಗ್ರಂಥಮಾಲೆಗಾಗಿ ತಮ್ಮ ಈ 'ಮರ್ಯಾದೆ ಮಹಲು' ಕಾದಂಬರಿಯನ್ನು ಬರೆದು ಕೊಟ್ಟುದಕ್ಕಾಗಿ ನಾನು ಅವರಿಗೂ ತುಂಬ ಉಪಕೃತನಾಗಿದ್ದೇನೆ.

ಈ ಹೊಸ ವರುಷದಿಂದ ನಮ್ಮ ಗ್ರಂಥಮಾಲೆಗೆ ಒಂದುನೂರೈವತ್ತು ರೂಪಾಯಿ ಸಲ್ಲಿಸಿ ಆಜೀವ ಚಂದಾದಾರರಾಗಿ ನೆರವನ್ನಿತ್ತ ಶ್ರೀಮಾನ್ ರಾಮಚಂದ್ರ ಕುಲಕರ್ಣಿ ಚಿಕ್ಕಹಂದಿಗೋಳ ಇವರಿಗೆ ನಾನು ಬಹಳ ಉಪಕೃತನಾಗಿದ್ದೇನೆ.

—ಸಂಪಾದಕ.

# ೧

* * *

ಆ ಎಪ್ರಿಲ ಮಧ್ಯಾಹ್ನ ಸಾಹುಕಾರ್ ವಿಶ್ವೇಶ್ವರಯ್ಯನವರು ಭವ್ಯವಾದ 'ಮರ್ಯಾದೆ' ಮಹಲಿನ ವಿಶಾಲವಾದ ವರಾಂಡದಲ್ಲಿ ಶತಪಥ ತಿರುಗುತ್ತಿದ್ದರು. ಐವತ್ತಾರು ವರ್ಷ. ಎತ್ತರವಾದ ಶರೀರ. ಮುದ್ದೆಮುದ್ದೆಯ ಇಸ್ಪೀಟುರಾಜನ ಮುಖ. ದಪ್ಪ ಜುಟ್ಟಿನ ಗಂಟು. ಕಿವಿಯಲ್ಲಿ ವಜ್ರದ ಹತ್ತುಕಡಕು. ಆಗಾಗ ಮಡಿಸುತ್ತಿದ್ದ ಕೈಬೆರಳುಗಳಲ್ಲಿ ರತ್ನದ ಉಂಗುರಗಳು. ಕಲಾಪತ್ತಿನ ಕಚ್ಚೆ ಪಂಚೆ, ಪಾಪ್ಲಿನ್ ಷರಟು, ಜರಿಯ ಶಲ್ಯ. ಮುಖದ ಮೇಲೆ ನಿರೀಕ್ಷೆಯ ಆತುರ ಕಾಣುತ್ತಿತ್ತು; ಕ್ಷಣಕ್ಷಣಕ್ಕೂ ಹೆಚ್ಚುತ್ತಿತ್ತು. ನಾಲ್ಕಾರು ಹೆಜ್ಜೆಗೆ ಅವರು ಮಹಲಿನ ಮುಂದಿನ ರಸ್ತೆಯ ಕಡೆ ಕಣ್ಣನ್ನು ಹೊರಳಿಸಿ ಅಸಮಾಧಾನಪಟ್ಟುಕೊಳ್ಳುತ್ತಿದ್ದರು. ಮಗನನ್ನು ಕರೆದು ತರಲು ಹೋಗಿದ್ದ ಕಾರು ಇನ್ನೂ ಹಿಂದಿರುಗಿರಲಿಲ್ಲ.

ಈ ಸಂದರ್ಭದಲ್ಲಿ ನ್ಯಾಯವಾಗಿಯೇ ಸಾಹುಕಾರರ ಮನಸ್ಸು ಹಲವು ವರ್ಷಗಳ ಹಿಂದಕ್ಕೆ ಹೋಯಿತು. ಈ ಮಗನನ್ನು ಎಷ್ಟು ಕಾಲದ ಮೇಲೆ ಎಷ್ಟು ಕಷ್ಟಪಟ್ಟು ಎಂತಹ ಬಲಿಗೊಟ್ಟು ಪಡೆದಿದ್ದರು! ಮೊದಲನೆಯ ಸಂಬಂಧ ಗಂಗಮ್ಮನೊಡನೆ ನಡೆಸಿದ ಹತ್ತುವರ್ಷಗಳ ಕಾಲದ ಸಂಸಾರ ಬರಿಯ ಬೀಳುಭೂಮಿಯಾಗಿತ್ತು. ಸಂತಾನೋತ್ಪತ್ತಿಗಾಗಿಯೇ ಎರಡನೆಯ ಸಂಬಂಧ ಬೆಳೆಸಬೇಕಾಯಿತು. ಇದನ್ನು ತಿಳಿದೂ ಗಂಗಮ್ಮ ಭಾವಿ ಹಾರಿಕೊಂಡಿದ್ದಳು. ಹುಚ್ಚಿ! ತಾನು ತಡೆದಿದ್ದ ಕಾಲವೇನು ಸ್ವಲ್ಪವೆ? ತಲತಲಾಂತರದಿಂದ ಬಂದ ಸದ್ವಂಶದ ಬೆಳೆವಣಿಗೆಗಿಂತಲೂ ಅವಳಿಗೆ ತನ್ನಲ್ಲೇ

ಮಮತೆ ಜಾಸ್ತಿ. ಹೆಂಗಸರೇ ಹಾಗೆ. ಅಸೂಯಾಪರರು. ನ್ಯಾಯದ ತಿಳಿವಳಿಕೆ ಸಾಲದು. ಬರಿ ಭಾವನಾಜೀವಿಗಳು. ಇವರಿಗೆ, ಈ ಪ್ರಪಂಚ ? ಹುಂ. ಇವಳ ಶಾಪವೋ ಏನೋ ಎರಡನೆಯ ಹೆಂಡತಿ ಗೌರಿಯೂ ಆರು ವರ್ಷ ಕಾಲ ಫಲಕೊಡಲಿಲ್ಲ. ಯಾತ್ರೆ ತೀರ್ಥ, ಹವನ ಹೋಮ, ವ್ರತ ಕಥೆ, ಪೂಜೆ ಪ್ರಾರ್ಥನೆ, ದಾನ ಧರ್ಮ, ಔಷಧಿ ಪಥ್ಯ, ಎಲ್ಲ ವ್ಯರ್ಥವಾದುವು. ಮನಸ್ಸು ಮೂರನೆಯ ಸಂಬಂಧದ ಮೇಲೆ ಹೋಗಿತ್ತು. ಆದರೆ ಗಂಗಮ್ಮ ನಡೆಸಿದ್ದ ಅವಿವೇಕ ಕೊಂಚ ತಡೆಯುತ್ತಿತ್ತು. ಏನಾದರೂ ಮತ್ತೆ ಹಾಗಾದರೆ ಜನ ಏನಂದಾರು ? ಅಂತೂ ಇಂತಹ ನಿರಾಸೆ ಹುಟ್ಟಿಸುತ್ತಿದ್ದ ಬಿಕ್ಕಟ್ಟಿನಲ್ಲಿ ದೇವರೇ ದಯಮಾಡಿಸಿದ ಹಾಗೆ ಕುಲಗುರುಗಳು ಬಂದು ಮಹಲಿನಲ್ಲಿದ್ದುಕೊಳ್ಳುವ ಮರ್ಯಾದೆ ಮಾಡಿ, ಎರಡು ತಿಂಗಳ ಕಾಲ ಗಂಡಹೆಂಡಿರ ಸೇವೆಯನ್ನು ಸ್ವೀಕರಿಸಿ ಹರಸಿದ್ದರು. ಅದೇನು ಗುರುಮಹಿಮೆಯೋ, ಆಶ್ಚರ್ಯಾಶ್ಚರ್ಯವಾಗಿ ಗುರುಗಳ ವರಪ್ರಸಾದದಿಂದ ಅವರು ಬೀಳ್ಕೊಂಡ ದಿನಗಳಲ್ಲಿಯೇ ಗೌರಿಯು ಬಸಿರಿಯಾದಳು. ಆಗ ಆದ ಅಪಾರ ಆನಂದವನ್ನು ನೆನೆಸಿಕೊಂಡು ಈಗಲೂ ಮೈ ರೋಮಾಂಚವಾಗುತ್ತಿತ್ತು. ಆ ಬಸಿರು ದಿನಗಳಲ್ಲಿಯ ಉತ್ಸವ, ಉತ್ಸಾಹ, ಆರೈಕೆ ಎಚ್ಚರಿಕೆಗಳೆಷ್ಟು ! ತಮ್ಮ ವ್ಯವಹಾರ ಉದ್ಯಮಗಳಿಂದ ಮನಸ್ಸು ಕದಲಿದ ದಿನಗಳೆಂದರೆ ಅವೇ, ತಮ್ಮ ಬಾಳಿನಲ್ಲಿ. ನೋವು ಹತ್ತಿದ ದಿನವೂ ತಾವು ಕೋಣೆಯ ಬಾಗಿಲಿನ ಮುಂದೆ ಈಗಿನ ಹಾಗೆಯೇ ಶತಪಥ ತಿರುಗುತ್ತಿದ್ದರು. ಆಗಾಗ ಮೈ ನಡುಗುತ್ತಿತ್ತು ಅಂದೂ ಮಗ ಹುಟ್ಟುವ ದಿನ ! ಹೊತ್ತಾದಂತೆಲ್ಲ ಆತುರ ಆತಂಕಗಳು ಏರುತ್ತಿದ್ದುವು. ಗಂಟೆಗಂಟೆಗಳು ಕಳೆದರೂ ಕೋಣೆಯಿಂದ ನರಳು-ಧ್ವನಿ ಕೇಳಿಸುತ್ತಿತ್ತೆ ಹೊರತು ತಾವು ಆಲಿಸುತ್ತಿದ್ದ ಮಗುವಿನ ಮೊದಲ ಅಳುವಿನ ಶಬ್ದವಿರಲಿಲ್ಲ. ಒಮ್ಮೆಗೇ ಬಾಗಿಲು ಕಿರ್ರೆಂದಿತು. ಡಾಕ್ಟರು ಹೊರಗೆ ತಲೆಹಾಕಿದರು. ಅವರ ಮುಖಕ್ಕೆ ತಮ್ಮದು ತಾಗುವಷ್ಟು ಹತ್ತಿರಕ್ಕೆ ಸರಿದುಕೊಂಡು ಅತ್ಯಾತುರದಿಂದ "ಏನು ಡಾಕ್ಟರೇ?" ಎಂದು ಕೇಳಿದ್ದರು. ಡಾಕ್ಟರು ಒಡನೆಯೇ ಉತ್ತರ ಕೊಡಲಿಲ್ಲ. ಅವರ ಆತಂಕದ ಮುಖವನ್ನು ನೋಡಿ ತಮ್ಮ ಎದೆಯೇ ನಿಲ್ಲುವಂತಾಗಿತ್ತು. ಅಂದಿನ ಒಂದೊಂದು ನೋಟವೂ ಒಂದೊಂದು ಮಾತೂ ತಮ್ಮ ಮನಸ್ಸಿನಲ್ಲಿ ನೆಟ್ಟಿದ್ದುವು. ಡಾಕ್ಟರು ಮೆಲ್ಲಗೆ ಬಾಗಿಲನ್ನು ತೆರೆದು ಹೊರಗೆ ಬಂದು ಮುಚ್ಚಿ

ಕೊಂಡರು. ತಾವು ಆ ಅನಿಶ್ಚಯವನ್ನು ತಡೆಯಲಾರದೆ ಅವರ ಭುಜವನ್ನು ಹಿಡಿದು ಅಲುಗಿಸಿ " ಏನಾಗಿದೆ ? " ಎಂದು ಒತ್ತಾಯದಿಂದ ಕೇಳಿದ್ದರು.

" ಹೆರಿಗೆ ಬಹಳ ಕಷ್ಟ...."

" ಅಂದರೆ ? "

" ಮಗು ಕಾಲು ಮೊದಲಾಗಿ ಅರ್ಧ ಹೊರಗೆ ಬಂದು...."

" ಹ ! "

" ಸಿಕ್ಕಿಬಿದ್ದಿದೆ. "

" ಅಯ್ಯೋ ! ಬದುಕಿದೆ ತಾನೆ ? "

" ಬದುಕುವ ಸಂಭವವಿದೆ. "

" ಹುಂ " ಉಸಿರು ಕೊಂಚ ಹಾದಿತ್ತು

" ಆದರೆ...."

" ಆದರೆ ? "

" ತಾಯಿಗೆ ಅಪಾಯ...."

" ಅಪಾಯವೆ ? "

" ಇಲ್ಲ ಮಗುವಿಗೆ. "

" ಮಗು ! "

" ಒಂದು ಜೀವ ಉಳಿಸಬಹುದು. "

ಕ್ರೂರ ಆಯ್ಕೆ ! ತಮಗೆ ದಿಕ್ಕು ತೋಚದೆ ಸ್ತಬ್ಧರಾಗಿದ್ದರು.

" ಬಹಳ ಹೊತ್ತಿಲ್ಲ. ಹೆಚ್ಚು ಅನಾಹುತವಾದೀತು, ಹೇಳಿ. " ಡಾಕ್ಟರು ಎಚ್ಚರಿಸಿದರು.

" ಏನು ಹೇಳಲಿ ಡಾಕ್ಟರೇ ? " ನಿಸ್ಸಹಾಯರಾಗಿ ತಾವು ಕೈಕೊಡವಿ ಕೊಂಡರು.

" ತಾಯಿಯೋ ಮಗುವೋ ? "

" ಇಬ್ಬರೂ."

" ಸಾಧ್ಯವಿಲ್ಲ. ಇಬ್ಬರೂ ಕೈಬಿಟ್ಟಾರು."

"ಹಾಗೇ ?....ಗಂಡೊ ಹೆಣ್ಣೊ ?" ಪ್ರಶ್ನೆ ತಾನಾಗಿಯೇ ಹೊರಗೆ ಬಂದಿತು.

"ಗಂಡು."

"ಗಂಡು!"

ವಂಶೋದ್ಧಾರಕ! ಉತ್ತರಾಧಿಕಾರಿ! ಸದ್ಗತಿಸಾಧಕ! 'ಮರ್ಯಾದೆ' ಮನೆತನವನ್ನು ಬೆಳೆಸುವ ಕುಡಿಯನ್ನು ಕಡಿವ-ಬಿಡುವುದೆ? ಈ ಶುದ್ಧ ಶ್ರೇಷ್ಠ ರಕ್ತದ ಹೊಳೆಯನ್ನು ಬತ್ತಿಸುವುದೆ? ತಮ್ಮ ಅತುಳೈಶ್ವರ್ಯಕ್ಕೆ ಮುಂದೇನು ಗತಿ? ತಮಗೆ ಇಂತಹ ಸಂದರ್ಭ ಮತ್ತೆ ಬಂದೀತೆ? ಆದರೆ ಗೌರಿ? ಬಹಳ ಒಳ್ಳೆಯ ಹುಡುಗಿ. ಅವಳಲ್ಲಿಯೂ ಪ್ರೇಮ ಬೆಳೆದಿತ್ತು. ಅದೂ ಬಸಿರಿಯಾದೀಚೆಗೆ ಬಹಳ. ಮತ್ತೆ? ಕ್ಷಣಕಾಲ ಮನಸ್ಸು ಹೊಯ್ದಾಡಿತು. ಆದರೇನು, ವ್ಯಕ್ತಿಗಿಂತ ವಂಶ ಹೆಚ್ಚು. ಹೆಂಡತಿಯಾದರೂ ಇನ್ನೊಬ್ಬಳು ಸಿಕ್ಕಾಳು. ಮಗು? ಯಾರಿಗೆ ಗೊತ್ತು? ಇಷ್ಟು ಕಾಲದ ಮೇಲೆ ಇಷ್ಟು ಪ್ರಯತ್ನ ಪ್ರಯಾಸಗಳ ಪರಿಣಾಮವಾದ ಫಲ. ಕಳೆದುಕೊಳ್ಳುವುದು ಶುದ್ಧ ಅವಿವೇಕ.

"ಏನು ಹೇಳಿ ಬೇಗ, ಯಾರು?" ಡಾಕ್ಟರು ಒತ್ತಾಯಪಡಿಸಿದರು.

"ಮಗು" ತಾವು ಕಣ್ಣುಮುಚ್ಚಿ ಹೇಳಿಬಿಟ್ಟರು.

ಮುಂದೆ ಗೌರಿಯ ನೆನಪು ಕಾಡಿದಾಗ ಭಯಪಟ್ಟು ತಮ್ಮ ಆತ್ಮಶಾಂತಿಗಾಗಿ, ವಂಶದ ಶ್ರೇಯಸ್ಸಿಗಾಗಿ ಅವಳ ಹೆಸರಿನಲ್ಲಿ ಬೇಕಾದಷ್ಟು ದಾನ-ಧರ್ಮಗಳನ್ನು ಮಾಡಿದ್ದರು. ಅವಳ ಸ್ಮಾರಕವಾಗಿ ಊರಿನ ಆಸ್ಪತ್ರೆಗೆ ಒಂದು ಹೆರಿಗೆಯ ವಾರ್ಡನ್ನೂ ಕಟ್ಟಿಸಿ ಸಮಾಧಾನ ಹೊಂದಿದ್ದರು.

ತಾಯಿಯ ಜೀವವನ್ನು ಬಲಿಗೊಂಡು ಹುಟ್ಟಿದ ಮಗನೇ ಇವನು. ಗುರುಗಳ ವರಪ್ರಸಾದದಿಂದ ಹುಟ್ಟಿದವನಾದುದರಿಂದ ಗುರುಪ್ರಸಾದನೆಂದೇ ನಾಮಕರಣವಾಯಿತು. ಇದಾದ ಮೇಲೆ ತಾವು ಗುರುಗಳಿಗೆ ವರದ ವಿಚಿತ್ರತೆಯನ್ನು ಕುರಿತು ಬರೆದಿದ್ದರು. ಅದಕ್ಕೆ ಗುರುಗಳು "ಪ್ರಕೃತಿ ಒಂದು ಕೈಯಿಂದ ಕೊಟ್ಟು ಇನ್ನೊಂದರಿಂದ ಕಿತ್ತುಕೊಳ್ಳುತ್ತದೆ. ಬೇಕಾದುದಕ್ಕೆ ಬೆಲೆ ಕೊಡಬೇಕು. ಇದಕ್ಕಾಗಿ ದುಃಖಿಸಿ ಫಲವಿಲ್ಲ. ಕಳೆದುದನ್ನು ಮರೆಯಬೇಕು." ಮೊದಲಾಗಿ ಬೇಕಾದಷ್ಟು ತಿಳಿವಳಿಕೆ ಹೇಳಿ ಮಗುವಿಗೆ ತಾಯಾಗುವಂತೆ ಮತ್ತೊಬ್ಬ ಹೆಂಡತಿಯನ್ನು ಮದುವೆಯಾಗಿ ಸುಖದಿಂದ ಇರಬೇಕೆಂದು ಬರೆಸಿದ್ದರು. ಅವರ ಮಾತನ್ನು 'ಶಿರಸಾವಹಿಸಿ' ಮೂರು ತಿಂಗಳೊಳಗಾಗಿ ತಾವು ಸಣ್ಣಮ್ಮನನ್ನು ಮದುವೆಯಾಗಿದ್ದರು. ಅವಳು ಮೊದಲಿನಿಂದಲೂ,

ಮತ್ತು ನಾಲ್ಕು ವರ್ಷದ ಮೇಲೆ ಕುಸುಮ ಹುಟ್ಟಿದ ಮೇಲೂ, ಮಲಮಗನನ್ನು ಬಹಳ ಪ್ರೀತಿಯಿಂದಲೇ ನೋಡಿಕೊಂಡು ತಾಯಾಗಿದ್ದಳು.

ಆದರೂ ಮಗುವನ್ನು ತಮ್ಮ ತೊಡೆಯ ಮೇಲೇ ಬಹಳವಾಗಿ ಬೆಳೆಸಿದ್ದರು. ಅಕ್ಕರೆ ಅತಿಯಾಯಿತೆಂದೂ ಮಗು ಕೆಟ್ಟುಹೋದಾನೆಂದೂ ಸದರದಿಂದ ಇದ್ದ ಊರಿನ ಒಬ್ಬಿಬ್ಬರು ಎಚ್ಚರಿಕೆ ಕೊಟ್ಟದ್ದೂ ಉಂಟು. ಆದರೂ ತಾವೇನು ಅದನ್ನು ಗಮನಿಸಿರಲಿಲ್ಲ. ಇದರಿಂದ ಕೆಡಕೂ ಆಗಿರಲಿಲ್ಲ. ಮಗು ಸ್ವಲ್ಪ ಹಟಮಾರಿಯಾಗಿದ್ದ, ಅಷ್ಟೆ. ಆದರೆ ತಮ್ಮ ಒತ್ತಾಯದಿಂದ ತಿದ್ದುವುದೇನು ಅಸಾಧ್ಯವಾಗಿರಲಿಲ್ಲ. ಇವನದು ಯಾವಾಗಲೂ ಹೆಚ್ಚು ಲೌಕಿಕವನ್ನು ನಡೆಸದಿದ್ದ ಸ್ವಭಾವ. ಇದಕ್ಕೆ ತನ್ನ ಸ್ಥಾನಮಾನಗಳನ್ನು ಚೆನ್ನಾಗಿ ತಿಳಿಯದಿದ್ದುದೇ ಕಾರಣ. ಊರಿನ ಶಾಲೆಯಲ್ಲಿ ಓದುತ್ತಿದ್ದಾಗ ಆ ಮೇಷ್ಟರು ಗೋಪಾಲಯ್ಯ, ದರ್ಜಿ ನಾಗಪ್ಪ, ಪುರೋಹಿತ ಶಂಕರಶಾಸ್ತ್ರಿ, ಕಾನ್‌ಸ್ಟೇಬಲ್ ಪಾಪಣ್ಣ ಇಂತಹ ಕೆಳದರ್ಜೆಯ ಸಂಸಾರಗಳ ಮಕ್ಕಳೇ ಇವನಿಗೆ ಬಹಳ ಸ್ನೇಹಿತರು. ಅವರನ್ನು ಮಹಲಿಗೆ ಕರೆತಂದು ಅವರೊಡನೆ ಕುಣಿದಾಡುತ್ತಿದ್ದ. ಅವರ ಧಾಂದಲೆ ಹೇಳತೀರದು. ಅವರಿಗೂ ಇವನೊಡನೆ ಊಟ ತಿಂಡಿ ಎಲ್ಲ. ಅವರು ಇಲ್ಲೇ ಇರಲೆಂದು ಬೇಡಿಕೆ, ಹಟ. ಅವರ ಮನೆಗಳು ಸಣ್ಣವು, ಆಡಲು ಸ್ಥಳವಿಲ್ಲವೆಂದು ವಾದ. ಏನು ಹೇಳಬೇಕು ? ಪಾಪ ಇವನಿಗೇನು ತಿಳಿಯಬೇಕು ಅವರಿಗೂ ಇವನಿಗೂ ಇದ್ದ ವ್ಯತ್ಯಾಸ? ಹೇಳಿದರೂ ತಿಳಿದುಕೊಳ್ಳಲಾರದವನಾಗಿದ್ದ. ಆ ಕಡೆಗೆ ಹುಡುಗರು ಬರದಂತೆ ತಾವೇ ತಾಕೀತು ಮಾಡಿ ಹಲ್ಕಾ ಸಹವಾಸವನ್ನು ತಪ್ಪಿಸಬೇಕಾಗಿ ಬಂತು. ಅನಂತರ ಅಮಲ್ದಾರರು, ಡಾಕ್ಟರು, ಜೋಡಿದಾರರು, ಮಂಡಿ ಶಿವಪ್ಪನವರು ಇವರ ಮಕ್ಕಳನ್ನು ಕ್ರಿಕೆಟ್, ಫುಟ್‌ಬಾಲ್ ಅಂತ ಆಟ; ಹುಟ್ಟಿದ ಹಬ್ಬ ಸರಸ್ವತಿಪೂಜೆ ಅಂತ ಊಟ ಉಪಚಾರ, ಪಾಠಪಳಿದ್ಯ ಅಂತ ಏನೆಲ್ಲ ಸಂದರ್ಭ ಕಲ್ಪಿಸಿ ಕರೆದು ಕೂಡಿ ಹಾಕಿ ಇವನ ಜೊತೆಗೆ ಸೇರಿಸಿದ ಮೇಲೆ ಸ್ವಲ್ಪ ತನಗೆ ಸರಿಯಾದ ಸಹವಾಸಕ್ಕೆ ಹೊಂದಿಕೊಂಡು ಸುಧಾರಿಸಿದ. ಆದರೂ ಅವರಿವರ ಜತೆ ಬೆರೆದೇ ಬೇರೆಯುತ್ತಿದ್ದನಂತೆ. ಹಾಳು ಶಾಲೆಗಳು !

ಗುರುಪ್ರಸಾದವಾಗಿದ್ದರೂ ಯಾಕೋ ಇವನಿಗೆ ವಿದ್ಯೆಯ ಮೇಲೆ ಹೆಚ್ಚು ಆಸಕ್ತಿ ಇರಲಿಲ್ಲ. ಪಠ್ಯ ಪುಸ್ತಕಗಳಿಗಿಂತ ಹೆಚ್ಚಾಗಿ ಕತೆಪುಸ್ತಕಗಳನ್ನು

ಓದುತ್ತಿದ್ದ. ನಾಟಕ ಹಾಡುಗಾರಿಕೆ ಇವುಗಳಲ್ಲಿ ಭಾಗ ವಹಿಸಿ ಬಹುಮಾನ ಪಡೆಯುತ್ತಿದ್ದ. ಏನು ಪ್ರಯೋಜನ ? ಇದನ್ನು ತಿಳಿದೇ ತಾವು ಪ್ರೈಮರಿ, ಮಿಡಲ್ ಮತ್ತು ಹೈಸ್ಕೂಲುಗಳಲ್ಲಿ ಮುಖ್ಯೋಪಾಧ್ಯಾಯರುಗಳನ್ನೇ ಮನೆಯ ಪಾಠಕ್ಕೆ ಗೊತ್ತುಮಾಡಿದ್ದರು. ಅಂತೂ ಪಬ್ಲಿಕ್ ಪರೀಕ್ಷೆಗಳಲ್ಲಿ ಪಾಸು ಮಾಡಿದ್ದ. ಇಂಟರ್‌ನಲ್ಲಿ ಆರ್ಟ್ಸೋ ಸೈನ್ಸೋ ಎಂದು ಇಬ್ಬರಿಗೂ ಬಹಳ ಚರ್ಚೆಯಾಗಿತ್ತು. ಅವನು ಆರ್ಟ್ಸ್ ಕಡೆಗೇ ಹೊಡೆದಾಡಿದ. ಆದರೆ ಅದರಲ್ಲೇನಿತ್ತು? ಸೈನ್ಸ್ ತೆಗೆದುಕೊಂಡು ಇಂಜನಿಯರಿಂಗಿಗೋ, ಮೆಡಿ-ಸಿನ್ನಿಗೋ ಹೋದರೆ ಕೈತುಂಬ ಸಂಬಳ ಬೇಕಾದಷ್ಟು, ಸಂಪಾದನೆಯಾಗುವ ಉದ್ಯೋಗ ದೊರಕಿಸಿಕೊಳ್ಳಬಹುದೆಂದು, ತಮಗೆ. ಹಣ, ಹಣದ ಜೊತೆಗೆ ಪದವಿ ಮರ್ಯಾದೆಗಳು ಸಿಕ್ಕುವುವೆಂಬ ಆಸೆ ಆದರೆ ಇದು ಇವನ ತಲೆಗೇ ಹತ್ತಲಿಲ್ಲ. ಅಂತೂ ಮೊದಲೆಲ್ಲ ಒದರಾಡಿದ್ದರೂ ಕಡೆಯಲ್ಲಿ ತಮ್ಮ ಬಲವಂತಕ್ಕೆ ಒಪ್ಪಿದ್ದ. ಪಿ ಸಿ. ಎಂ. ಸಿಕ್ಕುವುದು ದುಸ್ಸಹವಾದಾಗ ಪ್ರಿನ್ಸಿಪಾಲರಿಗೆ ಒಂದು ಮಾತು ಹೇಳಿಸಿ ಅದನ್ನೇ ಕೊಡಿಸಿದ್ದರು. ಆದರೆ ಕಡೆಯ ಪರೀಕ್ಷೆಯಲ್ಲಿ ಶ್ರದ್ಧೆವಹಿಸಲಿಲ್ಲ. ಚೆನ್ನಾಗಿ ಮಾಡಿಲ್ಲವೆಂದೂ ತಿಳಿಸಲಿಲ್ಲ ಫೇಲಾಗಿಬಿಟ್ಟ. ಅಂತೂ ಸಪ್ಟೆಂಬರು ಪರೀಕ್ಷೆಯಲ್ಲಿ ತಾವು ಎಚ್ಚರಿಕೆ ತೆಗೆದುಕೊಂಡಿದ್ದರು. ಪಾಸಾಗಿದ್ದ. ಮತ್ತೊಮ್ಮೆ ಇಂಜಿನಿಯರಿಂಗ್ ಮೆಡಿಸನ್‌ಗಳ ಚರ್ಚೆಯಾಯಿತು. ಅಲ್ಲಿ ಸ್ಥಳ ಸಿಕ್ಕುವುದೇನು ಸಾಮಾನ್ಯದ ಮಾತಾಗಿರಲಿಲ್ಲ. ನೂರು ಸೀಟುಗಳಿಗೆ ಸಾವಿರಾರು ಅರ್ಜಿಗಳು ಬರುತ್ತಿದ್ದುವು. ಆದರೇನು ತಮ್ಮ ಮಗನಿಗೆ ಸ್ಥಳ ಕೊಡಿಸುವುದು ಅಷ್ಟು ಕಷ್ಟದ ಮಾತಾಗಿರಲಿಲ್ಲ. ಇವರ ಆಪ್ತ ಸ್ನೇಹಿತರು ಹಲವು ಎಂ. ಎಲ್. ಎ.ಗಳೇ ಕಾಲೇಜಿನ ಪ್ರವೇಶ ಸಮಿತಿಯಲ್ಲಿದ್ದರು. ಈಗಾಗಲೇ ತಾವೇ ಯಾರು ಯಾರಿಗೋ ಹೇಳಿಸಿ ಕೇಳಿಸಿ ಪ್ರವೇಶ ದೊರಕಿಸಿದ್ದರು. ವರ್ಷವರ್ಷವೂ ಈ ಸಂದರ್ಭದಲ್ಲಿಯೂ ಇತರ ಕೆಲಸ, ಬಡ್ತಿ, ವರ್ಗ, ಲೈಸೆನ್ಸು ಮೊದಲಾದ ಸಂದರ್ಭಗಳಲ್ಲಿದ್ದಂತೆ ಜನರು ತಂಡತಂಡವಾಗಿ ತಮ್ಮನ್ನು ಕಾಣುತ್ತಿದ್ದರು. ತಮಗೆ ಬೇಕಾದವರಿಗೆಲ್ಲ ಸಹಾಯ ಮಾಡುತ್ತಿರುವುದು ತಮ್ಮ ಉದ್ಯೋಗದ ಭಾಗವಾಗಿಹೋಗಿತ್ತು. ಹಿಂದಿನ ವರ್ಷ ಕೂಡ ಡೆಪುಟಿ ಕಮಿಷನರಂಥವರೇ ಮಗನಿಗಾಗಿ ಬಂದು ತಮ್ಮನ್ನು ಕಂಡಿದ್ದರು. ಮಲೆನಾಡಿಗೆ ಕಾದಿರಿಸಿದ್ದ ಒಂದು ಸ್ಥಳ. ಅದೆಷ್ಟೊ

ಮೊದಲನೆಯ ವರ್ಗದ ಅರ್ಜಿಗಳು ಬಂದಿದ್ದುವು. ಆದರೂ ಸಮಿತಿಯವರನ್ನು ಮಾಡಿಕೊಡಲೇಬೇಕೆಂದು ಒತ್ತಾಯಪಡಿಸಿ ಮೂರನೆಯ ವರ್ಗದವನಾಗಿದ್ದರೂ ಆ ಹುಡುಗನಿಗೇ ಸ್ಥಳ ಕೊಡಿಸಿರಲಿಲ್ಲವೆ ? ನಿಜ, ಆಗದವರು ಬಹಿರಂಗವಾಗಿಯೇ ದೋಷಾರೋಪಣೆ ಮಾಡಿದ್ದರು. ಆದರೇನು, ಹೇಳದೆ ಕೇಳದೆ ಏನಾಗುತ್ತದೆ,ಈ ದಿನಗಳಲ್ಲಿ? ಎಲ್ಲರೂ ಮಾಡುತ್ತಿರುವುದನ್ನೇ ತಾವೂ ಮಾಡಿದುದು. ಆದರಲ್ಲೇನು ತಪ್ಪು, ಅವಮರ್‍ಯಾದೆ ? ತಮ್ಮ ಪ್ರಭಾವ ಶಕ್ತಿಗಳು ಹೀಗಿದ್ದು ತಮ್ಮ ಮಗನಿಗೇ ಸ್ಥಳ ಕೊಡಿಸುವುದು ಏನು ಕಷ್ಟವಾಗಿತ್ತು ? ಬೇಕಾದರೆ ಪ್ರಪಂಚವನ್ನೇ ತಲೆ ಕೆಳಗು ಮಾಡಬಹುದಾಗಿತ್ತು. ಆದರೆ ಇದು ಇವನಿಗೇ ಬೇಕಾಗಲಿಲ್ಲ. ಬೇಡವೆಂದು ಒಂದೇ ಪಟ್ಟನ್ನು ಹಿಡಿದು ನಿರಾಸೆಯನ್ನುಂಟುಮಾಡಿದ. ತಮ್ಮ ಒತ್ತಾಯಕ್ಕೆ ಒಪ್ಪದಿದ್ದುದೆಂದರೆ ಇದೇ ಮೊದಲು. ಏನು ಅಧೈರ್‍ಯವೋ ಏನೋ ಎಂದು ಪರೀಕ್ಷೆಗಳ ವಿಷಯದಲ್ಲಿ ತಾವು ಕೊಟ್ಟ ಪ್ರೋತ್ಸಾಹವೂ ವ್ಯರ್ಥವಾಯಿತು. ತನಗೆ ಯೋಗ್ಯತೆಯಿಲ್ಲವೆಂದು ಕಾರಣ ಹೇಳಿಬಿಟ್ಟಿದ್ದ ! ಹುಚ್ಚು ಹುಡುಗ. ಏನೋ ಪ್ರಪಂಚದಲ್ಲಿ ಎಲ್ಲವೂ ಯೋಗ್ಯತೆಯ ಮೇಲೇ ನಡೆಯುವ ಹಾಗೆ. ಮಹಾ ಸತ್ಯವಂತ ! ವ್ಯವಹಾರ ತಿಳಿದಿದ್ದರೆ ತಾನೆ ? ಏನೋ ಎಲ್ಲ ತಿಳಿದಿದೆಯೆಂಬ ಹಮ್ಮು ಬೇರೆ. ಮುಂದೆ ಬಾಳಿಗಿಳಿದರೆ ತಾನೇ ಗೊತ್ತಾಗುವುದು ಬೇಳೆಯ ಕಾಳು.... ಹುಂ ಅಂತೂ ಕೆಲಸಕ್ಕೆ ಬರದ ಬಿ. ಎಸ್ ಸಿ. ಗೇ ಸೇರಿಕೊಂಡಿದ್ದ. ಅಂತೂ ಈ ವರ್ಷ ಇದು ಆಗಿಬಿಟ್ಟರೆ ಇನ್ನೊಮ್ಮೆ ಅದೇ ವಿಷಯವನ್ನು ಕದಕೆ ಸಾಗಿಸಿದರಾಯಿತು....ಇಲ್ಲವೇ ಹೀಗೇಕೆ ಮಾಡಬಾರದು ? ಎಂ. ಸಿ. ಎಸ್. ಗೆ ಕುಳಿತುಕೊಂಡರೆ ಖಂಡಿತವಾಗಿ ಅಸಿಸ್ಟೆಂಟ್ ಕಮಿಷನರ್, ಡೆಪುಟಿ ಕಮಿಷನರ್ – ಮುಂದೆ ಏನೇನೋ ಆಗಬಹುದಲ್ಲ ? ಹುಂ. ಇವನ ದಾರಿಯೂ ತಪ್ಪೇನಲ್ಲ. ನಿಜ. ಹೌದು, ಆಗ ತಮ್ಮ ಸಿರಿತನದ ಗೌರವಕ್ಕೆ ಅಧಿಕಾರದ ಗೌರವವೂ ಸೇರಿ, ಚಿನ್ನಕ್ಕೆ ಪುಟವಿಟ್ಟಂತೆ ಆಗುತ್ತದೆ. ಮರ್‍ಯಾದೆ ಮನೆತನದ ಪ್ರಶಸ್ತಿ ಹೆಚ್ಚುತ್ತದೆ. ಹುಂ. ಇದು ಅವನ ಮನಸ್ಸಿನಲ್ಲಿಯೂ ಇದೆಯೋ ಏನೋ. ಇರಬಹುದು. ಇರಬಹುದು. ಇವನೇನು ದಡ್ಡನಲ್ಲ. ಸ್ಕೂಲು ಕಾಲೇಜುಗಳಲ್ಲಿ ಹೆಚ್ಚು ಆಸಕ್ತಿಯಿಲ್ಲದಿದ್ದರೇನು. ತಮ್ಮ ಮಗನಲ್ಲವೇ ? ಹೇಗೂ ಈ ಸಾರಿ ತಮ್ಮ ದಾರಿಗೆ ಎಳೆಯಲೇಬೇಕು. ಬರಲಿ. ಗುರು ಬರಲಿ.

ಈ ಯೋಜನೆಯ ಒತ್ತಡವೂ, ಮಗನ ಬರುವಿಕೆಯ ಸಂತೋಷ ಆತುರಗಳೂ ಅವರಲ್ಲಿ ಆವೇಶವನ್ನು ಹುಟ್ಟಿಸಿದುವು. ತಮಗೆ ತಿಳಿಯ ದಂತೆಯೇ ಶತಪಥದ ವೇಗ ಹೆಚ್ಚಿತು. ಹಳೆಯ ದಮ್ಮು ಒತ್ತಿ ಬಂದಿತು. ಕೆಮ್ಮಿನ ಉದ್ರೇಕವನ್ನು ತಂದಿತು. ಸಾಹುಕಾರರು ಹತ್ತಿರದ ಸೋಫದ ಮೇಲೆ ಕುಸಿದುಕೊಂಡು ಜರತಾರಿ ಶಲ್ಯದಿಂದ ಬಾಯಿಮುಚ್ಚಿಕೊಂಡು ಮೈ ಅದುರು ವಂತೆ ಕೆಮ್ಮುತ್ತ ಬಗ್ಗಿ ಕುಳಿತರು. ಆ ಕ್ಷಣದಲ್ಲಿ ಒಳಗಡೆಯಿಂದ ಮೈದುನ ನಂಜಪ್ಪ, ಕುಸುಮ, ಸಣ್ಣಮ್ಮ, ಔಷಧಿ ಹಿಡಿದು ಆಳು ದಾಸ, ಎಲ್ಲರೂ ಓಡಿ ಬಂದರು. ನಂಜಪ್ಪ "ಸದಾಶಿವ ! ನೀರು !" ಎಂದು ಕೂಗು ಹಾಕಿದ. ಅಡಿ ಗೆಯ ಸದಾಶಿವ ಬೆಳ್ಳಿಯ ಬಟ್ಟಲಿನಲ್ಲಿ ನೀರನ್ನು ತಂದು ಕೊಟ್ಟ. ಕುಸುಮ ನೀರನ್ನು ತಂದೆಯ ಬಾಯಿಗೆ ಹಿಡಿದಳು ಅವರು ಅರ್ಧ ಹೊರಗೆ ಉಗು ಳುತ್ತ ಕೊಂಚ ಗುಟುಕಿಸಿದರು. ದಾಸ ಔಷಧಿಯನ್ನು ಹತ್ತಿರದ ಟೀಪಾ ಯಿನ ಮೇಲಿಟ್ಟು ದಣಿಯವರನ್ನು ಹಿಡಿದುಕೊಂಡು ಎದೆ ಸವರಿದ. ಸಣ್ಣಮ್ಮ ಕಣ್ಣುಗಳನ್ನು ಅಗಲವಾಗಿ ಬಿಟ್ಟುಕೊಂಡು ಗಂಡನನ್ನು ಗಾಬರಿಯಿಂದ ನೋಡುತ್ತ ನಿಂತು ನವಿಲುಗರಿ-ಬೀಸಣಿಕೆಯಿಂದ ಗಾಳಿ ಹಾಕಿದಳು. ನಂಜಪ್ಪ "ನೀರು ಕೊಡಿ ! ಮೈದಡವಿ ! ಹಾಗೇ ಒರಗಿಸಿ ! ಗಾಳಿ !" ಎಂದು ಅಪ್ಪಣೆಮಾಡುತ್ತ ಹಾರಾಡುತ್ತಿದ್ದ.

ಕೆಮ್ಮು ನಿದಾನವಾಗಿ ಹತೋಟಿಗೆ ಬಂದಿತು. ಸಾಹುಕಾರರು ಆಯಾಸ ದಿಂದ ಹಿಂದಕ್ಕೊರಗಿಕೊಂಡರು. ಕುಸುಮ ಬೆವರಿದ್ದ ಮುಖವನ್ನೂ ಇಳಿದಿದ್ದ ಕಣ್ಣೀರನ್ನೂ ಶಲ್ಯದಿಂದ ಒರೆಸಿದಳು. ನಂಜಪ್ಪ "ಔಷಧಿ !" ಅಂದ. ಕುಸುಮ ಸ್ವಲ್ಪವನ್ನು ಬಟ್ಟಲಿಗೆ ಬಗ್ಗಿಸಿ ಕುಡಿಸಿದಳು. ಸ್ವಲ್ಪ ಸಮಯ ಕಳೆದು ಮಾತು ಸಾಧ್ಯವಾದಾಗ ಸಾಹುಕಾರರು "ಈ ಮಾಮೂಲಿಗೆ ಇಷ್ಟೇಕೆ ಗಾಬರಿಯಾಗಿ ಎಲ್ಲ ಓಡಿಬಂದಿರಿ ? ಹೋಗಿ ಹೋಗಿ ನಿಮ್ಮ ನಿಮ್ಮ ಕೆಲಸಕ್ಕೆ." ಎಂದು ತಮ್ಮ ಸ್ಥಿತಿ ಹುಟ್ಟಿಸಿದ ಬೇಸರದಿಂದ ಹೇಳಿದರು. ಅರೆಬೆತ್ತಲೆಯ ಜಟ್ಟಿ ಸದಾಶಿವ ಒಳಕ್ಕೆ ಸರಿದುಕೊಂಡ. ದಾಸ ನಾಲ್ಕು ಹೆಜ್ಜೆ ಹಿಂದೆ ಹೋಗಿ ಕಂಬದ ಮರೆಯಲ್ಲಿ ನಿಂತುಕೊಂಡು ಆತಂಕದಿಂದ ನೋಡುತ್ತಿದ್ದ. ಸಣ್ಣಮ್ಮ ಬೀಸಣಿಗೆಯನ್ನು ಕುಸುಮಳ ಕೈಗೆ ಕೊಟ್ಟು ಹೆಬ್ಬಾಗಿಲಿನ ಬಳಿ ಒಳಗೆ ನಿಂತಳು. ಕುಸುಮ ತಂದೆಯ ಬಳಿಯಲ್ಲೇ ಸೋಫದ ಮೇಲೆ ಕುಳಿತು

ಕೊಂಡಳು. ನಂಜಪ್ಪ ಇದಿರಿನ ಮೆತ್ತೆಯ ಕುರ್ಚಿಯ ಮೇಲೆ ಕುಳಿತು ದೀರ್ಘವಾಗಿ ಉಸಿರುಬಿಟ್ಟ.

ನಂಜಪ್ಪ ರಂಗಭೂಮಿಯ ಮೇಲೆ ವಿದೂಷಕನಾಗುತ್ತಿದ್ದ. ಇಲ್ಲಾದರೂ ಹಾಗೇ—ಭಾವರಾಜನಿಗೆ. ಸಾಹುಕಾರರು ಸಣ್ಣಮ್ಮನನ್ನು ಮನೆಗೆ ಕರೆತಂದ ಕೆಲವು ವರ್ಷಗಳಲ್ಲಿ ಇವನು ಜೂಜಾಡಿ, ಕುಡಿದು, ಸೂಳೆಗಾರಿಕೆ ಮಾಡಿ ತನ್ನ ಆಸ್ತಿಪಾಸ್ತಿಯನ್ನೆಲ್ಲ ಕಳೆದುಕೊಂಡು ಮರ್ಯಾದೆ-ಮಹಲಿನಲ್ಲಿ ಆಶ್ರಯಹೊಂದಿದ್ದ. ಮಾಡುತ್ತಿದ್ದುದು ಮನೆವಾರ್ತೆಯೆಂದು ಹೆಸರು. ಏನು ಮಾಡುತ್ತಿದ್ದನೆಂಬುದು ಇವನಿಗೂ ತಿಳಿಯದು. ಸದಾಶಿವನನ್ನು ಕಾಡಿ ಬೇಡಿ ಕಂಡು ಕಾಣದ ಹಾಗೆ ಮಿತಿ ಮೀರಿ ತಿಂದು ಉಂಡು ಗೂಳಿಯಂತೆ ಬೊಜ್ಜನ್ನು ಹೇರಿಕೊಂಡು, ಭಾವನ ಹಳೆಯ ಜರತಾರಿ ಹರುಕನ್ನುಟ್ಟು ತೊಟ್ಟು, ಅವನ ಹಿಂದೆ ಮುಂದೆ ಸುಳಿದಾಡಿಕೊಂಡು, ಹೊಗಳಿ ಒಪ್ಪಿಗೆ ಪಡೆದು, ಕೆದಕಿ ಬೈಸಿಕೊಂಡು, ಎಲ್ಲವನ್ನೂ ಮೈಗೆ ಒರೆಸಿಕೊಂಡೋ ಮರೆತೋ ಭಾವನ ನೆರಳಾಗಿ, ಚಿಂತೆಯ ಸುಳಿವನ್ನು ಕಾಣದೆ ಬರಿಯ ಕೆಟ್ಟ ಸುಟಿಯಿಂದಲೇ ದಿನದಿನವೂ ಮೆರೆಯುತ್ತಿದ್ದ ಪ್ರಾಣಿ. ಒಂದು ಮಾತಿನಲ್ಲಿ ಹುಣ್ಣಿನ ಮೇಲಿನ ನೊಣ.

ಸಣ್ಣಮ್ಮ ಹೆಸರಿಗೆ ತಕ್ಕಂತೆ ಸಣ್ಣ ಸಣ್ಣ ರೂಪು ಗಾತ್ರದ ಲಕ್ಷಣವಾದ ಹೆಂಗಸು. ಮೈತುಂಬ ಜಗಿದು ಒಡವೆ, ಧರ್ಮಾವರದ ಜರತಾರಿ ಸೀರೆ. ಪತಿಯಲ್ಲಿ ಭಯಭಕ್ತಿಗಳನ್ನಿಟ್ಟು ಚಾಚೂ ತಪ್ಪದೆ ಅವನ ಇಷ್ಟಾನುಸಾರ ನಡೆದುಕೊಂಡು ಅವನನ್ನು ತೃಪ್ತಿಪಡಿಸುತ್ತಿದ್ದ ಸಾಧ್ವೀಶಿರೋಮಣಿ. ಇವಳಿಗೆ ವರ್ಷ, ಎರಡು ವರ್ಷಕ್ಕೆ ಗರ್ಭಪಾತವಾಗಿ ರಕ್ತಹೀನತೆ ನಿಶ್ಯಕ್ತಿಗಳು ಹೆಚ್ಚಿ ಈಗ ಬಹಳ ಬಿಳಿಚಿಕೊಂಡು ಕಂಗೆಟ್ಟಿದ್ದಳು. ಇನ್ನೊಂದು ಬಾರಿ ಬಸಿರಾದರೆ ಪ್ರಾಣಕ್ಕೇ ಅಪಾಯವೆಂದು ಡಾಕ್ಟರು ಗಂಡಹೆಂಡಿರಿಬ್ಬರಿಗೂ ಎಚ್ಚರಿಕೆ ಕೊಟ್ಟಿದ್ದರು. ಆರೋಗ್ಯ ಕುದುರುವುದಕ್ಕಾಗಿ ಟಾನಿಕ್, ಇಂಜಕ್ಷನ್‌ಗಳನ್ನೂ ಕ್ರಮವಾಗಿ ಕೊಡುತ್ತಿದ್ದರು. ಬಟ್ಟೆಯ ಸೂತ್ರದ ಗೊಂಬೆ.

ಹದಿನಾರು ವರ್ಷದ ಕುಸುಮ ತಾಯಿಯಂತೆಯೇ ಇದ್ದಳು. ಆದರೆ ಅವಳ ಗೊಂಬೆ-ರೂಪು, ವಾರೆ-ಬೈತಲೆ, ಪೌಡರು, ಲೋಲಾಕು, ಹೇರ್‌ಪಿನ್, ರಿಬ್ಬನ್‌ಗಳಲ್ಲಿ ಮುಚ್ಚಿಹೋಗಿತ್ತು. ಆಧುನಿಕ ಬೆಡಗೂ, ಜಾರ್ಜೆಟ್ ಸೀರೆಯೂ ಕೂಡ ಇದನ್ನು ಬಿಡಿಸಿಕೊಳ್ಳಲಾರದವಾಗಿದ್ದುವು ಅಣ್ಣನ ಕೈ ಮೇಲಾಗಿದ್ದರೂ

ಇವಳೇನು ತಂದೆಯ ಪ್ರೇಮವನ್ನು ಕಡಿಮೆ ಮಾಡ್ದಿರಲಿಲ್ಲ. ನಂಜಪ್ಪನ ಲೆಕ್ಕವನ್ನು ಬಿಟ್ಟರೆ—ಬಿಡುವಂತಹದೆ – ಸಾಹುಕಾರರೊಡನೆ ಸದರದಿಂದ ನಡೆದುಕೊಳ್ಳುವ ವ್ಯಕ್ತಿಯೆಂದರೆ ಇವಳೊಬ್ಬಳೇ. ಇವಳ ಸಲಿಗೆ ತಂದೆಯಲ್ಲೇ ಕೊನೆಗಾಣದೆ ಮನೆಯ ಪರಿವಾರಕ್ಕೂ ಹೊರಗಡೆಗೂ ಹರಿದಿತ್ತು. ಪಡುವಲ ಗಾಳಿ.

ದಾಸ ಎಪ್ಪತ್ತು ವರ್ಷದ ಹಣ್ಣು ಮುದುಕ. ದೇಹ ಕೊಂಚ ಬಾಗಿತ್ತು. ಗಡ್ಡ ಬಿಟ್ಟಿದ್ದ. ಮೋಟುಪಂಚೆಯುಟ್ಟಿದ್ದ. ತನ್ನೊಡನೆಯೇ ಸಮಾಧಾನದಿಂದಿದ್ದ ಮುಖಮುದ್ರೆ. ಹತ್ತು ವರ್ಷದ ಕೆಳಗೆ ಎರಡು ಎಕರೆ ಕುಷ್ಕಿಯ ಒಡೆಯನಾಗಿದ್ದ ರೈತ. ಇವನು, ಮಗ ಇಬ್ಬರೇ ಇದ್ದರು. ತನ್ನ ಕೈ ನಿಂತು ಹೋಗಿದ್ದರೂ ಮಗ ಎತ್ತುಗಳನ್ನು ಎರವಾಗಿ ತಂದು ಸಾಗುವಳಿ ಮಾಡುತ್ತಿದ್ದ. ಹೇಗೋ ಸ್ವತಂತ್ರಜೀವನ ನಡೆಸುತ್ತಿದ್ದರು. ಇವನ ಜಮೀನು ಸಾಹುಕಾರರ ಜಮೀನಿನ ಪಕ್ಕದಲ್ಲಿತ್ತು. ಅವರು ಇದನ್ನು ತಮಗೆ ಮಾರುವಂತೆ ಅನೇಕ ಬಾರಿ ಒತ್ತಾಯಪಡಿಸಿದ್ದರು. ಎಕರೆಗೆ ನಾನೂರು ರೂಪಾಯಿ ಕೊಡುವ ಆಸೆಯನ್ನೂ ತೋರಿಸಿದ್ದರು. ಆದರೂ ಇವನು ಒಪ್ಪಿರಲಿಲ್ಲ. ಕ್ರಮೇಣ ಇವನ ಜಮೀನಿನ ಸುತ್ತಣ ನೆಲವೆಲ್ಲ ಸಾಹುಕಾರರದ್ದೇ ಆಯಿತು. ಸಾಹುಕಾರರ ಜಮೀನನ್ನು ಗುತ್ತಿಗೆಗೆ ಸಾಗುವಳಿ ಮಾಡುತ್ತಿದ್ದ ರೈತರು ಸ್ವಲ್ಪ ಸ್ವಲ್ಪವಾಗಿ ದಾಸನ ಜಮೀನನ್ನೂ ಸುತ್ತಲೂ ಎಳೆದುಕೊಳ್ಳುತ್ತ ಬಂದರು. ದಾಸನ ನ್ಯಾಯದ ಮಾತು ಸಾಗಲಿಲ್ಲ. ಅವನ ಮಗನಿಗೂ ಇತರರಿಗೂ ಬೈಗಳವಾಗಿ ಕೈಕೈ ಹತ್ತಿಕೊಳ್ಳುವ ಸಂದರ್ಭ ಬಂದಾಗ ದಾಸ ಸಾಹುಕಾರರಲ್ಲಿಗೆ ಹೋಗಿ ಮೊರೆಯಿಟ್ಟ. ಅವರು " ಅದೇನೋ ನಂಗೆ ಗೊತ್ತಿಲ್ಲ. ಬೇಕಾದರೆ ಕೋರ್ಟಿಗೆ ಹೋಗು " ಎಂದುಬಿಟ್ಟರು. ಅವನ ಗೋಳಾಟವೆಲ್ಲ ವ್ಯರ್ಥವಾಯಿತು. ಜಮೀನಿನ ಆಕ್ರಮಣ ಇನ್ನೂ ಹೆಚ್ಚಾಗುತ್ತ ಬಂದಿತು. ಕೋರ್ಟು ಕಟ್ಟಳೆಗೆ ತನ್ನಲ್ಲಿ ದುಡ್ಡಿರಲಿಲ್ಲ. ಇಷ್ಟಕ್ಕೂ ತಾನೆಲ್ಲಿ ಅವರೆಲ್ಲಿ ? ಕಡೆಗೆ ಮಾರಲು ಸಿದ್ಧನಾದ. ಸಾಹುಕಾರರು ಎಕರೆಗೆ ಇನ್ನೂರಕ್ಕಿಂತ ಹೆಚ್ಚು ಕೊಡಲು ಒಪ್ಪಲಿಲ್ಲ. ಬೇರೆಯವರಂತೂ ಈಗ ಮೂರು ಕಾಸಿಗೆ ಕೊಳ್ಳಲೂ ಮುಂದು ಬರಲಿಲ್ಲ. ಅಂತೂ ಸಾಹುಕಾರರಿಗೇ ಕೊಟ್ಟುಬಿಟ್ಟ. ಬಂದ ಅಲ್ಪಸ್ವಲ್ಪ ದುಡ್ಡು ಮಗನ ಮದುವೆಗೇ ಆಗಿಹೋಯಿತು. ಮಗ ಇಲ್ಲಿ ಕೂಲಿ ಮಾಡಲು ಒಪ್ಪದೆ ಬೆಂಗಳೂರಿಗೆ ಹೋದ. ಕೆಲಸ ಸಿಕ್ಕ ಮೇಲೆ ಕರೆಸಿಕೊಳ್ಳುವು

ದಾಗಿ ಹೇಳಿದ್ದ. ಆದರೆ ಇಂದಿನ ವರೆಗೂ ಅವನ ಸುದ್ದಿಯೇ ಇರಲಿಲ್ಲ. ವರ್ಷ ಕಳೆಯುವುದರೊಳಗಾಗಿ ಮುದುಕ ತೊಳಲಿ ಬಳಲಿ ತಾಳಲಾರದೆ ಸಾಹುಕಾರರನ್ನು ಮೊರೆಹೊಕ್ಕು ತನ್ನ ಗೋಳನ್ನು ತೋಡಿಕೊಂಡ. ಅವರು ದೊಡ್ಡಮನಸ್ಸು ಮಾಡಿ ಮನೆಯ ಜೀತಕ್ಕೆ ಇಟ್ಟುಕೊಂಡು ಸಲಹುತ್ತಿದ್ದರು. ನೋವು ನುಂಗುವ ನೆಲದ ಮಗ.

ಐವತ್ತೈದು ವರ್ಷದ ಸದಾಶಿವ ಇಪ್ಪತ್ತನಾಲ್ಕು ವರ್ಷಗಳಿಂದ ಮಹಲಿನಲ್ಲಿದ್ದ. ಅರೆಬೋಳುತಲೆ, ಸವೆದ ದೇಹ, ಸೋತ ಮುಖ, ಅರೆ ಬೆತ್ತಲೆ. ಇವನಿಗೆ ಹಿಂದೆ ಇಲ್ಲಿ ವರ್ಷಕ್ಕೆ ಮೀರಿ ಇದ್ದ ಅಡಿಗೆಯವರೇ ಅಪೂರ್ವ. ಮಹಲಿನ ಕೆಲಸವನ್ನು ನಿರ್ವಹಿಸುವುದು ಅವರಿಗೆ ಸಾಧ್ಯವಾಗುತ್ತಿರ ಲಿಲ್ಲ. ಬೆಳಿಗ್ಗೆ ನಾಲ್ಕು ಗಂಟೆಯಿಂದ ರಾತ್ರಿ ಹನ್ನೆರಡರ ವರೆಗೂ ಕೆಲಸವಿರುತಿತ್ತು. ಇದ್ದವರಲ್ಲಿ ಒಬ್ಬೊಬ್ಬರದ್ದೂ ಒಂದೊಂದು ಪಂಗ್ತಿ. ಇದರಿಂದ ಇನ್ನಷ್ಟು ಕೆಲಸ. ಮನೆಯ ಯಜಮಾನಿ ತನ್ನ ಕೆಲಸಕ್ಕೇ ಓಡಾದಲಾರದ ನಿತ್ರಾಣಿ. ಡಾಕ್ಟರು ಯಾವಾಗಲೂ ವಿಶ್ರಾಂತಿಯನ್ನೇ ವಿಧಿಸುತ್ತಿದ್ದರು. ಇಷ್ಟಕ್ಕೂ ಅಡಿಗೆಯವನಿದ್ದಾಗ ಅವರಿಗೇಕೆ ಈ ಕಷ್ಟ? ಮಕ್ಕಳು ಮುದ್ದಿನಲ್ಲಿ ಬೆಳೆ ದವರು. ಹುಲ್ಲುಕಡ್ಡಿಯನ್ನೂ ಒಂದು ಕಡೆಯಿಂದ ಇನ್ನೊಂದು ಕಡೆಗೆ ಇಡುವುದನ್ನು ಕಲಿತವರಲ್ಲ—ಪಾಪ. ಅವರಿಗೇಕೆ ಈ ಗ್ರಹಚಾರವೆಲ್ಲ? ನಂಜಪ್ಪನಂತೂ ಸಾಹುಕಾರರಂತೇ ಆಜ್ಞೆಮಾಡುತ್ತಿದ್ದ. ಇದರ ಮೇಲೆ ಬಂದುಹೋಗುವವರ ಹೊಡೆತವೂ ಜಾಸ್ತಿ. ಊರುಳೂರಿಗೆ ಬಂದ ಗಣ್ಯ ರನ್ನೆಲ್ಲ—ಅದರಲ್ಲೂ ಸರಕಾರಿ ಅಧಿಕಾರಿಗಳನ್ನು—ಸಾಹುಕಾರರ ಮಹಲಿನಲ್ಲಿ ಉಳಿಸಿಕೊಳ್ಳುವ ಗೌರವ ಸಂಪ್ರದಾಯವಾಗಿಹೋಗಿತ್ತು. ಪ್ರಮುಖರಾದವರು ಅಪ್ಪಿತಪ್ಪಿ ಬೇರೆಯವರಲ್ಲಿ ಉಳಿದರೆ ಸಾಹುಕಾರರು ತಮಗೆ ಅವಮಾನ ವಾಯಿತೆಂದೇ ತಿಳಿದು ಅಸಮಾಧಾನ ಹೊಂದುತ್ತಿದ್ದರು. ಈ ಕಾರಣದಿಂದ ಇವರಿಗೂ ಜೋಡಿದಾರರಿಗೂ ಅನೇಕ ಬಾರಿ ಮನಸ್ತಾಪವೇ ಬಂದಿತ್ತು. ಮಂತ್ರಿಗಳು, ಉನ್ನತಾಧಿಕಾರಿಗಳು, ಲಕ್ಷಾಧೀಶ್ವರರು, ಇವರ ಮೇಲ್ವಿಚಾರಣೆ ಯನ್ನು ಸ್ವತಃ ಸಾಹುಕಾರರೇ ನಿಂತು ನೋಡಿಕೊಳ್ಳುತ್ತಿದ್ದರು. ಆದರೂ ಕೈಕಾಲಿಗೆ ನೀರು ಕೊಡುವುದರಿಂದಲೂ ಆತಿಥ್ಯದ ಭಾರವೆಲ್ಲ ಅಡಿಗೆಯವನ ಮೇಲೇ. ಔತಣ ತಿಂಡಿ ತೀರ್ಥಗಳೂ ಇದ್ದೇ ಇರುತ್ತಿದ್ದುವು. ಹೀಗಿದ್ದು

ಸದಾಶಿವನಂತಹ ನಿರ್ವಾಹಶಾಲಿ, ಸಮಾಧಾನದವನಿಗೇ ಈ ಕೆಲಸ ಸಾಧ್ಯವಾಗಿತ್ತು. ಸಾಹುಕಾರರು ಅತಿಥಿಗಳ ವಿಷಯವಾಗಿ " ಬರುತ್ತಾರೆ, ತಿಂದುಕೊಂಡು ಹೋಗುತ್ತಾರೆ. ತಿಂದುಕೊಂಡು ಹೋಗಲಿ '' ಎಂದು ಹೇಳುತ್ತಿದ್ದರೆ, ಸದಾಶಿವ '' ಯಾವ ಜನ್ಮಾಂತರದಲ್ಲಿ ಸೇವೆ ಮಾಡಿದ್ದರೋ ಈಗ ಮಾಡಿಸಿಕೊಳ್ಳುತ್ತಾರೆ." ಎನ್ನುತ್ತ ಕೆಲಸ ತೂಗಿಸುತ್ತಿದ್ದ. ಸಂಸಾರದ ಕಾರು-ಬಾರಿನಲ್ಲಿ ಅವನ ಕೈವಾಡ ಎಷ್ಟಿದ್ದಿತೆಂದರೆ 'ಇವನು ಒಂದು ದಿನವಿಲ್ಲದಿದ್ದರೆ ಮಹಲಿನ ಗತಿಯೇನು?' ಎನ್ನುವಷ್ಟು. ನಿಜ, ಸದಾಶಿವನ ಕೈ ಈ ದೊಡ್ಡ ಮನೆಗೂ ದೊಡ್ಡದು. ಮನೆಯ ಮುಸುರೆಯವಳಿಗೇ ನಾಲ್ವಾಳಿನ ಅನ್ನ ಎಳೆಯುತ್ತಿದ್ದ. ತುಪ್ಪದ ತಿಂಡಿಯಾಗಲೀ ತಾಲಿಪಿಟ್ಟಾಗಲೀ ಅವಳಿಗೊಂದು ದೊಡ್ಡ ಪಾಲನ್ನು ಕಾದಿರಿಸುತ್ತಿದ್ದ. ಆದರೆ ಮನೆಯವನ ಹಾಗೇ ವಿಶ್ವಾಸದಿಂದ ದುಡಿಯುತ್ತಿದ್ದ. ಇವನಿಗೆ ಯಾರೂ ಒಂದು ಮಾತನ್ನೂ ಹೇಳುತ್ತಿರಲಿಲ್ಲ. ಸರಕಾರ ಬೆಳೆದವರಿಗೆ ಬಿಟ್ಟ ಬತ್ತ ಆರು ತಿಂಗಳಿಗೂ ಸಾಕಾಗುತ್ತಿರಲಿಲ್ಲ. ಆದರೆ ಸಾಹುಕಾರರಿಗೇನು ಕಡಿಮೆ ? ಹಣದ ಲೆಕ್ಕವೆ? ಹೇಗೋ ಯುಕ್ತಿಯಿಂದ ಸಾಲದುದನ್ನು ಒದಗಿಸಿಕೊಳ್ಳುತ್ತಿದ್ದರು. ಅವರ ಮನೆಯಲ್ಲಿ ಎರಡು ದಿನವಿದ್ದವರಿಗೆ ರೇಶನಿಂಗ್ ಇದೆಯೆಂಬುದೇ ಮರೆತುಹೋಗುತ್ತಿತ್ತು. ಸಣ್ಣಮ್ಮ ಅನೇಕ ವೇಳೆ ''ರೇಷನಿಂಗ್ ಕಾಲ ಅಂತ ನಾವು ಯಾವುದಕ್ಕೂ ಕಡಿಮೆ ಮಾಡಿಲ್ಲಮ್ಮ. ಹಿಂದಿನಂತೇ ಎಲ್ಲವೂ ನಡೆದುಕೊಂಡು ಹೋಗುತ್ತಿದೆ" ಎಂದು ಹೇಳಿಕೊಳ್ಳುತ್ತಿದ್ದಳು. ಸದಾಶಿವನ ದಾಂಧಲೆಯನ್ನು ಹೇಗೋ ತಡೆದುಕೊಂಡರೂ ಅವನು ಸೇವೆಯಲ್ಲಿ ಹೇಗೋ ಹಾಗೆ ಬಾಕಿಯ ವಿಷಯದಲ್ಲಿಯೂ ಮನೆಯವನಂತೆ ಸಲಿಗೆಯಿಂದ ತಲೆ ಹಾಕುವುದು ಇವರೆಲ್ಲರನ್ನೂ ಚುಚ್ಚುತ್ತಿತ್ತು. ' ಇವನು ಮನೆಯೋನ ಹಾಗೆ ಆಡ್ತಾನಲ್ಲ, ಸ್ವಾತಂತ್ರವಹಿಸಿ. ತನ್ನ ಸ್ಥಳ ಏನು ಅಂತ ತಿಳಿದುಕೊಂಡುಬಿಟ್ಟಿದಾನೋ ! ' ಎಂದು ಗೊಣಗುಟ್ಟುತ್ತಿದ್ದರು. ಆದರೆ ಅವರ ಕೃತಜ್ಞತೆಯ ಭಾರ, ದಾಕ್ಷಿಣ್ಯ ಬಿಚ್ಚಿ ಆಡಿಸಿರಲಿಲ್ಲ. ಸದಾಶಿವ ಜಟ್ಟಿಕೈ, ಸೊಟ್ಟಕೈ ಎರಡೂ.

ಈ ಕುಟುಂಬ ಪರಿವಾರದ ಸಹಾಯ ಪಡೆದು ದಮ್ಮಿನಿಂದ ಪರಿಹಾರ ಹೊಂದಿ ಆಯಾಸ ಕಳೆದ ಮೇಲೆ ಸಾಹುಕಾರರು ಕತ್ತೆತ್ತಿ ರಸ್ತೆಯ ಕಡೆ ಮತ್ತೆ ದಿಟ್ಟಿಸಿ ನೋಡಿದರು.

" ಛಿ, ಎಷ್ಟು ಹೊತ್ತು ! ಇನ್ನೂ ಬರಬೇಡವೆ ? ಒಂದು ಗಂಟೆ— ಆಗಲೇ. ಏನಾಗಿದೆಯೋ ಏನೋ !" ಗಟ್ಟಿಯಾಗಿ ಗೊಣಗಿಕೊಂಡರು.

" ಇದೇನು ಭಾವ, ಇಷ್ಟು ತವಕ ? ಬರ್‍ತಾನೆ, ಕೊಂಚ ಹೆಚ್ಚು ಕಮ್ಮಿ. ಈಗಿನ ಕಾಲದ ರೈಲಲ್ಲವೆ ? ಇದಕ್ಕೆ ಊಟಾನೂ ಮಾಡದೆ ಹೀಗೆ ಕಾಯ್ತಾ ಸುಮ್ಮನೆ ದಣೀತಾ ಇದೀಯಲ್ಲ. ಮಗ ಬರ್‍ತಾನೆ ಅಂದ್ರೆ ಹೀಗೆ ಒಣಗಿ ಒದ್ದಾಡಿ ಕೆಮ್ಮು ದಮ್ಮು ತಂದುಕೋಬೇಕೆ ? ಹೆತ್ತತಾಯೀ—ಹುಚ್ಚಿಹಾಗೆ ಆಡೋದಕ್ಕೆ ? "

" ನಿಂಗೇನು ಗೊತ್ತಾಗುತ್ತೊ, ಇದೆಲ್ಲ ? ಒಂದು ಬೆಕ್ಕಿನ ಮರೀನೂ ಸಾಕಿ ಕಾಣೆ, ನೀನು. ತಾಯಿ ಇಲ್ಲದ ತಬ್ಬಲಿಗೆ ನಾನೇ ತಾಯಿ ತಂದೆ ಎರಡೂ. ವರ್ಷದ ಮೇಲೆ ಮಗ ಮನೆಗೆ ಬರ್‍ತಾನೆ ಅಂದ್ರೆ ಹೆತ್ತ ಹೊಟ್ಟೆಗೆ ಹೇಗಾಗುತ್ತೆ ಅಂತ ನೀನೇನು ಬಲ್ಲೆ—ಪಾಪ. ! "

" ಅತಿಶಯ ಬಿಡು. "

" ಅತಿಶಯದ ಮಗನೇ ಕಣೋ. ವಂಶ ನೋಡುತ್ತೀಯ, ವಿಶ್ವಾ ಮಿತ್ರರಲ್ಲಿದೆ ಅದರ ಬೇರು—ಈಗಿನ ಮತಗಿತಗಳನ್ನೆಲ್ಲ ಬಿಟ್ಟು ಹಿಂದಕ್ಕೆ ಹೋದರೆ. ಆ ರಾಜರ್ಷಿಯ—ಆಮೇಲೆ ಬ್ರಹ್ಮರ್ಷಿ—ಪವಿತ್ರರಕ್ತ ಹರಿಯು ತ್ತಿದೆ ನಮ್ಮ ನಾಳಗಳಲ್ಲಿ. ಅದನ್ನು ಎಷ್ಟು ಶುದ್ಧವಾಗಿ ಇಟ್ಟುಕೊಂಡು ಬಂದಿ ದ್ದಾರೆ ನಮ್ಮ ಪೂರ್ವಜರು. ಮನೆತನ ಅಂದರೆ ' ಮರ್ಯಾದೆ ಮನೆತನ ' ಅಂತ ಪ್ರಸಿದ್ಧಿಯಾಗಿದೆ. ವಿಜಯನಗರದ ರಾಜ್ಯಮನೆತನಕ್ಕೆ ಹೆಣ್ಣುಕೊಟ್ಟು ಈ ಪ್ರಶಸ್ತಿ ಪಡೆದೋರು ಕಣೋ ನಾವು! ಹುಂ, ಗೊತ್ತೆ ? ಇನ್ನು ಆಸ್ತಿಪಾಸ್ತಿ ಕೇಳುತ್ತೀಯ? ಒಬ್ಬ ಮಗನಿಗಲ್ಲ ಹತ್ತು ಜನಕ್ಕೆ ಹಂಚಿದರೂ ಸವೆಯದೆ ಇರೋ ಅಂಥಾದ್ದು. ನಂಗೆ ಬಂದಾಗ ಅಷ್ಟಿರಲಿಲ್ಲ ಅನ್ನು. ಆದರೆ ನಾನು ಎಷ್ಟು ಕಷ್ಟಪಟ್ಟು ಈ ಮುವತ್ತಾರು ವರ್ಷ ರೂಢಿಸಿ ಬೆಳೆಸಿದೀನಿ ಬಲ್ಲೆಯಾ ? ಈಗ—ಈ ತಾಲ್ಲೋಕಿನಲ್ಲೇ ಪ್ರತಿ ನಾಲ್ಕು ಎಕರೆಯಲ್ಲೂ ನಮ್ಮದು ಎರಡು–ಊರಿನಲ್ಲಿ ಪ್ರತಿನಾಲ್ಕು ಮನೆಯಲ್ಲೂ ನಮ್ಮದು ಒಂದು. ಅಂದರೇನು ಸ್ವಲ್ಪವೇ ? ನಮಗೆ ಸಾಲಗಾರರಾಗಿರದೇ ಇರೋ ರೈತರು ಎಷ್ಟು ಜನ ಇದ್ದಾರೆ ? ಲೇವಾದೇವಿ ಮಾಡದೆ ಇದ್ದೋರಂತೂ ಇಲ್ಲವೇ ಇಲ್ಲ ಅನ್ನು. ಮತ್ತೆ ಈ ' ಮರ್ಯಾದೆಮಹಲಿ ' ನ ವಿಚಾರ ಸುತ್ತಮುತ್ತೆಲ್ಲ ಮನೆಮಾತಾ

ಗಿದೆ—ಮನೆಮಾತು ! ನನ್ನ ಕಿವಿಗೂ ಅಷ್ಟಿಷ್ಟು ಬೀಳುತ್ತಿರುತ್ತೆ ಅನ್ನು. ಕಳಸವಿಲ್ಲದ ಅರಮನೆ ಅಂತಾರೆ, ಗೊತ್ತೆ ? ಸಾಹುಕಾರರೆಂದರೆ ಸುತ್ತಮುತ್ತಿಗೆಲ್ಲ ಇನ್ನು ಯಾರಿದಾರೆ ? ನಾವೇ. ನನ್ನನ್ನು ಸ್ವಂತ ಹೆಸರಿನಿಂದ ಸಂಭೋಧಿಸುವವರೇ ಇಲ್ಲವಲ್ಲ! ನಮಗೆ, ನಮ್ಮ ಮನೆತನಕ್ಕೆ ಜನರು ತೋರಿಸೋ—ಇಟ್ಟುಕೊಂಡಿರೋ—ಗೌರವ ಯಾವ ರಾಜರಿಗೆ, ರಾಜಮನೆತನಕ್ಕೆ ಕಡಿಮೆಯಾಗಿದೆ ಹೇಳು ? ನಮ್ಮನ್ನು ಕಂಡರೆ ಎಷ್ಟು ನಯ ಭಯದಿಂದ ನಡೆದುಕೋತಾರೆ ಏನು, ಗೊತ್ತಿಲ್ಲವೆ ? ಯಾಕೆ ? ನಮ್ಮ ಸ್ಥಿತಿ ಗತಿ, ಗುಣ, ಘನತೆ, ಅಂಥಾವು. ಅವನ್ನು ಇಷ್ಟು ಕಾಲ ತಲತಲಾಂತರದಿಂದ ಉಳಿಸಿಕೊಂಡು ಬೆಳೆಸಿಕೊಂಡು ಬಂದಿದೀವಿ—ನಾವು. ಇಷ್ಟರ ಮೇಲೆ ಇದೆಲ್ಲ ಆಯ್ತು ಅಂತ ಯಾರಿಗೂ ಯಾವಾಗಲೂ ಮೂರು ಕಾಸಿನ ಅನ್ಯಾಯ ಮೋಸ ಮಾಡಿದೋರಲ್ಲ. ಮರ್ಯಾದೆ ಬಿಟ್ಟು ಕದಲಿದೋರಲ್ಲ. ಇನ್ನೂ ಹತ್ತು—ಯಾಕೆ ಸಾವಿರಾರು—ಜನಕ್ಕೆ ಉಪಕಾರವಾಗಿ ಬಾಳ್ತಾ ಇದೀವಿ. ಎಂದಿನಿಂದಲೂ ಹಾಗೇ. ನಾನೂ ಈ ಮಹತ್ಕಾರ್ಯ ಮುಂದುವರಿಸಿಕೊಂಡೇ ಬಂದಿದೀನಿ. ನಾನು ಮುನಿಸಿಪಲ್ ಪ್ರೆಸಿಡೆಂಟ್ ಆದಾಗ ಮಾಡಿದ್ದು ಒಂದೊಂದೇ ? ಟೌನ್‌ಹಾಲ್ ಕಟ್ಟಿಸಿದ್ದೊ, ಗಾಂಧಿಪ್ರತಿಮೆಯ ಪ್ರತಿಷ್ಠಾಪನೆ ಮಾಡಿಸಿದ್ದೊ, ಟ್ರಾವ್ಯಲರ್ಸ್ ಬಂಗಲಿ ಕಟ್ಟಿಸಿದ್ದೊ, ಎಲ್ಲ ನೆನೆಸಿಕೊ. ಎಷ್ಟೆಷ್ಟೊ. ಮುನಿಸಿಪಲ್ ಆಫೀಸಿನಲ್ಲಿ ಎಷ್ಟು ಹೊಸ ಹೊಸ ಶಾಖೆ ತೆಗೆಸಿ ಎಷ್ಟೋ ಜನಕ್ಕೆ ಕೆಲಸ ಕೊಟ್ಟೆ. ಪಾಪ, ಈಗ ಎಷ್ಟೋ ಜನ ಅದರಿಂದ ಹೊಟ್ಟೆಹೊರಕೋತಾ ಇದಾರೆ. ರಸ್ತೆ, ನಲ್ಲಿ, ದೀಪ, ಎಲ್ಲ ದುರಸ್ತುಮಾಡಿ ಹೊಸ ಏರ್ಪಾಡು ಮಾಡಿಬಿಡಬೇಕು ಅಂತ ಇದ್ದೆ. ಆದರೆ ಹಾಳು ಫಂಡೇ ಇಲ್ಲವಾಯ್ತು. ಹೆಚ್ಚು ತೆರಿಗೆ ಹಾಕಿ ಇನ್ನೂ ಪ್ರಜೋಪಕಾರದ ಕೆಲಸ ಮಾಡಿಬಿಡೋಣ ಅಂದರೆ ಆ ಹಳೇ ಸರಕಾರ ಅಡ್ಡಿ ಬರಬೇಕೇ ? ಅದಕ್ಕಾಗಿ ಎಷ್ಟು ಹೊಡೆದಾಡಿದೆ, ಏನು ಕಥೆ ! ಈಗಿನಂತೆ ಪ್ರಜಾಸರಕಾರವಾಗಿದ್ದರೆ ಬೇರೆ ಮಾತಾಗುತ್ತಿತ್ತು. ಯಾವುದು ಮಾಡೋದಕ್ಕೆ ತಾನೆ ಏನು ಆತಂಕ ಇರುತ್ತಿತ್ತು ? ಯಾವುದಕ್ಕೆ ಬೇಕಾಗಿದ್ದರೂ ಮಂತ್ರಿಗಳನ್ನೇ ಹಿಡಿದು ಅಪ್ಪಣೆ ತಂದುಬಿಡುತ್ತಿದ್ದೆ. ಹುಂ. ಅದು ಹಳೆಯ ಮಾತು ಅಂತ ಇಟ್ಟುಕೊ. ಈಗ ಎಂ. ಎಲ್. ಎ. ಆದ ಮೇಲೆ ಏನು ಕಡಿಮೆ ಮಾಡಿದೇನೆ ? ಎಷ್ಟು

ಹುಡುಗರಿಗೆ ಸೀಟು ಕೊಡಿಸಿದೀನೋ, ಎಷ್ಟು ಜನಕ್ಕೆ ಕೆಲಸ ಕೊಡಿಸಿದೀನೋ—ಶಿಪಾರಸುಮಾಡಿ. ಅನೇಕ ವೇಳೆ ಒತ್ತಾಯವೇ ಮಾಡಿದೀನಿ. ಇದೆಲ್ಲ ಲೆಕ್ಕವೇ ಇಲ್ಲ. ನಮ್ಮೋರು ಅನ್ನೋರೆಲ್ಲ ಬದುಕಿಹೋದರು. ಹಾಗೂ ಯುಕ್ತಿಯಿಂದ ಹೊರಗಿನೋರಿಗೂ ಅಷ್ಟಿಷ್ಟು ಮಾಡಿದೀನಿ ಅನ್ನು. ಹ್ಹ! ಇದರಿಂದೆಲ್ಲ ನಮ್ಮ ಹೆಸರು ಪ್ರತಿಷ್ಠೆ ಎಲ್ಲಿಂದ ಎಲ್ಲಿಯವರೆಗೂ ಹಬ್ಬಿವೆ! ಮೊನ್ನೆ ಟೌನ್‌ಹಾಲಿನಲ್ಲಿ ಲೋಕಲ್ ಸೆಲ್ಫ್ ಗೌರ್ನಮೆಂಟ್ ಮಂತ್ರಿಗಳು—ಬಸಪ್ಪನೋರು—ನನ್ನ ಭಾವಚಿತ್ರ ಅನಾವರಣ ಮಾಡಿದಾಗ ನಾನು ನಡೆಸಿದ ಟೀಪಾರ್ಟಿಯಲ್ಲಿ ಹೇಳಿದ್ದನ್ನೆಲ್ಲಾ ಕೇಳಿದೆಯಲ್ಲ—ನೀನು. ನೋಡಿದೆಯಾ. ಸರಕಾರದಲ್ಲೂ ನಮ್ಮ ಬಗ್ಗೆ ಏನು ಅಭಿಪ್ರಾಯ ಇದೆ ಅಂತ ?...."

"ಬಿಡು ಭಾವ ಇದೆಲ್ಲ ನಿಂದು ಅದೇ ಗಾಯಿತ್ರಿ. ನಂಗೂ ಈವರೆಗೆ ಪಾಠವಾಗಿ ಹೋಗಿದೆ."

"ಹುಂ, ಕಣೋ. ಹೇಳಿಕೊಳ್ಳೋದೆ. ಇರೋದಲ್ಲದೆ ಇಲ್ಲದೋರು ಹೇಳಿಕೋತಾರೇ ? ನೀನು ಏನು ಹೇಳಿಕೋಬಲ್ಲೆ ? ಅದೇ ನಿನ್ನ....."

"ಬಿಡಪ್ಪ ಸಧ್ಯ, ಸಹಸ್ರನಾಮ ಶುರುಮಾಡಬೇಡ ದಮ್ಮಯ್ಯ. ನಿಂದೇ ಹೇಳಿಕೊ. ಬೇಡ ಅನ್ನೋದಿಲ್ಲ."

"ಹಾಗೆ ಬಾ. ಈಗ ಗೊತ್ತಾಯ್ತೋ ? ನಮ್ಮದು ಏನು ಅಂತ ? ಇಷ್ಟೊಂದು ಕೀರ್ತಿ ಐಶ್ವರ್ಯಕ್ಕೆಲ್ಲ ನನ್ನ ಮಗ ಉತ್ತರಾಧಿಕಾರಿ ಕಣಯ್ಯ. ಗಮನವಿರಲಿ. ನನ್ನನ್ನು, ಒಂದು ಕೈ ಮೀರಿಸುತ್ತಾನೆ, ನೋಡುತ್ತಿರು. ನನ್ನ ಲೆಕ್ಕದಂತೆ ಆದರೆ–ಆಗೇ ಆಗುತ್ತೆ– ಅವನು ದೊಡ್ಡ ಪದವಿಗೇರಿ ಸರಕಾರದ ಅಧಿಕಾರವನ್ನೂ ನಡೆಸಿ, ಈ ನಮ್ಮ ಮರ್ಯಾದೆಮಹಲಿಗೆ ಚಿನ್ನದ ಕಳಸ ಏರಿಸುತ್ತಾನೆ. ಹುಂ. ಸಾಮಾನ್ಯನೇನಯ್ಯ—ಅವನು ? ಇನ್ನೇನು ಉಳಿದಿದೆ ನನಗೆ—ಅವನು ಬೆಳೆದು ಬಾಳಿ ಅಭಿವೃದ್ಧಿಯಾಗಿ ನಮ್ಮ ವಂಶ, ಆಸ್ತಿ, ಕೀರ್ತಿ ಎಲ್ಲವನ್ನೂ ಮುಂದುವರಿಸಿಕೊಂಡು ಬರೋದನ್ನು ನೋಡ್ತಾ ಸಂತೋಷಪಡೋದು ಬಿಟ್ಟು ? ಅಂಥೋನು ಬರ್ತಾನೆ ಅಂದರೆ ತಂದೆಯಾಗಿರೋನು ಕೊರಡಿ ಹಾಗೆ ಬಿದ್ದಿರೋದಕ್ಕಾಗುತ್ತೆ....?ಎಂಟು ಮೈಲಿ ದೂರ, ಈ ಹಾಳು ಕೆಮ್ಮು, ಥಂಡಿಗಾಳಿ, ಇಲ್ಲದಿದ್ದರೆ ಸ್ಟೇಷನ್ನಿಗೇ ಹೋಗುತ್ತಿದ್ದೆ. ಅವನು ನನ್ನ ಸರ್ವಸ್ವ. ಜೀವ ಇದ್ದಹಾಗೇ ಕಣಯ್ಯ."

" ಓಹೋ, ಹಾಗಾದರೆ ಅವನು ಒಬ್ಬನೇಯೋ ಅದೆಲ್ಲ. ನಾನು ಯಾತಕ್ಕೂ ಇಲ್ಲವೇ ಇಲ್ಲವೇನಪ್ಪ? " ಕುಸುಮ ಅರೆಮುನಿಸಿನಿಂದ ಕತ್ತನ್ನು ಕೊಂಕಿಸುತ್ತ ಕೇಳಿದಳು.

" ಹಾಗಲ್ಲ ಚಿನ್ನ. ನೀನೂ ನನ್ನ ಪ್ರೇಮಪುತ್ಥಳಿಯೆ. ನಿಜ. ಆದರೇನು ಕಳ್ಳಿ, ಎಷ್ಟಾದರೂ ನೀನು ನಾಳೆ ಗಂಡನ ಮನೆಗೆ ಓಡಿಹೋಗೋಳೆ. ಬೇರೆ ವಂಶ ಬೆಳೆಸೋಳು ತಾನೆ ? " ತಂದೆ ನಸುನಗುತ್ತ ಮಗಳ ತಲೆ ಸವರಿ ಕೇಳಿದರು.

" ಊಂ. ಆದರೇನೋ. ನಾನು ಇಲ್ಲೇ ಇರುತ್ತೀನಿ. "

" ಅಹಹ, ಕುಸುಮ. ತಾಯಾಗೋ ವಯಸ್ಸಾಯ್ತು. ಇನ್ನೂ ಮಗು ಹಾಗೇ ಮುದ್ದುಗರೀತೀಯಲ್ಲೆ. ಅಪ್ಪನ ಮನೇಲೇ ಇರಬೇಕಾದರೆ ನನ್ನೇ ಮದುವೆಮಾಡಿಕೊ—ಸಾಕು. "

" ಥೂ, ಹೋಗು ಮಾವ ! ನಕಲಿ ವೀರಣ್ಣನ ಹಾಗಿರೋ ನಿನ್ನ ಮಾಡಿಕೋತಾರೆ—ಬಾ, ಅಂತ. "

" ಅಹಹಾ ! ಚೆನ್ನಾಗಿ ಹೇಳಿದೆ ಚಿನ್ನ. ಪಾಪ, ನನ್ನ ಕುಸುಮ ಇನ್ನೂ ಕಂದನೇ. ಯಾರಲ್ಲ ಅಂದೋರು. ಹಾಗೇ ಆಗಲಿ ಪುಟ್ಟ. ಇಲ್ಲೇ ಮಹಲಿನಲ್ಲೇ ಇರೋ ಭರ್ಜರಿ ಗಂಡನ್ನೇ ಮಾಡಿಕೊಳ್ಳೋವಂತೆ. ಅದೇ ಶರತ್ತು ಹಾಕೋದು. ನೀನೇನು ಮರ್ಯಾದಮನೆತನದ ಮಗಳಲ್ಲವೆ ? ಸಾವಿರಾರು ಗಂಡುಗಳು ಇದ್ದಲ್ಲಿಗೇ ಹುಡುಕಿಕೊಂಡು ಸಾಲಾಗಿ ಬಂದು 'ಹುಡುಗೀನ ಕೊಡಿ,ಕೊಡಿ' ಅಂತ ಕಾಲಿಗೆ ಬೀಳ್ತಾರೆ. ಸ್ವಯಂವರ ಮಾಡಿಸುತ್ತೀನಿ—ಸ್ವಯಂವರ. ನೋಡ್ತಾ ಇರು. ನಿಂಗೆ ಬೇಕಾದೋನನ್ನು ಆರಿಸಿಕೊಂಡರಾಯ್ತು. ಹೇಳಿದ ಹಾಗೆ ಕೇಳಿಕೊಂಡು ಇಲ್ಲೇ ಬಿದ್ದಿರ್‍ತಾನೆ. ಸರಿಯೆ?"

" ಹೂಂ, ಇದು ಸ್ತ್ರೀಸ್ವಾತಂತ್ರ್ಯದ ಶತಮಾನ ತಾನೆ. ಸ್ವಾತಂತ್ರ್ಯಕ್ಕೂ ಸರ್ವಾಧಿಕಾರಕ್ಕೂ ಒಂದೇ ಮೆಟ್ಟಿಲು. ಸರಿ. ಕುಸುಮ, ನಿಮ್ಮಪ್ಪನೇನು ಸ್ತ್ರೀಪಕ್ಷ ವೀರನೇ-ಹೊರಗಡೆ. ಮೊನ್ನೆ ತಾನೆ ವೀರಾವೇಶದ ಉಪನ್ಯಾಸ ಕೊಡಲಿಲ್ಲವೆ-ಮಹಿಳಾಸಮಾಜದ ವಾರ್ಷಿಕೋತ್ಸವದ ಅಧ್ಯಕ್ಷನಾಗಿ? ಮನೇಲಿ ಹೇಗಾದರೂ ಇರಲಿ, ಹುಲಿ—ಆಡಿನ...."

" ಏನಂದೆ ? " ಸಾಹುಕಾರರು ಮುಂದಿನ ಮಾತನ್ನು ತಡೆದರು.

ಹೆಬ್ಬಾಗಿಲಿನ ಕಡೆಯಿಂದ ನಗುವಿನ ಸದ್ದಾದಂತಾಯಿತು. ಕುಸುಮ ಘಕ್ಕನೆ ನಕ್ಕಳು. ದಾಸ ತಿರುಗದೆಯೇ ಹಲ್ಲು ಕಿರಿದ. ಸಾಹುಕಾರರು ಗಹಗಹಿಸಿ ನಕ್ಕರು.

"ಲೋ, ಕೀಟಲೆ ಕಿತಾಪತಿಯಿಲ್ಲದೆ ತಿಂದದ್ದು ನಿಂಗೆ ಅರಗೋಲ್ವೇ ಇಲ್ಲವೋ? ನಿಂಗೆ ಎಲ್ಲೂ ಅಧ್ಯಕ್ಷತೆ ಸಿಕ್ಕಿಲ್ಲ ಅಂತ ಆಕ್ರೋಶವೋ? ಬೇಕಾದರೆ...."

"ನಂಗೇನು ಬೇಡಪ್ಪ ಈ ಅಧ್ಯಕ್ಷತೆ ಅಕ್ಷತೆಗಳು. ನಂಗೆ ಸಭೆ ಅಂದರೇ ಮೈ ನಡುಕ, ಬೆವರು. ನಿಂತರೆ ನಾಲಿಗೆಯೇ ನಿಂತುಹೋಗುತ್ತೆ. ಗಂಟಲು ಒಣಗಿಹೋಗುತ್ತೆ. ಕಣ್ಣಿಗೆ ಕತ್ತಲು ಕವಿದುಬಿಡುತ್ತೆ. ಬೇಡಪ್ಪ. ಅದೆಲ್ಲ ನಿಂಗೇ ಇರಲಿ, ಸ್ವವೇದ್ಯವಾಗಿ. ಗಂಟೆಗಂಟೆಗಳ ಮಾತಾಡೋ 'ಎಂ. ಎಲ್. ಎ' ಗಳಿಗೇ ಸರಿ. ಅದೇನು ಮಾತಾಡುತ್ತೀರೋ, ಹೇಗೆ ಆಡುತ್ತೀರೋ, ದೇವರಿಗೇ ಗೊತ್ತು. ನಂಗಂತೂ ಅರ್ಥವೇ ಆಗೋದಿಲ್ಲ."

"ಲೋ, ನಾಕೋ. ಆ ನಾಲಿಗೆಗೆ ಮಾಡಿಸೋ ಕಸರತ್ತು ಮೈಗಾದರೂ ಮಾಡಿಸಬಾರದೇನೋ. ಒಳ್ಳೇದಾದೀತು. ಮೂರ್ಖ! ಹ್ಹ ಹ್ಹ ಹಾ?" ಸಾಹುಕಾರರು ಗೊಳ್ಳೆಂದು ನಕ್ಕರು. ಅವರ ಆನಂದದ ಗಳಿಗೆಯನ್ನು ತಿಳಿದು ಎಲ್ಲರೂ—ನಂಜಪ್ಪನನ್ನೂ ಕೂಡಿ—ಹೇಳಿ ನಗಿಸಿದಂತೆ ಗಟ್ಟಿಯಾಗಿ ನಕ್ಕರು. ಇನ್ನೂ ನಗುತ್ತಿದ್ದರು. ಆದರೆ ಅಷ್ಟರಲ್ಲೇ "ಗುರಪ್ಪ!" ಅಂದು ದಾಸ ಮೆಟ್ಟಿಲಿಳಿದು ಗೇಟಿನ ಬಳಿಗೆ ಓಡಿದ.

"ಏನು? ಏನು! ಗುರುವೆ, ಗುರುವೆ?" ಸಾಹುಕಾರರು ಚಕಿತರಾಗಿ ಎದ್ದು ಮೆಟ್ಟಿಲಿನ ಬಳಿಗೆ ನಡೆದರು.

"ಅಣ್ಣ ಬಂದನೆ?" ಎಂದು ಕುಸುಮ ಕುಣಿತದ ನಡಗೆಯಲ್ಲಿ ತಂದೆಯನ್ನು ಹಿಂಬಾಲಿಸಿದಳು.

ನಂಜಪ್ಪ ಮತ್ತು ಗಜದಂತೆ ಮುಂದಕ್ಕೆ ನಾಲ್ಕಾರು ಹೆಜ್ಜೆಯಿಟ್ಟ. ಸಣ್ಣಮ್ಮ ಹೊಸಲು ದಾಟಿ ಹೊರಗೆ ನಿಂತಳು.

ಗೇಟಿನ ಬಳಿ ಜೋಡೆತ್ತಿನ ಬೋಳು ಗಾಡಿ ನಿಂತಿತು. ಗುರುಪ್ರಸಾದ ಅದರಿಂದ ನೆಗೆದ.

" ಇದೇಕೆ ಗಾಡಿ ? ಕಾರು ಏನಾಯ್ತು ?" ಸಾಹುಕಾರರು ಆಶ್ಚರ್ಯ ಅಸಮಾಧಾನಗಳಿಂದ ಕೂಗಿದರು.

ಆದರೆ ಗುರು ದೂರದಿಂದ ಉತ್ತರವನ್ನು ಕೂಗಿ ಹೇಳಲಿಲ್ಲ. ದಾಸನ ಕ್ಷೇಮಸಮಾಚಾರವನ್ನು ಕೇಳುತ್ತ, ಗಾಡಿಯಿಂದ ಸಣ್ಣ ಕೈಪೆಟ್ಟಿಗೆಯನ್ನು ತೆಗೆದುಕೊಂಡು, ಗಾಡಿಯವನಿಗೆ ದುಡ್ಡು ಕೊಟ್ಟು, ಮನೆಯ ಕಡೆಗೆ ಹೆಜ್ಜೆಯಿಟ್ಟ. ದಾಸ ದೊಡ್ಡ ಪೆಟ್ಟಿಗೆ ಹಾಸಿಗೆಗಳನ್ನು ಗಾಡಿಯಿಂದಿಳಿಸಿ ತಲೆಯ ಮೇಲೆ ಹೊತ್ತು ಎಡಗೈಯಲ್ಲಿ ಹಿಡಿದುಕೊಂಡು ಬಲಗೈಯಲ್ಲಿ ಬುಟ್ಟಿಯನ್ನು ಹಿಡಿದುಕೊಂಡು ಗುರುವನ್ನು ಹಿಂಬಾಲಿಸಿ ಬಂದ.

" ಏ, ದಾಸ. ಬುದ್ಧಿಯಿಲ್ಲವೇನೋ ? ಚಿಕ್ಕ ಸಾಹುಕಾರರೇ ಪೆಟ್ಟಿಗೆ ಹಿಡಿದುಕೊಂಡು ಬರಬೇಕೇನೋ? ಆ ಹಾಸಿಗೆ ಪೆಟ್ಟಿಗೆಗೆ ಏನು ಅವಸರವಾಗಿತ್ತು ? " ಸಾಹುಕಾರರು ರೇಗಿದರು.

ದಾಸ ಆತುರದಿಂದ ಮುಂದೆ ಬಂದು ಬುಟ್ಟಿಯನ್ನು ಎಡ ಕೊಂಕಳಿಗೆ ಹಾಕಿಕೊಂಡು " ಇಲ್ಲಿ ಕೊಡು ಗುರಪ್ಪ " ಎಂದು ಗುರುವಿನ ಪೆಟ್ಟಿಗೆಯನ್ನು ತೆಗೆದುಕೊಳ್ಳಲು ಕೈಹಾಕಿದ.

" ಅದೇನು ಭಾರವಿಲ್ಲ. ಟಾಯಿಲೆಟ್ ಪೆಟ್ಟಿಗೆ" ಗುರು, ತಂದೆ ಮತ್ತು ದಾಸ ಇಬ್ಬರಿಗೂ ಅನ್ವಯಿಸುವಂತೆ ಹೇಳಿ ಪೆಟ್ಟಿಗೆಯನ್ನು ಕೊಡದೆಯೇ ಮೆಟ್ಟಿಲನ್ನು ಹತ್ತಿದ.

" ಏನಾದರೂ ಆಗಲಿ. ನೀನು ಯಾಕೆ ಹೊರಬೇಕು—ಎಲ್ಲರನ್ನೂ ಬಿಟ್ಟು ! " ಸಾಹುಕಾರರು ಸ್ವಲ್ಪ ಹುಬ್ಬುಗಂಟಿಕ್ಕಿ, ಮರುಕ್ಷಣದಲ್ಲಿಯೇ ಮಗ ಹತ್ತಿರವಾದಾಗ ಮಂದಸ್ಮಿತರಾದರು.

ಗುರು ಇಪ್ಪತ್ತು ವರ್ಷದ ಯುವಕ. ತೆಳುವಾದ ಶರೀರ. ತಕ್ಕಮಟ್ಟಿಗೆ ಎತ್ತರ. ಚೆಲುವಾದ ಮುಖವೆನ್ನುವಂತಿಲ್ಲದಿದ್ದರೂ ಆಕರ್ಷಣೀಯವಾಗಿತ್ತು; ಬತ್ತಿದ್ದರೂ ಸತ್ವದಿಂದಿತ್ತು. ಮುಂಗುರುಳು ಕೊಂಚ ಕಡಿಮೆ. ಹೆಚ್ಚು ಲಕ್ಷ್ಯವಿಲ್ಲವೆ ಹಿಂದಕ್ಕೆ ಬಾಚಿದ ಕ್ರಾಪು. ಗಾಡಿಯ ಹುಲ್ಲು ಒಂದು ಅಂಟಿಕೊಂಡೇ ಇತ್ತು ಅದಕ್ಕೆ. ಬಿಳಿಯ ಪೈಜಾಮ ಮತ್ತು ಕುರ್ತ. ಉಂಗುಷ್ಠದ ಚಪ್ಪಲಿ.

" ಕಾರು ಬಂದಿರಲಿಲ್ಲವೇ ಗುರು ? " ಸಾಹುಕಾರರು ಮಗ ಹತ್ತಿರ ಬಂದ ಮೇಲೆ ಕೇಳಿದರು.

ದಾಸ ಆಗಲೇ ತನ್ನ ಹೊರೆಯನ್ನು ಒಳಗಿಟ್ಟು ಬಂದು ಗುರುವಿನ ಕೈಪೆಟ್ಟಿಗೆಯನ್ನು ತೆಗೆದುಕೊಂಡು ಹೋದ.

" ಏನೋ ಕೆಟ್ಟುಹೋಯ್ತು, ಅರ್ಧದಾರೀಲಿ. ಅಷ್ಟುಹೊತ್ತು ನೋಡಿ ಯಾವಾಗ ಸರಿಯಾಗುತ್ತೋ ಏನೋ ಅಂತ ಹಾಸಿಗೆ ಪೆಟ್ಟಿಗೆಯನ್ನೂ...." ಗುರು ನಸುನಗುತ್ತ ಹೇಳುತ್ತಿದ್ದ.

" ಚೆನ್ನಾಯ್ತು, ಚೆನ್ನಾಯ್ತು. ಹಾಳು ಕಾರು! ಮೂರು ಮೂರು ದಿನಕ್ಕೆ ಅದಕ್ಕೇನೋ ಬರುತ್ತೆ ರೋಗ. ಇವತ್ತೇ ಹಾಗಾಗಬೇಕೆ. ಒಳ್ಳೆ ಸ್ವಾಗತ ......."

" ಸರಿ ಸರಿ, ಅದಕ್ಕೇನು. ಅಂತೂ ಹೇಗೋ ಬಂದಿದ್ದಾಯ್ತಲ್ಲ. "

" ಎಷ್ಟು ಹೊತ್ತು ಏನು ಕಥೆ, ಹೇಳು. ಎಷ್ಟು ಹಸಿದಿದೀಯೋ...."

" ಏನಿಲ್ಲ. ಸ್ಟೇಷನ್ನಿನಲ್ಲಿ ಕಾಫಿ...."

" ಅಯ್ಯೋ, ಅದರಲ್ಲಿ ಏನಾಗುತ್ತೆ ಬಿಡು. ಹಸಿದೇ ಇದೀಯ. ಸುಡುಗಾಡು ಕಾರು! ಏನೋ ಸ್ವಲ್ಪ ರಿಪೇರಿ ಮಾಡಿ, ಸರಿ ಅಂತ ಅನ್ನಿಸಿ, ಯಾರಿಗಾದರೂ ಮೆಲ್ಲಗೆ ತಗಲುಹಾಕಿಬಿಡು ಅತ್ತಕಡೆ, ಅಂತ ಆ ಹಾಳು ಡ್ರೈವರಿಗೆ ಹೇಳ್ತಾಲೇ ಇದೀನಿ. ಅಷ್ಟು ಮಾಡಲಾರ, ಶುದ್ಧ ಅಯೋಗ್ಯ. ಅವನಿಗೇನು ಬಂದಿದೆಯೋ ಕೇಡು. ಹಾಗಾದರೆ ಸದ್ಯ, ಹೊಸದನ್ನು ತಗೋಬಹುದು—ಹಾಯಾಗಿ....ನಂಜಪ್ಪ, ನೀನಾದರೂ ಅಷ್ಟು ನೋಡಬಾರದೇನೊ ? ಇಂಥಾದ್ದರಲ್ಲೆಲ್ಲ ಪ್ರವೀಣ. "

" ಅದಕ್ಕೇನು ಭಾವ. ಒಂದು ಮಾತು ಹೇಳು. ನಾಳೆಯೇ ಕಾರು ಮನೆಯಿಂದ ಹೋಯ್ತು, ಅಂದುಕೊಂಡು ಬಿಡು. ಹುಂ, ನಂಗೆ ಹೇಳಿದ್ಮೇಲೆ ಇನ್ನೂ ಉಳಿಯುತ್ತೇ ? ಕುರುಡು ಹುಡುಗಿಗೆ ಎರಡು ದಿನದಲ್ಲಿ ಲಗ್ನ ಮಾಡಿಸುತ್ತೀನಿ, ಬೇಕಾದರೆ ಹುಂ. "

" ಬೊಗಳೀಲಿ ನಿನ್ನ ಬಿಟ್ಟರೆ ಇಲ್ಲ ಕಣೊ. ಕೆಲಸ ಹೇಗಾದರೂ ಆಗಲಿ."

" ಹೈಪ್ರೆಶರ್ ಸೇಲ್ಸ್‌ಮನ್ ಅಂದರೆ ಏನು ಅಂತೀಯ ಮತ್ತೆ. "

" ಇರಲಿ, ಇರಲಿ........ ಗುರು, ನಿನ್ನ ಬಟ್ಟೆ ಯಾಕೆ ಮಣ್ಣಾಗಿದೆ, ಇಷ್ಟೊಂದು ? "

" ಕಾರಿಂದು ಇರಬೇಕು—ಸ್ವಲ್ಪ ತಳ್ಳಿ ಮಾಡಿ........"

" ಏನು ! ತಳ್ಳಿದೆಯಾ ? ಲಕ್ಷಣವಾಯ್ತು. ಆ ಡ್ರೈವರ್ ಬಿಟ್ಟನೇ—ತಳ್ಳೋದಿಕ್ಕೆ ? ಅವನೇನು ಹೆಂಡ ಕುಡಿದಿರಬೇಕು. "

" ಅಂಥದ್ದೇನಿಲ್ಲ ಹೆಚ್ಚು. ಎಲ್ಲೋ ಸ್ವಲ್ಪ. ಅದರಲ್ಲಿ ಏನು ತಪ್ಪು—ಇಷ್ಟಕ್ಕೂ ? "

" ತಪ್ಪಿಲ್ಲವೆ ? ಸರಿಯಾಯ್ತು. "

" ಹೋಗಲಿ ಬಿಡಪ್ಪ. ಎಲ್ಲ ಚೆನ್ನಾಗಿದೀರ ? "

" ಹುಂ. ಹುಂ. ನೀನೋಪ್ಪ? "

" ಪರವಾಗಿಲ್ಲ. ಮಾವ, ನೀನು ? "

" ಏನೋ ಇದೀನಪ್ಪ—ಬದುಕಿ. ನನ್ನ ಯಾರು ಕೇಳಬೇಕು ? "

" ಅವನಿಗೇನು ಬಂದಿದೆ ಧಾಡಿ. ನೀರಿನಲ್ಲಿರೋ ಮೊಸಳೆ ಹಾಗಿದಾನೆ ಇಲ್ಲಿ. ಹೊಟ್ಟೆ ಬೆಳೀತಿದೆ; ಕಾಲು ನಿದಾನವಾಗುತ್ತಿದೆ, ಅಷ್ಟೆ ಹ್ಹಹಾ ! " ಸಾಹುಕಾರರು ಬಹೋದ್ಯಮಾಡಿದರು.

" ಅನ್ನದಾತ, ಅಂದದ್ದನ್ನೆಲ್ಲ ಅನ್ನಿಸಿಕೋಬೇಕು---ಕೊಟ್ಟದ್ದನ್ನೆಲ್ಲ ಹೊಟ್ಟೆಗೆ ಹಾಕಿಕೊಳ್ಳೋ ಹಾಗೆ. "

" ಮಾವ ಫಿಲಾಸಫರ್. ಆರಕ್ಕೆ ಹೆಚ್ಚೋದಿಲ್ಲ. ಮೂರಕ್ಕೆ ತಗ್ಗೋದಿಲ್ಲ."

" ಅವನೇನು, ಚಟ್ಟದ ಮೇಲಿಟ್ಟಾಗಲೂ ನಗುತ್ತಲೇ ಇರುತ್ತಾನೆ. "

" ನಾಯಿಗೇಕೆ ಮುಂಚೆಯೇ ಇಡುತ್ತೀಯೇನು ಹಾಗಾದರೆ ? "

" ಬಿಡು ಮಾವ. ಬದುಕೋ ಮಾತಾಡು. ಚಿಕ್ಕಮ್ಮ, ನಿಂಗೆ ಸ್ವಲ್ಪ ವಾಸಿಯೆ ? "

" ನಂದೇನಪ್ಪ, ಲೆಕ್ಕಕ್ಕಿಲ್ಲ ನಾರಿನ ಹಾಗೆ. ಯಾಕೆ, ಸ್ವಲ್ಪ ಬಡವಾಗಿ ದೀಯಲ್ಲಪ್ಪ. "

" ಪರೀಕ್ಷೆ ಫಜೀತಿ... ಗೊತ್ತೇ ಇದೆಯಲ್ಲ. ಇದೇ ಕಡೇದು ಬೇರೆ. ಹೆಚ್ಚು ಮುತುವರ್ಜಿ. ಸದ್ಯ ತೊಲಗಿತಲ್ಲ—ಆ ಶಿಕ್ಷೆ. ಇನ್ನೆಲ್ಲ ಮರೆತು ಬಿಡಬೇಕು. "

" ಚೆನ್ನಾಗಿ ಮಾಡಿದೀಯ—ಎಲ್ಲ ಪೇಪರಿನಲ್ಲೂ ? " ಸಾಹುಕಾರರು ಆತಂಕದಿಂದ ಕೇಳಿದರು.

" ಹುಂ. "

" ಏನಾದರೂ ಅನುಮಾನವಿದ್ದರೆ........"

" ಆದ ಹಾಗೆ ಆಗಲಿ."

"ಅದು ಯಾಕೆ ಹಾಗೇ ಬಿಡಬೇಕು. ಮನುಷ್ಯಪ್ರಯತ್ನ ಮಾಡೋದೆಲ್ಲ ಮಾಡಿಬಿಡಬೇಕು. ಆಮೇಲೆ...."

" ಅದೆಲ್ಲ ಮಾಡಿದೆ. "

" ಅಲ್ಲ, ಬೇಕಾದರೆ...."

" ನಂಗೆ ಇಷ್ಟವಿಲ್ಲ. "

" ಹೋಗಲಿ ಬಿಡು ಈಗ. ಆಮೇಲೆ ಮಾತಾಡೋಣ. ಈಗೇಳು. ಸ್ನಾನ, ಊಟ ಆಗಲಿ. ಬೇಕಾದರೆ ಸ್ವಲ್ಪ ಸುಧಾರಿಸಿಕೋಬಹುದು- ಆಯಾಸ ವಾಗಿದ್ದರೆ. ಇಗೊ, ಸದಾಶಿವ ಕಾಫಿ ತಂದೇ ತಂದ. "

ಸದಾಶಿವ ಒಂದು ಟ್ರೇ ಮೇಲೆ, ಗಿಂಡಿ ಕಾಫಿ, ನಾಲ್ಕು ಬಟ್ಟಲು ಬಿಸ್ಕತ್ತು ಇವುಗಳನ್ನು ತಂದ.

" ಗುರಪ್ಪ ಕೊಂಚ ತಗೋಪ್ಪ. ಸ್ನಾನ ಅದು ಮಾಡೋ ವರೆಗೆ ಆಧಾರ ವಾಗಿ. " ಸದಾಶಿವ ತಟ್ಟೆಯನ್ನು ಟೀಪಾಯ್ ಮೇಲೆ ಇಟ್ಟು ಆಹ್ವಾನಿಸಿದ.

" ಸದಾಶಿವನ ಚುರುಕೇ ಚುರುಕು. ಆಗಲೇ ಮೇಯಿಸೋದಕ್ಕೆ, ಕುಡಿಸೋದಕ್ಕೆ ಮೊದಲು ಮಾಡಿಸೇಬಿಟ್ಟ ಹಿಂದಿನ ಹಾಗೇ. ಮನೆ ಮನೆ ಯಾಗಿರೋದು ಅವನಿಂದಲೆ. ಅಲ್ಲವೇ ಸದಾಶಿವ ?"

" ಎಲ್ಲ ನಿನ್ನ ಅಭಿಮಾನವಪ್ಪ "

" ಬಾರಯ್ಯ ಧೊರೆ. ಸದಾಶಿವ, ನಮ್ಮ ಹೊಟ್ಟೆ ಬೆಚ್ಚಗಿಟ್ಟದ್ದಕ್ಕೆ ನಿನ್ನ ಹೊಟ್ಟೆ ತಣ್ಣಗಿರಲಿ " ನಂಜಪ್ಪ ಲಗುಬಗೆಯಿಂದ ಹೋಗಿ ಸೋಫದ ಮೇಲೆ ಕುಳಿತು ಗಿಂಡಿ ತೆಗೆದು ಕಾಫಿಯನ್ನು ಬಗ್ಗಿಸಿದ.

" ಏನೇ ಕುಸುಮ, ಬಾಡಿಹೋಗಿದೀಯ? ಮಾತೇ ಇಲ್ಲ ? " ಗುರು ಅವಳ ಕೆನ್ನೆ ಚಿವುಟಿದ.

" ಹಾ ! ಬಿಡೋ ಬಿಡೋ. ನನ್ನ ಪೌಡರು ಹೋಯ್ತು.... "

ಎಲ್ಲರೂ ನಕ್ಕರು. ಸಾಹುಕಾರರು ಒಂದು ಕೈ ಹೆಚ್ಚು.

" ಕೆನ್ನೆಗಿಂತ ಅನೇ. ಏನು ಪೌಡರೋ ಪಫೋ " ಕೆನ್ನೆ ಬಿಟ್ಟ.

" ವ್ಯಕ್ತಿ ಅನ್ನೋದಕ್ಕಿಂತ ಚಿತ್ರ ಅನ್ನೋ ಹಾಗೇ ಕಾಣುತ್ತೀಯಲ್ಲೆ

ಹುಡುಗಿ."

"ಇರಲಿ ಬಿಡೋ ಸಾಕು."

"ನಿನ್ನ ಯಾವೋನು........"

"ಸುಮ್ಮನಿರೋ. ಆಗಲೇ ಕಾಟ ಮೊದಲಾಯ್ತು."

"ಅದೆಲ್ಲ ತೀರ್ಮಾನವಾಗಿ ಹೋಗಿದೆ." ನಂಜಪ್ಪ ಬಾಯಿ ಹಾಕಿದ.

"ಆಹಾ!" ಗುರು ಆಶ್ಚರ್ಯದಿಂದ ಅಂದ

"ಹೂಂ. ನನ್ನೇ."

ಎಲ್ಲರೂ ಮತ್ತೆ ನಕ್ಕರು.

"ಹೋಡೀತಿಸಿ ನೋಡು ಮಾವ, ಮತ್ತೆ ಹಾಗೆ ಆಡ್ತಾ ಇದ್ದರೆ."

"ಓಹೋ! ಹೋ!" ಗುರು ನಕ್ಕ.

"ಸ್ತ್ರೀರಾಜ್ಯದಲ್ಲಿ ಇನ್ನೂ ಏನೇನು ನೋಡಬೇಕೋ. ಬಾರಪ್ಪ ಗುರು. ನಮ್ಮ ಕೈ ಮೇಲಾಗಿರುವಾಗಲೇ ಅಷ್ಟು ಕಾಫಿ ಬಸಿದುಕೊಳ್ಳೋಣ." ನಂಜಪ್ಪ ಬಸಿದುಕೊಳ್ಳಲು ಮೊದಲುಮಾಡಿದ.

"ಬಾಪ್ಪ—ಬೇಗ ಇನ್ನೂ ಅಷ್ಟು ಉಳಿದಿರುವಾಗ." ಸಾಹುಕಾರರು ಕಾಫಿಗಾಗಿ ಹೋದರು.

"ಸದಾಶಿವ, ಸ್ನಾನಕ್ಕೆ ನೀರು ........" ಸಾಹುಕಾರರು ಗಮನ ಸೆಳೆದರು.

"ಎಲ್ಲ ತಯಾರಾಗಿದೆ." ಸದಾಶಿವ ಎಲ್ಲವನ್ನೂ ಸಿದ್ಧಮಾಡಿದ್ದ.

ಎಲ್ಲರೂ ಹಿಂಬಾಲಿಸಿ ಸೋಫದ ಮೇಲೆ ಟ್ರೇ ಸುತ್ತ ಕುಳಿತುಕೊಂಡರು.

ಕಾಫಿ ಗುಟುಕಿಸುತ್ತ ಮತ್ತಷ್ಟು ಮಾತುಕತೆಗಳಾದವು. ಗುರು ಮಧ್ಯ ಎದ್ದು ಹೋಗಿ ತಾನು ತಂದಿದ್ದ ಉಡುಗೊರೆಗಳನ್ನೆಲ್ಲ ತಂದ. ದಾಸ ಮತ್ತು ಸದಾಶಿವ ಹೊಸ ಪಂಚೆಗಳಿಂದ ಹಿಗ್ಗಿಹೋದರು. ಚಿಕ್ಕಮ್ಮ ರೌಕೆಯ ರೇಷ್ಮೆಯನ್ನು ತುಂಬ ಮೆಚ್ಚಿಕೊಂಡು ಸಂತೋಷಿಸಿದಳು. ಸಾಹುಕಾರರು ತಮ್ಮ 'ಷೂ'ಗಳನ್ನು ತಿರಿತಿರಿಗಿಸಿ ನೋಡಿ ಬೆಲೆಯನ್ನು ಕೇಳಿ ಒಳ್ಳೆಯ ವ್ಯಾಪಾರವೆಂದು ತೃಪ್ತಿಪಟ್ಟರು. "ಕುಸುಮಂಗೆ ಇಗೊ" ಎಂದು ಅಣ್ಣ ಕರ್ಪೂರದ ಗೊಂಬೆಯನ್ನು ತೆಗೆದಾಗ ಎಲ್ಲರೂ ನಕ್ಕರು. ನಂಜಪ್ಪ ಗಹಗಹಿಸಿದ. ಕುಸುಮಳ ಮುಖ ಕೆಂಪೇರಿತು. "ನಂಗೇನು ಬೇಡ. ನಿನ್ನ ಹೆಂಡತಿಗೆ ಇಟ್ಟುಕೋ"

ಎಂದು ಮುನಿಸಿಕೊಂಡಳು. ಆದರೆ ಜೇಬಿನಿಂದ ಆರು ಹೊಸ ಮಾದರಿ ಬಳೆ ಗಳನ್ನು ತೆಗೆದಾಗ " ಅಯ್ಯೊ, ಎಷ್ಟು ಚೆನ್ನಾಗಿವೆ ! ಇಂಥಾದ್ದು ಇಲ್ಲಿ ಇಲ್ಲವೇ ಇಲ್ಲ. ನನ್ನ ಸ್ನೇಹಿತರೆಲ್ಲ ನಾಳೆ ಹೊಟ್ಟೆಕಿಚ್ಚು ಪಡುತ್ತಾರೆ " ಎಂದು ಅವನಿಂದ ಅವನ್ನು ಕಿತ್ತುಕೊಂಡು ಒಡನೆಯೇ ಕೈಗೆ ಹಾಕಿಕೊಂಡಳು. ಮಿಂಚಿನಂತೆ ಬಂದಿದ್ದ ಕೋಪ ಹಾಗೆಯೇ ಮಾಯವಾಯಿತು. ಅಣ್ಣತಂಗಿಯರು ಕೂಡಲೇ ಒಂದಾದರು. ಚಾಕೊಲೆಟ್ಟಿನ ದಪ್ಪ ಪೆಟ್ಟಿಗೆ ಹೊರಗೆ ಬಂದಮೇಲಂತೂ ಅವರ ಸೌಹಾರ್ದ ಎಲ್ಲೂ ಹಿಡಿಸದಾಯಿತು.

" ಮಾವ ಇದು ನಿಂಗೆ. " ಗುರು ಒಂದು ಬೆಲ್ಟನ್ನು ತೆಗೆದ.

" ಇದು ಯಾಕೋ ನಂಗೆ, ಮಹರಾಯ ? "

" ನಿನ್ನ ಹೊಟ್ಟೆಯ ಮೇಲೆ ಪಂಚೆ ನಿಲ್ಲೋದಿಲ್ಲ ಅಂತ. "

ಎಲ್ಲರೂ ಗೊಳ್ಳೆಂದು ನಕ್ಕರು. ಕುಸುಮ ಎಷ್ಟೋ ಹೊತ್ತು ಕಿಲಕಿಲ ನಕ್ಕು ಮುಯ್ಯಿ ತೀರಿಸಿಕೊಂಡಳು.

" ಅಲ್ಲ ಕಣಯ್ಯ, ಭಾವ ಒಬ್ಬ ಹೀಗೆ ಅಂದರೆ ಅಳಿಯನೂ ಹೀಗಾಗ ಬೇಕೆ. ನನ್ನ ದುರದೃಷ್ಟವೇ!" ನಂಜಪ್ಪ ಗೋಳಾಡಿದ— ಪಾಪ್ಲಿನ್ ಷರಟನ್ನು ಕೊಡುವವರೆಗೆ.

" ಅವನಿಗೊಂದು ಊರುಗೋಲನ್ನಾದರೂ ತರಬೇಕಾಗಿತ್ತು. ಈಗ ಮೇಲು ಭಾರವಾಗಿ ಬಹಳ ತತ್ತರಿಸುತ್ತಾನೆ. " ಸಾಹುಕಾರರು ಇನ್ನೂ ನಗೆ ಯೆಬ್ಬಿಸಿದರು.

" ನಿನ್ನ ತಲೆಗಿಂತಲೂ ನನ್ನ ಹೊಟ್ಟೆ ಹೆಚ್ಚು ತೂಕವೆ ? " ಎಂದು ನಂಜಪ್ಪ ಏಟನ್ನು ಹಿಂದಿರುಗಿಸಿದ.

ಆ ದಿನ ಮಹಲಿನಲ್ಲಿ ದೊಡ್ಡ ಹಬ್ಬದ ಗೆಲವು ಸಂತೋಷಗಳು ಮೆರೆ ದುವು. ಸಾಹುಕಾರರಿಗಂತು ಮಗನ ಸುತ್ತ ಎಷ್ಟು ಸುತ್ತಿದರೂ ತೃಪ್ತಿಯಾಗ ಲಿಲ್ಲ. ಅವನ ಕೋಣೆ, ಹಾಸಿಗೆ, ಊಟ ತಿಂಡಿ ಎಲ್ಲದರ ಮೇಲ್ವಿಚಾರಣೆ ಯನ್ನೂ ತಾವೇ ನಡೆಸಿದರು. ಆ ಮಾತು ಈ ಮಾತು ಮುಗಿದು ಎಲ್ಲರೂ ಮಲಗುವ ಹೊತ್ತಿಗೆ ನಡುರಾತ್ರಿಯಾಗಿತ್ತು. ಸಾಹುಕಾರರಿಗೆ ಮಗನ ಭವಿಷ್ಯದ ಗೆರೆಯನ್ನು ಗುರುತಿಸಿ ಚರ್ಚಿಸಬೇಕೆನ್ನುವ ಇಷ್ಟ, ಆತುರ. ಆದರೆ ಯಾಕೋ ಮಾತು ಹೊರಡಲಿಲ್ಲ. ' ಇರಲಿ. ಇನ್ನೂ ಎರಡು ದಿನ

ವಿಶ್ರಾಂತಿ ತೆಗೆದುಕೊಳ್ಳಲಿ. ಎಲ್ಲ, ಸಕಾಲದಲ್ಲಿ ' ಎಂದು ಹೇಗೋ ಕಷ್ಟದಿಂದ ತಡೆದುಕೊಂಡರು. ಆ ರಾತ್ರಿ ಅವರಿಗೆ ನಿದ್ದೆ ಬರಲೇ ಇಲ್ಲ. ಮುಂದಿನ ಸವಿಗನಸುಗಳು ತೆಗೆದ ಕಣ್ಣಿನ ಮುಂದೇ ಹಲವು ವೇಷಗಳಲ್ಲಿ ಬಂದು ಕುಣಿಯುತ್ತಿದ್ದವು. ಅವರು ತಮ್ಮ ಹಂಚಿಕೆ, ನಕ್ಷೆಗಳನ್ನು ಮಗುಚಿ ಮಗುಚಿ ನೋಡುತ್ತಿದ್ದರು. ಅವರ ಜೀವಮಾನದಲ್ಲೇ ಅಷ್ಟೊಂದು ಉಲ್ಲಾಸದ ದಿನ ಇನ್ನೊಂದು ನೆನಪಿರಲಿಲ್ಲ.

೨

* * *

ಮೂರನೆಯ ದಿನ ಬಂದ ಟಪಾಲಿನ ಒಂದು ಕಾಗದ ಸಾಹುಕಾರರ ಗಮನವನ್ನೆಲ್ಲ ಅನೇಕ ದಿನಗಳ ವರೆಗೆ ಸೆಳೆದುಬಿಟ್ಟಿತು. ಅದು ಬೆಂಗಳೂರಿನ ಸೆಕ್ರೆಟೇರಿಯಟ್‌ನಲಿದ್ದ ಇವರ ಗುಪ್ತ ಆಪ್ತನೊಬ್ಬನಿಂದ ಬಂದಿತ್ತು. ಇಂತಹ ಆಪ್ತರು ಅವರಿಗೆ ಮುಖ್ಯವಾದ ಸ್ಥಳಗಳಲ್ಲೆಲ್ಲ ಇದ್ದರು. ಈ ಕಾಗದ ಬಹಳ ದಿನಗಳಿಂದಲೂ ಸಾಹುಕಾರರು ನಿರೀಕ್ಷಿಸಿದ್ದ ಸಮಾಚಾರವನ್ನು ತಂದಿತ್ತು. ಸಾವಿರಾರು ರೂಪಾಯಿನ ಸಮಾಚಾರ. ಅಂದ ಮೇಲೆ ಕೇಳಬೇಕೆ ಅದರ ಪ್ರಾಮುಖ್ಯತೆ? ವಿಷಯ ಹೀಗಿತ್ತು:

ಕೆಲವು ವರ್ಷಗಳ ಹಿಂದೆ ಹಿರಿ ಹಳ್ಳಕ್ಕೆ ಅಡ್ಡಕಟ್ಟೆ ಹಾಕಿ ಜಮೀನನ್ನು ಸಾಗುವಳಿ ಮಾಡುವ ಯೋಜನೆ ಸರಕಾರದ ಗಮನಕ್ಕೆ ಬಂದಿತ್ತು. ಇದರಿಂದ ಮರುಳೂರಿನ ಬಳಿ ಇನ್ನೂರು ಎಕರೆಯಷ್ಟು ಖುಷ್ಕಿ ಜಮೀನು ನೀರಾವರಿಯಾಗಿ ತರಿಯಾಗುವ ಸಂಭವವಿತ್ತು. ಅದರ ಪೈಕಿ ಸಾಹುಕಾರರ ಜಮೀನು ನೂರಹತ್ತು ಎಕರೆಯಷ್ಟು. ಆದರೆ ಆಗಿನ ಮುಖ್ಯ ಎಂಜಿನಿಯರು ಪರೀಕ್ಷೆ ನಡೆಸಿ ವರದಿ ತರಿಸಿಕೊಂಡು ಈ ಯೋಜನೆ ಲಾಭಕರವಲ್ಲವಾದುದರಿಂದ ಸರಕಾರಕ್ಕೆ ಪ್ರಯೋಜನವಿಲ್ಲವೆಂದು ತಳ್ಳಿಹಾಕಿದ್ದರು. ಹೀಗಾದ ಮೇಲೆ ಈ ಯೋಜನೆಯಲ್ಲಿ ಜನರ ಆಸಕ್ತಿ ಬತ್ತಿ ವಿಷಯವು ಅವರ ಮನಸ್ಸಿನಿಂದ ಮರೆಯಾಯಿತು. ಆದರೆ ಸಾಹುಕಾರರು ಇದರ ಆಸೆಯನ್ನು ಬಿಡದೆ ತಮ್ಮ

ಸಮಯವನ್ನು ಕಾಯುತ್ತಿದ್ದರು. ಪ್ರಜಾತಂತ್ರವೇರ್ಪಟ್ಟು ಇವರು ಎಂ. ಎಲ್. ಎ. ಆಗಿ ಮುಖ್ಯ ಎಂಜನಿಯರ್ ಬೇರೆಯಾದಾಗ ಈ ಪ್ರಶ್ನೆಯನ್ನು ಪಿ. ಡಬ್ಲ್ಯು. ಡಿ. ಮತ್ತು ವ್ಯವಸಾಯದ ಮಂತ್ರಿಗಳಲ್ಲಿ ಎತ್ತಿದರು; 'ಹೆಚ್ಚು ಬೆಳೆಯಿರಿ' ಯೋಜನೆಗೆ ಬಹಳ ಮುಖ್ಯವೆಂದೂ, ಇದರಿಂದ ಅನೇಕ ಬಡ ರೈತರು ಉದ್ಧಾರವಾಗುವರೆಂದೂ ತೃಪ್ತಿಯಾದ ಅಂಕಿ ಸಂಖ್ಯೆಗಳನ್ನು ಕೊಟ್ಟು ವಾದಿಸಿದರು. ಮಂತ್ರಿಗಳು ಎಂಜಿನಿಯರನ್ನು ಕರೆಸಿದರು, ಮಾತ ನಾಡಿದರು. ಎಂಜಿನಿಯರು ಹಿಂದಿನ ತೀರ್ಮಾನವನ್ನು ನೆನೆದು ತಲೆಯಾಡಿ ಸಿದರು. ಆದರೆ ಸಾಹುಕಾರರು ದೇಶಸೇವೆಯ ಕಾರ್ಯದಲ್ಲಿ ಲಾಭ ಎರಡನೆಯ ಅಂಶವೆಂದೂ ಬಡಜನರ ಪ್ರಯೋಜನದಲ್ಲಿ ಹಿಂದುಮುಂದು ನೋಡಬಾರ ದೆಂದೂ ಹೊಡೆದಾಡಿದರು. ಅನಂತರ ಎಂಜಿನಿಯರನ್ನು ತಾವು ಒಬ್ಬರೇ ಕಂಡು ದೀರ್ಘವಾಗಿ ಮಾತಾಡಿ ಅವರನ್ನು ತಮ್ಮ ದಾರಿಗೆ ಎಳೆದುಕೊಳ್ಳುವುದಕ್ಕೆ ತಮ್ಮ ಶಕ್ತಿಯುಕ್ತಿಯನ್ನೆಲ್ಲ ಉಪಯೋಗಿಸಿದರು. ಎಂಜಿನಿಯರು ಸ್ವಲ್ಪ ಮನಸ್ಸು ಇಳಿಬಿಟ್ಟಂತೆ ಕಂಡಿತು. ಈ ಸೂಚನೆಯನ್ನು ಮಂತ್ರಿಗಳಿಗೆ ತಿಳಿಸಿ, ಅಗತ್ಯ ಬಿದ್ದರೆ ಅವರು ಅಧಿಕಾರವನ್ನೇ ಉಪಯೋಗಿಸಿ ಈ ಕೆಲಸವನ್ನು ಖಂಡಿತ ವಾಗಿ ನಡೆಸಿಯೇ ಕೊಡಬೇಕೆಂದು ತಮ್ಮಲ್ಲಿ ಅವರಿಗಿದ್ದ ಸ್ನೇಹ ಗೌರವ ಬಲ ದಿಂದ ಒತ್ತಾಯವನ್ನೇ ಮಾಡಿ, ಅವರಿಂದ ಬೆಂಬಲದ ಭರವಸೆಯನ್ನು ತೆಗೆದು ಕೊಂಡು ಬಂದರು. ಇಷ್ಟಾದರೂ ವಿಷಯ ಬೇಗ ತೀರ್ಮಾನವಾಗುವ ಸಂಭವ ಕಂಡುಬಂದಿರಲಿಲ್ಲ. ಎಷ್ಟು ಆಶಯ ಕಂಡುಬಂದರೂ ಹೇಗೆ ತೀರ್ಮಾನವಾಗುವುದೆಂಬುದನ್ನೂ ನಿಶ್ಚಯವಾಗಿ ಹೇಳಿಬಿಡುವಂತಿರಲಿಲ್ಲ. ಮಂತ್ರಿಗಳು ಎಂಜನಿಯರುಗಳ ಮಧ್ಯೆ ಕಾಗದ ಪತ್ರಗಳು ನಿದಾನವಾಗಿ ನಡೆ ಯುತ್ತಿದ್ದುವು. ಇದನ್ನರಿತ ಸಾಹುಕಾರರು ವಿಷಯದ ಪ್ರತಿ ಮೆಟ್ಟಿಲನ್ನೂ ತಿಳಿದು ಬರೆಯಲು ತಮ್ಮ ಜನರನ್ನು ಎಂಜಿನಿಯರು ಮತ್ತು ಮಂತ್ರಿಗಳ ಆಫೀಸಿನಲ್ಲಿ ನಿಯಮಿಸಿ, ಯೋಜನೆಗೆ ಮುದ್ರೆ ಬೀಳುವುದಾದರೆ ಅದಷ್ಟು ಮುಂಚೆ ತಮಗೆ ಸುದ್ದಿ ಕಳುಹಿಸಬೇಕೆಂದು ಹೇಳಿ ಬಂದಿದ್ದರು. ಕಾಲ ಕಾಲಕ್ಕೆ ವರದಿಯನ್ನು ತರಿಸಿಕೊಳ್ಳುತ್ತಿದ್ದರು.

ಈಗ ಬಂದಿದ್ದ ಕಾಗದ ಎಂಜಿನಿಯರ ಆಫೀಸಿನವನಿಂದ. ಎಂಜಿನಿ ಯರು ಕಡೆಗೆ ಯೋಜನೆಯನ್ನು ಒಪ್ಪಿ, ವಿವರಗಳನ್ನೂ ಸಿದ್ಧಪಡಿಸಿ ಕಡೆಯ

ಅಧಿಕಾರ ಒಪ್ಪಿಗೆಗಾಗಿ ಅದನ್ನು ಮಂತ್ರಿಯವರಲ್ಲಿಗೆ ರುಜುವಿಗಾಗಿ ಆ ದಿನವೇ ಕಳುಹಿಸಿದ್ದಾರೆಂದು ಬರೆದಿದ್ದ. ನಾಲೆ ಹೋಗಬೇಕೆಂದಿದ್ದ ದಾರಿಯನ್ನು ಗುರುತಿಸಿದ ಒಂದು ರೆವಿನ್ಯೂ ನಕ್ಷೆಯನ್ನೂ ಕಳುಹಿಸಿದ್ದ. ಇದರಿಂದ ಸಾಹು ಕಾರರಿಗೆ ಆದ ಸಂತೋಷ ಅಷ್ಟಿಷ್ಟಲ್ಲ ಹಿಗ್ಗಿ ಹೋದರು. ಆದರೆ ಹಿಗ್ಗುತ್ತಲೇ ಇರದೇ ತಾವು ಅಷ್ಟು ದಿನಗಳಿಂದ ಯೋಚಿಸಿ ಮೆಲಕು ಹಾಕಿದ್ದ ಕಾರ್ಯಕ್ರಮ ವನ್ನು ಕೂಡಲೆ ಕೈಕೊಂಡರು. ಇವರ ನೆಚ್ಚಿನ ಗುಮಾಸ್ಥ ನಾಗಪ್ಪನಿಗೆ ಅವಸರದ ಜರೂರು ಕರೆ ಹೋಯಿತು. ಕಾಲ ಎಳ್ಳಷ್ಟನ್ನೂ ಕಳೆದು ಕೊಳ್ಳುವಂತಿರಲಿಲ್ಲ ನಾಗಪ್ಪ ಓಡಿಯೇ ಬಂದ ಅನ್ನಬೇಕು.

ಸಾಹುಕಾರರು ಮರುಳೂರು ಹೋಬಳಿಯ ಆ ರೆವಿನ್ಯೂ ನಕ್ಷೆಯನ್ನು ತಮ್ಮ ಮುಂದೆ ಮೇಜಿನ ಮೇಲೆ ಬಿಚ್ಚಿಟ್ಟುಕೊಂಡು ನಟ್ಟ ಮನಸ್ಸಿನಿಂದ ನೋಡುತ್ತ ಅಲ್ಲಲ್ಲಿ ಜಮೀನಿನ ಚೌಕಗಳ ಮೇಲೆ ಕೆಂಪು ಪೆನ್ಸಲ್‌ನಿಂದ ಗುರುತು ಹಾಕುತ್ತಿದ್ದರು. ನಾಗಪ್ಪ ಬಂದು ನಿಂತುದನ್ನೂ ಕೂಡ ಅವರು ಎರಡು ಮೂರು ನಿಮಿಷ ಗಮನಿಸಲಿಲ್ಲ.

"ಓ, ಬಂದೆಯಾ ?" ಸಾಹುಕಾರರು ನಕ್ಷೆಯಿಂದ ಕಣ್ಣೆತ್ತಿದಾಗ ಕೇಳಿದರು.

"ಸಾಹುಕಾರರ ಅಪ್ಪಣೆ ಆಯ್ತಂತೆ."

"ಹುಂ. ಬಹಳ ಮುಖ್ಯವಾದ ಕೆಲಸ. ಗುಟ್ಟಾಗಿ ಚುರುಕಾಗಿ ಮಾಡಬೇಕು—ತಿಳಿತೆ ?"

"ಅಪ್ಪಣೆ."

"ಇಲ್ಲಿ ನೋಡು,........" ಸಾಹುಕಾರರು ನಕ್ಷೆಯ ಮೇಲೆ ಬೆರಳಾಡಿಸುತ್ತ ಮಾತನ್ನು ಮುಂದುವರಿಸಿದರು.

"ಕೆಂಪು ಗುರುತು ಹಾಕಿರೋದೆಲ್ಲ ಯಾರ ಯಾರ ಜಮೀನು; ವಿಸ್ತಾರ ಎಷ್ಟೆಷ್ಟು ಅಂತ ಪತ್ತೆಮಾಡಬೇಕು. ಏನೋ ಗೋಮಾಳ ಮಾಡೋ ಮಾತು ಅಂತ ಹೇಳಿ ಆ ಸೂರಪ್ಪನ-ಶಾನುಭೋಗ-ಕಡತ ತಗೊಂಡು ಬರು ತ್ತೀಯ ? ಆ ಮಾತನ್ನೆಲ್ಲ ಆಮೇಲೆ ಹೇಳುತ್ತೀನಿ. ಅವನನ್ನೇನು ಕರೆ ತರಬೇಡ."

"ಅಪ್ಪಣೆ."

“ ಜೋಕೆ. ”

“ ಸಾಹುಕಾರರಿಗೆ ಆದರ ಕೆಲಸ ಆಗಾಗ ಇದ್ದೇ ಇರುತ್ತಲ್ಲ. ಹಾಗೇ ಈಗಲೂ. ”

“ ಹುಂ. ನಿಜ. ”

ಸ್ವಲ್ಪ ಹೊತ್ತಿನ ಮೇಲೆ ನಾಗಪ್ಪ ಕಡತ ತಂದ. ಸಾಹುಕಾರರೂ ಗುಮಾಸ್ತೆಯೂ ಕೂಡಿ ನಾಲೆಯ ಕೆಳಗೆ ಬರಬಹುದಾದ ಇತರರ ಜಮೀನಿನ ನಂಬರು, ವಿಸ್ತೀರ್ಣ ಮತ್ತು ಒಡೆಯರ ಪಟ್ಟಿಯನ್ನು ಮಾಡಿದರು. ಒಟ್ಟು ಇದ್ದ ಕುಳಗಳು ಹದಿನಾರು.

“ ಹುಂ. ಇದಾಯ್ತಲ್ಲ. ಈಗ ನೋಡು ನಾಗಪ್ಪ, ನಮ್ಮ ಊರಿನ ಸುತ್ತಮುತ್ತ ಒಂದು ಗೋಮಾಳವೂ ಇಲ್ಲ. ನಾವು ಹಿಂದುಗಳು ಗೋವಿನ ವಿಷಯ ಬಹಳ ಹೇಳುತ್ತೀವಿ. ಅದನ್ನು ಪೂಜೆ ಮಾಡುತ್ತೀವಿ, ಆದರೆ ಕೊಟ್ಟಿಗೆ ಗುಡಿಸೋದಿಲ್ಲ. ದಿನವೂ ಕುಂಕುಮ ಇಡುತ್ತೀವಿ, ಹೊಟ್ಟೆಗೆ ಹುಲ್ಲು ಹಾಕೋದಿಲ್ಲ. ಮೇಯೋದಿಕ್ಕೆ ಅಂಗೈ ಅಗಲ ಜಾಗವಿಲ್ಲ. ಬೀದಿಯ ಹೊಲಸು ಕಸ ತಿಂದು ಅವು ಬಾಳಬೇಕು. ಇನ್ನು ಹಾಲೇನು ಕೊಟ್ಟಾವು, ಸಗಣಿ ಹಾಕಲಾರವು, ಪಾಪ ? ಗೋವು ಗೋವು ಅಂತ ಸುಮ್ಮನೆ ಹೊಡೆದು ಕೊಂಡರೇ ಆಗುತ್ತೇ—ಅದರ ಪುನರುದ್ಧಾರ ? ನನಗಂತೂ ಈ ದುಸ್ಥಿತಿ ಕಂಡು ಕಣ್ಣೀರೇ ಬರುತ್ತೆ. ನಮ್ಮ ದುರಾಸೆಯಲ್ಲಿ ಗೋಮಾಳಗಳನ್ನೆಲ್ಲ ಸಾಗುವಳಿ ಮಾಡಿ ಹಾಳುಮಾಡಿ ನಮ್ಮ ಕುತ್ತಿಗೆಯನ್ನೇ ನಾವು ಕುಯ್ದು ಕೊಳ್ಳುತ್ತ ಇದೀವಿ. ಇದು ಜನಕ್ಕೆ ತಿಳಿಯೋದಿಲ್ಲ. ಪ್ರಕೃತದ ಲಾಭಕ್ಕೆ ಮೋಸ ಹೋಗಿ ಭವಿಷ್ಯವನ್ನೆಲ್ಲ ಹಾಳುಮಾಡಿಕೊಳ್ಳೋದು ಮನುಷ್ಯನ ಹುಟ್ಟುಮೂರ್ಖ ಗುಣ. ಹೀಗಿದ್ದು ಗೋರಕ್ಷಣೆಯಲ್ಲಿ ಗೋಮಾಳರಚನೆ ಮೊದಲನೆಯ ಮೆಟ್ಟಿಲು ಅಂತ ತಿಳಿದಿದೀನಿ. ನೀನೇನಂತೀಯ ? ”

“ ಅಯ್ಯೋ, ನಾನು ಹೇಳೋದೇನಿದೆ ತಮ್ಮ ಘನವಾದ ಯೋಚನೆಗೆ.”

“ ಸರಿ ಮತ್ತೆ. ಇದಕ್ಕಾಗಿ ನನ್ನ ಕೈಯಿಂದ ಅಷ್ಟು ಹಣ ಹೋದರೂ ಸರಿಯೆ, ನಮ್ಮ ಊರಿನ ದನಗಳು ಬದುಕಿಕೊಂಡು ಹತ್ತು ಜನರಿಗೆ ಒಂದು ಉಪಕಾರವಾದರೆ ನನ್ನ ನಷ್ಟವೂ ಸಾರ್ಥಕವಾಗುತ್ತೆ, ಏನು ? ”

“ ನಿಜ. ”

" ನಮ್ಮ ಹೆಸರು ಶಾಶ್ವತವಾಗಿ ನಿಲ್ಲುತ್ತೆ. "

" ಇಲ್ಲವೆ ? ಊರಿಗೆಲ್ಲ ದೊಡ್ಡ ಉಪಕಾರ. "

" ಅದು ಎಲ್ಲರಿಗೂ—ಅದೂ ಆ ಜಮೀನುದಾರರಿಗೆ ಗೊತ್ತಾಗ ಬೇಕಲ್ಲ. ಘನವಾದ ಗುರಿ ಗ್ರಹಿಸಬಲ್ಲ ಗೃಹಸ್ಥರೇ ಅವರು ? ಇದರಲ್ಲಿ ಏನೋ ಇದೆ ಅಂತಲೋ ಅಥವ ಕೊಳ್ಳೋರು—ಯಾತಕ್ಕೋ ಆಗಲಿ— ಬಾಗಿಲಿಗೆ ಬಂದಿದಾರೆ ಅಂತಲೋ ಅಟ್ಟಕ್ಕೆ ಹೋಗಿಬಿಡುತ್ತಾರೆ. ಅಸಾಧ್ಯ ವಾದದ್ದನ್ನೆಲ್ಲ ಕೇಳುತ್ತಾರೆ—ನಮ್ಮ ದುರಾಸೆಯ ಜನದ ರೀತಿಯೇ ಹಾಗೆ. ಆದುದರಿಂದ ಒಳ್ಳೆ ಕೆಲಸ ಮಾಡೋವಾಗಲೂ ಬಹಳ ಎಚ್ಚರಿಕೆಯಿಂದ ಮಾಡಬೇಕು. "

"ಧಣಿಯೋರು ಕ್ಷಮಿಸಬೇಕು ಗೋಮಾಳಕ್ಕೆ ಇಷ್ಟೊಂದು ಜಮೀನು .."

" ಅದಕ್ಕೆ ಬರುತ್ತಾ ಇದೀನಿ. ನಾವು ಜನರನ್ನು ಬೇರೆ ಬೇರೆ ತಾನೆ ಕಂಡು ತೀರ್ಮಾನಿಸೋದು. ಅದು ಗೊತ್ತಾಗೋದು ಎಲ್ಲರೂ ಒಟ್ಟಾಗಿ ಮಾತಾಡಿಕೊಂಡ ಮೇಲೆ ತಾನೆ. ಅಷ್ಟು ಹೊತ್ತಿಗೆ ಎಲ್ಲ ನಡೆದೇಹೋಗಿರುತ್ತೆ. ಅಲ್ಲದೆ ಅಲ್ಲಿ ಎರಡು ಎಕರೆ, ಇಲ್ಲಿ ನಾಲ್ಕು ಎಕರೆ ಆದರೆ ಹೇಗೆ ಸರಿ- ಹೋಗುತ್ತೆ? ಕೊಂಡುಕೊಳ್ಳೋದು ಎಲ್ಲ ಕೊಂಡುಕೊಂಡು, ಬೇಕಾದಷ್ಟನ್ನು ಒಂದು ಕಡೆಯಲ್ಲಿ ದಾನವಾಗಿ ಕೊಡಬೇಕಲ್ಲ— ಗೊತ್ತಾಯ್ತೆ ? "

" ಹುಂ. "

" ಇನ್ನೊ ಒಂದು ಮಾತು ಬರುತ್ತೆ. ನಮ್ಮ ಬೇರೆ ಜಮೀನನ್ನು ಯಾಕೆ ಗೋಮಾಳಕ್ಕೆ ಬಿಡಬಾರದು ಅಂತ. ಅದಕ್ಕೆ ಉತ್ತರ ಇಷ್ಟೆ. ಈ ಇತರರ ಭಾಗ, ದೊಡ್ಡ ತಿಟ್ಟನದು, ನಮ್ಮ ಊರಿಗೂ ಸುತ್ತಮುತ್ತಿನ ಬೆಂದಗೆರೆ, ತಿರಿಯೂರು, ಕುರುಡುಹಳ್ಳಿ ಇವಕ್ಕೆಲ್ಲ ಮಧ್ಯಸ್ಥವಾಗಿದೆ. ಮಾಡಿದ ಕೆಲಸ ಆದಷ್ಟು ಹೆಚ್ಚು ಜನಕ್ಕೆ ಉಪಯೋಗವಾಗಬೇಕು. ತಿಳಿತೆ—ಕಾರಣ ? "

" ಓಹೋ. "

" ಸರಿ, ಮತ್ತೆ ನೀನು ಈ ಜಮೀನಿನವರ ಸ್ಥಿತಿಗತಿಗಳನ್ನೆಲ್ಲ ವಿಚಾರಿಸಿ ಅವರಿಗಿರೋ ಕಷ್ಟ, ಹಣದ ಜರೂರು, ತಗಾದೆ ಇವನ್ನೆಲ್ಲ ತಿಳಿದುಕೊ. ಆ ಮೇಲೆ ಮಾರೋದಕ್ಕೆ ಯಾರು ಯಾರು ಸಿದ್ಧವಾಗಿದಾರೆ, ಆತುರವಾಗಿದಾರೆ, ಅಂತ ಗೊತ್ತುಮಾಡಿಕೊಂಡು, ಏನೋ ಒಂದು ತರಹ ಬೇಕಿಲ್ಲದ ಹಾಗೇ

ಮಾತಾಡಿ ಅವರಿಗೆ ಅನುಕೂಲ ಮಾಡಿಕೊಡೋ ಹಾಗೇ ಸುಲಭವಾಗಿ—ಆದಷ್ಟು ಸುಲಭವಾಗಿ ಕೆಡವಿಕೊಂಡು ಕೂಡಲೆ ಹಣ ಕೊಟ್ಟು ಪತ್ರ ಬರೆಸಿಬಿಡು. ಧರ್ಮದ ಕೆಲಸದಲ್ಲಿ ಅವರದ್ದೂ ನಾಲ್ಕು ಕಾಸು ಹೋದರೂ ಹೋಗಲಿ. ಪರವಾಗಿಲ್ಲ ಅಲ್ಲವೆ ? "

" ಹೌದು. "

" ಅವರ ಧರ್ಮದ ಎದೆ ಮುಟ್ಟೋ ಹಾಗೆ ಗೋಮಾಳದ ವಿಷಯವನ್ನೂ ಬಣ್ಣಿಸಿ ಹೇಳು, ಗೊತ್ತಾಯ್ತೆ ? "

" ಅಪ್ಪಣೆ. "

" ಅತ್ತ ಕಡೆ ಜಮೀನೆಲ್ಲ ಈಗ ಎಕರೆಗೆ ಇನ್ನೂರು ಇನ್ನೂರೈವತ್ತು ಬಾಳುತ್ತವೆ ಅಂತ ಇಟ್ಟುಕೊ. ಕಷ್ಟವಾದ ಕುಳವಾದರೆ ಇನ್ನೂ ಇಪ್ಪತ್ತೈದು ಐವತ್ತಕ್ಕೆ ಹಿಂಜರಿಯಬೇಡ. ಜಮೀನು ಮುಖ್ಯ, ಆಂ ? "

" ಸರಿ. "

" ಬೇರೆ ಜಮೀನು ಬೇಕು ಅನ್ನೋರಿಗೆ ಗೌರಿ ತಿಟ್ಟಿನಲ್ಲಿ ಬೇಕಾದರೆ ಕೊಡೋಣ. ಸರಿಯೆ ? "

" ಆಗಲಿ. "

" ಹಾಗೂ ಮಾರೋದಕ್ಕೆ ಇಷ್ಟಪಡದ ಒಂದಷ್ಟು ಮೊಂಡರು—ಹಟವಾದಿಗಳು—ಉಳಿಯಬಹುದು. ಅವರಿಗೆ ನನ್ನ ಕಾಣಬೇಕು ಅಂತ ಹೇಳು. ನಾನೇ ಅವರನ್ನು ನೋಡಿಕೋತೀನಿ. ಬಡವೆ ಇರೋರು ಯಾರು; ಅಷ್ಟು ಧೈರ್ಯ ಎಲ್ಲಿ ಬರಬೇಕು. ಅಲ್ಲವೆ ? "

" ಅಷ್ಟಲ್ಲದೆ. "

" ಒಂದಲ್ಲ ಒಂದು ದಿನ ನನ್ನ ದಾಕ್ಷಿಣ್ಯಕ್ಕೆ ಸಿಕ್ಕೋರೆ, ಆಂ ? "

" ಅಗತ್ಯವಾಗಿ. "

" ಅಂತೂ ಧರ್ಮದ ಕೆಲಸವಾದರೂ ಇದು ಆದಷ್ಟು ಸುಲಭದಲ್ಲಿ ಆಗಬೇಕು ನೋಡು. ನೀನು ಬಹಳ ಬುದ್ಧಿವಂತ ನಂಬಿಗಸ್ಥ ಅಂತಲೇ ಈ ಕೆಲಸ ನಿಂಗೆ ಕೊಟ್ಟಿದೀನಿ. "

" ಸಾಹುಕಾರರ ಅಭಿಮಾನ ಬಡವನ ಮೇಲೆ. "

" ಏನಿಲ್ಲ, ಏನಿಲ್ಲ. ನಿನ್ನ ಯೋಗ್ಯತೆ ಅಷ್ಟೊಂದು. ಅಂತೂ ಇದನ್ನೂ

ಹೇಳಿಬಿಡುತ್ತೀನಿ. ಎಕರೆಗೆ ಇನ್ನೂರಕ್ಕೆ ಕಡಿಮೆ ಖರೀದಿ ಆದ ಹಣದಲ್ಲಿ ನಿಂಗೆ... ...."

"ಏನು ಬೇಡ ದಣಿಯೋರೆ. ತಮ್ಮ ದಯ ಒಂದು...."

"ಇರಲಿ, ಇರಲಿ. ಅದರ ಜತೆಗೆ ಇದೂ ಇರಲಿ. ಸೇಕಡ ಹತ್ತು ನಿನ್ನ ಪಾಲು"

"ನನ್ನ ಕೈಲಾದಷ್ಟು ಯತ್ನಿಸುತ್ತೀನಿ."

"ಜತೇಲಿ ಹತ್ತುಸಾವಿರ ರೂಪಾಯಿ ತಗೊಂಡು ಹೋಗು, ಕೊಡುತ್ತೀನಿ. ಬೇಕಾದರೆ ಮತ್ತೆ ಬಂದು ತಗೊಂಡು ಹೋಗು. ನಮ್ಮ ಆಳು ಕರಿಯ ಕೆಂಚ ಇಬ್ಬರೂ ಬರ್ತಾರೆ. ಕಟ್ಟುಮುಟ್ಟಾಗಿದಾರೆ, ನಂಬಿಗಸ್ಥರು. ನಿನ್ನ ಬಳಿ ನನ್ನ ರಿವಾಲ್ವರನ್ನೂ ಕೊಟ್ಟಿರುತ್ತೀನಿ. ಗುಟ್ಟಾಗಿ ಇಟ್ಟುಕೊಂಡಿರು. ಸಮಯ ಬರಲಾರದು. ಹೇಗಾದರೂ ಇರಲಿ. ನಿಂಗೇನು ಹೆದರಿಕೆ...."

"ಉಂಟೇ ಧಣಿಯೋರೆ. ಆಗಲೇ ಎಷ್ಟೋ ಇಂಥಾದ್ದೆಲ್ಲ ಮಾಡಿಲ್ಲವೆ? ತಮ್ಮ ಸೇವೆಯಲ್ಲಿ ನನ್ನ ಜೀವ ತಾನೆ ಎಷ್ಟು...."

"ಅಲ್ಲ ಹಣಾನೂ ಇರುತ್ತಲ್ಲ ಅಂತ."

"ಸರಿ, ಏನು ಯೋಚನೆ ಬೇಡ."

"ಕಾಲ ಅಷ್ಟೇನು ಕೆಟ್ಟಿಲ್ಲ. ಜನ ಇನ್ನೂ ಮೆತ್ತಗೇ ಇದಾರೆ ಅನ್ನು.... ಹುಂ. ಆ ಸೂರಪ್ಪನ್ನ ಈಗ ನನ್ನ ಹತ್ತಿರ ಕಳಿಸು. ಅವನಿಗೂ ನಾಲ್ಕು ಮಾತು ಹೇಳುತ್ತೀನಿ. ಅವನೂ ನಿನ್ನ ಜತೆಗೆ ಕಾಗದ ಪತ್ರ ತಗೊಂಡು ಬರಲಿ. ಕ್ರಯಪತ್ರ ಬರೀಲಿ. ಅವನಿಗೂ ಒಂದು ಉಪಕಾರವಾಯ್ತು. ನಮ್ಮೋನಾಗೇ ಇರ್ತಾನೆ."

"ಆಗಲಿ."

"ಹೆಚ್ಚು ಕಾಲವಿಳಂಬ ಮಾಡೋದು ಬೇಡ. ಬೇಗ ಎಲ್ಲ ಸಿದ್ಧ ಮಾಡಿಕೊಂಡು ಬಾ, ಮತ್ತೆ. ಏಳೆಂಟು ದಿನವೋ, ಇನ್ನೂ ಹೆಚ್ಚೋ, ಹೊರಗಿರಬೇಕಾದೀತು. ಆದಷ್ಟೂ ಎಲ್ಲ ಮುಗಿಸಿಕೊಂಡೇ ಬಂದುಬಿಡಬೇಕು. ಅದೇ, ಕಷ್ಟದ ಕುಳ ನನಗಿರಲಿ. ಇನ್ನು ಹೊರಡು."

"ಅಪ್ಪಣೆ" ನಾಗಪ್ಪ ಹೋದ.

ಸಾಹುಕಾರರು ತಲೆದೂಗುತ್ತ ತಮ್ಮಷ್ಟಕ್ಕೆ ತಾವೇ ಅಸ್ಪಷ್ಟವಾಗಿ

ವರ್ತಾಡಿಕೊಂಡು ನಸುನಕ್ಕರು. ಅವರ ಸಮ್ಮುಖದಿಂದ ತಿರುಗಿದ ನಾಗಪ್ಪನೂ ದಾರಿಯಲ್ಲಿ ನಸುನಗುತ್ತ ಹೋದನು.

ಸೂರಪ್ಪ ಬೇಗಲೇ ಬಂದ. ಶಾನುಭೋಗ ಆಗಲೇ ಮಧ್ಯವಯಸ್ಸನ್ನು ಮೀರಿದಂತೆ ಮುದಿಯಾಗಿದ್ದ. ದಪ್ಪ ತಲೆಯ ಮೇಲೆ ಮಾಸಲು ಕೋರೆ ಪೇಟ, ಸುಕ್ಕಿದ ಕೆನ್ನೆಯ ಮೇಲೆ ಆರು ದಿನದ ಗಡ್ಡ, ಸ್ವಲ್ಪ ಬಗ್ಗಿದಂತಿದ್ದ ತೆಳು ಮುಂಡದ ಮೇಲೆ ಕತ್ತಿನ ಹತ್ತಿರ ಮತ್ತು ಕೈಕೊನೆಗಳಲ್ಲಿ ಜೂಲಾಗಿ ಕರೆಗಳಿಂದ ಚಟ್ಟಾದ ಮುಚ್ಚುಕೋಟು, ಕಡ್ಡಿ ಬರಿಗಾಲಿನ ಮೇಲೆ ಮಾಸಿದ ಮೋಟು ಪಂಚೆ. ಈ ವ್ಯಕ್ತಿಯಲ್ಲಿ ಮುಖ್ಯವಾಗಿ ಕಾಣುತ್ತಿದ್ದ ಅಂಶಗಳೆಂದರೆ ಹೊಳೆಗಣ್ಣುಗಳು, ಯಾವಾಗಲೂ ಕಿರಿದಂತಿದ್ದ ಹಳದಿಯ ಹಲ್ಲುಸಾಲು. ಸೂರಪ್ಪನಿಗೆ ವರ್ಷ ಇಪ್ಪತ್ತೊಂರಾಗಿದ್ದರೂ ಆಗಲೇ ಆರು ಮಕ್ಕಳು. ಇವನು ಎಂ. ಎಸ್–ಗೆಳೆಯರು 'master of sex' ಎಂದು ಹಾಸ್ಯಮಾಡುತ್ತಿದ್ದರು— ದಾಟುವುದಕ್ಕೆ ಐದು ದಂಡಯಾತ್ರೆಗಳನ್ನು ಮಾಡಿ ವಿಫಲನಾಗಿ ಶಾಲೆಗೆ ಬಂದವರಿಗೆಲ್ಲ ಅಣ್ಣ, ಬಿಟ್ಟವರಿಗೆಲ್ಲ ತಮ್ಮನಾಗಿ ತನ್ನ ಮಹಾಯತ್ನವನ್ನು ಕೈಬಿಟ್ಟಿದ್ದ. ಇದಕ್ಕೆ ಇವನಿಗಾಗಿ ಕಾದಿದ್ದ ವಂಶದ ಹಳೆ ಕಡತವೇ ಕಾರಣ ವೆಂದು ಎಲ್ಲರಲ್ಲೂ ನಂಬಿಕೆಯಿತ್ತು. ಅದಕ್ಕೆ ಪರೀಕ್ಷೆಯ ಮಹಾಮಾರಕ ಸ್ವಾರಸ್ಯ ಸಂಸಾರವೂ ಸೇರಿದ್ದಿತೇನೊ. ಹಿಂದೆ ಗುರು ಇವನ ಸಹಪಾಠಿಯೂ, ಇಂದೂ ತಂದೆಯ ಮಾತನ್ನು ಮೀರಿ ಸ್ನೇಹಿತನೂ ಆಗಿದ್ದ.

ಅವನು ಬಂದೊಡನೆ ಸಾಹುಕಾರರು ನಸುನಗೆಯಿಂದ "ಬನ್ನಿ ಶಾನುಭೋಗರೆ, ಕೂತುಕೊಳ್ಳಿ. ನಮ್ಮ ಕೆಲಸ ಅಷ್ಟು ಮಾಡಿಕೊಡಬೇಕಲ್ಲ" ಎಂದು ಸ್ವಾಗತಿಸಿ ಸೋಫವನ್ನೇ ತೋರಿಸಿದರು.

ಅವನು "ಆಗಲಿ ಸಾಹುಕಾರರೆ, ಅದಕ್ಕೇನು–ತಮ್ಮ ಸೇವೆಗೆ" ಎಂದು ಮರದ ಬೆಂಚಿನ ಮೇಲೆ ಕುಳಿತುಕೊಂಡ. ಸಾಹುಕಾರರು ಉಪಹಾರ ತರಿಸಿ ಉಪಚಾರ ಮಾಡುತ್ತ ಅವನಿಗೂ ಗೋರಕ್ಷಣೆಯ ವಿಷಯದಲ್ಲಿ ಉಪನ್ಯಾಸ ವನ್ನು ಕೊಟ್ಟು, ಗೋವಾಳದ ಧರ್ಮಯೋಜನೆಯನ್ನು ವಿವರಿಸಿ, ಅವನೂ ನಾಗಪ್ಪನೊಡನೆ ಹೋಗಿ ತಮಗೆ ನೆರವಾಗಬೇಕೆಂದು ಹೇಳಿದರು. ಶಾನು ಭೋಗ ಇನ್ನೇನಾಗಿದ್ದರೂ ಮೂಢನೇನೊ ಅಲ್ಲ. ಉದ್ಯೋಗ ಲಕ್ಷಣ. 'ಇದೇನು ಬೆಕ್ಕಿನ ಯಾತ್ರೆಯೋ? ಕಾಸಿಗೆ ಎರಡು ಕಾಸು ನಿರೀಕ್ಷಿಸುವ

'ರಾಯರ ಧರ್ಮದ' ಪ್ರವೃತ್ತಿಯು ಸಾಹುಕಾರರಲ್ಲಿ, ಏಕಾಏಕಿ ಈ ಹೊಸ ಧರ್ಮಕ್ಕೆ ಪ್ರೇರಣೆ ಯಾಕೆ ಹುಟ್ಟಿದೆ ? ಇವರ ಧರ್ಮದ ಬಗೆ ನನಗೇನು ಹೊಸ ದಾಗಿಲ್ಲವಲ್ಲ. ಇದರಲ್ಲೂ ಅಂತೂ ಏನೋ ಇದೆ. ಹುಂ. ಇರಲಿ ನಂಗೇನು, ನನ್ನ ಕೈ ಬೆಚ್ಚಗಾಗುತ್ತಿದೆಯಲ್ಲ, ಎಂದುಕೊಂಡು, ಇಂಥ ಸ್ವಂತ ಲಾಭದ ಸಮಯವನ್ನೇ ಕಾಯುತ್ತಿದ್ದ ಶಾನುಭೋಗ ಕೂಡಲೆ ಒಪ್ಪಿಕೊಂಡು ಲಗು ಬಗೆಯಿಂದ ಹೊರಡಲು ಸಿದ್ಧವಾದ.

ನಾಗಪ್ಪನ ಗುಂಪು ಹಳ್ಳಿಗಳನ್ನು ಸುತ್ತಿ ಕಷ್ಟಪಟ್ಟು ಬಹಳ ಮಟ್ಟಿಗೆ ಯಶಸ್ವಿಯಾಗಿಯೇ ಹಿಂದಿರಿಗಿತು. ತೊಂಬತ್ತು ಎಕರೆಯು ಹದಿನಾರು ಕುಳಗಳಲ್ಲಿ ಹಣದ ಅಗತ್ಯಕ್ಕೆ ಸಿಕ್ಕಿದ್ದ ಐದು ಜನರ ಜಮೀನು ಸರಾಸರಿ ಎಕರೆಗೆ ನೂರ ಎಂಬತ್ತರಂತೆ ಕ್ರಯವಾಯಿತು. ಏಳು ಜನ ತಮ್ಮ ಜಮೀನಿಗಿಂತಲೂ ಉತ್ತಮವಾದುದನ್ನು ಸಾಹುಕಾರರಿಂದ ಪಡೆದು ತಮ್ಮದನ್ನು ಸಂತೋಷದಿಂದಲೇ ಬಿಟ್ಟುಕೊಟ್ಟರು. ಮೂರು ಜನರು ಮಾರಾಟಕ್ಕೆ ಒಪ್ಪದಿದ್ದರೂ ಸಾಹುಕಾರರಲ್ಲಿಗೆ ಹೋಗಲು ಒಪ್ಪಿದರು. ಇವರು ಸಾಹುಕಾರರನ್ನು ಪ್ರತ್ಯೇಕವಾಗಿ ಕಂಡಾಗ ಒಬ್ಬನು ಅವರ ಧರ್ಮಬೋಧೆಯನ್ನು ಕೇಳಿ ಈಗ ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ತನ್ನ ನಾಲ್ಕು ಎಕರೆಗೆ ಬದಲು ಜಮೀನನ್ನು ಪಡೆದುಕೊಂಡನು. ಇನ್ನಿಬ್ಬರೊಡನೆ ಇದು ಸಾಗದಿದ್ದು ಸಾಹುಕಾರರು ತಮ್ಮ ಗೋವನಾಳ ರಚಿತವಾಗುವಾಗ ಸರಕಾರದವರೇ ಇವರ ನಾಲ್ಕು ಎಕರೆಯನ್ನು ಸ್ವಾಧೀನಪಡಿಸಿಕೊಂಡು ಕೊಡುವಂತೆ ಏರ್ಪಡಿಸುವುದಾಗಿಯೂ, ಆಗ ಬರುವ ಬೆಲೆ, ಕಡಿಮೆಯೆಂದೂ ಹೆದರಿಸಿ, ಕಟ್ಟಕಡೆಗೆ ಹೆಚ್ಚು ಬೆಲೆಯ ಆಸೆ ತೋರಿಸಿ, ಎಕರೆಗೆ ಮುನ್ನೂರರಂತೆ ಕೊಟ್ಟು ಬರೆಯಿಸಿಕೊಂಡರು. ಕಡೆಗೆ ಉಳಿದವರೆಂದರೆ ಮಂಡಿ ಶಿವಪ್ಪನವರು ಒಬ್ಬರೇ. ಇವರಿಗೆ ಅಲ್ಲಿ ಆರು ಎಕರೆ ಜಮೀನು ಇತ್ತು. ಸಾಹುಕಾರರು "ಶಿವಪ್ಪನೋರು ಇತ್ತಕಡೆ ಬಂದಾಗ ಕಂಡು ಹೋಗಬೇಕು" ಎಂದು ಹೇಳಿಕಳುಹಿಸಿದರು. ಆದರೆ ಎರಡು ದಿನಗಳು ಕಳೆದರೂ ಅವರು ಬರಲಿಲ್ಲ. ಇವರಿಬ್ಬರ ನಡುವೆ ಸ್ನೇಹವೇನು ಸುರಿದು ಹೋಗುತ್ತಿರಲಿಲ್ಲ. ಸಾಹುಕಾರರ ಮಹತ್ವದ ನೂರರಲ್ಲೊಂದು ಭಾಗ ಶಿವಪ್ಪನಿಗೆ ಇಲ್ಲದಿದ್ದರೂ, ಇಬ್ಬರೂ ಒಂದೇ ಆಟದಲ್ಲಿ ಪ್ರತಿಸ್ಪರ್ಧಿಗಳು. ಹಾಗಾಗಿ ಬಿಗುಮಾನ ತಾನಾಗಿ

ಬೆಳೆದಿತ್ತು. ಸಾಹುಕಾರರಿಗೆ ಸಿಟ್ಟು ಬಂದಿತು.

" 'ಎಂಥ ಪ್ರತಿಷ್ಠೆ ! ಹುಂ, ಇರಲಿ." ಅಂದುಕೊಂಡರು. ಮೂರನೆಯ ದಿನ ಅವರಿಗೆ ಹೆಚ್ಚು ತಡೆಯಲಾಗಲಿಲ್ಲ. ಹಣದ ವಿಚಾರ. ತಮ್ಮ ಪ್ರತಿಷ್ಠೆಯನ್ನು ಹೇಗೋ ನುಂಗಿಕೊಂಡು, ಏನೋ ಅಕಸ್ಮಾತಾಗಿ ಅತ್ತಕಡೆ ಹೊದಂತೆ ತೋರಿಸಿಕೊಂಡು ಶಿವಪ್ಪನವರನ್ನು ಭೇಟಿಯಾದರು.

" ಏನು ಶಿವಪ್ಪನೋರೆ ಚೆನ್ನಾಗಿದ್ದೀರಾ ? "

" ಓ, ಸಾಹುಕಾರರೆ, ದಯಮಾಡಿಸಬೇಕು. ಇಲ್ಲಿ ಕುಳಿತುಕೊಳ್ಳೋಣವಾಗಲಿ " ಶಿವಪ್ಪ ಎದ್ದು ಬಂದು ತಾನು ಕುಳಿತಿದ್ದ ಮೆತ್ತೆಯ ಕುರ್ಚಿಯನ್ನೇ ತೋರಿಸಿದ. ಸಾಹುಕಾರರು ಕುಳಿತುಕೊಂಡರು. ಶಿವಪ್ಪ ಇನ್ನೊಂದು ಮರದ ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತ " ಸಾಹುಕಾರರು ಕ್ಷಮಿಸಬೇಕು. ತಾವು ಹೇಳಿಕಳುಹಿಸಿದ್ದಿರಿ. ಬರೋಣ ಅಂತ ನಾಲ್ಕು ಸಾರಿ ಹೊರಟಿದ್ದೆ. ಏನೇನೋ ಅಡಚಣೆ ಕೆಲಸ ತುರ್ತಾಗಿ ಬಂತು, ಪ್ರತಿಸಾರಿಯೂ ಹಾಳು ಕೆಲಸ, ಲೆಕ್ಕ ತಯಾರಾಗಬೇಕು ತಿಂಗಳು ಕಡೆ...." ಎಂದು ದೊಡ್ಡ ವಿವರಣೆಗೆ ಮೊದಲು ಮಾಡಿದ.

" ಅಯ್ಯೊ, ಅದಕ್ಕೇನು ಚಿಂತೆಯಿಲ್ಲ. ಅತ್ತಕಡೆ ಬಂದರೆ ಬರಲಿ ಅಂದಿದ್ದೆ ಅಷ್ಟೆ. ಅಂಥಾ ಅವಸರದ ಕೆಲಸ ಏನಿರುತ್ತೆ. ಇವತ್ತೇನೊ ನಾನೂ ಈ ಕಡೆ ಹೋಗಬೇಕಾಗಿತ್ತು, ಹಾಗೇ ಬಂದೆ. ವ್ಯಾಪಾರ ಹೇಗಿದೆ ? " ಸಾಹುಕಾರರು ಶಿವಪ್ಪನ ವಿವರಣೆಯನ್ನು ತಡೆದು ತಮ್ಮದನ್ನು ತೇಲಿಸಿ ಹೇಳಿದರು.

" ವ್ಯಾಪಾರದ ವಿಷಯ ಹೇಳೋದು ಏನಿದೆ ಸಾಹುಕಾರರೆ, ತಮಗೆ ತಿಳಿಯದೆ ಇದ್ದದ್ದು ? ತಮ್ಮದರ ಜತೆಗೆ ಹೋಲಿಸಿದರೆ ನಮ್ಮದೇನು ಜುಜುಬಿ. "

" ಉಂಟೆ, ಉಂಟೆ. ಹಾಗೆಂದರೇನು. ಹ್ಹ ! ಹ್ಹ ! ಹಾ ! " ಸಾಹುಕಾರರು ಬಲನಂತವಾಗಿ ನಕ್ಕು ಸಲಿಗೆಯನ್ನು ತೋರಿಸಿದರು.

ಹೀಗೆ ಅಷ್ಟು ಅದು ಇದು ಮಾತಾದ ಮೇಲೆ, ಸಾಹುಕಾರರು ಮೆಲ್ಲಗೆ ಏನೋ ಹೇಳುವಂತೆ ಅಲಕ್ಷ್ಯದಿಂದ ಗೋವಿಂದ ವಿಷಯವನ್ನೆತ್ತಿ, ಉದ್ದವಾಗಿ ವಿವರಿಸಿ ಎಂದಿನ ಉಪನ್ಯಾಸವನ್ನು ಕೊಟ್ಟು ಬೇಕಾದಷ್ಟು ಚರ್ಚೆ

ಮಾಡಿ ಸಮಾಧಾನದಿಂದ ಶಿವಪ್ಪನ ಅಭಿಪ್ರಾಯಗಳನ್ನು ಕೇಳಿ, ಅನೇಕ ಭಾಗಗಳಿಗೆ ಸಮ್ಮತಿಯನ್ನು ಸೂಚಿಸಿ, ಅವನನ್ನು ಹೊಗಳಿ ನೆಲವನ್ನು ಸರಿಪಡಿಸಿಕೊಂಡು ಪ್ರಧಾನವಾದ ಮಾತಿಗೆ ಬಂದರು

" ಅತ್ತಕಡೆ ನಿಮ್ಮದೂ ಆರು ಎಕರೆ ಇದೆಯಂತೆ, ನಿಜವೆ ? "

" ಹೌದು. "

" ಅದೂ ಸೇರಿಬಿಟ್ಟರೆ ಸೊಗಸಾದ ದೊಡ್ಡ ಗೋಮಾಳವಾಗುತ್ತೆ ಅಂತ, ಸುತ್ತಮುತ್ತ ನನ್ನದೂ ಸೇರಿ. ಈ ಸುತ್ತಿಗೆಲ್ಲ ಮುಖ್ಯವಾದದ್ದು. ಸಾವಿರಾರು ಗೋವು ಬದುಕಿಕೊಳ್ಳುತ್ತವೆ. ನಮ್ಮೂರು, ನಾಲ್ಕಾರು ಹಳ್ಳಿ ಎಲ್ಲ ಚೆನ್ನಾಗಿ ಬಾಳುತ್ತವೆ. ಏನೋ ಧರ್ಮದ ಕೆಲಸ, ನಮ್ಮ ಮನೆತನದ ಹೆಸರಿನಲ್ಲಿ ಮಾಡಿಬಿಡೋಣ ಅಂತ. ಯೋಗ್ಯವಾದ ಬೆಲೆ ಕೊಟ್ಟರೆ ಪರವಾಗಿಲ್ಲವಲ್ಲ ? "

ಶಿವಪ್ಪನು ಕೂಡಲೆ ಉತ್ತರ ಕೊಡಲಿಲ್ಲ. ಅವರ ಬುದ್ಧಿಯಾದರೂ ಸಾಹುಕಾರರ ರೀತಿಯದೇ.

" ಆಂ ? " ಸಾಹುಕಾರರು ಮತ್ತೆ ಕೇಳಿದರು, ನೆನಪು ಕೊಡುವಂತೆ.

" ಓ, ಅದಕ್ಕೇನು...."

ಸಾಹುಕಾರರು ಉದ್ದವಾದ ಉಸಿರನ್ನು ಬಿಟ್ಟರು. ಅವರ ಎದೆ ನಲಿದಾಡಿತು.

" ಗೋಮಾಳ ಮಾಡೋಣ ಒಟ್ಟಿಗೇ " ಶಿವಪ್ಪನವರು ಮಾತು ಪೂರ್ತಿಮಾಡಿದರು. ಸಾಹುಕಾರರಿಗೆ ಛಳಕು ಹೊಡೆದಂತಾಯಿತು.

ಅವರು ಚೇತರಿಸಿಕೊಂಡು, " ಹಾಗಲ್ಲ. ಒಂದೇ ಮನೆತನದ ಹೆಸರಿದ್ದು ಬಿಟ್ಟರೆ ವಾಸಿ ಅಂತ, ಅಷ್ಟೆ. ಹ್ಹಹಾ ! " ಸಲ್ಪ ಪೆಚ್ಚಾಗಿಯೇ ನಕ್ಕರು.

" ಸರಿಯೆ. ಆದರೆ ಧರ್ಮ ಕೆಲಸ ತಾನೆ ಮುಖ್ಯ? "

" ನಿಮಗೆ ಒಪ್ಪಿಗೆಯಾಗೊ ಬೆಲೆ...."

" ತಾವು ಕೊಡದೆ ಇರುತ್ತೀರ, ಸರಿ ಸರಿ. ಆ ಮಾತು ಯಾಕೆ ? ನಂಗೆ ಅನುಮಾನವಿಲ್ಲ. ಅದಲ್ಲವೇ ಅಲ್ಲ ಮಾತು. ತಮ್ಮಂಥ ಧರ್ಮಿಷ್ಠರ ದಾನದ ಜೊತೆಗೆ ನನ್ನ ಅಲ್ಪ ಕಾಣಿಕೆಯೂ ಇದ್ದುಬಿಡಲಿ ಅಂತ. "

" ಛೆ, ಛೆ. ನಿಮಗೇಕೆ ನಷ್ಟ? "

" ಏನಿಲ್ಲ. ದೇವರು ನಂಗೂ ಅಷ್ಟು ಕೊಟ್ಟಿದಾನಲ್ಲ."

" ಓ. "

" ಸಮಯ ಬಂದಾಗ—ಗೋಪಾಳವಾದಾಗ ನನ್ನ ಜಮೀನೂ ಅವರಲ್ಲಿದೆ ಅಂತ ತಿಳಿದುಕೊಂಡುಬಿಡಬಹುದು. ಮಾಂತು ಕೊಟ್ಟಹಾಗೇ. ತಮಗೆ ಚಿಂತೆ ಬೇಡ. ಗೋಪಾಳ ತಾವು ಇಷ್ಟಪಟ್ಟಷ್ಟೇ ಹಾಗೆ ಮಾಡೋಣ."

ಇದರ ಮುಂದೆ ಸಾಹುಕಾರರು ಏನು ಹೇಳಬೇಕು ? ಮೂಕರಂತಾದರು. ಒಳಗೊಳಗೇ ಕುದಿದರು, ಶಪಿಸಿದರು. ಹೊರಗೆ ನಿಸ್ಸಹಾಯದ ನಸುನಗೆಯನ್ನು ತೋರಿಸುತ್ತ " ಸರಿ, ಹಾಗಾದರೆ. ಬಹಳ ಒಳ್ಳೆಯದೇಕೇ ಆಯ್ತು. ನೋಡೋಣ. ನಮಸ್ಕಾರ " ಎಂದು ಎದ್ದರು.

"ನಮಸ್ಕಾರ! ಸಾಹುಕಾರರು ಇಲ್ಲಿಯ ವರೆಗೆ ಪಾದ ಬೆಳೆಸಿದ್ದು ತುಂಬ ಸಂತೋಷ." ಶಿವಪ್ಪ ಬಾಗಿಲಿನ ವರೆಗೂ ಬಂದು ಬೀಳ್ಕೊಂಡರು.

" ಹೂಂ. "

ಮನೆಗೆ ಹೋಗುವಾಗ ಸಾಹುಕಾರರ ತಲೆ ಬಿಸಿಯಾಗಿತ್ತು, ರಕ್ತ ಕುದಿಯುತ್ತಿತ್ತು, ಹಲ್ಲು ಕಡಿಯುತ್ತಿತ್ತು. ಶಿವಪ್ಪನಿಗೆ ಹೇಗೆ ಬುದ್ಧಿ ಕಲಿಸಬೇಕೆಂದು ಅವರ ಮಿದುಳು ತೀವ್ರವಾಗಿ ಕೆಲಸಮಾಡುತ್ತಿತ್ತು. ರೈತರನ್ನು ಹೇಗೋ ಹಾಗೆ ಇವನನ್ನು ಬೆದರಿಸಿ, ಕಾಡಿ ಹದಕ್ಕೆ ತರುವಂತಿರಲಿಲ್ಲ, ಉಪಾಯಗಾಣದೆ ಒಪ್ಪಿಕೊಂಡ ಸೋಲು ಅವರನ್ನು ಉರಿಸುತ್ತಿತ್ತು. 'ಹುಂ. ಆದಷ್ಟೇ ಆಗಲಿ, ಏನು ಮಾಡೋದು. ಸರಿಯಾದ ಬೇರೆ ಸಮಯ ಸಿಕ್ಕಲಿ. ಈ ಕೇಡಿಗನನ್ನು ಸಿಗಿದು ಹಾಕುತ್ತೀನಿ' ಎಂದುಕೊಂಡು ಮನೆ ಸೇರಿದರು

ಇದೊಂದರಲ್ಲಿ ಹೀಗೆ ಆಶಾಭಂಗವಾಗಿದ್ದರೂ, ತಮ್ಮ ಪ್ರತಿಷ್ಠೆಗೆ ಕೊರತೆ ಬಂದಿದ್ದರೂ, ಒಟ್ಟಿನ ಚಿತ್ರ ಅವರಿಗೆ ಉತ್ತೇಜನಕರವಾಗಿಯೇ ಇತ್ತು. ಬಾಕಿಯಲ್ಲಾದ ಲಾಭ ಶಿವಪ್ಪನ ಬಗ್ಗೆಯ ನಷ್ಟವನ್ನು ಸ್ವಲ್ಪ ಮರೆಸಿತು. ಈ ವ್ಯವಹಾರವೆಲ್ಲ ತೀರಿದ ಮೇಲೆ ಸಾಹುಕಾರರು ತಮಗೆ ದೊರಕಿದ ಎಂಬತ್ತುನಾಲ್ಕು ಎಕರೆಗಳ ಲೆಕ್ಕ ಹಾಕಿ ತೃಪ್ತಿಪಟ್ಟುಕೊಂಡರು. ಮತ್ತೆ ಮತ್ತೆ ಲೆಕ್ಕ ಹಾಕಿದರು. ಯಾರಿಗಾದರೂ ತಮ್ಮ ಆನಂದವನ್ನು ಹೇಳಿಕೊಳ್ಳಬೇಕೆಂದು ಮನಸ್ಸು ಮಿಲಿಮಿಲಿಗುಟ್ಟಿತು. ದುಃಖದಲ್ಲಿ ಹೇಗೋ ಹಾಗೆ

ಸುಖದಲ್ಲೂ ಮನಸ್ಸು ಹಂಚಿಕೆಗೆ ತವಕಪಡುತ್ತದೆ. ಅಂತೂ ಹೇಗೋ ರಾತ್ರಿಯ ವರೆಗೆ ತಡೆದುಕೊಂಡಿದ್ದರು. ಆದರೆ ಊಟದ ಹೊತ್ತಿನಲ್ಲಿ ಅದು ತಾನಾಗಿ ಒತ್ತಿಕೊಂಡು ಹೊರಬಿದ್ದಿತು. ಇದಕ್ಕೆ ಇನ್ನೊಂದು ಕಾರಣವೆಂದರೆ ಮಗನೂ ಕೇಳಿ ಸಂತೋಷಿಸುವುದಲ್ಲದೆ, ವ್ಯವಹಾರದಲ್ಲಿ ಆಸಕ್ತಿ ಪರಿಶ್ರಮ ಗಳನ್ನು ಹೊಂದಲೆಂಬುದು.

ಊಟ ಮೊಸರಿಗೆ ಬಂದಿದ್ದಾಗ, ಸಾಹುಕಾರರು ಬೆಳ್ಳಿಯ ಬಟ್ಟಲಿನಿಂದ ಬೆಳ್ಳಿ ತಟ್ಟೆಗೆ ಮೊಸರನ್ನು ಬಗ್ಗಿಸಿಕೊಳ್ಳುತ್ತ "ಲೋ ನಂಜಪ್ಪ, ಈ ನಾಲ್ಕೈದು ದಿನಗಳಲ್ಲಿ ಎಂಥ ವ್ಯಾಪಾರ ಮಾಡಿದೀನಿ ಅಂತ ತಿಳಿದುಕೊಂಡಿ. ದೀಯೆ?" ಎಂದು ಹೆಮ್ಮೆಯಿಂದ ಹೇಳುತ್ತ ಮಗನ ಕಡೆಗೆ ನೋಡಿದರು. ಅವನು ತಲೆಯೆತ್ತದೆಯೇ ಕಣ್ಣೆತ್ತಿ ನೋಡಿದ.

"ಅದೇಯೋ ಇಷ್ಟೊಂದು ಕೆಲಸ, ಯೋಚನೆ ? ಭಾರೀದು ಇರ ಬೇಕು," ನಂಜಪ್ಪ ಆಗಲೇ ತಟ್ಟೆಯನ್ನು ಬಳಿದು ಕೈ ನೆಕ್ಕುತ್ತ ಊಹಿಸಿದ.

"ಮತ್ತೆ?"

"ನಿಂಗೆ ಬಿಡಪ್ಪ, ಇಂಥ ಬೇಟೆ ಇದ್ದೇ ಇರುತ್ತೆ. ವಿಶೇಷವೆ?"

"ಸ್ವಲ್ಪ ವಿಶೇಷವೆ ಅನ್ನು."

"ಅಂಥಾದ್ದೇನು?"

"ಮರುಳೂರು ದೊಡ್ಡ ತಿಟ್ಟು - ಗೊತ್ತಿದೆಯಲ್ಲ?"

"ಹುಂ."

"ಅದೆಲ್ಲ ನಂದೇ ಇನ್ನು."

"ಹಾಗೆ?"

"ಹುಂ, ಏನೋ ಆರು ಎಕರೆ - ಆ ಹಾಳಾದ ಮೊಂಡ ಮುಂಡಿ ಶಿವಪ್ಪಂದು ಬಿಟ್ಟು."

"ಎಷ್ಟು ಎಕರೆ?"

"ಎಂಬತ್ತನಾಲ್ಕು—ಹೊಸದಾಗಿ ಕೊಂಡದ್ದು."

"ಕೊಂಡುಕೊಂಡೆಯ?"

"ಮತ್ತೇನು ಬಿಟ್ಟೆ ಸಿಕ್ಕುತ್ತೇ?"

"ಏನೋ, ನಿನ್ನ ವಿಚಾರ."

" ಬಿಡೋ, ಅಂಥ ಅನ್ಯಾಯ ಎಂದಾದರೂ ಮಾಡಿದ್ದುಂಟೇನೋ? ಎಂದಿಗೂ ಇಲ್ಲ."

" ಹಾಗಾದರೆ ಅದರಲ್ಲೇನಿದೆ, ಕೊಂಡಿದ್ದರಲ್ಲಿ ಹೆಚ್ಚುಗಾರಿಕೆ? "

" ಹುಚ್ಚ. ನಾಳೆ ಹಿರಿಹಳ್ಳದ ನಾಲೆ ಬಂದರೆ ಆ ಕುಷ್ಕಿಯೆಲ್ಲ ತರಿಯಾಗುತ್ತೆ. "

" ಅಂದರೆ ಎಕರೆಗೆ........"

" ಸಾವಿರ— ಎಷ್ಟೆಷ್ಟು ಕಡಿಮೆ ಅಂದರೂ. "

" ಕೊಂಡದ್ದು? "

" ಸರಾಸರಿ ಇನ್ನೂರಕ್ಕೂ ಸ್ವಲ್ಪ ಕಡಿಮೆ. "

" ಅಂದರೆ ಎಷ್ಟಾಯ್ತಪ್ಪ ಲಾಭ.......? " ನಂಜಪ್ಪ ಲೆಕ್ಕದಲ್ಲಿ ಪೇಚಾಡಿದ.

" ಎಂಬತ್ತನಾಲ್ಕು ಇಂಟು ಎಂಟನೂರು, ಅರವತ್ತೇಳು ಸಾವಿರ ! " ಕುಸುಮ ಲೆಕ್ಕ ಮಾಡಿ ಆಶ್ಚರ್ಯ ತೋರಿಸಿದಳು.

" ಹುಂ, ಇನ್ನೂ ಅಷ್ಟು ಹೆಚ್ಚು ಅನ್ನು- ನನ್ನ ಜಮೀನಿನ ಎಣಿಕೆ ಬಿಟ್ಟು " ಸಾಹುಕಾರರು ಮಗನ ಕಡೆಗೆ ನೋಡಿದರು. ಅವನು ಅನ್ನ ಕಲಸುತ್ತಿದ್ದ.

" ಇದೇನು ಹೊಸದಲ್ಲ. ಇಂಥಾದ್ದು ಇನ್ನೂ ಎಷ್ಟಾಯ್ತೊ ದಣಿಯೋರಿಗೆ " ಎಲ್ಲದರಲ್ಲೂ ಬಾಯಿ ಹಾಕುತ್ತಿದ್ದ ಸದಾಶಿವ ಹೇಳಿ ಹಿಗ್ಗಿದ.

" ಇದರ ನೆನಪಿಗಾಗಿ ನಂಗೊಂದು ವಜ್ರದ ಬ್ರೋಚು ಬೇಕಪ್ಪ " ಕುಸುಮ ಬೇಡಿದಳು.

" ಅದಕ್ಕೇನು, ಅದಕ್ಕೇನು. ಸರಿಯಾದಾಗ ನಿಮಗೆಲ್ಲ ಏನೇನು ಬೇಕೋ ಎಲ್ಲ." ಸಾಹುಕಾರರು ಮಗನ ಕಡೆಗೂ ನೋಡಿದರು. ಅವನು ಕತ್ತೆತ್ತದೆ ತುತ್ತೆತ್ತದೆ ಇನ್ನೂ ಕಲಸುತ್ತಲೆ ಇದ್ದ.

" ಆದರೆ ನಾಲೆ ಬರದಿದ್ದರೆ—ಇದೆಲ್ಲ ತಿರುಕನ ಕನಸಾಗುತ್ತೆ " ನಂಜಪ್ಪ ಅನುಮಾನಿಸದ.

" ಊಹೂಂ ! ನೋಡೋಣ, ನೋಡೋಣ " ಸಾಹುಕಾರರು ಠೀವಿಯಿಂದ ಹೇಳಿದರು.

" ಹಾಗಾದರೆ ನಾಲೆ ಬಂದೇ ಬರುತ್ತೆ ಅನ್ನು. "

" ಏನೋ ಹೇಗೋ ನೋಡುತ್ತಿರು " ಸಾಹುಕಾರರು ನಸುನಕ್ಕರು.

" ನಿನ್ನ ಚಾಣಾಕ್ಷತೆ ಬಿಡಪ್ಪ. ನೀನು ಮುಖ್ಯಮಂತ್ರಿ ಆಗಬೇಕಾಗಿತ್ತು, ದೇಶವೆಲ್ಲ ನಿಂದೇ ಆಗೋದು. ಈಗಲೂ ನಿನ್ನ ಹಿಡಿತ ಎಲ್ಲೆಲ್ಲಿ ವರೆಗೆ ಹೋಗುತ್ತೋ! "

" ಹ್ಹ ! ಹ್ಹ ! ಹಾ ! "

" ಮತ್ತೆ ದೊಡ್ಡ ತಿಟ್ಟಿನ ರೈತರೇನು ಕಣ್ಣುಮುಚ್ಚಿಕೊಂಡು ಮಣ್ಣು ತಿನ್ನುತ್ತಾ ಇದಾರೇ ? "

" ಹ್ಹ ! ಹ್ಹ ! ಹಾ ! " ಸಾಹುಕಾರರು ಅರ್ಥಪೂರ್ಣವಾಗಿ ನಕ್ಕು ಮಗನ ಕಡೆಗೆ ಮತ್ತೆ ಕಣ್ಣೆತ್ತಿ ನೋಡಿದರು. ಅವನು ಎತ್ತಿದ ತುತ್ತನ್ನು ನಿಲ್ಲಿಸಿ ಕೆಳಗಿಟ್ಟು ಎದ್ದ.

" ಯಾಕೆ ಗುರು ? " ಸಾಹುಕಾರರು ತಕ್ಷಣವೇ ಕೇಳಿದರು.

" ಸೇರೋದಿಲ್ಲ. "

" ಯಾಕೆ ? "

" ಏನೋ ಹೊಟ್ಟೆ ತುಂಬಿತ್ತು. "

" ಏನು ಹುಡುಗರಪ್ಪ ಈಗಿನೋರು. ನಿನ್ನ ವಯಸ್ಸಿನಲ್ಲಿ ಇದಕ್ಕೆ ನಾಲ್ಕರಷ್ಟು ಉಣ್ಣುತ್ತಿದ್ದೆ. ಈಗ ಕಲ್ಲು ಕರಗಿಸಿಕೊಳ್ಳೊ ಕಾಲ ನಿಂಗೆ. "

" ನಂಗೆಲ್ಲಿ ಆ ಶಕ್ತಿ ? "

" ಹ್ಹ ಹಾ! "

ಗುರು ಎದ್ದು ಹೊರಟುಹೋದ. ಸಾಹುಕಾರರು ಇನ್ನೂ ನಗುತ್ತಿದ್ದರಾದರೂ ಯಾಕೋ ಸಮಾಧಾನ ಸಂತೋಷಗಳು ಕಡಿಮೆಯಾದುವು. ನಂಜಪ್ಪ ತಾನೂ ಯಾವಾಗಲಿಂದಲೋ ನಗುವನ್ನು ಮೊದಲು ಮಾಡಿ ಮಧ್ಯೆ ಮಧ್ಯೆ ಭಾವನ ಬುದ್ಧಿಯನ್ನು ಹೊಗಳುತ್ತಿದ್ದ. ಅವನನ್ನು ತನ್ನ ನಗು, ವಟವಟದ ಮಾತಿಗೇ ಬಿಟ್ಟು ಸಾಹುಕಾರರು ಎದ್ದುಹೋದರು.

ಮುಂದೆ ಒಂದೂವರೆ ತಿಂಗಳು ಕೆಂಪು ಟೇಪಿನ ಕಟ್ಟಿನಲ್ಲಿ ಒದ್ದಾಡಿ, ಕಡೆಗೆ ವಿಮೋಚನೆ ಹೊಂದಿ, ಮೇ ಮಧ್ಯಕ್ಕೆ ನಾಲೆಯ ಯೋಜನೆ ಹೊರಗೆ ಬಿದ್ದಾಗ ಮರುಳೂರಿನ ಸುತ್ತಮುತ್ತ ಸಣ್ಣ ಕೋಲಾಹಲವೇ ಆಯಿತು.

ಸಾಹುಕಾರರ ಎದೆ ಆನಂದದಿಂದ ತುಂಬಿ ತುಳುಕಿತು. ಊರಿನ ಪ್ರಮುಖರು ಅನೇಕರು ಬಂದು ಸಾಹುಕಾರರನ್ನು ಅಭಿನಂದಿಸಿ ಅವರ ದೂರದರ್ಶಿತ್ವವನ್ನೂ, ಚಾಕಚಕ್ಯತೆಯನ್ನೂ ಹೊಗಳಿ ಹಲ್ಲುಕಿರಿದು ಹೋದರು. ಮುನಿಸಿಪಲ್ ಅಧ್ಯಕ್ಷ ಭೋಗಪ್ಪ ಬಂದು ಜಗಗ್ಗೆಯೆಲ್ಲ ಸಾಹುಕಾರರ ಬಳಿಯಲ್ಲಿ ಕುಳಿತು, ಅವರ ಮಾತನ್ನು ಕೇಳುತ್ತಿದ್ದು, ಮಧೆ ಮಧ್ಯೆ ಅವರ ಪ್ರಚಂಡ ಬುದ್ಧಿಯನ್ನು ಎತ್ತಿ ಒತ್ತಿ ಬಣ್ಣಿಸಿ, ಬೀಳ್ಕೊಳ್ಳುವಾಗ "ಸಾಹುಕಾರರೆ, ಈ ಬಾರಿಯೂ ಮತ್ತೆ ಅಧ್ಯಕ್ಷತೆಗೆ ನಿಂತುಕೋಬೇಕು ಅಂತ ಇದೀನಿ. ತಮ್ಮಂಥ ಶ್ರೇಷ್ಠರು" ಬಲಿಷ್ಠರು, ದಕ್ಷರು, ಸಹಾಯಮಾಡದೆ ಅದು ಸಫಲವಾಗೋ ಹಾಗೇ ಇಲ್ಲ, ಎಂದು ಅಂಗಲಾಚಿದ.

"ಅದಕ್ಕೇನು. ಯೋಚನೆ ಮಾಡಬೇಡ. ನೀನು ನಮ್ಮೋನಲ್ಲವೆ?" ಎಂದು ಸಾಹುಕಾರರು ಉತ್ತೇಜನ ಕೊಟ್ಟು "ಪ್ರತಿಸ್ಪರ್ಧಿ? ........ಹುಂ. ಯಾರಾದರೇನು" ಎಂದು ಅಲಕ್ಷ್ಯದಿಂದ ಹೇಳಿದರು.

"ಏನೋ ಮಂಡಿ ಶಿವಪ್ಪ ನಿಂತುಕೋಬೇಕು ಅಂತ ಇದಾನಂತೆ."

"ಹಾಗೇ? ಅವನೇನೋ ರೆಕ್ಕೆ ಪುಕ್ಕ ಬಲಿಯಿತು ಅಂತ ಬಹಳ ಪ್ರತಿಷ್ಠೆ ಮಾಡುತ್ತಾ ಇದಾನೆ, ಈಚೀಚೆಗೆ. ನನ್ನ ಹೇಳದೆ ಕೇಳದೆ ನಿಲ್ಲುತ್ತಾನಂತೋ? ಆಗಲಿ. ಮಟ್ಟ ಹಾಕಿದರಾಯ್ತು. ಹೆದರಬೇಡ. ದೇವರು ಇದಾನೆ."

"ನನ್ನ ದೇವರು ತಾವೇ. ತಮ್ಮ ದಯೆ. ಅಧ್ಯಕ್ಷನಾಗಿ ಕಳೆದ ವರ್ಷ ತಮ್ಮ ಸೂಚನೆ, ಬುದ್ಧಿವಾದ ಜಿಡದೆ ನಡೆಸಿಕೊಂಡು ಬಂದಿದೀನಿ."

"ಹುಂ. ಹುಂ. ಅದೆಲ್ಲ ನಂಗೆ ಗೊತ್ತಿದೆ. ನೀನು ಒಳ್ಳೇ ಮನುಷ. ಅಧಿಕಪ್ರಸಂಗಿಯಲ್ಲ ಅಂತ ಗೊತ್ತಿದೆ."

"ತಮ್ಮ ಅಭಿಪ್ರಾಯಕ್ಕಾಗಿ ನಾನು ಚಿರಋಣಿ."

"ಹ್ಹ! ಹಾ!"

"ತಮ್ಮ ಸಮಯ ಬಹಳ ತಗೊಂಡೆ."

"ಏನಿಲ್ಲ, ನಿನ್ನ ಹತ್ತಿರ ಮಾತಾಡೋದಕ್ಕೆ ತುಂಬ ಸಂತೋಷ. ಬಹಳ ಸ್ವಾರಸ್ಯವಾದ ಸಂಭಾಷಣೆ ನಿನ್ನದು."

"ದೇವರ ಅಭಿಮಾನ." ಭೋಗಪ್ಪ ಹೋದ.

ಹೀಗೆ ಸಾಹುಕಾರರು ಅಭಿನಂದನೆಯ ಕೈ ಕುಲುಕುತ್ತಿದ್ದಾಗ ದೊಡ್ಡ ತಿಟ್ಟಿನ ಜಮೀನನ್ನು ಕೊಟ್ಟು ಬಿಟ್ಟು ಪೆಚ್ಚಾದ ಬಡ ರೈತರು ಯಾತನೆಯಿಂದ ತಮ್ಮ ಕೈಯನ್ನು ಕೊಡಹಿಕೊಳ್ಳುತ್ತಿದ್ದರು. ಒಬ್ಬ 'ದೊಡ್ಡೋರೊಡನೆ ವ್ಯವಹಾರ ಬಡವರ ಪ್ರಾಣಾಪಹಾರ' ಎಂದು ಗಾದೆ ಹೇಳಿದ. ಇನ್ನೊಬ್ಬ 'ಸಾಹುಕಾರರು ತಿಳಿದೇ ಹೀಗೆ ಮಾಡಿದರು ಅಂತೀನಿ. ಹೇಗೆ ಗೊತ್ತಾಯ್ತು ಅವರಿಗೆ?' ಎಂದು ಆಶ್ಚರ್ಯಪಟ್ಟ. ಮತ್ತೊಬ್ಬ 'ಅವರಿಗೇನಪ್ಪ, ಅವರ ಜನ ಎಲ್ಲೆಲ್ಲೂ ಇದಾರೆ. ರಾಜ್ಯವೆಲ್ಲ ಅವರಂಥೋರದ್ದೇ ಆಗಿದೆ. ನಾವು ದಡ್ಡರು ಮುಖ್ಯ. ಸ್ವಲ್ಪಕ್ಕೆ ಆಶೆ ಬಿದ್ದು ಯೋಚಿಸದೆ, ಊಹಿಸದೆ ಹಾಳಾದೆವು' ಎಂದು ಸಿರಿವಂತರನ್ನೇ ದೂರಿ, ತಮ್ಮನ್ನೂ ಹಳಿದುಕೊಂಡ. ಇನ್ನೂ ಒಬ್ಬ 'ಅದೆಲ್ಲ ಏನಿಲ್ಲ ಕಣರೊ. ಮುಖ್ಯವಾಗಿ ಎಲ್ಲ ಅದೃಷ್ಟದ ಮಾತು. ಸಾಹುಕಾರರಿಗೆ ಶುಕ್ರದೆಶೆ; ಮುಟ್ಟಿದ ಮಣ್ಣು ಚಿನ್ನವಾಗುತ್ತೆ. ನಾವು ಪಾಪಿಗಳು; ಚಿನ್ನ ಮುಟ್ಟಿದರೂ ಮಣ್ಣಾಗುತ್ತೆ. ಹಾಳು ಹಣೇಬರಹ ಯಾರೇನು ಮಾಡುತ್ತಾರೆ' ಎಂದು ವೇದಾಂತ ಹೇಳಿ ಸಮಾಧಾನಕ್ಕೆ ಯತ್ನಿಸಿದ. ಕಡೆಗೆ ಕೆಲವರು ಒಟ್ಟಾಗಿ ಸಾಹುಕಾರರಲ್ಲಿಗೆ ಹೋಗಿ ತಮ್ಮ ದುಃಖವನ್ನು ತೋಡಿಕೊಂಡು ಗೋಳಿಟ್ಟರು.

"ದೇವ್ರು, ನಾವು ಹಾಳಾದೆವು ಕಾಪಾಡಬೇಕು" ಮುಖಂಡ ಬೇಡಿಕೊಂಡ.

"ಯಾಕೆ, ನಿಮಗೆ ಆಗಿನ ಬೆಲೆ ಕೊಟ್ಟಿನಲ್ಲ? ಕೆಲವರಿಗೆ ಇನ್ನೂ ಉತ್ತಮವಾದ ಜಮೀನನ್ನೇ ಕೊಟ್ಟಿದೀನಿ"

"ಆದರೆ ಈಗ ಇದ್ದರೆ.........."

"ಅದನ್ನು ಯಾರು ಕಂಡೋರಪ್ಪ. ಎಲ್ಲ ಅದೃಷ್ಟ. ಏನೋ ಗೋಮಾಳ ಧರ್ಮದ ಒಳ್ಳೇ ಕೆಲಸ ಮಾಡೋಣ ಅಂತ ತಗೊಂಡೆ. ದೇವರಿಗೆ ಸಂತೋಷವಾಯ್ತು, ಕೊಟ್ಟ."

"ಈಗ ಅದೇನು ಗೋಮಾಳ ಆಗೋದಿಲ್ಲವಲ್ಲ ಧಣಿಯೋರೆ."

"ಅದಕ್ಕೇನು ಮಾಡೋದು. ತಗೊಂಡೆ ಅಂತ ಜಮೀನು ತರಿ ಯಾದರೂ ಗೋಮಾಳ ಮಾಡಲೇ? ಬೇರೆ ಕಡೆ ನೋಡಬೇಕು."

"ಇಲ್ಲ ದೇವ್ರೆ. ನಮ್ಮ ಮೇಲೆ ಕಣ್ಣುಬಿಟ್ಟು ನೋಡಬೇಕು.

ಉದ್ಧಾರ ಮಾಡಬೇಕು—ನಮ್ಮ ನಮ್ಮ ಜಮೀನನ್ನು............"

"ಅದು ಹೇಗಾಗುತ್ತೋ, ಹುಚ್ಚಪ್ಪ. ಅದೆಲ್ಲ ಲೆಕ್ಕಾಚಾರವಲ್ಲ. ಆದದ್ದು ಆಗಿಹೋಯ್ತು. ನಿಮಗೆ ನಾನೇನು ಅನ್ಯಾಯ ಮಾಡಲಿಲ್ಲವಲ್ಲ. ಏನೋ ವಿಧಿಯ ಆಟ." ಸಾಹುಕಾರರು ನಸು ನಕ್ಕರು.

"ಅದು ನಿಜ ಧಣಿಯೋರೆ. ಆದರೆ..........."

"ಸರಿ, ಮತ್ತೆ. ಆದರೆ-ಗೀದರೆ ಏನು ?" ಸಾಹುಕಾರರು ಸಿಟ್ಟಾದರು.

"ದೇವ್ರೆ, ಸಿಟ್ಟಾಗಬಾರದು. ಬಡವರನ್ನ ಸಲಹಬೇಕು."

"ಆಗಲಿ ನೋಡೋಣ. ಜಮೀನು ಹಿಂದಿರುಗಿಸೋದೇನೋ ಮಾತಿಲ್ಲ ಬಿಡು. ಗದ್ದೆ ಪಾಲಿಗೆ ಮಾಡೋವಾಗ ನೀವು ಇತರರಂತೆ ಲೆಕ್ಕಾಚಾರವಾಗಿ ಒಪ್ಪಿಕೊಂಡರೆ ನಿಮಗೇ ಮೊದಲನೆಯ ಅವಕಾಶ ಕೊಡುತ್ತೀನಿ, ಹೋಗಿ." ಸಾಹುಕಾರರು ತೀರ್ಮಾನ ಹೇಳಿಬಿಟ್ಟರು.

ರೈತರು ಅಲ್ಲಿಗೇ ಬಿಡಲಿಲ್ಲ. ಇನ್ನೂ ಹತ್ತಾರು ಬಾರಿ ಬೇಡಿ ಕಾಡಿ ಬೇಸತ್ತರು. ಸಾಹುಕಾರರು ಬೇಕಾದಷ್ಟು ಸರಿಯಾಗಿ, ಸಿಟ್ಟಾಗಿ ಮಾತನಾಡಿದರು. ಆದರೆ ಪಟ್ಟನ್ನು ಮಾತ್ರ ಬಿಡಲಿಲ್ಲ.

ಮಂಡಿಯ ಶಿವಪ್ಪ ಮಾತ್ರ ನಾಲೆಯ ಸುದ್ದಿಯನ್ನು ಕೇಳಿದಾಗ ತೀಕ್ಷ್ಣವಾಗಿ ಯೋಚಿಸುತ್ತ ಗಂಭೀರವಾಗಿ ತಲೆಯನ್ನು ಹಿಂದೆ ಮುಂದೆ ಆಡಿಸಿದ.

ಈ ವಿಷಯ ಇಲ್ಲಿಗೇ ನಿಲ್ಲಲಿಲ್ಲ. ನಾಲೆಯ ಯೋಜನೆ ಪ್ರಕಟವಾದ ನಾಲ್ಕನೆಯ ದಿನ ಮರುಳೂರಿನಲ್ಲಿ ಬೆಂಗಳೂರಿನ "ಪ್ರಜಾತಂತ್ರ" ಪತ್ರಿಕೆಯ ಸುದ್ದಿಗಾರ ಚಂದ್ರಶೇಖರ ಸಾಹುಕಾರರನ್ನು ನೋಡಲು ಬಂದ. ಇವನೂ ಗುರುವಿನ ಸಹಪಾಠಿಯೆ. ಅವನಿಗೆ ಮೂರು ವರ್ಷ ದೊಡ್ಡವ. ಆಪ್ತಸ್ನೇಹಿತ. ಚಟುವಟಿಕೆಯ ಯುವಕ. ಚಾತುರ್ಯ ಮುಖದ ಮೇಲೆ ತೇಲುತ್ತಿತ್ತು. ಉಡುಪು ಸಿರಿವಂತರಲ್ಲೂ ಸ್ವಾಗತ ತರುತ್ತಿತ್ತು. ಎಸ್. ಎಸ್.ಎಲ್.ಸಿ, ಮುಗಿದ ನಂತರ ಮುಂದೆ ಕಾಲೇಜಿಗೆ ಸೇರಲು ಸಾಧ್ಯವಾಗದೆ ವಿದ್ಯವನ್ನು ಬಿಟ್ಟು, ಮರುಳೂರಿನಲ್ಲಿ ಇನ್ಷೂರೆನ್ಸ್, ಸಾಬೂನು ಏಜೆನ್ಸಿ, ಕಾಗದ ಪತ್ರ, ಸುದ್ದಿಯ ಕೆಲಸ ಮೊದಲಾಗಿ ಹತ್ತಾರು ಸಣ್ಣ

ಬಾಬುಗಳನ್ನಿಟ್ಟುಕೊಂಡು, ಜತೆಗೆ ಸಾಹುಕಾರರ ಬಿಟ್ಟಿ ಮಳಿಗೆಯಲ್ಲಿ ಸಣ್ಣ ಕಿರಾಣಿ ಅಂಗಡಿಯನ್ನೂ ನಡೆಸುತ್ತಿದ್ದ. ಆದರೂ ಜೀವನವೇನೂ ಸುಲಭ ವಾಗಿರಲಿಲ್ಲ—ಬಡತನದ್ದೆ. ಆದರೆ ಪತ್ರಿಕೆಯ ಸುದ್ದಿಗಾರನಾಗಿ ಸ್ವಲ್ಪ ಪ್ರತಿಷ್ಠೆ ಪಡೆದು ಎಲ್ಲರಿಗೂ ಬೇಕಾದವನಾಗಿದ್ದ. ಅದರಲ್ಲೂ ಸಾಹುಕಾರ ರಿಗೆ ಬಹಳ. ಅವರು ಅಸ್ಪೃಶ್ಯತಾ ನಿವಾರಣಾ ಸಭೆ ಸಮಾಜ ಸುಧಾರಣಾ ಸಮಿತಿ, ಗೋಸೇವಾ ಸಂಘ, ಗ್ರಾಮೋದ್ಧಾರ ಗೋಷ್ಠಿ, ಶಾಲೆಗಳ ವಾರ್ಷಿ ಕೋತ್ಸವ, ಇತ್ಯಾದಿ ಇತ್ಯಾದಿಯ ಅಧ್ಯಕ್ಷಪೀಠಗಳಿಂದ ಅಪ್ಪಣೆ ಕೊಡಿಸಿದ ಭಾಷಣಗಳ ವರದಿಯನ್ನೂ, ಅವರ ಆಗಾಗಿನ ದಾನಧರ್ಮಗಳ ಬಗ್ಗೆ ಪ್ರಶಂಸಾ ಪತ್ರಗಳನ್ನೂ 'ಪ್ರಜಾತಂತ್ರ'ಕ್ಕೆ ಬರೆದು ಅವರ ಪ್ರೀತಿಪಾತ್ರನಾಗಿದ್ದ. ಅವನ ಅಂಗಡಿಯ ಮುಂದೆ ಊರಿನ ಅಂಥ ಇಂಥ ಜನರು ಸೇರಿ ಹರಟೆ ಕೊಚ್ಚುತ್ತಿ ದ್ದರು. ಇಲ್ಲಿಗೆ ಗುರುವೂ ಊರಿನಲ್ಲಿದ್ದಾಗ ಹೋಗಿ ಬರುತ್ತಿದ್ದ. ಊರಿನಲ್ಲಿ ಹೆಚ್ಚೇನಾದರೂ ವಿಶೇಷ ಕಂಡರೆ ಕೇಳಿದರೆ ಚಂದ್ರ ಸಾಹುಕಾರರಲ್ಲಿಗೆ ಬಂದು ವರದಿ ಮಾಡುವುದು ರೂಢಿಯಾಗಿತ್ತು. ಇದರಿಂದ ಊರಿನ ವಿದ್ಯಮಾನ ತಿಳಿದು ಸಾಹುಕಾರರ ವ್ಯವಹಾರಕ್ಕೆ ಬಹಳ ಅನುಕೂಲವಾಗಿತ್ತು.

"ಬಾರಯ್ಯ, ಚಂದ್ರ. ಕೂತುಕೊ. ಏನು ಸಮಾಚಾರ?" ಸಾಹುಕಾರರು ಮರದ ಕುರ್ಚಿಯನ್ನು ತೋರಿಸಿದರು.

"ಬಡವನ ಹೃತ್ಪೂರ್ವಕ ಅಭಿನಂದನೆಗಳು! ಸಮಾಚಾರವೇನು ಊರಿನಲ್ಲೆಲ್ಲ ತಮ್ಮದೇ." ಚಂದ್ರ ಕುಳಿತ.

"ಅದೇನು?"

"ನಾಲೆಯದು."

"ಓ, ಏನಂತಾರೆ?"

"ಗಾಳಿ ಸುಳ್ಳು, ಲಕ್ಷ್ಮಿ ಚಂಚಲೆಯಲ್ಲ. ತನ್ನ ಮಕ್ಕಳಿಗೆ—ಲಕ್ಷ್ಮೀ ಪುತ್ರರಿಗೆ—ಪಕ್ಷಪಾತಿ ಅಂತ."

"ಓಹೋ–ಕೆಟ್ಟರು, ಕೆಟ್ಟರು. ಆಮೇಲೆ ಹೇಳು — ಇಷ್ಟಕ್ಕೇ ಬಂದೆಯ?"

"ಇಲ್ಲ."

"ಮತ್ತೆ?"

"ಏನೋ ಒಂದು ಕಾಗದ ಬಂದಿದೆ—ನಂಗೆ."

"ಹುಂ, ಎಲ್ಲಿಂದ ?"

"ನಮ್ಮ ಪತ್ರಿಕೆಯಿಂದ."

"ಹುಂ ಏನಂತೆ ?"

"ಅದೇ, ಯಾರೋ ತಮಗೆ ಆಗದೋರು—ಇದ್ದೇ ಇರ್ತಾರಲ್ಲ ಒಬ್ಬೊಬ್ಬರು ಎಲ್ಲರಿಗೂ—"

"ಸರಿ, ಆಮೇಲೆ ?"

"ಏನೇನೋ ಬರೆದಿದಾರೆ ಒಂದು ಕಾಗದದಲ್ಲಿ—ಪತ್ರಿಕೆಗೆ."

"ಹುಂ, ಹಾಗೇನು ? ಈ ದೊಡ್ಡ ತಿಟ್ಟಿನ...."

"ಇನ್ನೇನು ?"

"ಅಚ್ಚಾಗಿಬಿಟ್ಟಿದೆಯೆ ?" ಸಾಹುಕಾರರು ಆತಂಕ ಸೂಚಿಸಿ ಒಡನೆಯೇ ನಾಲಿಗೆ ಕಚ್ಚಿಕೊಂಡರು.

"ಇಲ್ಲ ಇಲ್ಲ. ಉಂಟೆ ? ಎಲ್ಲಾದರೂ ಹಾಗಾಗುತ್ತೇ-ನನ್ನ ಕೇಳದೆ ಮಾಡದೆ. ಹಳ್ಳಿ ಪತ್ರಿಕೆಯಲ್ಲ."

"ಹೌದು ಹೌದು." ಸಾಹುಕಾರರು ಎಚ್ಚೆತ್ತುಕೊಂಡು "ಕಾಗದ ನಿನ್ನಲ್ಲಿಗೆ ಬಂದಿದೆಯೆ ?" ಉತ್ಸುಕತೆಯ ಆತುರದಿಂದ ಕೇಳಿದರು.

"ಇಗೋ" ಚಂದ್ರ ಜೇಬಿನಿಂದ ಇಂಗ್ಲಿಷ್‌ನಲ್ಲಿ ಬರೆದ ಕಾಗದವನ್ನು ಕೊಟ್ಟನು.

"ಮೂಕು ಅರ್ಜಿ ! ಇದರಲ್ಲೇ ಗೊತ್ತಾಗೋದಿಲ್ಲವೆ ಇದರ ಬೇಳೆ ಕಾಳು ?" ಸಾಹುಕಾರರು ಹಿಂತಿರಿಗಿಸಿ ನೋಡಿ ಹೇಳಿ, ನಿದಾನವಾಗಿ ತಮ್ಮಲ್ಲೇ ಓದಿಕೊಂಡರು. ಅದನ್ನು ಓದುತ್ತಿದ್ದ ಹಾಗೆ ಅವರ ಮುಖ ಗಳಿಗೆ ಗಳಿಗೆಗೆ ಬಿಳಿ ಕೆಂಪು ಬಣ್ಣವಾಗುತ್ತಿತ್ತು.

"ಯಾವನೋ ಭ್ರಷ್ಟ ಬರೆದಿದಾನೆ. ಆ ಮುಂಡಿ ಶಿವಪ್ಪನೇ ಇರಬೇಕು. ಅಲ್ಲವೆ ?" ಸಾಹುಕಾರರು ಕೋಪದಿಂದ ಕಾಗದವನ್ನು ಮುದುರಿ ಹಿಡಿಯಲ್ಲಿ ಉಂಡೆ ಮಾಡಿದರು.

"ಗೊತ್ತಿಲ್ಲ."

"ಇನ್ನು ಯಾರು, ಅವನೇ. ವಿಚಾರಿಸಬೇಕು—ಗುಟ್ಟಾಗಿ. ಅವನಿಗೇನೋ ಕೇಡುಗಾಲ ಬಂದಿದೆ. ಹುಂ....ಇದಕ್ಕೆ ಏನು ಉತ್ತರ ಕೊಟ್ಟೆ ?"

ಏನೂ ಬರೆದಿಲ್ಲ. ತಮ್ಮನ್ನ ನೋಡೋಣ ಈ ವಿಚಾರದಲ್ಲಿ, ಅಂತ ಬಂದೆ.

" ನೀನು ನಂಬುತ್ತೀಯ—ಈ ಕೆಟ್ಟ ಸುಳ್ಳನ್ನೆಲ್ಲ ? "

" ಉಂಟೆ, ಉಂಟೆ. ಎಂದಿಗಾದರೂ! "

" ಸರಿ ಮತ್ತೆ, ಬರೆದು ಹಾಕಿಬಿಡು—ಇದೆಲ್ಲ ಹೇಸಿಕೆ ಪಿತೂರಿ, ಆಗ ದೋರು ಮಾಡಿದ್ದು, ನಂಬಲರ್ಹವಾದ ಮಾತು ಒಂದೂ ಇಲ್ಲ ಅಂತ. "

" ಹಾಗೇ ಆಗಲಿ. "

ಸಾಹುಕಾರರು ತೀಕ್ಷ್ಣವಾಗಿ ಕೊಂಚ ಕಾಲ ಚಿಂತಿಸಿದರು.

" ನಾನು ಗೋಮಾಳಕ್ಕೋಸ್ಕರವೇ ಮಾಡಿದ್ದು—ಅದೇನು ಸೋಗಲ್ಲ, ಸುಳ್ಳಲ್ಲ, ಮೋಸವಲ್ಲ, ಇಲ್ಲಿ ಬರೆದಿರೋ ಹಾಗೆ. ಅದೇನೋ ಅನುಕೂಲ ವಾಯ್ತು ಬೇರೆ ತರಹದಲ್ಲಿ. ಈಗಲೂ ಈ ಯತ್ನ ಬಿಟ್ಟಿಲ್ಲ. ನನ್ನ ಯತ್ನ ಸತ್ಯ ಅಂತ ತೋರಿಸೋದಕ್ಕೆ ಈಗಲೂ ಸಣ್ಣ ತಿಟ್ಟಿನ ಮೇಲೆ ಹತ್ತು ಎಕರೆ ಕುಷ್ಕಿಯನ್ನು ಗೋಮಾಳಕ್ಕೆ ಬಿಟ್ಟೇ ಬಿಡುತ್ತೀನಿ. ತಿಳಿತೆ ? ದಾನ ಧರ್ಮ ಮರೀತೀನೇ. ಅದೇನು ಕೊಟ್ಟ ಮಾತಲ್ಲವೇ ನಂದು ? "

" ಬಹಳ ಒಳ್ಳೇದಾಯ್ತು, ಸಾಹುಕಾರರೆ. ತುಂಬ ಪ್ರಶಂಸನೀಯ.

" ತೀರ್ಮಾನವನ್ನು ಗೋಸೇವಾ ಸಂಘದ ವಾರ್ಷಿಕ ಸಭೆಯಲ್ಲಿ ಅಧ್ಯಕ್ಷ ಭಾಷಣದಲ್ಲಿ ಬಹಿರಂಗ ಪಡಿಸುತ್ತೀನಿ. "

" ಅತ್ಯುತ್ತಮ ರೀತಿ. "

" ಅದಕ್ಕಾಗೇ ನಾಳೆ ನಾಡಿದ್ದು ಸಭೆ ಕೂಡಿಸುತ್ತೀನಿ—ಅಧ್ಯಕ್ಷ ನಾನೆ ತಾನೆ ? "

" ಬಹಳ ಸಂತೋಷ. "

" ನೀನು ಬಂದೇ ಬರುತ್ತೀಯಲ್ಲ—ವರದಿ ಮಾಡೋದಕ್ಕೆ? "

" ಇಲ್ಲದೆ ಉಂಟೆ ? ಖಂಡಿತವಾಗಿ ಬರುತ್ತೀನಿ. "

" ಆಗ ಗೊತ್ತಾಗುತ್ತೆ—ಪ್ರಪಂಚಕ್ಕೇ ನನ್ನ ರೀತಿ. "

" ಮೂಕರ್ಜಿಯೋರೆಲ್ಲ ಬಾಯಿ ಮುಚ್ಚಿಕೋತಾರೆ. "

" ಅಷ್ಟಕ್ಕೇ ಬಿಟ್ಟೀನೆ, ಅವರನ್ನ ? ಮುಂಡಿ ಶಿವಪ್ಪನೇ, ಹುಂ, ಹುಂ ಖಂಡಿತ. "

ಸ್ವಲ್ಪ ಹೊತ್ತು ಇಬ್ಬರ ಮಧ್ಯೆ ಮೌನವಿತ್ತು. ಚಂದ್ರು ಎದ್ದು ಹೋಗು ವುದಕ್ಕೆ ಆತುರವಾಗಿರಲಿಲ್ಲ. ಸಾಹುಕಾರರು ಮತ್ತೂ ಯೋಚಿಸಿದರು.

"ಹುಂ–ಮತ್ತೆ, ನಿಂಗೆ ಹೇಳಬೇಕು ಅಂತಿದ್ದೆ–ನೋಡಿದೆಯಾ ಮರತೇ ಹೋಗಿತ್ತು." ನೆನಿಸಿಕೊಂಡಂತೆ ಸಾಹುಕಾರರು ಮೊದಲು ಮಾಡಿದರು.

"ಅಪ್ಪಣೆಯಾಗಲಿ."

"ಈ ಮುನಿಸಿಪಲ್ ಸಭೆಗಳ ವರದಿ ಮಾಡಿ ಅದಕ್ಕೆ ಪ್ರಕಟನೆ ಕೊಡ ಬೇಕು ಅಂತ ನಂಗೆ ಬಹಳ ದಿನಗಳಿಂದ ಮನಸ್ಸಿತ್ತು. ಇದರಿಂದ ಮರು-ಳೂರಿಗೆ ಬಹಳ ಪ್ರಾಶಸ್ತ್ಯ ಸಿಕ್ಕುತ್ತೆ. ಆ ಅಧ್ಯಕ್ಷ ಭೋಗಪ್ಪನಿಗೆ ಹೇಳಿ ದೀನಿ. ಆ ವರದಿ ಕೆಲಸದ ತಲಬು ತಿಂಗಳಿಗೆ ಮೂವತ್ತಾದರೂ ಇರಬೇಕು ಅಂತ ಹೇಳಿದೀನಿ. ನಿನ್ನ ಹೆಸರನ್ನೇ ಸೂಚಿಸಬೇಕು ಅಂತ ಇದೀನಿ. ಸಮ್ಮತ ತಾನೆ ?"

"ಸಮ್ಮತವೇ ? ದೊಡ್ಡ ಉಪಕಾರ."

"ನಮ್ಮ ಮುನಿಸಿಪಾಲಿಟಿ, ಗೊತ್ತಿದೆಯೋ ಇಲ್ಲವೋ. ಯಾವಾಗಲೋ ಒಂದು ಸಭೆ. ಹೆಚ್ಚು ಕೆಲಸವಿಲ್ಲ."

"ಸರಿ, ನಂಗೆ ಗೊತ್ತಿಲ್ಲವೆ ?"

"ಏನೋ ನಮ್ಮೋನು ನೀನು. ಎಷ್ಟೋ ಸಹಾಯವಾಗಿದೆಯೆ. ಸಂಸಾರಸ್ಥ. ನಿಂಗೆ ಏನಾದರೂ ಮಾಡಬೇಕು ಅಂತ ನಂಗೆ ಬಹಳ ದಿನ ದಿಂದ ಯೋಚನೆ ಇದ್ದೇ ಇತ್ತು."

"ಸಾಹುಕಾರರ ದಯ, ಅಭಿಮಾನ."

"ಆಮೇಲೆ ನಿಮ್ಮ ಪತ್ರಿಕೆಯಲ್ಲಿ ನಮ್ಮ ಕಂಪನಿಯ ಬೀಡಿಯ–ಗಾಂಧಿ ಬೀಡಿಯ—ಜಾಹೀರಾತು ಬಂದರೆ ಒಳ್ಳೆಯದಲ್ಲವೇನಯ್ಯ ?"

"ಅಲ್ಲವೆ ? ಅಗತ್ಯವಾಗಿ ಬರಬೇಕು. ಸಂಸ್ಥಾನದಲ್ಲೆಲ್ಲ ಹೆಚ್ಚು ಪ್ರಸಿದ್ಧಿಯಾಗುತ್ತೆ."

"ಸರಿ ಮತ್ತೆ. ಒಂದು ಪೂರ್ತಿ ಪುಟವನ್ನೇ ಕೊಡಿಸಿಬಿಡೋಣ, ಎರಡು ಮೂರು ಸಾರಿ."

"ಆಗಲಿ."

"ಎಷ್ಟಾಗುತ್ತೆ ಕರ್ಚು ?"

" ಪ್ರತಿ ಸಾರಿಗೂ ಐನೂರು ರೂಪಾಯಿ. "

" ಆಗಲಿ ಪರವಾಗಿಲ್ಲ. ಇತರ ಡೈರೆಕ್ಟರುಗಳೂ ಒಪ್ಪೇ ಒಪ್ಪುತ್ತಾರೆ. ಅಧ್ಯಕ್ಷ ನಾನು ತಾನೆ. ತಾಳು, ಚೆಕ್ಕನ್ನು ಬರೆದು ಕೊಡುತ್ತೀನಿ."

ಸಾಹುಕಾರರು ಮುಂದಿನ ಮೇಜಿನಿಂದ ಚೆಕ್ ಪುಸ್ತಕವನ್ನು ತೆಗೆದು 'ಪ್ರಜಾತಂತ್ರ'ಕ್ಕೆ ಸಾವಿರದ ಐನೂರನ್ನು ಬರೆದುಕೊಟ್ಟರು.

" ನೀನೇ ಜಾಹೀರಾತು ಬರೆದು ಕಳುಹಿಸಿ ಬಿಡಯ್ಯ–ಚೆನ್ನಾಗಿ. "

" ಆಗಲಿ. ಬರೆದು ತಂದು ತಮಗೆ ಸಂಜೆ ತೋರಿಸುತ್ತೀನಿ. "

" ಬಹಳ ಒಳ್ಳೇದು. ಹಾಗೇ ಆ ಗೋಮಾಳ ಗೋಸೇವಾ ಸಂಘದ ವಿಚಾರವಾಗಿ ನಾಲ್ಕು ಸಾಲು ಬರೆದುಕೊಂಡು ಬಾ ನೋಡೋಣ."

" ಅಗತ್ಯವಾಗಿ. "

" ಹುಂ, ಹಾಗಾದರೆ ಹೊರಟೇ ಬಿಟ್ಟೆಯ? "

" ಇನ್ನೇನು ಅಷ್ಟೆ " ಚಂದ್ರ ತಟ್ಟನೆ ಎದ್ದ.

" ಕೊಂಚ ಕಾಫಿ ತಗೊಂಡು ಹೋಗಯ್ಯ. "

" ಏನು ತೊಂದರೆ ಬೇಡ, ಸಾಹುಕಾರರೆ. "

" ತೊಂದರೆಯೇನು. ದಾಕ್ಷಿಣ್ಯಪಟ್ಟುಕೋಬೇಡ. "

" ದಾಕ್ಷಿಣ್ಯವೇನು ಬಂತು, ತಮ್ಮ ಮನೇಲಿ. ನಂದು ಅಂತಲೇ ತಿಳಿದು ಹೇಳಿ ಮಾಡಿಸಿಕೋ ಬಲ್ಲೆ. "

" ಸರಿ ಹಾಗಾದರೆ. ಹೊರಡು ಪಾಪ. ಯಾಕೆ ನಿಲ್ಲಿಸಿಕೊಳ್ಳಲಿ. "

ಚಂದ್ರ ಹಿಗ್ಗುತ್ತ ಹೊರಬಿದ್ದ. ಸಾಹುಕಾರರು ಉದ್ದವಾಗಿ ಉಸಿರೆಳೆದುಕೊಂಡು ಎದ್ದು ಒಳಗೆ ಹೋದರು.

ಮೂರು ದಿನಗಳಾದ ಮೇಲೆ ಪ್ರಜಾತಂತ್ರದಲ್ಲಿ ಮರುಳೂರಿನ ಸುದಿಯಲ್ಲಿ ಅಲ್ಲಿನ ಗೋಸೇವಾ ಸಂಘದ ವಾರ್ಷಿಕೋತ್ಸವದ ವರದಿ ಕಂಡಿತ್ತು. ಅಂದಿನ ಸಂಭ್ರಮದ ವರ್ಣನೆ,ಅಧ್ಯಕ್ಷರು ಕಾರ್ಯದರ್ಶಿಗಳ ಹೊಗಳಿಕೆ ಬಹಳವಾಗಿತ್ತು. ಅಧ್ಯಕ್ಷ ಭಾಷಣವನ್ನು ದೀರ್ಘವಾಗಿ ವರದಿ ಮಾಡಿ ಅದರ ಪ್ರಶಂಸೆಯನ್ನು ಪೂರ್ತಿಗೊಳಿಸುತ್ತ ಪತ್ರಿಕೆಯು 'ಅಧ್ಯಕ್ಷರು ಸಾಹುಕಾರ್ ವಿಶ್ವೇಶ್ವರಯ್ಯನವರು ನಮ್ಮ ದೇಶದ ಗೋವಿನ ದುಃಸ್ಥಿತಿಯನ್ನು ಕರುಳು

ಕರಗುವಂತೆ ಬಣ್ಣಿಸಿ, ಅದರ ಬಗ್ಗೆ ಇರುವ ಅಜ್ಞಾನ, ಅನಾದರಗಳು ಕೂಡಲೇ ತೊಲಗಬೇಕೆಂದೂ, ಇಲ್ಲದಿದ್ದರೆ ದೇಶದ ನಾಶ ಖಂಡಿತವೆಂದೂ, ಹೊಸದಾಗಿ ಸಂಪಾದಿಸಿದ ಸ್ವಾತಂತ್ರ್ಯ ಉಳಿಯಲಾರದೆಂದೂ ಸ್ಪಷ್ಟವಾಗಿ ಒತ್ತಿಹೇಳಿ, ಗೋವಿನ ಪುನರುದ್ಧಾರಕ್ಕೆ ಅತ್ಯಗತ್ಯವಾದ ಅಮೋಘ ಸಲಹೆಗಳನ್ನು ಕೊಟ್ಟರು. ಈಗ ನಮ್ಮ ದೌರ್ಭಾಗ್ಯದ ನಾಡಿನಲ್ಲಿ ಗೋವಿನ ಮಾತು ಜಾಸ್ತಿಯಾಗಿದೆಯೇ ಹೊರತು ಕಾರ್ಯವೇನೇನೂ ಇಲ್ಲ. ಇದನ್ನು ಹೋಗಲಾಡಿಸುವಂತೆ ಶ್ರೀಯುತರು ಮುಂದೆ ಬಂದು, ಬಹು ಮುಖ್ಯವಾದ ಗೋಮಾಳ ಸಲಹೆಯನ್ನು ಕೂಡಲೇ ಕಾರ್ಯರೂಪಕ್ಕೆ ತರುವುದಕ್ಕೆಂದು, ಬಹಳ ಔದಾರ್ಯದಿಂದ ವಿಸ್ತಾರವಾದ ಫಲವತ್ತಾದ ತಮ್ಮದೇ ಹತ್ತು ಎಕರೆ ಜಮೀನನ್ನು ದಾನ ಮಾಡಿ, ಮರುಳೂರಿನ ಸುತ್ತಮುತ್ತಕ್ಕೇ ಅಮೋಘವಾದ ಉಪಕಾರ ಮಾಡಿರುವುದಲ್ಲದೆ, ಬೇರೆಯ ಕಡೆಗಳಲ್ಲಿನ ಧಾರ್ಮಿಕ ಮಹನೀಯರಿಗೆ ಶ್ರೇಷ್ಠವಾದ ಮೇಲ್ಪಂಕ್ತಿಯನ್ನು ಹಾಕಿದ್ದಾರೆ. ಇಂತಹ ದಾನಶೂರರೂ, ದಯಾಪರರೂ, ಧೈರ್ಯಶಾಲಿಗಳೂ ವಿವೇಕಸ್ಥರೂ, ಆದ ಮುಂದಾಳುಗಳಿಂದ ದೇಶ ಉಳಿದು ಅಭಿವೃದ್ಧಿಗೆ ಬರಬೇಕಾಗಿದೆ. ಇಂಥ ದೇಶಪ್ರೇಮಿಗಳ ಸಂಖೆ ಹೆಚ್ಚುತ್ತಿರಲಿ, ಅವರು ದೀರ್ಘಕಾಲ ಬಾಳುತ್ತಿರಲಿ. ಜೈಹಿಂದ್' ಎಂದು ಪ್ರಕಟಿಸಿತ್ತು. ಪಕ್ಕದಲ್ಲಿ ಸಾಹುಕಾರರ ಚಿತ್ರವನ್ನು ಅಚ್ಚುಹಾಕಿ ಅದರ ಕೆಳಗೆ 'ಮರುಳೂರಿನ ಗೋಸೇವಾ ಸಂಘದ ಅಧ್ಯಕ್ಷರು, ಗೋಸೇವಾ ದುರಂದರ ದಾನಶೂರ ಸಾಹುಕಾರ್ ವಿಶ್ವೇಶ್ವರಯ್ಯ ಎಂ. ಎಲ್. ಎ ಅವರು' ಎಂದೂ, ಮೇಲೆ 'ಮಹಾ ಗೋಮಾಳ ದಾನ' ಎಂದೂ ಕಾಣಿಸಿತ್ತು.

ಮೂಕರ್ಜಿ ಪತ್ರಿಕೆಗಷ್ಟೇ ಅಲ್ಲದೆ ಸರಕಾರದ ಮಂತ್ರಿಗಳಿಗೂ ಸೇರಿತ್ತು. ಅದು ಮಾಮೂಲಿನಂತೆ ಅಧಿಕಾರಿಯಿಂದ ಅಧಿಕಾರಿಗಿಳಿದು ಮರುಳೂರಿನ ಅಮಲ್ದಾರರಿಗೇ ವರದಿಗಾಗಿ ಬಂದಿತು. ಅವರು ವಿಚಾರಿಸಿ "ಈ ವಿಷಯದಲ್ಲಿ ವ್ಯಾಪಾರಸಹಜವಾದ ವ್ಯವಹಾರಚಾತುರ್ಯವಿರುವುದಲ್ಲದೆ, ಇತರ ಕ್ರಮಬದ್ಧವಲ್ಲದ ಅಥವ ಕಾನೂನಿಗೆ ವಿರುದ್ಧವಾದ ಅಂಶ ಯಾವುದೂ ಇಲ್ಲ. ಹೀಗಿದ್ದು ಇದರಲ್ಲಿ ಸರಕಾರದ ಯಾವ ಕಾರ್ಯಕ್ರಮಕ್ಕೂ ಅಗತ್ಯವಾಗಲೀ ಅವಕಾಶವಾಗಲೀ ಇಲ್ಲ." ಎಂದು ವರದಿ ಮಾಡಿ ಆ ಸಂಜೆ ಕ್ಲಬ್ಬಿನ ಇಸ್ಪೀಟು ಕಚೇರಿಯಿಂದ ಮನೆಗೆ ಹೋಗುವಾಗ ಸಾಹುಕಾರರಿಗೆ ವಿಚಾರವನ್ನು ನಗುತ್ತ

ತಿಳಿಸಿದರು. ಸಾಹುಕಾರರು ಧನ್ಯವಾದಗಳನ್ನರ್ಪಿಸಿದರು. ರಂಗದ ಪರದೆ ಕೆಳಗೆ ಇಳಿಯಿತು.

೩

* * *

ಗುರು ಊರಿಗೆ ಹಿಂದಿರುಗಿ ಎರಡು ತಿಂಗಳ ಹತ್ತಿರವಾಗುತ್ತ ಬಂದಿದ್ದರೂ ತಂದೆ ಮಕ್ಕಳ ಮಧ್ಯೆ ಗುರುವಿನ ಭವಿಷ್ಯದ ಚರ್ಚೆ ಇನ್ನೂ ಬಂದಿರಲಿಲ್ಲ. ಸಾಹುಕಾರರು ಮೊದಲು ಅಷ್ಟು ದಿನ ನಾಲೆ ಜಮೀನಿನ ಕ್ರಯದ ವ್ಯವಹಾರದಲ್ಲಿ ಮುಳುಗಿ ಹೋಗಿ ಪ್ರಪಂಚವನ್ನೇ ಮರೆತಿದ್ದರು. ಅದೆಲ್ಲ ನೇರವಾದ ಮೇಲೆ ಯತ್ನಿಸಿದರೂ ಮಗನೊಡನೆ ಸರಿಯಾದ ಸಮಯವೇ ಸಿಕ್ಕುತ್ತಿರಲಿಲ್ಲ. ಸಾಹುಕಾರರು ಎದ್ದು ಪ್ರಾತರ್ವಿಧಿಗಳನ್ನು ಮುಗಿಸಿ, ಮಡಿಯುಟ್ಟು, ಜರತಾರಿ ಮಗುಟವನ್ನುಟ್ಟು, ಹಣೆ ತೋಳು ಮೊಳಕೈ ಮುಂಗೈ ಎದೆಗಳ ಮೇಲೆ ಕಲಸಿದ ವಿಭೂತಿ ಪಟ್ಟೆ ಎಳೆದು, ಬೆಳ್ಳಿ ಪಂಚಪಾತ್ರೆ ಉದ್ಧರಣೆ ಅರ್ಘ್ಯದ ಬಟ್ಟಲುಗಳಲ್ಲಿ ಪ್ರಾತಃಸಂಧ್ಯಾವಿಧಿಯನ್ನು ಮುಗಿಸಿ, ಬೆಳ್ಳಿಯ ಮಂಟಪದ ಮುಂದೆ ಕುಳಿತು ಅನನ್ಯ ಭಕ್ತಿಯಿಂದ ದೀರ್ಘವಾಗಿ ರಾಗವಾಗಿ ಮಂತ್ರೋಚ್ಚರಣೆ ಮಾಡುತ್ತ ಚಿನ್ನದ ದೇವರಿಗೆ ಅಭಿಷೇಕ ಮಾಡಿ, ಮಹಲಿನ ತೋಟದ ಹೂ ತುಳಸಿಗಳಿಂದ ಪೂಜಿಸಿ, ಅಷ್ಟೋತ್ತರ—ವಿಶೇಷ ದಿನಗಳಲ್ಲಿ ಸಹಸ್ರನಾಮ ಪಾರಾಯಣ—ಹೇಳಿ, ತೆಂಗಿನ ಕಾಯನ್ನು ನಿವೇದಿಸಿ, ತುಪ್ಪ ಕರ್ಪೂರ ಮಂಗಳಾರತಿಗಳನ್ನು ಎತ್ತಿ, ಸಾಷ್ಟಾಂಗ ನಮಸ್ಕಾರ ಮಾಡಿ, ಹೊರಗೆ ಬಂದು, ಕಾಫಿ ಕುಡಿದು, ಒಂದು ಸಿಗರೇಟು ಹತ್ತಿಸಿ—ಗಾಂಧಿ ಬೀಡಿ ಅವರ ಗಂಟಲಿಗೆ ಆಗುತ್ತಿರಲಿಲ್ಲ—ಜರತಾರಿ ಪಂಚೆ ಪಾರ್ಸ್ಲಿ ಷರಟು ಟ್ವೀಡು ಕೋಟು. ನಾಲ್ಕು ಬೆಟ್ಟಗಲ ಜರತಾರಿ ಪೇಟದ ಉದ್ಯೋಗ ಉಡುಪಿಗೆ ಬದಲಾಯಿಸಿಕೊಂಡು, ಆಫೀಸನ್ನು ಹೊಕ್ಕರೂ, ಮಗ ಇನ್ನೂ ಎದ್ದೇ ಇರುತ್ತಿರಲಿಲ್ಲ. ಅವನು ಎದ್ದು ಓಡಾಡುವ ಹೊತ್ತಿಗಾಗಲೇ ತಮಗಾಗಿ ಕಾದಿದ್ದ ಜನರೊಡನೆ ಸಾಹುಕಾರರು ವ್ಯಾಪಾರ-ಸಾಪಾರ, ಲೇವಾದೇವಿ,

ಜಮೀನು-ಸಮೀನು, ಸ್ಥಳೀಯ ರಾಜಕೀಯಗಳಲ್ಲಿ ತೊಡಗಿರುತ್ತಿದ್ದರು. ಮಧ್ಯಾಹ್ನ ಮಾಧ್ಯಾಹ್ನಿಕವನ್ನು ಮುಗಿಸಿ ಮಹಾನೈವೇದ್ಯ ಮಾಡಿ ಎಷ್ಟೋ ಕಾಯ್ದು ಊಟ ಮಾಡಿದರೂ, ಮಗ ಮನೆಗೇ ಬಂದಿರುತ್ತಿರಲಿಲ್ಲ. ನಿತ್ಯವೂ ಅವನ ಪಂಗ್ತಿಯೇ ಬೇರೆ. ಸಾಹುಕಾರರು ಒಂದು ಗಂಟೆಗೆ ಹಗಲು ನಿದ್ದೆ ಮುಗಿಸಿ ಕೆಲಸಕ್ಕೆ ತೊಡಗುತ್ತಿದ್ದರೆ, ಗುರು ನಾಲ್ಕು ಗಂಟೆಯ ವರೆಗೂ ನಿದ್ದೆ ಬಿಗಿಯುತ್ತಿದ್ದ.

ಸಾಹುಕಾರರಿಗೆ ಮಧ್ಯಾಹ್ನ ತಿಂಡಿ ವ್ಯೆಗಾಗುತ್ತಿರಲಿಲ್ಲ. ಅವರ ಕಾಫಿ ಯನ್ನು ಸದಾಶಿವ ಆಫೀಸಿಗೇ ತಲುಪಿಸುತ್ತಿದ್ದ. ತಂದೆ ಆರು ಗಂಟೆಗೆ ಕ್ಲಬ್ಬಿಗೆ ಹೋಗಿ, ಗುಲಾಮನ ಆಟವಾಡಿ, ಎಂಟು ಗಂಟೆಗೆ ಹಿಂತಿರಿಗಿ ಮತ್ತೆ ಮಡಿಯುಟ್ಟು ಮಂಗಳಾರತಿ ಮಾಡಿ, ಊಟ ಮುಗಿಸಿ, ಮುಖ್ಯ ಕೆಲಸ ನೋಡಿ, ಒಂಬತ್ತೂವರೆ ಹತ್ತು ಗಂಟೆಗೆ ಮಲಗುತ್ತಿದ್ದರು. ಹೊತ್ತಾಗಿ ಮಲಗಿದರೆ ಅವರಿಗೆ ನಿದ್ದೆ ಬರುತ್ತಿರಲಿಲ್ಲ, ತಿಂದುದು ಅರಗುತ್ತಿರಲಿಲ್ಲ. ಇದಕ್ಕೆ ಪ್ರತಿಯಾಗಿ ಮಗ ಸಂಜೆಯೆಲ್ಲ ಎಲ್ಲೆಲ್ಲೋ ಅಲೆದು, ಅಲ್ಲಲ್ಲಿ ಹರಟೆ ಕೊಚ್ಚಿ, ಸಿನೇಮಾ ನಾಟಕ ನೋಡಿಕೊಂಡೋ- ಏನೋ, ಅಂತೂ ಮನೆ ಸೇರುವ ಹೊತ್ತಿಗೇ ಹತ್ತು ಗಂಟೆಯ ಸಮಯವಾಗಿರುತ್ತಿತ್ತು. ಹೀಗಿದ್ದು ತಂದೆ ಮಕ್ಕಳ ಮಿಳಿನವೇ ಅಪರೂಪವಾಗಿತ್ತು. ಹಾಗೆ ಮಿಳಿನವಾದ ನಾಲ್ಕಾರು ಸಂದರ್ಭಗಳಲ್ಲಿ ಸಾಹುಕಾರರು ಭವಿಷ್ಯದ ವಿಷಯವನ್ನು ಹೇಗೆ ಮೊದಲು ಮಾಡಬೇಕೆಂಬುದರಲ್ಲೇ ಅವಕಾಶ ಜಾರಿಹೋಗಿತ್ತು. ಒಂದು ಸಮಯ ದಲ್ಲಿ ನೇರವಾಗಿಯೇ "ಏನು ಮಾಡಬೇಕು ಅಂತ ಮಾಡಿದೀಯೆ ಮುಂದೆ?" ಎಂದು ಕೇಳಿದರು. ಮಗ "ನೋಡೋಣ, ಫಲಿತಾಂಶ ಬರಲಿ" ಎಂದಿಷ್ಟೇ ಹೇಳಿ ಮುಂದೆ ನಿಲ್ಲದೆಯೇ ಹೊರಟುಬಿಟ್ಟ. ಇದು ಅವರ ಉತ್ಸಾಹಕ್ಕೆ ಭಂಗ ತಂದಿತ್ತಾದರೂ 'ಹಾಗೂ ಆಗಲಿ' ಎಂದುಕೊಂಡು ಹೇಗೋ ಸಮಾಧಾನ ಪಟ್ಟುಕೊಂಡು ಬೇರೊಂದು ಸಮಯವನ್ನು ಕಾಯುತ್ತಿದ್ದರು.

ಏಪ್ರಿಲ್ ತಿಂಗಳ ಕಡೆಗಂತೂ ಮಗ ಮನೆಯಲ್ಲಿರುವುದೇ, ಅವನ ಮುಖ ಕಾಣುವುದೇ ಅಪೂರ್ವವಾಗಿತ್ತು. ಯಾವಾಗ ಎದ್ದುಹೋಗುತ್ತಿ ದ್ದನೋ, ಊಟಕ್ಕೆ ಬರುತ್ತಿದ್ದನೋ, ಮಲಗುತ್ತಿದ್ದನೋ ಸಾಹುಕಾರರಿಗೆ ತಿಳಿಯದಂತಾಗಿತ್ತು. ಕಾರಣ, ಮೇ ತಿಂಗಳ ಕಡೆಯಲ್ಲಿ ನಡೆಯಬೇಕಾಗಿದ್ದ

ವಸಂತ ಸಾಹಿತ್ಯೋತ್ಸವ. ಗುರುವಿಗೆ ಸಾಹಿತ್ಯದಲ್ಲಿ ಬಹಳ ಶ್ರದ್ಧೆ, ಆಸಕ್ತಿ. ಅಷ್ಟು ಪದ್ಯಗಳನ್ನೂ ಬರೆದಿದ್ದ. 'ಶಾರದಾ ತನಯ'ನೆಂಬ ಗುಟ್ಟು ಹೆಸರನ್ನಿಟ್ಟುಕೊಂಡು ಕಾಲೇಜಿನ 'ಹಂಸ' ಪತ್ರಿಕೆಯಲ್ಲಿ ಕೆಲವನ್ನು ಪ್ರಕಟಿಸಿದ್ದ. ಆದುದರಿಂದ ಸಾಹಿತ್ಯೋತ್ಸವಕ್ಕೆ ಇವನು ಉತ್ಸಾಹದಿಂದ ನೆರವಾಗಿ, ಹಗಲಿರುಳು ಸಭೆಯ ಶೃಂಗಾರ, ಕರೆಯೋಲೆ, ಬಾಲಿಕೆಯರ ಕೋರಸ್ಸು, ನಾಟ್ಯ, ನಾಟಕ ತಯಾರಿ, ವಿವಿಧ ವಿನೋದಾವಳಿಯ ಏರ್ಪಾಡು—ಇರುತ್ತವೆಯಲ್ಲ—ಈ ಎರಡು ದಿನಕ್ಕೆ ಭರ್ತಿಮಾಡಬೇಕಾದ ಬಾಬುಗಳಲ್ಲಿ ತೊಳಲಿ ಬಳಲುತ್ತಿದ್ದ. ಶ್ರದ್ಧೆಯಲ್ಲಿ ಇವನನ್ನು ಮೀರಿಸಿದ್ದವನೆಂದರೆ ಮರುಳೂರಿನ ಮುನಿಸಿಪಲ್ ಹೈಸ್ಕೂಲು ಮೇಷ್ಟರು ಶ್ಯಾಮಯ್ಯಂಗಾರಿ. ಇವನಿಗೆ ಸಾಹಿತ್ಯದ ಚಟ ಅಷ್ಟಿಷ್ಟಲ್ಲ. ಕತೆ, ಕವಿತೆ, ಕಾದಂಬರಿ, ನಾಟಕ, ಪ್ರಬಂಧ—ಸಾಹಿತ್ಯದಲ್ಲಿ ಇವನು ಮಾಡದ ಪ್ರಯೋಗಗಳೇ ಇರಲಿಲ್ಲ. ಬೆಂಗಳೂರಿನ 'ಕಥಾಸಾಗರ' ಪತ್ರಿಕೆಯಲ್ಲಿ ಟಿ. ಬಿ. ಶಾಮಯ್ಯಂಗಾರ್ (ಬಿ. ಎ. ಆನರ್ಸ್) ಮರುಳೂರು ಎಂದು ಸಂಪೂರ್ಣ ಹೆಸರಿನಿಂದಲೇ ಕವಿತೆ ಕತೆಗಳನ್ನು ಪ್ರಕಟಿಸುತ್ತಿದ್ದ. ಈ ಪತ್ರಿಕೆಗೆ ಮರುಳೂರಿನಲ್ಲಿ ಏಜಂಟನಾಗಿ ಹಂಚುತ್ತಲೂ ಇದ್ದ. ಇವನ ಇತರ ಸಾಹಿತ್ಯಪ್ರಯೋಗಗಳನ್ನು ನಕಲುಮಾಡಿ, ನಾಡಿನ ನೂರಾರು ಪುಸ್ತಕಮಾಲೆಗಳ ಸಂಪಾದಕರು ಅನೇಕರಿಗೆ ಕಳುಹಿಸಿ ಇನ್ನೂ ಉತ್ತರ ನಿರೀಕ್ಷಿಸುತ್ತಿದ್ದ. ಊರಿನಲ್ಲೆಲ್ಲ ಉತ್ತಮ ಸಾಹಿತಿಯೆಂದು ಹೆಸರು ಗಳಿಸಿದ್ದ. ಇವನೇ ಊರಿನ ಕರ್ನಾಟಕ ಸಂಘದ ಜೀವಾಳ. ಹನ್ನೊಂದು ವರ್ಷಗಳಿಂದ ಅದರ ಗೌರವಕಾರ್ಯದರ್ಶಿಯಾಗಿದ್ದ—ಅಯ್ಯಂಗಾರಿಯ ಮಾತಿನಲ್ಲಿ 'ಜನರಲ್ ಸೆಕ್ರೆಟರಿ'. ಸಂಘದ ಅಧ್ಯಕ್ಷರು ಸಾಮಾನ್ಯವಾಗಿ ಸ್ಥಳೀಯ ಅಧಿಕಾರಿ ಅಮಲ್ದಾರರೇ ಆಗಿದ್ದರೂ, ಕಾರ್ಯಕಾರಿ ಸಮಿತಿಯನ್ನು—ಅಯ್ಯಂಗಾರಿ ಕ್ಯಾಬಿನೆಟ್ ಅನ್ನುತ್ತಿದ್ದ—ಸಂಘದ ಸಭೆಗಾಗಿ ರಚಿಸುತ್ತಿದ್ದವನು ಅವನೇ. ಸಂಘದ ಈ ಸ್ಥಾನಗಳಿಗೆ ಯಾವ ಪೈಪೋಟಿಯೂ ಇಲ್ಲದ ಸುಯೋಗವೇ ಇದಕ್ಕೆ ಕಾರಣವೆನ್ನಬಹುದು. ಕೆಲವು ವಿಷಯಗಳಲ್ಲಿ ಮರುಳೂರಿನ ಸೌಹಾರ್ದ ಮೇಲ್ಪಂಗ್ತಿಯಾಗಿತ್ತು. ಸಂಘದ ಚಟುವಟಿಕೆಗೆಲ್ಲ ಮೊದಲು, ಮಧ್ಯ, ಕೊನೆಯೆಲ್ಲ ಅಯ್ಯಂಗಾರಿಯೇ ಆಗಿರುತ್ತಿದ್ದ. ಅವನದು ಏಕಪಾತ್ರಾಭಿನಯವೆಂದರೂ ಒಪ್ಪುತ್ತಿತ್ತು. ಅಂತೂ ಅಷ್ಟಿಷ್ಟು ಜನರನ್ನು

ಹೇಗೋ ಗುಡ್ಡೆ ಹಾಕಿ, ನಾಲ್ಕಾರು ಸಭೆ ನಡೆಸಿ, ಪ್ರಾರ್ಥನೆ ಮಂಗಳಗಳನ್ನು ತಾನೇ ರಚಿಸಿ ಹಾಡಿ, ತನಗೂ ಸಂಘಕ್ಕೂ ಕೃತಕೃತ್ಯತೆಯನ್ನು ಹಂಚುತ್ತಿದ್ದ. ಒಂದು ಮಾತಿನಲ್ಲಿ, ರಕ್ತಹೀನವಾದ ಸಂಘದಲ್ಲಿ ಹರಿಯುತ್ತಿದ್ದ ಅಷ್ಟಿಷ್ಟು ರಕ್ತವೆಲ್ಲ ಶಾಮಯ್ಯಂಗಾರಿ ಕೊಟ್ಟದ್ದೇ. ಈಗ ಗುರುವಿನ 'ಹೊಸ ರಕ್ತ'ವೂ ಇದರೊಂದಿಗೇ ಸೇರಿತ್ತು. ಉತ್ಸವದ ಏರ್ಪಾಡುಗಳು ಬಿರುಸಾಗಿ ಸಂಭ್ರಮ ದಿಂದ ನಡೆಯುತ್ತಿದ್ದುವು.

ಈ ಸಮಾರಂಭಕ್ಕೆ ನಾಡಿನ ಹಿರಿಯರೂ ಸುಪ್ರಸಿದ್ಧ ಸಾಹಿತಿಗಳೂ ಆದ ಕೋಡಿ ವಿಶ್ವನಾಥಶಾಸ್ತ್ರಿಯವರು ಅಧ್ಯಕ್ಷರಾಗಬೇಕೆಂದೂ, ಅವರೊಡನೆ ಇನ್ನೂ ಮಧ್ಯವಯಸ್ಕರಾದರೂ ಆಗಲೇ ಹೆಸರು ಹೊಂದಿ ಶಾಲೆ ಕಾಲೇಜು ಗಳ ಯುವಕ ಯುವತಿಯರಿಗೆ ಅಚ್ಚುಮೆಚ್ಚಾಗಿ, ಕ್ರಾಂತಿಕಾರ ಸಾಹಿತಿ ಎನಿಸಿ ಕೊಂಡ ಆಧುನಿಕ ಪಂಥದ ಆಜನ್ಮಬ್ರಹ್ಮಚಾರಿ ಕಾಮೇಶ್ವರಯ್ಯನವರು, ಕವಿವರ ಬಾಡಪ್ಪನವರೂ, ಸಂಗೀತಸಾಗರ ಸುಬ್ರಮಣ್ಯ ಅಯ್ಯರ್ ಅವರೂ, ಬರಬೇಕೆಂದು ತೀರ್ಮಾನವಾಯಿತು. ದುಡ್ಡಿನ ಪ್ರಶ್ನೆ ಎದ್ದ ಕೂಡಲೇ ಸ್ವಾಗತಸಮಿತಿಯ ರಚನೆಯಾಗಬೇಕಾಯಿತು. ಈ ಸಮಿತಿಯ ಅಧ್ಯಕ್ಷ ತೆಯ ಬಗ್ಗೆ ಶಾಮಯ್ಯಂಗಾರಿಯ ಆಪ್ತಸಮಿತಿಯಲ್ಲಿ ಚರ್ಚೆ ಬಿರುಸಾಗಿ ನಡೆಯಿತು. ತಾಲೋಕು ಆಫೀಸಿನ ಗುಮಾಸ್ತೆ ನರಸಿಂಹಯ್ಯ ತನ್ನ ಅಧಿಕಾರಿ ಶಿರಸ್ತೆದಾರರ ಹೆಸರನ್ನು ಸೂಚಿಸಿದ. ಗುರು 'ಹೈಸ್ಕೂಲಿನ ಮುಖ್ಯೋ-ಪಾಧ್ಯಾಯರು ಲಿಂಗಪ್ಪನೋರು ವಿದ್ವಾಂಸರು, ಯೋಗ್ಯರು' ಎಂದು ಅವರ ಹೆಸರು ಸೂಚಿಸಿದ. ಅದಕ್ಕೆ ಮಳಿಗೆ ಬಸಪ್ಪ 'ಇದು ದುಡ್ಡಿನ ವಿಚಾರ. ಯೋಗ್ಯತೆ ಕಟ್ಟಿಕೊಂಡೇನು ? ಭಾರಿ ಕುಳ ಹಿಡಿಯಬೇಕು. ಈ ನೌಕರ ವರ್ಗದಿಂದೇನಾಗುತ್ತೆ ? ಅಧಿಕಾರಿಗಳಾಗಿ ಸಂಘದ ಅಧ್ಯಕ್ಷರು ಅಮಲ್ದಾರ ಸಾಹೇಬರು ಇದ್ದೇ ಇದಾರೆ. ಅವರಿಂದ ಏನು ಬೇಕಾದರೂ ಮಾಡಿಸಿ ಕೊಳ್ಳಬಹುದು. ದುಡ್ಡಿನ ದೃಷ್ಟಿಯಿಂದ ಮಂಡಿ ಶಿವಪ್ಪನೋರನ್ನ ಕೇಳಿ ನೋಡಬೇಕು" ಅಂದ. ಕೂಡಲೇ ಚಂದ್ರಶೇಖರ "ಅಯ್ಯೊ, ಅದು ಸಾಧ್ಯವೇ ಇಲ್ಲ. ಸಾಹುಕಾರರಿಗೂ ಅವರಿಗೂ ಬದ್ಧದ್ವೇಷ. ನಾನು ಚೆನ್ನಾಗಿ ಬಲ್ಲೆ. ಕೆಲಸವೇ ಕೆಟ್ಟುಹೋಗುತ್ತೆ. ಸಾಹುಕಾರರಿಲ್ಲದೆ ನಾವೇನು ಮಾಡ ಬಲ್ಲೆವು ? ಅವರೇ ಸ್ವಾಗತಾಧ್ಯಕ್ಷರಾಗಿರಬೇಕು" ಎಂದ. ಇದನ್ನು ಯಾರೂ

ವಿರೋಧಿಸಲಿಲ್ಲ. ಶಾಮಯ್ಯಂಗಾರಿ "ಅವರಿಗೆ ಬಹಳ ಕೆಲಸ. ಅದಕ್ಕೆ ಅವರು ದಾತೃವಾಗಿರೋ ಹಾಗೆ ಪ್ರಾರ್ಥಿಸೋಣ ಅಂತಿದ್ದೆ. ಸ್ವಾಗತಾಧ್ಯಕ್ಷತೆಗೆ ಒಪ್ಪಿದರೆ ಇನ್ನೂ ಒಳ್ಳೇದೆ. ಹೋಗಿ ಕೇಳೋಣ" ಅಂದ. ಗುಮಾಸ್ತೆ ನರಸಿಂಹಯ್ಯ ಮಾತ್ರ ಸಂಘದ ಕಾರ್ಯಕಾರಿ ಸಮಿತಿಗೆ ಅಲ್ಲೇ ಆ ಕ್ಷಣವೇ ರಾಜೀನಾಮೆ ಬರೆದು ಕೊಟ್ಟ. ಗೆಳೆಯರ ಬೇಡವೆಂದು ಒತ್ತಾಯಪಡಿಸಿದುದೂ ಹೊಸಬರನ್ನು ಚುನಾಯಿಸಿಕೊಳ್ಳುವವರೆಗೆ ತಮ್ಮ 'ಆಫೀಸ'ನ್ನು ನಡೆಸಿ ಕೊಂಡು ಹೋಗಬೇಕೆಂದು ಬೇಡಿದುದೂ ವ್ಯರ್ಥವಾದುವು.

ಅದೇ ಸಂಜೆ ಶಾಮಯ್ಯಂಗಾರಿ ಸಂಘದ ಪರವಾಗಿ ಸಾಹುಕಾರರನ್ನು ಕಂಡ. ಸಾಹಿತ್ಯೋತ್ಸವದ ಮಾತೆತ್ತಿದೊಡನೆ ಅವರು "ನಮ್ಮಲ್ಲಿಗೆ ಯಾಕ್ರಿ ಬರುತ್ತೀರಿ ? ನಮಗೇನು ಗೊತ್ತು ಹೇಳಿ ಸಾಹಿತ್ಯ ಸೂಹಿತ್ಯ ? ನಿಮ್ಮ ಸಂಘದ ಅಧ್ಯಕ್ಷರು ಇದಾರಲ್ಲ. ಎಲ್ಲ ಅವರಿಂದಲೇ ಆಗಲಿ" ಎಂದು ನಗುತ್ತಲೇ ಹೇಳಿದರು.

"ತಮ್ಮಂಥವರು ಹಾಗೆಂದರೆ ನಮ್ಮದು, ಸಂಘದ ಈ ಸಮಾರಂಭದ ಗತಿಯೇನು ಸಾರ್? ತಮ್ಮ ಸಹಾಯವಿಲ್ಲದೆ ಏನು ತಾನೆ ನಡೆಯುತ್ತೆ, ಈ ಊರಿನಲ್ಲಿ ? ದೊಡ್ಡ ಮನಸ್ಸುಮಾಡಿ ಸಹಕರಿಸಿ ಸಹಾಯಮಾಡಬೇಕು ಸಾರ್."

"ಅಲ್ಲರೀ, ನಿಮ್ಮ ಕಷ್ಟಕ್ಕೆಲ್ಲ ಕುತ್ತಿಗೆ ಕೊಡೋಕೆ ನಾವು ಬೇಕು, ಹಾರ ತುರಾಯಿಗೆ ಬೇರೆಯೋರೋ ?"

"ತಾವು ಹೀಗೆ ತಪ್ಪು ತಿಳಿದುಕೋತೀರಿ ಅಂತ ನಂಗೆ ಹೋದ ಚುನಾವಣೆಯಲ್ಲೇ ಗೊತ್ತಾಯ್ತು. ಅದು ದೊಡ್ಡ ತಪ್ಪಾಯ್ತು ಸಾರ್. ನಾನು ತಮ್ಮ ಹೆಸರನ್ನೇ ಸೂಚಿಸಿದ್ದೆ. ಆದರೆ ಈ ನೌಕರ ವರ್ಗದೋರು ತಮ್ಮ ಆಫೀಸರ್ ಅಂತ ಅಮಲ್ದಾರರನ್ನೇ ಎತ್ತಿಹಿಡಿದು ಗಲಾಟೆ ಮಾಡಿಬಿಟ್ಟರು. ನಿಸ್ಸಹಾಯನಾಗಿ ಬಿಟ್ಟೆ. ಸದ್ಯ, ಈ ಸಾರಿ ಅವರೆಲ್ಲ ತೊಲಗಿದಾರೆ. ಬಾಕಿಯೋರಿಗೂ ಬುದ್ಧಿ ಬಂದಿದೆ. ಅಮಲ್ದಾರರು ಏನೇನೂ ಆಸಕ್ತಿ ತಗೊಳ್ಳೋದೆ ಇಲ್ಲ, ಸಾರ್. ತಾವು ಹೇಳಿದ ಹಾಗೆ ಹಾರ ತುರಾಯಿ ಪೂಜೆಗೆ ಮಾತ್ರ ಬರುತ್ತಾರೆ. ಗುಟ್ಟಾಗಿ ಹೇಳಬೇಕು ಅಂದರೆ ಅವರು ಸದಸ್ಯತ್ವದ ಚಂದಾ ಸಹ ಕೊಟ್ಟಿಲ್ಲ, ಸಾರ್. ಏನು ಹೇಳಬೇಕು ನಾಚಿಕೆಗೇಡು ! ಈ

ಬಾರಿ ತಮ್ಮಂತಹ ಶ್ರದ್ಧಾಳು ಉದಾರಿ ಸಾಹಿತ್ಯಾಭಿಮಾನಿಗಳನ್ನು ಹಿಡಿಯ ದಿದ್ದರೆ ಸಂಘವೇ ಮುಳುಗಿ ಹೋಗುತ್ತೆ. ಖಂಡಿತ. ಇದು ಬಾಕಿಯೋರಿಗೂ ಗೊತ್ತು. ಚುನಾವಣೆ ಬರಲಿ....'' ಶ್ಯಾಮಯ್ಯಂಗಾರಿ ಜಾಣ. ಥಟ್ಟನೆ ಎಚ್ಚೆತ್ತುಕೊಂಡ.

" ಅಲ್ರೀ, ನಿಮ್ಮ ಅಧ್ಯಕ್ಷತೆ ಯಾರಿಗೆ ಬೇಕ್ರಿ ? ಅದಿಲ್ಲದೆ ನಮಗೇನು ಅನ್ನ ಅರಗೋದಿಲ್ಲವೆ, ನಿದ್ದೆ ಬರೋದಿಲ್ಲವೆ? ಏನು ಮಹಾ ಗೌರವ ಅಂತ."

" ತಮಗಲ್ಲ ಸಾರ್. ಆದರೆ ಸಂಘಕ್ಕೆ ಗೌರವ, ತಮ್ಮಂಥೋರು ಅಧ್ಯಕ್ಷರು ಅಂದರೆ."

" ಹುಂ, ಹುಂ. ಈಗೇನಾಗಬೇಕು ಹೇಳಿ. ದುಡ್ಡು ತಾನೆ ? "

" ಅದಿಲ್ಲದೆ ಯಾವುದಾಗುತ್ತೆ ಸಾರ್? '' ಅಯ್ಯಂಗಾರಿ ಹಲ್ಲು ಕಿರಿದ.

" ಅಷ್ಟೇ ಅನ್ನಿ."

" ತಾವು ಸ್ವಾಗತಾಧ್ಯಕ್ಷರಾಗಿ........"

" ಸರಿ ಸರಿ, ದುಡ್ಡಿನ ಜತೆಗೆ ಅಷ್ಟು ಚಾಕರಿ ಅನ್ನಿ."

" ಉಂಟೆ ಸಾರ್. ತಮಗೇನು ತೊಂದರೆ ಕೊಡೋದಿಲ್ಲ. ಸ್ಥಳವಂದಿ ಗರ ಪರವಾಗಿ........"

" ಇದಾರಲ್ಲ ಅಮಲ್ದಾರರು. ಅವರೇನು ಸಮಾರಂಭಕ್ಕೆ ಅಧ್ಯಕ್ಷರು?"

" ಅಲ್ಲ. ಬೆಂಗಳೂರಿನ ಕೋಡಿ ವಿಶ್ವೇಶ್ವರ ಶಾಸ್ತ್ರಿಯವರು........''

" ಅವರು ಯಾರ್ರಿ ? ಇಷ್ಟೊಂದು ಜನ ಸ್ಥಳವಂದಿಗರನ್ನು ಇಟ್ಕೊ ಕೊಂಡು ಹೊರಗಿನೋರನ್ನ ಕರೀತೀರಿ ? '

" ಅವರು ಸುಪ್ರಸಿದ್ಧ ಸಾಹಿತಿಗಳು. ' ಸೋಮನಾಥ ' ಅನ್ನೋ ಹೆಸರಿನಲ್ಲಿ........''

" ಪುಸ್ತಕ ಬರೀತಾರೆ ತಾನೆ ? "

" ಹುಂ, ಬೇಕಾದಷ್ಟು ಬರೆದಿದಾರೆ........''

" ಅದೇನು ಬರೆಯೋರೇ ಹೆಚ್ಚಿನ ಸಾಹಿತ್ಯಾಭಿಮಾನಿಗಳೇನ್ರಿ ? ಕೊಳ್ಳೋರು ನಾವಲ್ಲವೆ ? ನಮ್ಮ ಪುಸ್ತಕಭಂಡಾರದಲ್ಲಿ ನೋಡಿ ನಿಮಗೆ ಯಾವ ಪುಸ್ತಕ ಬೇಕು ? ಅವರದ್ದು—ಯಾರು?—ಕೋಡಿ ಸೋಮನಾಥ ಶಾಸ್ತ್ರಿಯವರದ್ದೂ ಇದ್ದೇ ಇರಬೇಕು."

"ಇಲ್ಲದೆ ಇರುತ್ತೇ. ಕೊಳ್ಳೋರೇ ಹೆಚ್ಚು ಸಾಹಿತ್ಯಾಭಿಮಾನಿಗಳು ಸಾರ್. ಬರೆಯೋದರಲ್ಲಿ ಏನಿದೆ? ನಾನೂ ಇದನ್ನೇ ಸಮಿತಿಯ ಮುಂದೆ ಇಟ್ಟೆ ಸಾರ್. ಸ್ಥಳೀಯ ಸಾಹಿತ್ಯಾಮಾನಿಗಳೇ ಈ ಸಮಾರಂಭಕ್ಕೆ ಅಧ್ಯಕ್ಷ ರಾಗಬೇಕು ಅಂದೆ. ತಮ್ಮ ಹೆಸರೂ ಬಂತು—ನಿಜ ಹೇಳಬೇಕಾದರೆ. ಆದರೆ ತಮಗೆ ಪುರಸತ್ತು ಇರೋದಿಲ್ಲ ಅಂತ ವಾದಿಸಿದರು. ಇರಬಹುದು ಅಂತ ಸುಮ್ಮನಾದೆ........"

"ಅಲ್ರೀ, ಸಾಹಿತ್ಯದಲ್ಲಿ ಅಭಿಮಾನ ಇರೋಗು ಪುರಸತ್ತು ಇಲ್ಲ ಅನ್ನೋದಿಕ್ಕಾಗುತ್ತೇ? ಅದಷ್ಟೂ ಸರಸ್ವತಿಯ ಸೇವೆ ಮಾಡಬೇಕಪ್ಪ. ನಮ್ಮ ನಮ್ಮ ಕೆಲಸ ಇದ್ದೇ ಇರುತ್ತೆ, ಅಲ್ಲವೆ ?"

"ಹೌದು ಸಾರ್, ಹೌದು. ತಾವು ಹೇಳಿದ್ದು ಚಿನ್ನದಂಥ ಮಾತು. ತಮ್ಮಂಥವರಿಂದಲೇ ಸಾಹಿತ್ಯ, ಸಂಸ್ಕೃತಿ ಎಲ್ಲ ಉಳಿದು ಬೆಳೀಬೇಕಾದರೆ. ಸಮಾರಂಭಕ್ಕೆ ತಾವು ಅಧ್ಯಕ್ಷರಾಗಿದ್ದುಕೊಂಡು ಅದಕ್ಕೆ ಮರ್ಯಾದೆ ತರೋದು ಸಾಧ್ಯವಾಗಿಬಿಟ್ಟರೆ ಅದಕ್ಕಿಂತ ಏನು ಬೇಕು ಸಾರ್. ತಾವು ಒಪ್ಪಿದರೆ ಸಮಿತಿ ಒಪ್ಪೇ ಒಪ್ಪುತ್ತೆ. ನಂಗೆ ಭರವಸೆಯಿದೆ. ಆಗಬಹುದೆ ಸಾರ್ ?"

"ಹೋಗಲಿ ಬಿಡಿ ಹಿಂದಿನ ಹಾಗೇ ಇರಲಿ. ಏನೇನೋ ತೀರ್ಮಾನ ಮಾಡಿಬಿಟ್ಟಿದೀರಲ್ಲ."

"ಆದಕ್ಕೇನು ಸಾರ್, ಇನ್ನೂ ಮುಂದುವರಿದಿಲ್ಲ. ಕೋಡಿಯವರನ್ನು ಗೌರವದ ಅತಿಥಿ ಅಂದುಬಿಟ್ಟರಾಯ್ತು. ಸಂಘದ ಅಧ್ಯಕ್ಷರೇ ಇದಾರಲ್ಲ ಸ್ವಾಗತಾಧ್ಯಕ್ಷರಾಗೋದಕ್ಕೆ. ಅಷ್ಟಾದರೂ ಕೆಲಸ ಮಾಡಲಿ. ತಾವು ಒಪ್ಪಿ ಕೊಳ್ಳಲೇಬೇಕು ಸಾರ್ ಅಧ್ಯಕ್ಷಸ್ಥಾನಕ್ಕೆ."

"ಯಾಕೆ ಬಲವಂತ ಮಾಡುತ್ತೀರಪ್ಪ. ಇರಲಿ ನೋಡೋಣ. ನಿಮಗೆ ತಿಳಿದ ಹಾಗೆ ಮಾಡಿ. ಯೋಗ್ಯ ರೀತಿಯಲ್ಲಿ ಮಾಡಿ ಅಷ್ಟೆ. ನಂಗೇನು ಬೇಕಾಗಿದೆ, ಹೀಗೇ ಮಾಡಿ ಅಂತ ಬಲವಂತ ಮಾಡೋದಿಕ್ಕೆ? ಇಂಥ ಒಳ್ಳೆಯ ಕೆಲಸದಲ್ಲಿ ನನ್ನ ಸಹಕಾರ ಹೇಗೆ ಬೇಕಾದರೂ ಇದೆ. ತಿಳಿತೆ ?"

"ಧನ್ಯನಾದೆ ಸಾರ್. ನಾವೆಲ್ಲ ಯಾಕೆ, ಸಂಘವೇ ಧನ್ಯವಾಯಿತು. ತಾವು ಇಷ್ಟು ದೊಡ್ಡ ಮನಸ್ಸು ಮಾಡಿ ಅಧ್ಯಕ್ಷತೆಗೆ ಒಪ್ಪಿದ್ದು ನಮ್ಮ ಸುದೈವ ಸಾರ್. ಇನ್ನು ನಮಗೆ ಯಾವ ಆತಂಕವೂ ಇಲ್ಲ."

“ ಹುಂ, ಬಹಳ ಸಂತೋಷ. ಏನು ಬಡ್ಜೆಟ್ ಹಾಕಿದೀರಿ? ”

“ ಅದೇ ಹೇಳಬೇಕು ಅಂತಿದ್ದೆ. ಮುನ್ನೂರು ರೂಪಾಯಾದರೂ ಬೇಕು. ”

“ ಸಂಘದಿಂದ ಎಷ್ಟು ಕೊಡುತ್ತೀರಿ ? ”

“ ಸಂಘದಲ್ಲೇನಿದೆ ಸಾರ್ ಮಣ್ಣು. ಮುಕ್ಕಾಲು ಪಾಲು ಮೆಂಬರೆಲ್ಲ ಚಂದಾ ಬಾಕಿ. ಹೇಳೋದಕ್ಕೆ ಉದ್ದ ಉದ್ದವಾದ ಹೆಸರು, ಪದವಿ, ಅಧಿಕಾರ, ಉದ್ಯೋಗ. ಆದರೆ ಕೊಡೋದು ಮಾತ್ರ ಒಂದು ಕಾಸೂ ಇಲ್ಲ. ಕೊಡೋ-ದಿಲ್ಲ ಅಂತಲೂ ಹೇಳೋದಿಲ್ಲ. ಆಗ ಬಾ ಈಗ ಬಾ ಅಂತ ಅಲೆಸುತ್ತಾರೆ. ಸುಮ್ಮನೆ ಸತ್ತು ಸುಣ್ಣವಾಗಬೇಕು ಸೆಕ್ರೆಟರಿ—ಜನರಲ್ ಸೆಕ್ರೆಟರಿಯಾದ ನಾನು. ಹಾಗೇಂತ ಪೀಡೆ ಕಳೀಲಿ ಅಂದರೆ, ತಿಂಡಿ ಹೊತ್ತಿನಲ್ಲಿ ಯಾರೂ ತಪ್ಪಿಸಿಕೊಳ್ಳೋದಿಲ್ಲ. ಸ್ವಲ್ಪ ನ್ಯಾಯವಾಗಿ ಮಾತಾಡಿದರೆ ವ್ಯಾಜ್ಯವೇ ಮೊದಲಾಗುತ್ತೆ. ಸುಮ್ಮನೆ ಬಾಯಿಮುಚ್ಚಿಕೊಂಡಿದೀನಿ. ”

“ ಪಾಪ, ಪಾಪ ! ಅದೆಲ್ಲ ಹೋಗಲಿ. ಸ್ವಾಗತ ಸಮಿತಿ ಪಟ್ಟಿ ಹಾಕಿ ಮತ್ತೆ, ಅವರನ್ನಾದರೂ ಅಷ್ಟು ಸುಲಿಗೆ ಮಾಡೋಣ. ”

“ ಇಗೋ ಇಲ್ಲೇ ಇದೆ ಸಾರ್ ” ಅಯ್ಯಂಗಾರಿ ಜೇಬಿನಿಂದ ತೆಗೆದು ಪಟ್ಟಿ ಕೊಟ್ಟನು.

“ ಇದೇನ್ರಿ, ಮಂಡಿ ಶಿವಪ್ಪನ್ನ ಸೇರಿಸುತ್ತೀರ ? ” ಪಟ್ಟಿ ನೋಡುತ್ತ ಕೇಳಿದರು.

“ ಅವರ ಹೆಸರೂ ಇದೆಯೆ ಸಾರ್ ? ” ಅಯ್ಯಂಗಾರಿ ಏನೂ ಗೊತ್ತಿಲ್ಲ ದಂತೆ ಕೇಳಿದ.

“ ಅವನೊಬ್ಬ ಶುದ್ಧ ಕಳ್ಳ. ಕೇಡಿಗ. ಅವನ ಹೆಸರು ಹೊಡೆದು ಹಾಕಿ ಮೊದಲು. ಅವನು ಕೊಡೋ ಹಣ ನಾನೇ ಕೊಡುತ್ತೀನಿ. ”

“ ಹಾಗೇ ಆಗಲಿ ಸಾರ್, ತಮ್ಮ ಅಪ್ಪಣೆಯಂತೆ. ಅದಕ್ಕೇನು ”

“ ಬಾಕಿ ಹೆಸರುಗಳೆಲ್ಲ ಸರಿಯಾಗಿವೆ. ಭಿಕ್ಷ ಎತ್ತಿಕೊಂಡು ಬನ್ನಿ. ಬಾಕಿ ಉಳಿದದ್ದೆಲ್ಲ ನಂಗಿರಲಿ. ”

“ ದೊಡ್ಡ ಉಪಕಾರ, ಸಾರ್. ”

“ ಅದು ಸರಿ. ಇಂಥ ಮಹತ್ವದ ಸಮಾರಂಭಕ್ಕೆ ಸಾಕಾದಷ್ಟು ಪ್ರಕಟನೆ

ಇರಬೇಕು ಕಂಡ್ರಿ. ಕಲೆ ಅಂದರೇನು ಸಾಮಾನ್ಯವೇ, ಜನಜೀವನದ ಜೀವಾಳ. ಹತ್ತುಜನಕ್ಕೆ ತುಂಬ ಉಪಯೋಗವಾಗೋ ವಿಷಯ. ಇದರಿಂದ ಮರು-ಳೂರಿನ ಧ್ವನಿ ದೇಶದ ಮೂಲೆ ಮೂಲೆಯಲ್ಲೂ ಹೊಳಲು ಕೊಡಬೇಕು. ''

'' ಹೌದು ಸಾರ್. ಅದಕ್ಕೆಲ್ಲ ಏರ್ಪಾಡಾಗಿದೆ. ''

'' ಪ್ರಜಾತಂತ್ರ' ದ ಚಂದ್ರಶೇಖರ ಬರುತ್ತಾನೋ ? ''

'' ಅವನೂ ನಮ್ಮ ಸಮಿತಿಯಲ್ಲೇ ಇದಾನೆ ಸಾರ್. ಇದ್ದೇ ಇರುತ್ತಾನೆ. ಬೇಕಾದಷ್ಟು ಬರೆಸುತ್ತೀನಿ. ''

'' ಸರಿ ಹಾಗಾದರೆ....ಮತ್ತೆ ಇವರು, ನಿಮ್ಮ ಸಾಹಿತಿಗಳು ಎಲ್ಲಿಂದ ಬರ್ತಾರೆ? ಏನೇನಾಗಿದಾರೆ ? ''

'' ಮುಖ್ಯಸ್ಥರು—ಶಾಸ್ತ್ರಿಗಳು, ಡಿಸ್ಟ್ರಿಕ್ಟ ಎಜ್ಯುಕೇಶನಲ್ ಆಫೀಸರ್ ಆಗಿದಾರೆ, ಮೈಸೂರಿನಲ್ಲಿ. ''

'' ಓ ಮರೆತಿದ್ದೆ ನೋಡಿ. ಬಂದೋರಿಗೆಲ್ಲ ಮರುಳೂರಿನಲ್ಲಿ ಆತಿಥ್ಯ ನಮ್ಮದು ಅಂತ ಗೊತ್ತಿದೆಯಲ್ಲ. ಆ ಅಮಲ್ದಾರರು ಎಲ್ಲಾದರೂ ಎಳೆದುಕೊಂಡುಬಿಟ್ಟಾರು, ಜೋಕೆ. ನಮ್ಮ ಮನೇಲೇ ಇರಬೇಕು, ಅವರು.......

ಯಾರಪ್ಪಾ....ಮುಖಂಡರು ಮುಖ್ಯವಾಗಿ ? ''

' ಆಗಬಹುದು ಸಾರ್ ಅದಕ್ಕೇನು. ''

'' ಮಿಕ್ಕೋರು ಏನೇನು ಮಾಡ್ತಾರೆ ? ''

'' ಕಾಮೇಶ್ವರಯ್ಯನವರು ಸಣ್ಣ ಜಮೀನುದಾರರು, ಬಾಡಪ್ಪನೋರು ಸ್ಕೂಲು ಮೇಷ್ಟ್ರು....''

'' ಮುಖ್ಯಸ್ಥರ ಹಾಗೆ ಸರಕಾರಿ ಉದ್ಯೋಗದೋರು ಯಾರೂ ಇಲ್ಲ ಅನ್ನಿ. ''

'' ಹುಂ. ಅಂಥ ಪದವಿ........''

'' ಅವರೂ ಇದ್ದುಕೊಂಡು ಹೋಗಲಿ ಬಿಡಿ. ಪಾಪ, ಬೇರೆಬೇರೆಯಾಗಿ ಯಾಕೆ ಇರಬೇಕು. ನಮಗೆ ಸ್ವಲ್ಪ ತೊಂದರೆ ಆದರೆ ಆಗಲಿ.

'' ಹೌದು, ಅದೇ ಸರಿ ಸಾರ್. ''

'' ಇವರು ಬರೋ ದಿನ ಮುಂಚಿತವಾಗಿ ಹೇಳಿ, ರೈಲಿಗೆ ಕಾರು ಕಳಿಸುತ್ತೀನಿ. ಗೊತ್ತಾಯ್ತೆ? ''

" ಸರಿ, ಸಾರ್. ಹಿಂದಿನ ದಿನವೇ ಬಂದು ತಿಳಿಸುತ್ತೀನಿ. "

" ಇನ್ನೇನು ? ಕೂಡಲೇ ಕರೆಯೋಲೆ ಛಾಪಿಸಿ ಎಲ್ಲ ಕಡೆಗೂ ಕಳುಹಿಸಿ ಮಾಡಿ ಮಾಡಬೇಕೇನೋ. ನಿಮಗೆ ತುಂಬ ಕೆಲಸ. ಹೊರಡಬೇಕೇನೋ. "

" ಹೌದು ಸಾರ್ ಹೊರಡಬೇಕು. ತಮ್ಮ ಅಪ್ಪಣೆಯಾದರೆ...." ಅಯ್ಯಂಗಾರಿ ಎದ್ದ.

" ಹೋಗಿ ಬನ್ನಿ....ಹುಂ ಸ್ವಲ್ಪ ಇಲ್ಲಿ ನೋಡಿ. "

" ಸಾರ್. "

" ನೀವು ಕರೆಯೋಲೆ ತರೋವಾಗ ಸಂಘದ ವಿಷಯ, ಸಾಹಿತ್ಯ, ಸಂಸ್ಕೃತಿ, ಸ್ವಾತಂತ್ರ್ಯ, ಸಂಘಟನೆ, ಸಹಕಾರ, ಸಾಹಿತಿಗಳ ವಿಷಯ ಅವರ ಪುಸ್ತಕಗಳು ಇವುಗಳ ವಿಚಾರ—ಗೊತ್ತೇ ಇದೆಯಲ್ಲ—ನಾಲ್ಕು ಮಾತು ಬರೆದುಕೊಂಡು ಬರೋದಕ್ಕೆ ಆಗುತ್ತೆ ತಾನೆ ? "

" ಓಹೋ, ಅದಕ್ಕೇನು ಸಾರ್, ಸಂತೋಷದಿಂದ. "

" ಅದೇ ನಾನು ಹೇಳಿದ ಹಾಗೇ ಅನ್ನಿ. ನಂಗೆ ಪುರಸತ್ತು ಆಗೋದಿಲ್ಲ, ಅಷ್ಟೆ. "

" ಆಗಲಿ, ಸಾರ್. "

" ಭಾಷೆ ಸ್ವಲ್ಪ ಚೆನ್ನಾಗಿರಲಿ, ಪಂಡಿತರದ್ದು ಇರೋ ಹಾಗೆ. "

" ಸರಿ, ಸಾರ್. "

" ಇಷ್ಟಕ್ಕೂ ನಿಮಗೇನು ಹೇಳಬೇಕೆ? ಸ್ವಯಂ ಸಾಹಿತಿ ತಾನೆ? "

" ಏನೋ ತಮ್ಮ ಅಭಿಮಾನ ಸಾರ್. "

" ಆಗಲಿ ಹೋಗಿ ಬನ್ನಿ, ಪಾಪ ತಡವಾಯ್ತು. ನಮಸ್ಕಾರ ! "

" ತಡವೇನಿಲ್ಲ ಸಾರ್. ನಮಸ್ಕಾರ ! "

ಕರೆಯೋಲೆ ಬಂದಾಗ ಅದರ ಒಕ್ಕಣೆಯನ್ನು ನೋಡಿ ಸಾಹುಕಾರರಿಗೂ ಆಶ್ಚರ್ಯವಾಯಿತು. ಅಯ್ಯಂಗಾರಿ ತನ್ನ ವ್ಯಾಕರಣದ 'ಸದ್ಗುಣವಾಚಕ' ಗಳನ್ನೆಲ್ಲ ಸಾಹುಕಾರರ ದೊಡ್ಡ ಅಕ್ಷರಗಳ ಹೆಸರಿನ ಹಿಂದೆ ಮಾಲೆಯಾಗಿ ಜೋಡಿಸಿದ್ದನು. ಇದರಿಂದಲೂ, ಅಧ್ಯಕ್ಷ ಭಾಷಣದಿಂದಲೂ ಅವರು ಸುಪ್ರೀತರಾದರು.

ಅತಿಥಿಗಳು ಒಂದು ದಿನ ಮುಂದಾಗಿಯೇ ದಯಮಾಡಿಸಿದರು. ಮರ್‍ಯಾದೆ ಮಹಲಿನಲ್ಲಿ ರಾಜೋಪಚಾರ ನಡೆಯಿತು. ಸಾಹುಕಾರರು ಸರಕಾರಿ ಆಫೀಸರ್ ಶಾಸ್ತ್ರಿಗಳನ್ನು ತಮ್ಮ ಕೋಣೆಯಲ್ಲೇ ಇಳಿಸಿಕೊಂಡರು. ಇತರರನ್ನು ಅತಿಥಿಗಳ ಕೋಣೆಯಲ್ಲಿ ಇಳಿಸಿದ್ದಾಯಿತು. ಎಂದೂ ಯಾವ ಅತಿಥಿಗಳನ್ನೂ ಕಣ್ಣೆತ್ತಿ ನೋಡದ ಹುಡುಗರು ಈಗ ಬಹಳ ಲವಲವಿಕೆ ಎಚ್ಚರಗಳಿಂದ ಅತಿಥಿಗಳನ್ನು ಉಪಚರಿಸುತ್ತಿದ್ದರು. ಗುರು ತಾನೇ ಕವಿಯಾಗಿದ್ದು ಕವಿವರ ಬಾಡಪ್ಪನವರನ್ನು ವಿಶೇಷವಾಗಿ ನೋಡಿಕೊಳ್ಳುತ್ತಿದ್ದ. ಕುಸುಮ ತಾನೂ ನಾಲ್ಕಾರು ಕತೆಗಳನ್ನು ಬರೆದಿದ್ದಳು. ಶ್ರೇಷ್ಠ ಸಾಹಿತಿ ಕಾಮೇಶ್ವರಯ್ಯನವರ ಪ್ರತಿಯೊಂದು ಪುಸ್ತಕವನ್ನೂ ಎರಡು ಮೂರು ಸಾರಿ ಓದಿ, ಅವರ ಕತೆಗಳನ್ನು ಕನಸಿನಲ್ಲಿಯೂ ಕಾಣುತ್ತಿದ್ದಳು. ಅವರ 'ಪ್ರೇಮಿ' 'ಕಾಮಿನಿ' 'ಸರಸಿಯ ಸಲ್ಲಾಪ' 'ಯೌವನದ ಕಾವು' 'ಅವಳ ಗುಟ್ಟು' 'ನಗ್ನ ಜೀವನ' 'ಭಗ್ನ ಹೃದಯ' 'ಪ್ರೇಮ ಪಂಜರ' ಇವೂ ಇನ್ನೂ ಕೆಲವು ಅವಳ ಹಾಸಿಗೆಯ ಸಂಗಾತಿಯರಾಗಿದ್ದುವು ಅವರ ಜೀವನದ ಸಣ್ಣ ಸಣ್ಣ ಸಂಗತಿಗಳನ್ನೆಲ್ಲ ಕೇಳಿ ತಿಳಿದುಕೊಂಡಿದ್ದಳಲ್ಲದೆ ಸಾಹಿತಿಗಳ ವಿಷಯ ಬಂದರೆ ಅವನ್ನೆಲ್ಲ ಸ್ವಂತ ಅನುಭವದಂತೆಯೇ ಸ್ವಾರಸ್ಯವಾಗಿ ಎಷ್ಟನೆಯ ಬಾರಿಗೋ ಹೇಳುತ್ತಿದ್ದಳು. ಇದರಲ್ಲಿ ಹೇಳುತ್ತಿದ್ದ ಇವಳೂ, ಬಾಯಿಬಿಟ್ಟು ಕೇಳುತ್ತಿದ್ದ ಸ್ನೆಹಿತರೂ ತಲ್ಲೀನರಾಗುತ್ತಿದ್ದರು. ಇಷ್ಟು ಕಾಲ ಪರೋಕ್ಷವಾಗಿ ಮೆಚ್ಚಿ ಕೊಂಡಾಡಿದ್ದ ಆ ಮಹಾ ಸಾಹಿತಿ, ಆ ವಿಲಕ್ಷಣ ಪುರುಷ, ಮನೆಗೇ ಬಂದನೆಂದರೆ ಅವಳ ಉಲ್ಲಾಸ ಉತ್ಸಾಹಗಳು ಹೇಗಿರಬೇಕು? ಅವಳ ಶೃಂಗಾರದ ಸಮಯ ಈಗ ಎರಡರಷ್ಟಾಗಿತ್ತು. ದಿನಕ್ಕೆ ಮೂರು ಸೀರೆ ಉಡುತ್ತಿದ್ದಳು, ಆರು ಜತೆ ಬಳೆ ತೊಡುತ್ತಿದ್ದಳು. ಹೊಸ ಲೋಲಾಕುಗಳನ್ನು ಹಾಕಿಕೊಂಡಳು. ಲೆಕ್ಕವಿಲ್ಲದಷ್ಟು ಬಾರಿ ಕುರುಳನ್ನು ತಿದ್ದಿಕೊಂಡು ಒಂದೆರಡು ಮುಂಗುರುಳನ್ನು ಅಲೆಯಲು ಬಿಡುತ್ತಿದ್ದಳು ಗಳಿಗೆ ಗಳಿಗೆಗೆ ಪೌಡರ್, ಸೆಂಟ್ ಹಾಕಿಕೊಳ್ಳುತ್ತಿದ್ದಳು. ಸದಾ ನಸುನಗುತ್ತಿದ್ದಳು. ಗಟ್ಟಿಯಾಗಿ ಸವಿಸ್ವರದಲ್ಲಿ ಮಾತಾಡುತ್ತಿದ್ದಳು, ನಗುತ್ತಿದ್ದಳು. ಅತಿಥಿಗಳ ಮುಂದಿರದ ಕಾಲದಲ್ಲಿ ಕನ್ನಡಿಯ ಮುಂದಿರುತ್ತಿದ್ದಳು. ಆದಷ್ಟು ಸಮಯ ದೊರಕಿಸಿಕೊಂಡು, ಆಧುನಿಕ ವಿದ್ಯಾವತಿಯ ಸಲಿಗೆಯಿಂದ, ಹೂವಿನ ಸುತ್ತದ ಚಿಟ್ಟೆಯಂತೆ ಕಾಮೇಶ್ವರಯ್ಯ

ನವರ ಬಳಿ ಸುಳಿದಾಡುತ್ತಿದ್ದಳು. ಅತಿಥಿಗಳಿಗೆ ಕುಡಿಯುವ ನೀರು, ತಾಂಬೂಲ ಒದಗಿಸುವ ನೆವದಲ್ಲಿ ಅತಿಥಿಗಳ ಕೋಣೆಗೆ ಹೋಗಿ, ಹಿಂದಿರುಗಲು ಆತುರ ಪಡದೆ ತಡೆ ತಡೆದು ಏನಾದರೂ ನಾಲ್ಕಾರು ಮಾತಿಗೆ ನಿಲ್ಲುತ್ತಿದ್ದಳು. ಅವರ ಪ್ರತಿಯೊಂದು ಮಾತನ್ನೂ, ಚಕ್ರವಾಕ ನೀರನ್ನು ನುಂಗಿದಂತೆ, ನುಂಗುತ್ತಿದ್ದಳು. ಅವರು ವಿನೋದದ ಮಾತನ್ನು ಆಡಿಯಾರೆ ಎಂದು ಕಾದಿದ್ದು ನಕ್ಕಿದ್ದೂ ನಕ್ಕಿದ್ದೆ. ಇವನ್ನೂ ಮತ್ತು ಜಗತ್ತು, ವಸ್ತು, ಶಿಲ್ಪ ಚಿತ್ರಕಲೆ, ಪುಸ್ತಕ, ಸಾಹಿತಿಗಳು–ಯಾವ ವಿಷಯದಲ್ಲೇ ಆಡಿದ ಅಭಿಪ್ರಾಯಗಳನ್ನೂ ನೆನಪಿಟ್ಟು ಕೊಂಡು, ತನ್ನ ಕೋಣೆಯಲ್ಲಿ ಗುರುತು ಹಾಕಿಟ್ಟುಕೊಳ್ಳುತ್ತಿದ್ದಳು. ಬಂದ ರಾತ್ರಿ ದಿವಾನಖಾನೆಯಲ್ಲಿ ಪುಸ್ತಕಗಳ ಚರ್ಚೆ ಬಂತು. ಈ ಸಂದರ್ಭದಲ್ಲಿ ಚರ್ಚೆ ಬೆಳೆಯುತ್ತ, ಹಿರಿಯ ಸಾಹಿತಿಗಳೂ ಕವಿವರರೂ ಒಂದಾಗಿ 'ಮಡಿ' ದಾರಿಯನ್ನು ಮಂಡಿಸಿದರು; ಕಾಮೇಶ್ವರಯ್ಯನವರೂ ಕುಸುಮಳೂ ಜತೆಯಾಗಿ ಮಡಿಯನ್ನು ಖಂಡಿಸಿ ಸ್ವಚ್ಛಂದತೆಯನ್ನು ಸಮರ್ಥಿಸಿದರು. ಗುರು ಎರಡೂ ಸರಿಯಲ್ಲವೆಂದೂ, ಮಧ್ಯದಾರಿಯಾದ ಗಂಭೀರ ಸ್ವಾತಂತ್ರ್ಯವಿರಬೇಕೆಂದೂ ಹೇಳುತ್ತಿದ್ದನಾದರೂ ಅವನನ್ನು ಯಾರೂ ಗಮನಿಸಲೇ ಇಲ್ಲ. ಚರ್ಚೆ ಬಿರುಸಾಗಿ ನಡೆಯಿತು. ಕೂಗಾಟಕ್ಕೇನು ಕಡಿಮೆಯಿರಲಿಲ್ಲ. ಸಾಹುಕಾರರು ಎರಡು ವಿರೋಧ ಪಕ್ಷಗಳ ಕಡೆಗೂ ಸಮವಾಗಿ ತಲೆಯಾಡಿಸಿ ಎಲ್ಲರನ್ನೂ ಒಪ್ಪಿ "ಹೋಗಲಿ ಬಿಡಿ, ಹಾಗೇ ಆಗಲಿ, ಆಯ್ತಲ್ಲ, ಒಪ್ಪಿಗೆ, ಹಾಗೂ ಸರಿ, ಹೀಗೂ ಸರಿ. ಬಿಟ್ಟುಬಿಡಿ ಅತ್ತಕಡೆ, ಮತ್ತೆ" ಮುಂತಾಗಿ ಹೇಳುತ್ತ ಊರಿನಲ್ಲಿ ಶಾಂತಿಗೆಲ್ಲಿ ಭಂಗಬರುತ್ತದೋ ಎಂದು ಹೆದರಿ, ಮರ್ಯಾದೆ ಮಹಲಿನ ಮರ್ಯಾದೆಯನ್ನು ಉಳಿಸಿಕೊಳ್ಳಲು ಮಾಡಿದ ಒದ್ದಾಟವೆಲ್ಲ ವ್ಯರ್ಥವಾಯ್ತು. ಈ ಹೋರಾಟದಲ್ಲಿ ಭಾಗವಹಿಸದೆ ಸುಮ್ಮನೆ, ನಶ್ಯ ಸೇದುತ್ತ, ಆಕಳಿಸುತ್ತ ತೂಕಡಿಸುತ್ತ ಕುಳಿತಿದ್ದ ಸಂಗೀತಸಾಗರರೇ ಎಲ್ಲರಿಗಿಂತಲೂ ಸರಿಯಿರಬೇಕು ಎಂದೆನ್ನಿಸಿತು, ಸಾಹುಕಾರರಿಗೆ. ಕಡೆಗೆ ಸೋಫದ ಮೇಲೆಯೇ ಒಂದು ಕನಸಾಗಿ, ತಮ್ಮ ಗೊರಕೆಯೇ ತಮಗೆ ಕೇಳಿದ ಮೇಲೆ ಸಾಹುಕಾರರು "ಏಳಿ ಪಾಪ, ತಮಗೆಲ್ಲ ಬಹಳ ಹೊತ್ತಾಯ್ತು. ದಣಿದಿದೀರಿ' ಎಂದು ಬಲವಂತದಿಂದ ಎಬ್ಬಿಸದಿದ್ದರೆ ಹಾಗೇ ಬೆಳಗಾಗುತ್ತಿತ್ತೊ ಏನೋ. ಈ ಸಂದರ್ಭದಲ್ಲಿ ಕುಸುಮ, ಕಾಮೇಶ್ವರಯ್ಯನವರ ಪುಸ್ತಕಗಳ ಬಗ್ಗೆ ತೋರಿಸಿದ ಜ್ಞಾನವನ್ನು

ಕಂಡು ಆ ಸಾಹಿತಿಗೇ ಆಶ್ಚರ್ಯವಾಯಿತು. ಯುವಜನರ ಪ್ರಶಂಸಾತ್ಮಕ ವಿಮರ್ಶೆ ಅವರಿಗೇನು ಹೊಸದಾಗಿರಲಿಲ್ಲ. ಆದರೆ ಇದು ತಾವು ಕೇಳಿದ್ದ ಎಲ್ಲವನ್ನೂ ಮೀರಿಸಿತ್ತು. ಅವರು ಆನಂದದಲ್ಲಿ ತೇಲಾಡಿದರು. ಸಾಹುಕಾರರಂತೂ ತಮ್ಮ ಮಗಳ ಧೈರ್ಯ, ಪಾಂಡಿತ್ಯಗಳನ್ನು ಈಗ ಮೊಟ್ಟಮೊದಲಿಗೆ ಕಂಡು ದಂಗು ಬಡಿದು ಹೋದರು. ಅವರ ಹೆಮ್ಮೆ ಎಲ್ಲೂ ಹಿಡಿಸದಾಯಿತು.

ಹೀಗೆ ಉಪಚಾರದಲ್ಲಿ ಅತಿಥಿಗಳನ್ನು 'ಹರಿದು ಹಂಚಿಕೊಂಡ'ಮೇಲೆ, ಕಳಿದುಳಿದ ಸಂಗೀತಸಾಗರರು ಸದಾಶಿವನ ಪಾಲಾದರು. ಎಂದರೆ ಉಪ-ಚಾರವೇನೂ ಕಡಿಮೆಯಾಗಲಿಲ್ಲ. ಸದಾಶಿವನಿಗೆ ಸಂಗೀತವೆಂದರೆ ಪ್ರಾಣ. ಯಾವ ಹೊಸ 'ಫಿಲ್ಮ್' ಬಂದರೂ ಎರಡನೆ 'ಷೋ'ಗೆ ಹೋಗದೆ ಇರುತ್ತಿರಲಿಲ್ಲ. ನಾಟಕ ಬಂದರಂತೂ ದಿನವೂ ನಾಲ್ಕಾಣೆ ತರಗತಿಯಲ್ಲಿ ಅವನನ್ನು ನೋಡಬಹುದಾಗಿತ್ತು. ಮನೆಯಲ್ಲಿ ಕುಸುಮ ಹೇಳಿಸಿಕೊಳ್ಳುತ್ತಿದ್ದ ಹಾಡೆಲ್ಲ ತಾಳ, ಸ್ವರ, ತಾನ, ಪಲ್ಲವಿ, ಸಹಿತ ಅವನಿಗೆ ಬಾಯಿಪಾಠವಾಗಿತ್ತು. ಅಡಿಗೆ ಮನೆಯ ಬಳಿ ಸುಳಿದವರಿಗೆ ಅದೇನು ಪಾಕಶಾಲೆಯೋ ಸಂಗೀತ ಶಾಲೆಯೋ ಎನ್ನುವ ಭ್ರಮೆಯಾಗುತ್ತಿತ್ತು. ಅವನ ಮೊದಲ ಪ್ರೇಮ ಅಡಿಗೆಯಾಗಿಲ್ಲದಿದ್ದರೆ ಅವನು ಸುಪ್ರಸಿದ್ಧ ಸಂಗೀತಗಾರನಾಗುತ್ತಿದ್ದನೋ ಏನೋ. ವಿಧಿಯ ಕೈತಪ್ಪಿನಿಂದ ಸಂಗೀತಪ್ರಪಂಚಕ್ಕೇ ಅಪಾರ ನಷ್ಟವಾಗಿತ್ತು. ಹೀಗೆಂದ ಮೇಲೆ ಸದಾಶಿವನೇ ಆದರಿಸಿದ ಸಂಗೀತಸಾಗರರಿಗೆ ಏನು ಕಡಿಮೆ? ಎಲ್ಲರಿಗಿಂತಲೂ ಒಂದು ಕೈ ಜಾಸ್ತಿಯಾಗಿಯೇ ಉಪಚಾರ ನಡೆಯಿತು ಅವರು ಅಜೀರ್ಣಾಧಿಕ್ಯದಿಂದ ಅಲ್ಲೇ ಆಸ್ಪತ್ರೆಗೆ ದಾಖಲಾಗದೆ ಮೈಸೂರಿಗೆ ಮತ್ತೆ ಸುರಕ್ಷಿತವಾಗಿ ಸೇರಿದುದೇ ಪರಮಾಶ್ಚರ್ಯ. ಅವರ ಗ್ರಹಗತಿ ಚೆನ್ನಾಗಿತ್ತು—ಮುಖ್ಯವಾಗಿ.

ಸಾಹುಕಾರರೇ ಅತಿಥಿಗಳನ್ನು ಮರ್ಯಾದೆ ಮಹಲಿನಲ್ಲೆಲ್ಲ ಸುತ್ತಿಸಿ ಎಲ್ಲವನ್ನೂ ತೋರಿಸಿದರು. ಸಾಹಿತಿಗಳು ಸಾಹುಕಾರರ ಪುಸ್ತಕಭಾಂಡಾರವನ್ನು ಕಂಡು ಆಶ್ಚರ್ಯಪಟ್ಟರು. ಎಲ್ಲ ಸಾಹುಕಾರರೂ ಹೀಗೇ ಆದರೆ ನಮ್ಮ ಬಾಳು ಎಷ್ಟು ಚೆನ್ನಾಗಿರುತ್ತೆ ಎಂದುಕೊಂಡು ನಾಲಿಗೆ ಚಪ್ಪರಿಸಿದರು. ಹಿರಿಯ ಸಾಹಿತಿಗಳು " ತಮಗೆ ಸಾಹಿತ್ಯಾಭಿರುಚಿ ಬಹಳವಿದ್ದಂತೆ ಕಾಣುತ್ತೆ, ಇಷ್ಟೊಂದು ಪುಸ್ತಕಗಳನ್ನು ಗುಡ್ಡೆ ಹಾಕಿದ್ದೀರಿ " ಅಂದರು.

“ ಹ್ಹ! ಹಾ! ಅದು ನನ್ನ ದೌರ್ಬಲ್ಯ ” ಸಾಹುಕಾರರು ನಕ್ಕರು.

“ ಆದರೆ ಅದು ಸಾಹಿತಿಗಳ ಬಲ, ಸಾಹುಕಾರರೆ. ”

“ ಪ್ರಕಟವಾದ ಯಾವ ಪುಸ್ತಕಾನೂ ಬಿಡೋದಿಲ್ಲ ಸಾರ್. ಆ ಮಾಲೆ ಈ ಮಾಲೆ ಯಾವ ಯಾವ ನೂರೆಂಟು ಮಾಲೆಗಳಿವೆಯೋ ಎಲ್ಲಾನೂ ಹಾಕಿಕೋತೀನಿ; ಎಲ್ಲಕ್ಕೂ ಚಂದಾ ಕಳುಹಿಸಿತ್ತೀನಿ. ಮುಗಿದಾಗ ಅವರೇ ವ್ಹಿ. ಪಿ ಕಳುಹಿಸುತ್ತಾರೆ. ದುಡ್ಡು ಕೊಟ್ಟುಬಿಡುತ್ತೀನಿ. ”

“ ಹಾಗಾದರೆ ಚಂದ್ರಲೋಕ ಮಾಲೆ ಅಂತ........ ”

“ ಓಹೋ, ಅದೂ ಬರುತ್ತೆ........ಏನು ಕುಸುಮ ? ”

“ ಇನ್ನೂ ಮೊದಲು ಮಾಡಬೇಕು ಅಂತ ಇದೀನಿ. ಆಗಿಲ್ಲ. ”

“ ಹಾಗೇ. ಅದಕ್ಕೇನು ವ್ಹಿ. ಪಿ. ಕಳುಹಿಸಿಬಿಡಿ. ”

“ ಬಹಳ ಕೃತಜ್ಞ. ”

“ ಅದರಲ್ಲೇನು ಸಾರ್, ಮಾಡಬೇಕಾದದ್ದೇ ಉಪಕಾರ. ”

“ ಈಚೆಗೆ ನನ್ನ ಪುಸ್ತಕಗಳನ್ನೆಲ್ಲ ಇಪ್ಪತ್ತು ಸಂಪುಟಗಳಲ್ಲಿ ಅಚ್ಚು ಹಾಕಿಸಿದೀನಿ. ”

“ ಅವೂ ಬಂದೇ ಇವೆ. ”

“ ಆಗಲೇ ತರಿಸಿಬಿಟ್ಟಿದೀರ ? ”

“ ಓಹೋ........ಏನು ಕುಸುಮ ? ” ಸಾಹುಕಾರರು ಸ್ವಲ್ಪ ಅನುಮಾನಿಸಿ “ ಇವಳು ನಮ್ಮ ಲೈಬ್ರೇರಿಯನ್ ” ಎಂದು ನಕ್ಕರು.

“ ಇನ್ನೂ ಆರ್ಡರ್ ಮಾಡಿಲ್ಲಪ್ಪ, ಮಾಡಬೇಕು ಅಂತ ಇದೀನಿ. ಏನೋ ಗಲಾಟೆಯಾಯ್ತು, ಸ್ವಲ್ಪ ” ಕುಸುಮ ತಪ್ಪಿತಸ್ಥಳಂತೆ ಹೇಳಿದಳು.

“ ಮಾಡಿ ಬಿಡು ಮತ್ತೆ ನಾಳೆಯೇ....ಎಷ್ಟು ರೂಪಾಯಿ ಸಾರ್ ? ”

“ ನೂರು........ ”

“ ಅಷ್ಟೊಂದು ?....ಬರೆದಿದೀರ ? ”

“ ತಾವು ಬೇಕಾದಷ್ಟು ಆಗಲೇ ಓದಿರಬಹುದು. ”

“ ಓಹೋ, ಓದದೇ ಉಂಟೆ? ಬೇಕಾದಷ್ಟು ಓದಿದೀನಿ. ಎಲ್ಲ ಓದೇ ಇರಬೇಕು. ವಯಸ್ಸಾಗ್ತಾ ಬಂತು. ಹಾಳು ಮರೆವು ನೋಡಿ. ”

“ ನಿಜ. ನಿಜ. ”

ಕಾಮೇಶ್ವರಯ್ಯನವರು ಭಂಡಾರವನ್ನು ಪರೀಕ್ಷಿಸಿ ತಮ್ಮ ಕಥೆ, ಕಾದಂಬರಿ, ವಿಮರ್ಶೆ ಉಪನ್ಯಾಸಗಳ ಪುಸ್ತಕಗಳೆಲ್ಲವೂ ಇದ್ದುದನ್ನು ಕಂಡು ಸಂತೃಪ್ತರಾಗಿ ಹೆಮ್ಮೆಪಟ್ಟರು. ಕವಿವರರು ತಮ್ಮದು ಯಾವುದೂ ಇಲ್ಲದಿದ್ದುದನ್ನು ಕಂಡು ಕೂಡಲೇ ತಮ್ಮ ಪೆಟ್ಟಿಗೆಯಿಂದ ಎಲ್ಲವನ್ನೂ ತೆಗೆದು 'ಸಾಹುಕಾರ ವಿಶ್ವೇಶ್ವರಯ್ಯನವರು, ಗೆಳತಿ ಕುಸುಮ, ಗೆಳೆಯ ಗುರುಪ್ರಸಾದ, ಇವರಿಗೆ ಪ್ರೀತಿಯಿಂದ' ಎಂದು ಬರೆದು 'ಬಾಡು' ಎಂದು ರುಜುಮಾಡಿ ಕೊಟ್ಟರು. ಒಡನೆಯೇ ಪುಸ್ತಕಗಳು ಭಂಡಾರದ ಮೇಲು ಬೀರುವಿನ ಎಡ ಮೂಲೆಯನ್ನು ಸೇರಿದುವು. ಕವಿವರರು ಕವಿತೆಯ ಮಾತನ್ನೆತ್ತಿ ಸಾಹುಕಾರರಿಗೆ " ತಮ್ಮ ಮಗನೇನು ಸಾಮಾನ್ಯ ಕವಿಯಲ್ಲ ಸಾರ್. ಬಹಳ ಪ್ರತಿಭಾವಂತ. ತುಂಬ ಮುಂದಕ್ಕೆ ಬರುತ್ತಾನೆ " ಎಂದರು.

" ಬಿಡ್ರಿ, ಅದೇನು ಮಹಾ " ಗುರು ಅಲಕ್ಷ್ಯದಿಂದ ಹೇಳಿದ.

" ಹಾಗೇನು? ಅದು ನಮಗೆ ಗೊತ್ತೇ ಇರಲಿಲ್ಲವಲ್ಲ. ಮಾಡಬೇಕಾದ ಕೆಲಸ ಸಾರ್—ವಿರಾಮದಲ್ಲಿ. ಕವಿತೆಯೆಂದರೆ ಸಾಮಾನ್ಯವೇ ? ಅವನು ಹೆಚ್ಚು ಮಾತಾಡೋ ಸ್ವಭಾವದವನೇ ಅಲ್ಲ. ಅವನ ವಿಷಯವನ್ನಂತು ಹೇಳಿಕೊಳ್ಳೋದೆ ಇಲ್ಲ. ಬಹಳ ಸಂತೋಷವಾಯ್ತು ಕೇಳಿ " ಅಂದು ತಂದೆ ಹಿಗ್ಗು ತೋರಿದರು.

" ಅವರ ಪದ್ಯಗಳನ್ನೆಲ್ಲ ಸೇರಿಸಿ ಒಂದು ಪುಸ್ತಕ ಹಾಕಿಸಿಬಿಡಿ. ನಿಮಗೇನು ಹಣದ ತೊಂದರೆ ನಿರೀಕ್ಷೆಗಳಿಲ್ಲವಲ್ಲ? " ಕವಿವರರು ಸೂಚಿಸಿದರು.

'' ಆಗಬಹುದು, ಅದಕ್ಕೇನು. ಕರ್ಚಾದಷ್ಟು ಆಗಲಿ." ಸಾಹುಕಾರರು ಒಪ್ಪಿಗೆ ಸೂಚಿಸಿದರು.

ನಂಜಪ್ಪ ಅತಿಥಿಗಳ ನೆಪದಲ್ಲಿ ಸದಾಶಿವನಿಗೆ ಅಪ್ಪಣೆ ಮಾಡಿ ವಿವಿಧ ಭಕ್ಷ್ಯಗಳನ್ನು ಮಾಡಿಸಿ ಅತಿಥಿನೈವೇದ್ಯದೊಡನೆ ಪ್ರಸಾದವನ್ನು ತನ್ನ ಹೋಲ್ಡಾಲ್ ಹೊಟ್ಟೆಗೆ ತುಂಬುತ್ತಿದ್ದನು ಹೀಗೆ ರಸಗವಳದಲ್ಲಿ ಅವ್ಯಕ್ತನಾಗಿರದ ಅಲ್ಪ ಸ್ವಲ್ಪ ವೇಳೆ ಸಾಹಿತ್ಯವೆಂದರೆ ಯಾವ ತರಹದ ತಿಂಡಿ, ಹೇಗಿರುತ್ತದೆ, ತಯಾರಿಸುವುದು ಹೇಗೆ, ರುಚಿ ಎಂತಹದು, ಎಂದು ಚೇಷ್ಟೆ ಮಾಡಿ ಚರ್ಚಿಸಿ " ನಿಮ್ಮ ಕಥೆ, ಕಾದಂಬರಿ, ಕವಿತೆ, ಇವೆಲ್ಲ ಕಕಾರದಿಂದಲೇ ಶುರುವಾಗಿ ಕಾರದ ಪದಾರ್ಥದಂತೇ ಇರುತ್ತವೆ. ಎಲ್ಲಿ ಹೋಗಲಿ ಸಂಗೀತವೇ

ಸಕಾರದಿಂದ ಸಿಹಿ—ನಂಗೆ ಪ್ರಿಯವಾದದ್ದು ಸುಬ್ರಮಣ್ಯ ಅಯ್ಯರ್ " ಎಂದು ತೀರ್ಮಾನ ಹೇಳುತ್ತಿದ್ದನು. ಸಾಹಿತಿಗಳೇನು ಸಾಮಾನ್ಯರೇ. ಇವನನ್ನು ತಮ್ಮ ವಿನೋದದ ಬಲಿಯನ್ನಾಗಿಸಿ ಆನಂದಿಸುತ್ತಿದ್ದರು. ಅವರು ಬಂದ ರಾತ್ರಿಯೇ ಅವನು ಕುಸುಮಳನ್ನು ಕೆಣಕಿ "ಆ ಕವಿವರ ಆಗಲೇ ನಿನ್ನ ಕಂಡು ಹುಚ್ಚನಾಗಿದಾನೆ " ಅಂದ. ಅವಳು " ಸಾಕು ಮಾವ, ಸುಮ್ಮನಿರು " ಎಂದು ನಕ್ಕಳು. " ಇಲ್ಲ ಕಣೆ. ಏನೋ ' ಎಂಥ ಕುಸುಮ, ಸೌಂದರ್ಯವಮುವು ' ಅಂತ ಪ್ರಾಸ ಕಟ್ಟುತ್ತಿದ್ದ ಬಚ್ಚಲಮನೇಲಿ " ಅಂದ. ಅವಳು ಮೂಗನ್ನು ಮುರಿದು ತುಟಿಯನ್ನೆಳೆದು " ಆ ಸುಂದರನ್ನ ಯಾರು ನೋಡಬಹುದು " ಅಂದು ಅಣಿಕಿಸಿದಳು. ಆಮೇಲೆ ನಂಜಪ್ಪ " ಕಾಮೇಶ್ವರಯ್ಯನಿಗೆ ನಿನ್ನ ಮೇಲೇ ಕಣ್ಣು ಕಣೆ ಗೊತ್ತೆ?" ಅಂದ. ಅವಳು ಹುಬ್ಬುಗಂಟಿಕ್ಕಿ " ಹೂಂ. ನನ್ನಂಥವರನ್ನೆಲ್ಲ ನೋಡ್ತಾರೇ ಕಣ್ಣೆತ್ತಿ, ಅವರು. ಸಾಕು " ಎಂದಳು. "ನಂಗೆ ಇಬ್ಬರು ಪ್ರತಿಸ್ಪರ್ಧಿಗಳು ಬಂದುಬಿಟ್ಟರಲ್ಲ. ಇವರು ಹಾಳಾಗ " ಅಂದ ನಂಜಪ್ಪ. " ಥೂ ಬಿಡು ಮಾವ. ನಿಂಗೆ ಎಷ್ಟಂದರೂ ನಾಚಿಕೆಯಿಲ್ಲ. ಇನ್ನು ಹೊಡೀತೀನಿ, ತಾಳು " ಎಂದು ಹುಸಿಮುನಿಸಿನಿಂದ ನಿಲ್ಲದೆ ಹೊರಟು ಹೋದಳು.

ಈ ಅತಿಥಿಗಳ ಸಂಭ್ರಮದಲ್ಲೆಲ್ಲ ಸಣ್ಣಮ್ಮ " ಹೊರಗಿನ ಗಂಡಸರು ಇದಾರೆ " ಎಂದು ಅಗತ್ಯಕ್ಕಲ್ಲದೆ ಕೋಣೆಯ ಹೊರಗೇ ಬರುತ್ತಿರಲಿಲ್ಲ.

ಸಾಹುಕಾರರ ಹಣ ಶಾಮಯ್ಯಂಗಾರಿಯ ರಕ್ತ ಇವುಗಳ ಸಂಯೋಗ ದಿಂದ ವಸಂತಸಾಹಿತ್ಯೋತ್ಸವ ಅತ್ಯಂತ ಯಶಸ್ವಿಯಾಗಿಯೇ ನಡೆಯಿತು. ತಳಿರು ತೋರಣ, ಬಣ್ಣ ಕಾಗದದ ತೂಗು ಹಾರಗಳು, ಪಠಗಳು, ಹೂಮಾಲೆ ಗಳು, ಗಂಧದ ಕಡ್ಡಿ ಮೊದಲಾದವುಗಳಿಂದ ಟೌನ್ ಹಾಲ್ ಶೋಭಾಯ-ಮಾನವಾಗಿತ್ತು. ಒಂದು ಕಡೆ ಎತ್ತರವಾದ ಜಗಲಿಯ ಮೇಲೆ ಏರ್ಪಡಿಸಿದ್ದ ನಾಟಕರಂಗದಲ್ಲಿ ಸೋಫಾಗಳ ಮೇಲೆ ಅಧ್ಯಕ್ಷರೂ ಅವರ ಎಡ ಪಕ್ಕದಲ್ಲಿ ಸ್ವಾಗತಾಧ್ಯಕ್ಷರೂ, ಬಲ ಪಕ್ಕದಲ್ಲಿ ಗೌರವ ಅತಿಥಿಗಳೂ, ಇದೇ ಸಾಲಿನಲ್ಲಿ ಮೆತ್ತೆಕುರ್ಚಿಗಳ ಮೇಲೆ ಕಾಮೇಶ್ವರಯ್ಯ ಮತ್ತು ಕವಿವರ ಬಾಡಪ್ಪನವರೂ ಕುಳಿತಿದ್ದರು. ಹಿಂದೆ ರಂಗಸ್ಥಳವನ್ನೆಲ್ಲ ತುಂಬಿ ಸ್ವಾಗತ ಸಮಿತಿ ಕುಳಿತಿದ್ದಿತು ಅವರೊಡನೆ ಕಾರ್ಯಕಾರಿ ಸಮಿತಿ ಮತ್ತು ಇನ್ನೂ 'ಅನೇಕಗಳ' ಸಮಿತಿಗಳು—

ಅಂದರೆ ಮಾಜಿ ಅಧಿಕಾರಿಗಳು- ಸೇರಿದ್ದುವು. ಸಂಗೀತಸಾಗರರು ತಮ್ಮ ಮಾಮೂಲಿನ ಕೇಶ, ಪಾಶ–ಅಂದರೆ ಕುತ್ತಿಗೆಯಿಂದ ಇಳಿಬಿದ್ದ ಶಲ್ಯ- ಸಮೇತ ವಾಗಿ ಯಾವಾಗ ಬೇಕಾದರೂ ಆರಂಭ ಆಗಲೆಂದು ಆಗಲೇ ಸಿದ್ಧವಾಗಿ ಸ್ಥಳೀಯ ತಾಳ ಮೇಳಗಳೊಡನೆ ರಂಗದ ಮುಂಭಾಗದ ಒಂದು ಕಡೆಯಲ್ಲಿ ಮಂಡಿಸಿ ನಸ್ಯ ಸೇದುತ್ತಿದ್ದರು. ಈ ರಂಗವನ್ನು ಇದಿರಿಸಿ ಮಹಿಳೆ ಮಹನೀ ಯರು ಕುರ್ಚಿಗಳ ಮೇಲೂ, ಸಾಮಾನ್ಯ ಜನರು ಜಮಖಾನದ ಮೇಲೂ ಕಿಕ್ಕಿರಿದು ಸಭೆಸೇರಿ ಎಲ್ಲಕ್ಕೂ ಸಿದ್ಧವಾಗಿದ್ದರು. ಒಂದೇ ವಾಕ್ಯದಲ್ಲಿ ಆ ವ್ಯಕ್ತಿ ಸಾಗರದ ಶೃಂಗಾರ, ವಯ್ಯಾರ, ವೇಷಭೂಷಣಗಳನ್ನು ಬಣ್ಣಿಸುವದಾದರೆ, ನೆರೆದಿದ್ದ ಗಂಡಸರು, ಹೆಂಗಸರು ಕಾಮರತಿಯರ ಸಂತತಿಯಾಗಿದ್ದರೆನ್ನ ಬಹುದು.

ಬಾಲಿಕೆಯರಿಂದ ಶಾಮಯ್ಯಂಗಾರಿ ರಚಿಸಿದ್ದ ಪ್ರಾರ್ಥನೆಯಾಗಿ, ಅವನೇ ಆ ಸಂದರ್ಭಕ್ಕಾಗಿಯೇ ರಚಿಸಿದ್ದ ಸ್ವಾಗತಗೀತೆಯನ್ನು ಹಾಡಿದ ಮೇಲೆ, ಅತಿಥಿಗಳು, ಅಧ್ಯಕ್ಷರುಗಳು ಇವರಿಗೇ ಅವರವರ ತೂಕಕ್ಕನುಗುಣವಾದ ಹಾರಸಮರ್ಪಣೆ ಸಭಿಕರ ಕರತಾಡನದ ಮಧ್ಯೆ ಆಯಿತು. ಅನಂತರ ಮತ್ತಷ್ಟು ಕರತಾಡನದ ಮಧ್ಯೆ ಉತ್ಸವದ ಅಧ್ಯಕ್ಷರು ಎದ್ದು, ಕಿವಿಯಿಂದ ಕಿವಿಯ ವರೆಗೂ ಹಿಗ್ಗುತ್ತ, ಸಾಹಿತ್ಯಜೀವನದ ಸಾರಸರ್ವಸ್ವವೆಂದು ಮೊದಲು ಮಾಡಿ, ಅದಕ್ಕೂ ಸ್ವಾತಂತ್ರ್ಯಕ್ಕೂ, ರಾಜಕೀಯಕ್ಕೂ, ಇರುವ ಸಿಕಟ- ಸಂಬಂಧವನ್ನು ಸೂಚಿಸಿ, ರಾಜಕೀಯದ ಮೇಲೆ ವಿಸ್ತಾರವಾಗಿ ಮಾತಾಡಿ ಒಂದೂ ಕಾಲು ಗಂಟೆಯ ಕಾಲ ಅಮೋಘವಾದ ಭಾಷಣವನ್ನು ಮಾಡಿ, ಇನ್ನು ಕಾಲುಗಂಟೆಯಲ್ಲಿ ಅತಿಥಿಗಳ ಪರಿಚಯ ಮಾಡಿಕೊಟ್ಟು, ಸಮಾರಂಭ ಯಶಸ್ವಿಯಾಗಿ ನೆರವೇರಲೆಂದು ಕೋರಿ ಆ ಭಗವಂತನಲ್ಲಿ ಪ್ರಾರ್ಥಿಸಿಕೊಂಡರು. ನಿಜ, ಇದು ಕಾರ್ಯಕ್ರಮದಲ್ಲಿರಲಿಲ್ಲ. ಆದರೆ ಸಾಹುಕಾರರು ಈ ವಿಶೇಷ ಭಾರವನ್ನೂ ವಹಿಸಿ ಸಮಾರಂಭದ ಗೌರವವನ್ನು ಇನ್ನೂ ಹೆಚ್ಚಿಸಿದರು. ಸಾಹುಕಾರರ ಭಾಷಣ ಮುಗಿಯುವ ವೇಳೆಗೆ ಸಭಿಕರಲ್ಲಿ ಅರ್ಧ ಮಂದಿ ತಮ್ಮ ತಮ್ಮ ಮುಖ್ಯ ಕೆಲಸಗಳನ್ನು ನೆನೆಸಿಕೊಂಡು ಕ್ಷಮೆಬೇಡುವಂತೆ ಬಗ್ಗಿಕೊಂಡು ಅವರಿವರ ಕಾಲುಗಳನ್ನು ತುಳಿಯುವುದನ್ನೂ ಕಾಣದೆ ಹೊರಟುಹೋಗಿ ದ್ದರು. ತಾಯಿಯರು ಮಕ್ಕಳ ಹಾವಳಿಯನ್ನೂ ಗೋಳನ್ನೂ ತಾಳಲಾರದೆ

ಬೈದುಕೊಂಡು ಸಭೆಯನ್ನು ಬಿಟ್ಟಿದ್ದರು. ಸದ್ಯ, ಇನ್ನು ಮುಂದಾದರೂ ಮಕ್ಕಳ ಕಾಟವಿರಲಿಲ್ಲ; ಎಲ್ಲ ಮಕ್ಕಳೂ ಮಾಯವಾಗಿದ್ದುವು.

ಹೀಗೆ ಅರೆವಾಸಿಯಾದ ಸಭೆಯಲ್ಲಿ, ಸ್ವಾಗತಾಧ್ಯಕ್ಷರು ತಮ್ಮ ಸ್ವಾಗತ ಪರಿಚಯಗಳ ಕಾರ್ಯವನ್ನು ಮಾನ್ಯ ಅಧ್ಯಕ್ಷರೇ ಮಾಡಿದುದರಿಂದ ತಮ್ಮ ಭಾರ ಕಡಿಮೆಯಾಯಿತೆಂದು ಹೇಳಿ, ಮರುಳೂರು ಹಿಂದಿನ ಶತಮಾನಗಳಲ್ಲಿ ಯಾವ ಯಾವ ರಾಜರ ಪಾಳೆಯಗಾರರ ಕೈ ಕೈ ಹೇಗೆ ಹೇಗೆ ಬದಲಾಯಿಸಿತು, ಸುತ್ತುಮುತ್ತ ಯಾವ ಯಾವ ಶಾಸನಗಳು ಸಿಕ್ಕುತ್ತವೆ, ಏನೇನು ಹೇಳುತ್ತವೆ, ಊರು ಉಳಿದದ್ದು ಹೇಗೆ, ಬೆಳೆದದ್ದು ಹೇಗೆ, ತಾವು ಅಲ್ಲಿಗೆ ಬಂದದ್ದು ಯಾವಾಗ, ಹಿಂದೆ ಇದ್ದ ಸ್ಥಳಗಳು, ಕೆಲಸ, ತಮ್ಮ ಮನೆತನದ ವಿಷಯ, ಇವೇ ಮುಂತಾಗಿ ಸ್ಥಳೀಯ ವಿದ್ಯಮಾನಗಳಷ್ಟನ್ನೇ ಮುಕ್ಕಾಲು ಗಂಟೆಯ ಹೊತ್ತಿನಲ್ಲಿ ಅಮೋಘ ಭಾಷಣದಲ್ಲೇ ತಿಳಿಸಿ ಕರತಾಡನಗಳ ಮಧ್ಯೆ ಮುಗಿಸಿದರು. ಇಷ್ಟು ಹೊತ್ತಿಗೆ ರಾತ್ರಿ ಊಟದ ಸಮಯವಾಗುತ್ತಿದ್ದು ಇನ್ನೊಂದು ಭಾಷಣ ಮೊದಲಾದರೆ ಅವಕಾಶ ಸಿಕ್ಕಲಾರದೆಂದು ಹಸಿವು ನಿದ್ರೆಗಳ ವಶರಾಗತಕ್ಕವರೆಲ್ಲ ಅವಸರದಿಂದ ಜಾರಿಕೊಂಡರು. ಒಂದೂಟದ, ನಿದ್ದೆ ಬಾರದ ಮುದುಕರು, ಅಮಲ್ದಾರರ ನೌಕರರು, ಸಾಹುಕಾರರ ಸ್ನೇಹಿತರು, ಸೇವಕರು, ಸ್ವಾಗತ ಸಮಿತಿ, ಇಷ್ಟೇ ಉಳಿದರು.

ಗೌರವದ ಅತಿಥಿಗಳು ಇವರಿಗೇ ತಮ್ಮ ಭಾಷಣವನ್ನು ಒರೆದರು. ಮಾನ್ಯ ಅಧ್ಯಕ್ಷರೇ ಸಾಹಿತ್ಯವಿಚಾರವಾಗಿಯೂ ಅಮೋಘ ಭಾಷಣ ಮಾಡಿದ್ದುದರಿಂದ ತಮ್ಮ ಕೆಲಸ ಬಹಳ ಸುಲಭವಾಯಿತೆಂದು ಮೊದಲು ಮಾಡಿ, ವಸಂತಸಾಹಿತ್ಯೋತ್ಸವವೆಂದರೇನು, ಅದು ಮೊದಲಾದ ರೀತಿ, ನಡೆಯುತ್ತಿರುವ ರೀತಿ, ಅದು ನಡೆಯುತ್ತಿರುವ ಪ್ರದೇಶಗಳು, ತಮಗೆ ವರ್ಷವರ್ಷವೂ ಬರುವ ಕರೆಯೋಲೆಗಳು, ಉತ್ಸವದಿಂದಾಗತಕ್ಕ ಪ್ರಯೋಜನಗಳು, ಜನರು ಉತ್ಸವವನ್ನು ಏಕೆ ಮಾಡಬೇಕು, ಸಾಹಿತ್ಯವನ್ನು ಏಕೆ ಓದಬೇಕು, ಪುಸ್ತಕಗಳನ್ನು ಏಕೆ ಕೊಳ್ಳಬೇಕು, ಕರ್ಣಾಟಕ ಸಂಘಗಳ ಅವಶ್ಯಕತೆ, ಹುಟ್ಟು, ಬೆಳವಣಿಗೆ, ಅವುಗಳ ವ್ಯವಹಾರಕ್ರಮ, ಇವೇ ಮೊದಲಾದಷ್ಟು ಅಂಶಗಳನ್ನೇ ತಿಳಿಸಿ, ಒಂದು ಗಂಟೆಯ ಕಾಲ ನಿಶ್ಶಬ್ದವಾದ ಸಭಾಮಂದಿರದಲ್ಲಿ ಅತ್ಯಮೋಘ ಭಾಷಣವನ್ನು ಮಾಡಿ, ಕಳೆದುಳಿದ ಸಭಿಕರ ಮೇಲೆ ಸಮ್ಮೋಹನಾಸ್ತ್ರವನ್ನೆಸೆದಿದ್ದರು.

ಆಗಲೇ ಒಂಬತ್ತು ಗಂಟೆಯ ಸಮಯವಾಗಿದ್ದು, ಅಧ್ಯಕ್ಷರು ಬಹಳ ಹೊತ್ತಾಯಿತೆಂದೂ, ತಮ್ಮ ಮುಕ್ತಾಯ ಭಾಷಣ ಬೇರೆ ಇದ್ದಿತೆಂದೂ, ಅಂದಿಗೆ ಅಷ್ಟೇ ಕಾರ್ಯಕ್ರಮ ಸಾಕೆಂದೂ ಸೂಚಿಸಿದರು. ಆದರೆ ಕಾರ್ಯದರ್ಶಿ ನಾಳಿನ ನಾಟಕ, ವಿವಿಧವಿನೋದಾವಳಿ, ಫ್ಯಾನ್ಸಿಡ್ರೆಸ್, ಕಾವ್ಯವಾಚನ, ಮಾತುಗಾರಿಕೆ, ಹಾಡುಗಾರಿಕೆ, ಕತೆಗಳ ಓದು ಈ ಸ್ಪರ್ಧೆಗಳನ್ನೂ, ಬಹುಮಾನ ವಿನಿಯೋಗ, ವಂದನಾರ್ಪಣೆ ಇತ್ಯಾದಿ ಇತ್ಯಾದಿಗಳನ್ನೂ ವಿವರಿಸಿ, ಅಂದೇ ಭಾಷಣಗಳಾದರೂ ಮುಗಿದುಹೋಗಬೇಕೆಂದು ಅಂಗಲಾಚಿಕೊಂಡದ್ದರ ಮೇಲೆ, ಕಾರ್ಯಕ್ರಮದಂತೆ ಕಾಮೇಶ್ವರಯ್ಯನವರು ಭಾರತ ಚಿತ್ರಕಲೆಯ ವಿಷಯವಾಗಿ ಅಜಂತ ಎಲ್ಲೋರ, ರಜಪೂತ, ಮೊಗಲ ಮುಂತಾಗಿ ಅನೇಕ ರೀತಿಗಳನ್ನು ಬಣ್ಣಿಸಿ, ನಂದಲಾಲ ಬೋಸ್, ಟಾಗೋರ್, ರವಿವರ್ಮ, ವೆಂಕಟಪ್ಪ, ಇತ್ತೀಚಿನ ಹೆಬ್ಬಾರ್ ವರೆಗೂ ಭಾರತ ಚಿತ್ರಕಲೆಯನ್ನು ವಿಮರ್ಶಿಸಿದರು. ಮೈಕೇಲ್ ಎಂಜೆಲೋವಿನಿಂದ ವಾನ್‌ಷೇವಿನ ವರೆಗಿನ ಪಾಶ್ಚಾತ್ಯ ಚಿತ್ರಕಲೆಯೊಡನೆ ಹೋಲಿಸಿದರು. ಅವರ ಸಂಸ್ಕೃತ ವಾಗ್‌ವೈಖರಿ, ಬಣ್ಣ, ಗೆರೆ ಮಿಂಚು, ದಪ್ಪವೆಂಬ ಕಲಾಶಾಸ್ತ್ರಜ್ಞಾನ, ಹಾವಭಾವಗಳು, ಮೇಲಿಳಿತದ ಧ್ವನಿ ಇವೆಲ್ಲ ಸಭಿಕರಲ್ಲಿ ಮಲಗಿದ್ದವರನ್ನೂ ಎಚ್ಚರಿಸಿ ಮುಗ್ಧರನ್ನಾಗಿ ಮಾಡಿದುವು. ಕುಸುಮಳಂತೂ ಎವೆಯಿಕ್ಕದೆ, ಬಾಯಿ ಅರೆತೆರೆದೇ, ತನ್ನ 'ಹೀರೋ' ವನ್ನು ನೋಡುತ್ತ, ಮಾತನ್ನು ಹೀರುತ್ತಿದ್ದಳು. ಇವರು ಹನ್ನೊಂದು ಗಂಟೆಗೆ ತಮ್ಮ ಅಮೋಘ ಭಾಷಣವನ್ನು ಮುಗಿಸಿದಾಗ ಸಭಿಕರು ಕರತಾಡನ ಮಾಡುವುದನ್ನು ಕೂಡ ಮರೆತರು.

ಇದುವರೆವಿಗೂ ಹೇಗೆ ಹೇಗೋ ತಾಳ್ಮೆಯಿಂದ ಕುಳಿತಿದ್ದ ಸಂಗೀತ ಸಾಗರರು ಈಗ ಹೇಳದೆಯೇ ಕೇಳದೆಯೇ ' ಕ್ಷೀರಸಾಗರ ಶಯನ ' ಎಂದು ಮೊದಲು ಮಾಡಿಯೇ ಬಿಟ್ಟರು. ಇದರಿಂದ ಸ್ವಾಗತ ಸಮಿತಿಯಲ್ಲೂ ಅನೇಕರು ಶಯನದ ಆಕರ್ಷಣೆಯನ್ನು ತಾಳಲಾರದೆ ನುಸುಳಿಕೊಂಡು ಕಾಲು ಕಿತ್ತರು. ಇನ್ನೇನು, ಅಧ್ಯಕ್ಷರು ನಸುನಗುತ್ತ, ಕೈಯಾಡಿಸುತ್ತ ಹಿರಿಯ ಸಾಹಿತಿಗಳೊಂದಿಗೆ ಮಾತು ಮೊದಲು ಮಾಡಿದರು. ಸ್ವಾಗತಸಮಿತಿಯವರು ಅಧ್ಯಕ್ಷರ ಮೇಲ್ಪಂಗ್ತಿಯನ್ನನುಸರಿಸಿದರು. ಇವರನ್ನು ಸಭೆ ನಕಲು ಮಾಡಿತು. ಕಾರ್ಯದರ್ಶಿ ಶ್ಯಾಮಯ್ಯಂಗಾರಿಯಂತು ಮುಖ್ಯರಾದವರೆಲ್ಲರ ಬಳಿಗೂ

ಹೋಗಿ ಹೋಗಿ, ಮತ್ತೆ ಮತ್ತೆ ಕಿವಿಯಲ್ಲಿ ಪಿಸಿಗುಟ್ಟಿದ್ದೂ ಪಿಸಿಗುಟ್ಟಿದ್ದೇ; ಜನರು ಇದನ್ನು ನೋಡುತ್ತಿರುವರೇ ಎಂದು ಓರೆಗಣ್ಣಿನಿಂದ ನೋಡಿದ್ದೂ ನೋಡಿದ್ದೆ. ಸಾಗರರು 'ಮಡಿ' ಸಂಗೀತ ಮುಗಿಸಿ, 'ಮೈಲಿಗೆ'ಗೆ ಹೋಗಿ, ಸಿನೇಮಾ ಹಾಡುಗಳನ್ನೂ ಅತಿ ಆತುರದಿಂದ ಮುಗಿಸುವ ಹೊತ್ತಿಗೆ, ಮಧ್ಯ ರಾತ್ರಿಯಾಗಿತ್ತು, ಅವರ ಕೇಶ ಒಂದು ಡಜ಼ ಸಾರಿ ಬಿಚ್ಚಿ ಹುಚ್ಚಾಗಿತ್ತು. ಅವರಿಗೂ–ತಬಲದವನಿಗೂ ಹದಿನಾರು ಬಾರಿ ಢಕ್ಕಾಢಿಕ್ಕಿಯಾಗಿತ್ತು. ಹೀಗಿದ್ದರೂ ಯಾರೋ ಹುಚ್ಚರು ' ಕಾಂಬೋದಿ ' ಅಂದರು. ಇನ್ನೊಬ್ಬರು 'ಬಿಲಹರಿ', ಸಾಹುಕಾರರು ' ಸಹನ ' ಎಂದರು. ಅಯ್ಯರು ಮತ್ತೆ ಸುರು ಮಾಡಿದರು. ಕಾರ್ಯದರ್ಶಿಯು ಭಗೀರಥ ಯತ್ನಮಾಡಿ ಪ್ರೇರಣೆ ಪ್ರಾರ್ಥನೆಗಳಿಂದ ಒಂದು ಕೀರ್ತನೆಯಿಂದಲೇ ಅವರ ಬಾಯಿ ಮುಚ್ಚಿಸಿ ಎಲ್ಲರಿಂದಲೂ ದಕ್ಷನೆನಿಸಿಕೊಂಡ. ಈಗ ಇದ್ದ ಹಿಂದುಮುಂದಿನ ಜನರೆಲ್ಲ ಮುಕ್ತಾಯ ಭಾಷಣವನ್ನೂ ಬಿಟ್ಟು ಹೊರಗೋಡಿಬಿಟ್ಟಿದ್ದರು. ಸಾಹುಕಾರರು "ನಮ್ಮ ಜನಕ್ಕೆ ಸಂಸ್ಕೃತಿ ಅನ್ನೋದು ಎಳ್ಳಷ್ಟಿಲ್ಲ ನೋಡಿ. ಇಂಥ ಸಭೆ ದಿನದಿನವೂ ಆಗುತ್ತೇ ? ತಾಳ್ಮೆಯಿಂದ ಕೂತಿರೋದಕ್ಕೆ ಏನು ಬಂದಿದೆ ಹೊತ್ತು ಕಾಲ, ಇವರಿಗೆ ? ಆಗಲೇ ಹಾಳಾಗಿ ಹೋದರಲ್ಲ. ಅತಿಥಿಗಳು ಅಂತ ಕೂಡ ಗೌರವ ತೋರಿಸೋದಿಲ್ಲ. ನಾಚಿಕೆಗೇಡು, ಊರಿಗೇ ಶುದ್ಧ ಅವಮಾನ!" ಎಂದು ಮನಸ್ಸಿಗೆ ಬಂದಂತೆ ಬೈದರು. ಹಿರಿಯ ಸಾಹಿತಿಗಳು "ಇಲ್ಲೇ ಅಲ್ಲ ಸಾಹುಕಾರರೆ. ಎಲ್ಲ ಕಡೆಯೂ ಹೀಗೇ. ನಾನು ಹೋಗಿ ಹೋಗಿ ನೋಡುತ್ತಾ ಇರುತ್ತೇನಲ್ಲ. ಜನದ ನಾಗರೀಕತೆ ಮಟ್ಟವೇ ಇಳಿಯುತ್ತಿದೆ. ಅವರಿಗೆ ಕಲೆ, ಸಂಸ್ಕೃತಿ, ಯಾವುದೂ ಬೇಡ. ಉಣ್ಣುವುದು, ಉಡುವುದು, ಸಿನೇಮಾ, ರೇಡಿಯೋ, ಹೋಟಲು, ಇತ್ಯಾದಿ ಸುಖಲಾಲಸೆ ಇವು ಮಾತ್ರ ಬೇಕು. ಏನು ಮಾಡೋಣ. ಈಗ ಬದುಕಿದ್ದು ಈ ದುಸ್ಥಿತಿಯನ್ನೆಲ್ಲ ನೋಡುತ್ತಿರುವುದು ನಮ್ಮ ನಿಮ್ಮ ದುರದೃಷ್ಟ. " ಅಂದರು.

ಅಂತೂ ಅಧ್ಯಕ್ಷರು " ನನ್ನ ಮುಕ್ತಾಯ ಭಾಷಣ ನಾಳೆಗೇ ಇರಲಿ. ಒಟ್ಟಿಗೆ ಎರಡನ್ನೂ ಮಾಡಿದರಾಯ್ತು. ಜನ, ಪಾಪ, ದಣಿದಿದಾರೆ" ಎಂದು ಆತ್ಮಬಲಿಯ ಔದಾರ್ಯದಿಂದ ಹೇಳಿಬಿಟ್ಟರು. ಶಾಮಯ್ಯಂಗಾರಿಯಿಂದ ರಚಿತವಾದ ಮಂಗಳದೊಡನೆ ಸಭೆ ಮುಕ್ತಾಯಗೊಂಡಿತು. ದಾಕ್ಷಿಣ್ಯಕೆ

ಕಟ್ಟಿಬಿದ್ದು ಇನ್ನೂ ಇದ್ದ ಸಭಿಕರು ಶಾಲೆ ಹುಡುಗರಂತೆ ಹೊರಗೆ ಓಡಿ ಬಂದರು. ಕವಿವರರ ಕಾವ್ಯವಾಚನ ತಾನಾಗಿ ಮುಂದೆ ಹೋಯಿತು.

ಈ ಸಮಾರಂಭಕ್ಕೆ ಬರದಿದ್ದವನೆಂದರೆ ಗುರು ಒಬ್ಬನೇ. ತನಗೆ ತಲೆಯ ನೋವೆಂದು ಮನೆಯಲ್ಲೇ ಇದ್ದುಬಿಟ್ಟಿದ್ದ. ಶಾಮಯ್ಯಂಗಾರಿ ಮತ್ತು ಸ್ನೇಹಿತರು ಇದಕ್ಕಾಗಿ ಬಹಳ ವ್ಯಥೆಪಟ್ಟರು. ಅಯ್ಯಂಗಾರಿ "ಅವರಿಗೆ ನಿಜವಾಗಿ ತಲೆನೋವು ಇದೆಯೋ ಇಲ್ಲವೋ ಕಾಣೆ. ಅವತ್ತು, ನಾನು ಸಾಹುಕಾರರ ಹತ್ತಿರ ಹೋಗಿದ್ದ ದಿನದ ವರಗೂ ಅಷ್ಟು ಒದ್ದಾಡುತ್ತಿದ್ದ— ಇದಕ್ಕಾಗಿ. ಅಂದಿನಿಂದ ಏನಾಯ್ತೊ. ಇತ್ತ ತಲೇನೇ ಹಾಕಲಿಲ್ಲ. ಏನು ಹೇಳೋದು ?" ಅಂದ. ಚಂದ್ರಶೇಖರ "ನಾಳೆ ನಾಟಕಕ್ಕಾದರೂ ಹಿಡಿದು ಕೊಂಡೇ ಬರಬೇಕು" ಎಂದು ತೀರ್ಮಾನಿಸಿದ.

ಹಿಂದಿರುಗುವಾಗ ನಂಜಪ್ಪ ಎಲ್ಲೂ ಕಾಣಿಸಲೇ ಇಲ್ಲ. ಕಾರ್ಯದರ್ಶಿಗಳು ಅಲ್ಲಿಲ್ಲಿ ಹುಡುಕಿದಾಗ ಸಭಾಂಗಣದ ಮೂಲೆಯೊಂದರಲ್ಲಿ ಅವನು ಹಾಯಾಗಿ ಗೊರಕೆ ಹೊಡೆಯುತ್ತಿದ್ದುದು ಕೇಳಿ ಪತ್ತೆಯಾದನು. ಅವನನ್ನು ತಂದು ಕಾರಿಗೆ ತುಂಬುವುದು ವಿಶ್ವಪ್ರಯತ್ನವಾಯಿತು–ಇಬ್ಬರು ಮೂವರು ಜನರಿಗೆ.

ಕಾರು ಹೊರಡುವುದಕ್ಕೆ ಕೊಂಚ ಮುಂಚೆ ಮುನಿಸಿಪಲ್ ಅಧ್ಯಕ್ಷ ಭೋಗಪ್ಪ ಧಾವಿಸುತ್ತ ಬಂದು "ಸಾಹುಕಾರರೆ, ತಮ್ಮ ಇಂದಿನ ಭಾಷಣ ವಂತೂ ಹಿಂದಿನ ಎಲ್ಲಾ ಭಾಷಣಗಳನ್ನೂ ಮೀರಿಸಿತ್ತು. ಅದೇನು ವಾಗ್ಝರಿ, ತಮ್ಮದು! ಆಶ್ಚರ್ಯ, ಆಶ್ಚರ್ಯ! ತಾವು ಯಾವ ವಿಷಯದ ಮೇಲೂ ಹೀಗೇ ಮಾತಾಡಬಲ್ಲಿರಲಿಲ್ಲ! ಬಹಳ ಚೆನ್ನಾಗಿತ್ತು. ನಿಶ್ಚಯವಾಗಿಯೂ ದೊಡ್ಡ ಟ್ರೀಟ್ ಆಗಿತ್ತು. ಸಭೆಯಲ್ಲೇ ನನ್ನ ಅಭಿಪ್ರಾಯ ಹೇಳಿಬಿಡಬೇಕು ಅಂತ ತವಕವಾಗಿತ್ತು ನಂಗೆ. ಆದರೆ ಬಹಳ ಹೊತ್ತಾಗಿ ಹೋಯ್ತು—ಹಾಳು...." ಎಂದು ಹೇಳಿ, ಸಾಹಿತಿಗಳು, ಅಯ್ಯನವರು ಇವರ ಕಡೆಗೂ ತಿರಿಗಿ "ತಮ್ಮ ಭಾಷಣಗಳೂ ಅಮೋಘವಾಗಿಯೇ ಇದ್ದುವು. ನಮಗೆಲ್ಲ ಬಹಳ ರುಚಿಸಿತು" ಎಂದು ಹೊರಡಲು ತಿರಿಗಿ, ಮತ್ತೆ ನೆನೆಸಿಕೊಂಡು ಸಾಹುಕಾರರ ಹತ್ತಿರ ಬಾಯಿಹಾಕಿ ಪಿಸಿಮಾತಿನಲ್ಲಿ. "ಆದರ ವಿಷಯ ನೆನಪು ಕೊಡೋದು ಮರೆ ತಿದ್ದೆ—ತಮಗೆ ಗೊತ್ತೇ ಗೊತ್ತಲ್ಲ. ಚುನಾವಣೆ. ಹ್ಹ! ಹ್ಹ!" ಎಂದು ಹಲ್ಲು ಕಿರಿದ.

"ಆಗಲಿ ನೆನಪಿದೆ. ಆ ಮಂಡಿಯೋನ ಮಂಡಿ ಮುರೀದೆ ಯಾಕೆ ಹ್ಹ ಹ್ಹ ಹಾ!" ಸಾಹುಕಾರರು ತಮ್ಮ ಮಾತಿಗಾಗಿ ತಾವೇ ನಕ್ಕರು. ಕಾರಿನಲ್ಲಿ ಸಾಹುಕಾರರು ಹಿರಿಯರನ್ನು ತಿವಿದು "ಎಲ್ಲ ಚೆನ್ನಾಗಿ ನಡೀತೆ?" ಎಂದು ಕೇಳಿದರು.

"ಓಹೋ, ತಮ್ಮ ಅಧ್ಯಕ್ಷತೆಯಲ್ಲಿ ಅಂದ ಮೇಲೆ, ಇನ್ನು ಹೇಗಿದ್ದೀತು?" ಹಿರಿಯ ಸಾಹಿತಿಗಳು ತಲೆಯಾಡಿಸಿ "ಏನೂ ಇಲ್ಲ ನನ್ನನ್ನು ಸೋಮನಾಥ ಶಾಸ್ತ್ರಿ ಅಂತ ಪರಿಚಯ ಮಾಡಿಕೊಟ್ಟಿರಿ, ಅಷ್ಟೆ. 'ಸೋಮನಾಥ' ನನ್ನ ಲೇಖನಿ ಹೆಸರು. ಮತ್ತೆ 'ಮಂಗಳಾರತಿ', 'ಮುಖಪ್ರಕ್ಷಾಳನೆ' ಪುಸ್ತಕಗಳು ನನ್ನವಲ್ಲ. ನನ್ನ ಮಿತ್ರ ಶಾಮಣ್ಣಂದು."

"ಹಾಗೆ? ನೋಡಿ, ನಾಲಿಗೆ ತಪ್ಪು ಹೇಗಾಗುತ್ತೆ. ತಮ್ಮ ಭಾಷಣ ಅಮೋಘವಾಗಿತ್ತು."

"ಧನ್ಯವಾದಗಳು. ತಮ್ಮ ಅಭಿಮಾನ. ತಮ್ಮದೂ ಅಮೋಘವಾಗೇ ಇತ್ತು."

"ಧನ್ಯವಾದಗಳು. ಶ್ರೀ. ಅಯ್ಯರರೆ, ತಮ್ಮ 'ಸಹನ' ತುಂಬ ಹಿತ ವಾಗಿತ್ತು. ಏನು ಸ್ವರ ಹಾಕಿದಿರಿ ಬಿಡಿ!"

"ಇಲ್ಲ ಸಾಹುಕಾರರೆ. ಕಾಂಭೋದಿ ಅಂತ ಯಾರೋ ಮೊದಲು ಕೇಳಿದರಲ್ಲ ಅಂತ ಅದನ್ನೇ ಮೊದಲು ಮಾಡಿದೆ. ಶಾಹನ ಹೇಳಬೇಕು ಅನ್ನೋದರಲ್ಲೇ ಹೊತ್ತಾಯ್ತು."

"ಓ!" ಸಾಹುಕಾರರು ಪೆಚ್ಚಾದರು.

"ಸಾಹುಕಾರರು ಹೀಗೆ ಚುಚ್ಚು ಮಾತಾಡುತ್ತಾರೆ ಆಮೇಲೆ ಅಂತ ನಂಗೆ ಗೊತ್ತಿತ್ತು."

"ಹ್ಹ! ಹ್ಹ! ಹಾ!" ಸಾಹುಕಾರರು ಜಾರಿಕೊಂಡರು. "ಕಾಮೇಶ್ವರಯ್ಯನೋರೆ, ತಮ್ಮ ಚಿತ್ರಗಳು ಎರಡನ್ನು ಕಳಿಸಿ. ನಮ್ಮ ಮಹಲಿನ ವರಾಂಡದ ಗೋಡೆ ಈಗ ಭಿಂ ಅನ್ನುತ್ತಿದೆ. ಅದರ ಕರ್ಚೆನಾಗುತ್ತೋ ಕೊಡುತ್ತೀನಿ."

"ಆಗಲಿ ಬರೆದಾಗ." ಕಾಮೇಶ್ವರಯ್ಯನವರು ತಿಳಿಸಿದರು. ಆದರೆ ಕುಸುಮ ಗೊಳ್ಳೆಂದು ನಕ್ಕೇಬಿಟ್ಟಳು.

"ಅಪ್ಪ, ಅವರು ಚಿತ್ರಕಲೆಯ ಉತ್ತಮ ವಿಮರ್ಶಕರು,ಚಿತ್ರಗಾರರಲ್ಲ."

" ಓಹೊ, ಹಾಗೇ ? ನೀವು ಬಣ್ಣಿಸಿ ಟೀಕಿಸಿದ ತರಹದಲ್ಲಿ ತಾವು ಇನ್ನೂ ಉತ್ತಮ ಚಿತ್ರಗಳನ್ನೇ ಬರೀತೀರಿ ಅಂತಿದ್ದೆ. ಹ್ಹ! ಹಾ! "

" ನನ್ನ ಶಕ್ತಿ ವಿಮರ್ಶೆಗೇ ಸರಿ " ಕಾಮೇಶ್ವರಯ್ಯನವರು ತಮ್ಮನ್ನೇ ವಿನೋದ ಮಾಡಿಕೊಂಡು ನಕ್ಕರು.

ಎರಡನೆಯ ದಿನದ ಕಾರ್ಯಕಲಾಪಗಳು, ಅಧ್ಯಕ್ಷರ ಆರಂಭ ಭಾಷಣ ಮುಕ್ತಾಯ ಭಾಷಣಗಳ ಮಧ್ಯೆ, ಕಣಿಕದ ಮಧ್ಯದ ಹೂರಣದಂತೆ,ದಡಾಕಿಯ ಮಧ್ಯದ ಪಟಾಕಿ ಚಟಾಕಿ ಚಿನಕುರುಳಿಗಳಂತೆ, ಸಾಂಗವಾಗಿ ನೆರವೇರಿದುವು. ವಿವಿಧ ವಿನೋದಾವಳಿಯ ದೆಸೆಯಿಂದ ಈ ದಿನ ಸಭೆಯಲ್ಲಿ ಮುಖ್ಯವಾಗಿ ಹೆಂಗಸರು ಮಕ್ಕಳೇ ತುಂಬಿದ್ದರು. ವಿನೋದಾವಳಿಯಾದ ಕಾರಣ ಕಂಡು ಕೇಳಿದ್ದುದಕ್ಕೆಲ್ಲ ನಗಲೇಬೇಕೆಂದು ಸಭೆಯು ಶಪಥ ಮಾಡಿಕೊಂಡಿತ್ತು. ತೆರೆ ಮೇಲಿದ್ದ ಗಳಿಗೆಯಿಂದ ಕಿರಿದ ಹಕ್ಕಿನ ನಗೆಯ ಜತೆಗೆ ಸ್ಪೈಪೋಟಿ ನಡೆಸುತ್ತಿದ್ದ ಬೇರೊಂದೆಂದರೆ ಎಳೆಯ ಮಕ್ಕಳ ಅಳುವೇ. ವಿನೋದಾವಳಿಯು ಮುಗಿದೊಡನೆ ಕವಿವರರಿಗೆ ಕರೆ ಬಂದಿತು. ಅವರು ಬಂದು ಮುಂದೆ ನಿಂತೊಡನೆಯೇ ಚಪ್ಪಾಳೆಯ ಮಳೆ ಮೂಮೂಲಿನಂತೆ ಬಿತ್ತು. ಅಧ್ಯಕ್ಷರು 'ಮೈಕ್'ನಲ್ಲಿ ಏನು ಹೇಳಿದರೋ ಯಾರಿಗೂ ಗೊತ್ತಾಗಲಿಲ್ಲ. ಕವಿವರರು ಅಡ್ಡಗಾಲು ಹಾಕಿ ನಿಂತು, ಮುಖವೆತ್ತಿ, ಕಣ್ಣನ್ನು ಅರ್ಧ ಮುಚ್ಚಿ, ಬಲಗೈ ನೀಡಿ, ಬೆರಳಿನಲ್ಲಿ ಉಂಗುರ ಮಾಡಿ, 'ಮಹಾತ್ಮರ ಮರಣ'ವೆಂಬ ಚರಮಗೀತೆಯನ್ನು ಬಹಳ ಭಾವಪೂರಿತವಾಗಿ ಹೇಳಲು ಮೊದಲು ಮಾಡಿದೊಡನೆಯೇ ಪ್ರತಿ ಮಾತಿಗೂ ತಿಳಿದೋ ತಿಳಿಯದೆಯೋ ನಗಲು ಸಿದ್ಧವಾಗಿದ್ದ ಸಭೆ 'ಹೋ' ಎಂದು [illegible] ಮೊದಲು ಮಾಡಿತು. ಕವಿವರರು ಎಲ್ಲರಿಗೂ ಅದು ಏನೆಂದು [illegible]ದು ಕಂಠವನ್ನೇರಿಸಿ ಕೂಗಿದರು. ಇದರಿಂದ ಸಭೆಯ ನಗೆ ಕೂಗೂ [illegible]ಮ್ಮಡಿಯಾಯಿತೆ ಹೊರತು ಪ್ರಯೋಜನವಾಗಲಿಲ್ಲ. ಕವಿವರರೂ ಸಭೆಯೂ ಸ್ವಲ್ಪ ಕಾಲ ಪೈಪೋಟಿ ನಡೆಸಿದ ಮೇಲೆ ಕವಿವರರು ಸೋಲುತ್ತ ಬಂದರು. ಮಹಾತ್ಮರಿಗೆ ತಗಲಿದ ಗುಂಡಿನೇಟಿನ ವರೆಗೆ ಬಂದಾಗ ಕವಿವರರ ಎದೆಗುಂಡಿಗೆ ಬಿಚ್ಚಿಹೋಯಿತು. ಕೋಲಾಹಲದಲ್ಲಿ ಗುಂಡಿನೇಟೂ ಕೇಳಿಸಲಿಲ್ಲ, ಅವರ ಕಂಠ ಮಾತ್ರ ಕುಗ್ಗಿಹೋಗಿತ್ತು. ಕರತಾಡನ 'ಒನ್ಸ್‌ಮೋರ್' ಕೂಗು

ನಗೆಗಳ ಮಧ್ಯೆ ಅವರು ಸುಮ್ಮನೆ ಕುಸಿದು ಕುಳಿತು ಬೆವರನ್ನೊರಸಿ ಕೊಂಡರು. 'ಸ್ವಾತಂತ್ರ್ಯ ಘೋಷ' ಎಂಬ ಇನ್ನೊಂದು ಕವಿತೆಯ ಘೋಷ ಣೆಗೆ ಧೈರ್ಯವಾಗಲಿಲ್ಲ, ಕಂಠವೂ ಇರಲಿಲ್ಲ. ಇನ್ನು ಎಂದೆಂದೂ ಕಾವ್ಯವಾಚನ ಮಾಡುವುದಿಲ್ಲವೆಂದು ಆ ಗಳಿಗೆಯಲ್ಲಿ ಶಪಥ ಮಾಡಿಬಿಟ್ಟರು. ಇಂಥ ಲವ ಲವಿಕೆ ಇರುವಾಗ ಜನರು ಮುಕ್ತಾಯ ಭಾಷಣಕ್ಕೂ ಇದ್ದೇ ಇರುವರೆಂದು ಅಧ್ಯಕ್ಷರಿಗೆ ಆನಂದವಾಯಿತು. ಅಲ್ಲದೆ ಇದಕ್ಕಾಗಿಯೇ ಬುದ್ಧಿವಂತಿಕೆಯಿಂದ ಕಟ್ಟಕಡೆಯ ಅಂಗವಾಗಿ ಕೈಲಾಸಂರವರ "ಬಂಡ್ವಾಳವಿಲ್ಲದ ಬಡಾಯಿ' ನಾಟಕವನ್ನಿಟ್ಟಿದ್ದುದೂ ಅವರಿಗೆ ಧೈರ್ಯ ತಂದಿತ್ತು.

ಸ್ಪರ್ಧೆ ಬಹುಮಾನಗಳ ಹಂಚಿಕೆ ಅಧ್ಯಕ್ಷರ ಅಮೃತ ಹಸ್ತದಿಂದಲೇ ನಡೆಯಿತು. ಮುಕ್ತಾಯ ಭಾಷಣಕ್ಕೆ ಮುಂಚೆ ಮುಂದಿನ ವರ್ಷದ ಚುನಾ ವಣೆಯೂ ನಡೆದು, ಸಾಹುಕಾರರು ಅಧ್ಯಕ್ಷರಾಗಿಯೂ, ಶಾಮಯ್ಯಂಗಾರಿ ಗೌರವ ಕಾರ್ಯದರ್ಶಿಯಾಗಿಯೂ, ಸರ್ವಾನುಮತದಿಂದ ಚುನಾಯಿತ ರಾದರು. ಕಾರ್ಯಕಾರಿ ಸಮಿತಿ, ಶಾಮಯ್ಯಂಗಾರಿಯ ಪಟ್ಟಿಯಂತೆ ಒಟ್ಟಾ ಗಿಯೇ—Collective responsibility, ಒಟ್ಟು ಜವಾಬ್ದಾರಿಗೆ ಸರಿಯಾಗಿ— ಅಂಗೀಕೃತವಾಗಿ ಹೋಯಿತು. ಅವರಲ್ಲಿ ಅನೇಕರು 'ನಾವು ನಮ್ಮ ಹೆಸ ರನ್ನು ಹಿಂದಕ್ಕೆ ತೆಗೆದುಕೊಳ್ಳುತ್ತೀವಿ. ನಮಗೆ ಬೇಡ. ರಾಜೀನಾಮೆ ಕೊಡುತ್ತೀವಿ" ಎಂದರೂ ಅವರನ್ನು ಯಾರೂ ಕೇಳಲೇ ಇಲ್ಲ. 'ನಾಟಕ, ನಾಟಕ' ಎಂದು ಕೂಗಿಕೊಂಡರು, ಅಷ್ಟೆ. ಅಧ್ಯಕ್ಷರು "ಚುನಾವಣೆಯಾಗಿ ಹೋಯ್ತು. ವಾಪಸಿನ ವಿಚಾರ ಮತ್ತೆ ತರುವಂತಿಲ್ಲ" ಎಂದು ಅಪ್ಪಣೆ ಕೊಡಿ ಸಿದರು. ಬಡ ಸಮಿತಿಯವರು "ಪ್ರೊಟೆಸ್ಟ್ ಮಾಡುತ್ತೀವಿ. ಪಾಯಿಂಟ್ ಆಫ್ ಆರ್ಡರ್" ಎಂದು ಒದ್ದಾಡಿ ಕಂಠಶೋಷಣೆ ಮಾಡಿಕೊಂಡರಾದರೂ ಅಧ್ಯಕ್ಷರು "ಪಾಯಿಂಟ್ ಆಫ್ ಆರ್ಡರ್ ಏನೂ ಇಲ್ಲ. ನಾನೂ ಎಂ.ಎಲ್.ಎ. ನಂಗೆಲ್ಲ ತಿಳಿದಿದೆ. ಕೂತುಕೊಳ್ಳಿ: ನನ್ನ ರೂಲಿಂಗ್" ಎಂದುಬಿಟ್ಟು ಮುಕ್ತಾಯ ಭಾಷಣವನ್ನು ಮೊದಲು ಮಾಡೇ ಬಿಟ್ಟರು. ಇದರಲ್ಲಿ "ಇದು ಬಿಕ್ಕಟ್ಟಿನ ಸಂಧಿ ಸಮಯ— ಕ್ರಿಟಿಕಲ್ ಜಂಗ್‌ಚರ್. ಈಗ ತಾನೆ ಸ್ವಾತಂತ್ರ್ಯ ವನ್ನು ಗೆದ್ದಿದೀವಿ. ಇದರಲ್ಲಿ ಸಾಹಿತಿಗಳ ಭಾಗ ಬಹಳ. ಸಾಹಿತಿಗಳು ಲೋಕದ ಕಣ್ಣು. ಅವರೇ ಕಾಯಿದೆ ಮಾಡುವವರಾಗಬೇಕು. ನಮ್ಮ

ಮುಂದಾಳುಗಳಾಗಬೇಕು. ಅವರಿಂದಲೇ ಲೋಕದಲ್ಲಿ ಶಾಂತಿ ಸಾಧ್ಯ. ಈಗ ನಡೆಯುತ್ತಿರುವ ರಷ್ಯ ಅಮೇರಿಕ ತೊಡಕನ್ನು ಬಿಡಿಸುವುದರಲ್ಲಿ ಸಾಹಿತಿಗಳು ತೊಡಗಿದರೆ ಬಿಕ್ಕಟ್ಟು ಪರಿಹಾರವಾಗುವುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ನಮ್ಮಲ್ಲಿ ಸಾಹಿತಿಗಳು ನೂರುಗಟ್ಟಲೆ, ಸಾವಿರ, ಲಕ್ಷ ಗಟ್ಟಲೆ ಹೆಚ್ಚಬೇಕು. ಇವರಿಗೆ ಉತ್ತೇಜನ ಕೊಡುವುದು ನಮ್ಮೆಲ್ಲರ ಕೆಲಸ. ಇದರಿಂದಲೇ ನಮಗೆ ಶ್ರೇಯಸ್ಸು, ಪ್ರೇಯಸ್ಸು'' ಮುಂತಾಗಿ ಹೇಳಿ ಉತ್ಸವದ ಚಾಲಕವರ್ಗದವರನ್ನೂ, ಅತಿಥಿಗಳಿಂದ ಆಳುಗಳ ವರೆಗೆ ಎಲ್ಲರನ್ನೂ, ಅಭಿನಂದಿಸಿ ವಂದಿಸಿ "ಜೈ ಹಿಂದ" ಎಂದು ಚಪ್ಪಾಳೆಯ ಸುರಿಮಳೆಯ ಮಧ್ಯೆ ತಮ್ಮ ಕಡೆಯ ಅಮೋಘಭಾಷಣವನ್ನು ಮುಗಿಸಿದರು. ಇದಾದ ಮೇಲೆಯೇ ಜನರು ಸರಿಯಾಗಿ ಉಸಿರಾಡಿದುದು. ನಾಟಕ ಮುಗಿದೊಡನೆ ಆದ ದಾಂಧಲೆಯಲ್ಲಿ ಅಯ್ಯಂಗಾರಿಯ ವಂದನಾರ್ಪಣೆ ಕೇಳಿದುದು ಅವನಿಗೊಬ್ಬನಿಗೇ. ಹಾಗೂ ಅವನು ಅಧ್ಯಕ್ಷರು, ಅತಿಥಿಗಳು, ಅಮಲ್ದಾರರು, ಇಷ್ಟೇ ಅಲ್ಲದೆ ಸ್ವಾಗತಸಮಿತಿ, ಹಿಂದಿನ ಗತ ಸಮಿತಿಗಳು, ಉತ್ಸವದಲ್ಲಿ ಭಾಗವಹಿಸಿದವರೆಲ್ಲರು, ಟೌನ್‌ಹಾಲ್ ಕೊಟ್ಟವರು, ದೀಪದವರು, ಕಸಗುಡಿಸಿದವರು, ಸಭೆಯ ಮಹಾಜನರು—ಕಂಡು ಕೇಳಿದವರೆಲ್ಲರಿಗೂ ಹೃತ್ಪೂರ್ವಕ ಧನ್ಯವಾದಗಳನ್ನು ಅರ್ಪಿಸದೆ ಬಿಡಲೇ ಇಲ್ಲ. ಅಂತೂ ವಸಂತೋತ್ಸವ ಮುಗಿಯಿತು. ಎರಡು ದಿನಗಳ ನಂತರ, ತಮ್ಮ ಗೌರವ ಅತಿಥಿಗಳು ಮತ್ತು ಶಾಮಯ್ಯಂಗಾರಿಯ ಚಿತ್ರಗಳೂ, ಭಾಷಣಗಳು ಚಂದ್ರಶೇಖರನ ಸಾಹಿತ್ಯಶಕ್ತಿ ಮೀರಿದ ಪ್ರಶಂಸೆಯೂ, ಕಂಡ ಪ್ರಜಾತಂತ್ರ ಪತ್ರಿಕೆಯ ಹಾಳೆಯನ್ನೇ ಸಾಹುಕಾರರು ಕತ್ತರಿಸಿ ಶಾಮಯ್ಯಂಗಾರಿಯ ಚಿತ್ರವನ್ನು ಮಾತ್ರ ತೆಗೆದು ಹಾಕಿ, ತಮ್ಮ ಮೇಜಿನ ಖಾನೆಯಲ್ಲಿ ಇಟ್ಟು ಕೊಂಡರು.

ಮಾರನೆಯ ದಿನ ಬೆಳಿಗ್ಗೆ ಹಿರಿಯ ಸಾಹಿತಿಗಳು ಹೊರಡಲು ಅನುವಾದರು. ಆಗ ಸಾಹುಕಾರರು ಅವರು ಇನ್ನೂ ಒಂದು ದಿನ ಇದ್ದು ಹೋಗಬೇಕೆಂದು ಒತ್ತಾಯ ಮಾಡಿದರು. ಆದರೆ ಅವರು "ನಾಳೆ ಸಿರಿಹಾಳಿನಲ್ಲಿ ವಸಂತೋತ್ಸವ. ಅಧ್ಯಕ್ಷತೆಗೆ ಒಪ್ಪಿಕೊಂಡಿದ್ದೇನೆ. ತಪ್ಪಿಸಿಕೊಳ್ಳಲಾಗುವುದಿಲ್ಲ. ಕ್ಷಮಿಸಬೇಕು. ಇಲ್ಲದಿದ್ದರೆ ಸಂತೋಷದಿಂದ ಇರುತ್ತಿದ್ದೆ. ತಮ್ಮಂತಹ

ವರ ಮನೆಯಲ್ಲಿ ಇರುವುದಕ್ಕೇನು. ಎಷ್ಟು ಕಾಲವಾದರೂ ಇರಬಹುದು. ರಾಜಕಾರಣಪಟುಗಳಲ್ಲಿ, ವ್ಯಾಪಾರಸ್ಥರಲ್ಲಿ, ಪುಣ್ಯವಂತರಲ್ಲಿ, ತಮ್ಮಂಥ ಸಾಹಿತ್ಯಾಭಿಮಾನಿಗಳು ಇರುವರೆಂದು ನನಗೆ ತಿಳಿದೇ ಇರಲಿಲ್ಲ. ತಮ್ಮಂಥವರಿಂದಲೇ! ಸಾಹಿತ್ಯ, ರಾಜಕೀಯ, ಸಮಾಜ—ಸರ್ವಸ್ವವೂ ಉಳಿಯಬೇಕು, ಬೆಳೆಯಬೇಕು, ಲೋಕ ಕಲ್ಯಾಣವಾಗಬೇಕು" ಎಂದು ಪುಟ್ಟ ಭಾಷಣವನ್ನೇ ಮಾಡಿದರು. ಸಾಹುಕಾರರು ಕಿವಿಯಿಂದ ಕಿವಿಯವರೆಗೆ ಹಿಗ್ಗುತ್ತಿದ್ದು "ತಮ್ಮಂಥ ಶ್ರೇಷ್ಠ ಸಾಹಿತಿಗಳು ಅಪೂರ್ವ. ನಮ್ಮ ಮನೆ ಪಾವನವಾಯಿತು" ಎಂದು ಉಪಚಾರೋಕ್ತಿ ಹೇಳಿ "ಹೋಗಿಬನ್ನಿ ಹಾಗಾದರೆ" ಎಂದು ಬೀಳ್ಕೊಂಡರು. ಸಂಗೀತ ಸಾಗರರು ತಾವಾಗಿಯೇ "ನಂಗೆ ನಾಳಿದ್ದು ಮದ್ರಾಸ್ ರೇಡಿಯೋದಲ್ಲಿ ಹಾಡಬೇಕಾಗಿದೆ. ನೂರು ರೂಪಾಯಿ ಮಾತು. ಇಲ್ಲದಿದ್ದರೆ ಇರುತ್ತಿದ್ದೆ" ಎಂದು ಹೇಳಿ "ಒಳ್ಳೆಯದು ಹಾಗಾದರೆ" ಎನ್ನಿಸಿಕೊಂಡು ಕಾರಿನಲ್ಲಿ ಕುಳಿತರು. ಕವಿವರರು ಹೋಗುವುದಕ್ಕೂ ಇರುವುದಕ್ಕೂ ಕಾರಣ ಕಾಣದೆ ತಾವೂ ಹೊರಟುಬಿಟ್ಟರು. ಗುರು ಅಷ್ಟು ಸ್ನೇಹ ವಿಶ್ವಾಸಗಳನ್ನಿಟ್ಟುಕೊಂಡಿದ್ದರೂ ಇನ್ನೆರಡು ದಿನಗಳು ಇದ್ದು ಹೋಗೆಂದು ಉಪಚರಿಸಲಿಲ್ಲವೆಂದು ಅವರಿಗೆ ಅಸಮಾಧಾನವಾಯಿತು. 'ದೊಡ್ಡವರ [illegible] ಮೇಲೆ ದೊಡ್ಡ ಕವನವೊಂದನ್ನು ಆದಷ್ಟು ಬೇಗ ಬರೆಯಲು ಆಗಲೇ ತೀರ್ಮಾನಿಸಿಕೊಂಡರು. ಗುರುವಿಗೆ ಯಾಕೊ ಯಾರೂ ಏನೂ ಬೇಕಾಗಿರಲಿಲ್ಲ. ಅತಿಥಿಗಳಲ್ಲಿ ಎರಡು ದಿನಗಳು ಉಳಿದವರು ಕಾಮೇಶ್ವರಯ್ಯನವರು. ಇದಕ್ಕೆ ಕಾರಣ ಕುಸುಮ. ಅವಳು ಹಿಂದಿನ ದಿನವೇ ಅವರಲ್ಲಿಗೆ ಹೋಗಿ "ಇನ್ನೆರಡು ದಿನದಲ್ಲಿ ನಮ್ಮ ಹೈಸ್ಕೂಲಿನ ಸಾಹಿತ್ಯ ಸಂಘದ ವಾರ್ಷಿಕೋತ್ಸವ ಆಗುತ್ತೆ. ತಾವು ಗೌರವ ಅತಿಥಿಗಳಾಗಿರಬೇಕೆಂದು ಹುಡುಗಿಯರಲ್ಲಿ ಬೇಡಿಕೊಂಡು ತಾವು ಒಪ್ಪುವಿರೆಂದು ನಂಬಿದ್ದಾರೆ. ನನ್ನ ಮೂಲಕ ಬೇಡಿಕೆ ಕಳುಹಿಸಿದ್ದಾರೆ. ತಾವು ಒಪ್ಪಲೇಬೇಕು" ಎಂದು ಕೇಳಿಕೊಂಡಳು. ಅಯ್ಯನವರು ಓರೆಗಣ್ಣಿನಿಂದ ಅವಳನ್ನು ನೋಡುತ್ತ "ನಂಗೇನೋ ಮೈಸೂರಿನಲ್ಲಿ ಬಹಳ ಕೆಲಸವಾದಿದೆ. ಇನ್ನೂ ನಾಲ್ಕು ಪುಸ್ತಕ ಅಚ್ಚಾಗುತ್ತಿವೆ. ಪ್ರೂಫ್ ನೋಡಬೇಕು. ಆದರೆ ಇರಲೇಬೇಕೆಂದು ನೀನು ಇಷ್ಟಪಟ್ಟರೆ........" ಎಂದು ನಿಲ್ಲಿಸಿದರು. ಕುಸುಮ "ಹುಂ. ಹುಂ ನನ್ನ ಇಷ್ಟ ಅದೇ" ಎಂದು ಆತುರದಿಂದ ಒತ್ತಿ

ಹೇಳಿದಳು. "ಹಾಗಾದರೆ ಹಾಗೇ ಆಗಲಿ" ಎಂದು ಅವರು ಔದಾರ್ಯ ದಿಂದ ಒಪ್ಪಿದರು. ಕುಸುಮ "ಧನ್ಯಳಾದೆ. ನನ್ನ ಸ್ನೇಹಿತರಲ್ಲಿ ಮಾತು ಮಾನ ಎರಡೂ ಉಳಿದವು" ಎಂದು ಕೃತಜ್ಞಳಾದಳು. ಅವರು "ಎರಡು ದಿನ ಕಾಯುತ್ತ ಏನು ಮಾಡಲಿ?" ಎಂದು ಕೇಳಿದರು. "ಅದನ್ನು ನಂಗೆ ಬಿಡಿ. ನೋಡಿಕೊಳ್ಳುತ್ತೀನಿ. ನಮ್ಮಣ್ಣ ಇಲ್ಲವೇ, ನಾನಿಲ್ಲವೇ?" ಎಂದು ನಗುತ್ತ ಹೇಳಿದಳು. ಅವರು "ನಿಜ, ನೀನಿದ್ದರೆ ಇನ್ನೇನು, ನಂಗೆ." ಎಂದು ನಸು ನಕ್ಕರು. ಅವಳು ಒಯ್ಯಾರದ ದೃಷ್ಟಿ ಬೀರಿ, ಕತ್ತು ಕೊಂಕಿಸಿ ಅಧಿಕ ಉಲ್ಲಾಸ ಉತ್ಸಾಹಗಳಿಂದ ಕುಣಿಹೆಜ್ಜೆಯಲ್ಲೇ ತನ್ನ ಕೋಣೆಯನ್ನು ಸೇರಿದಳು.

೪

* * *

ಕುಸುಮ ನಿರೀಕ್ಷಿಸಿದ್ದಂತೆ, ಗುರು ಅಯ್ಯನವರು ಕಾಲ ಸವೆಸುವುದಕ್ಕೆ ಸಹಾಯವಾಗಲಿಲ್ಲ. ಊರಿಗೆ ಬಂದಾಗ ಅವನಲ್ಲಿದ್ದ ಗೆಲವು ಕ್ರಮೇಣ ಕಡಿಮೆಯಾಗಿ ಅವನು ಅಂತರ್ಮುಖಿಯಾಗುತ್ತಿದ್ದ. ಸಾಹಿತ್ಯೋತ್ಸವದ ಸಂಬಂಧ ಬಿಟ್ಟಮೇಲಂತು ಅವನು ಚಂದ್ರಶೇಖರನ ಅಂಗಡಿಕಟ್ಟೆಯನ್ನೂ ಬಿಟ್ಟುಬಿಟ್ಟ. ಬೆಳಿಗ್ಗೆ ಸುತ್ತ ಮುತ್ತದ ಹಳ್ಳಿಗಳಿಗೆ ಹೋಗಿ ಹೊತ್ತಾಗಿ ಹಿಂದಿರುಗುತ್ತಿದ್ದ. ಹಳ್ಳಿಯ ರೈತರು ಬಹಳ ಮಂದಿ ಸಾಹುಕಾರರ ಕುಳಗಳೇ, ಸಾಲಗಾರರೇ ಆಗಿದ್ದು, ಅವರು ಇವನಿಗೆ ಚಾಪೆ ಹಾಸಿ, ಹಣ್ಣು ಹಾಲು ಕೊಟ್ಟು ದಣಿಯ ಗೌರವ ವನ್ನು ಸಲ್ಲಿಸುತ್ತಿದ್ದರು. ಅವನೇ ಮುಂದುವರಿದರೂ ಸಲಿಗೆಯಿಂದ ಬಾಯಿ ಬಿಚ್ಚಿ ಮಾತನಾಡಲು ಹೆದರಿ ಹಿಂಜರಿಯುತ್ತಿದ್ದರು. ಆಡಿದ ಮಾತೆಲ್ಲ ಸಾಹುಕಾರರ ಮಹಿಮೆ, ಜಾಣ್ಮೆ, ಒಳ್ಳೆಯತನ, ಔದಾರ್ಯ ಇವುಗಳೇ ಆಗಿದ್ದುವು. ಇವನೂ ಅವರ ಮೇಲ್ಪಂಗ್ತಿಯನ್ನನುಸರಿಸಿ ಮನೆತನದ ಮರ್ಯಾದೆಯನ್ನು ಹೆಚ್ಚಿಸಿಕೊಂಡು ಬರಬೇಕೆಂಬುದು ಅವರು ಹೇಳಿದ ವಿಷಯವಾಗಿತ್ತು. ಆದರೂ ಆಗಾಗ ಅವರ ಬಾಯಿಗಳಿಂದ ಬಿದ್ದ ಒಂದೆರಡು ಮಾತುಗಳಿಂದ, ಒಬ್ಬಿಬ್ಬರ ಸ್ಪಷ್ಟೋಕ್ತಿಗಳಿಂದ, ಹಳ್ಳಿಯ ವಿದ್ಯಮಾನ, ಅವರ ಸ್ಥಿತಿಗತಿ

ಭಾವನೆಗಳನ್ನು ತಿಳಿಯುವುದು ಕಷ್ಟವಾಗುತ್ತಿರಲಿಲ್ಲ. ಹಳ್ಳಿಗೆ ಹೋಗಲು ಮನಸ್ಸು ಬಾರದೆ ಭಾರವಾದ ದಿನ ಊರಿನ ಪ್ರೈಮರಿ ಶಾಲೆಗೆ ಹೋಗಿ ಅಲ್ಲಿಯ ಮುಖ್ಯೋಪಾಧ್ಯಾಯನೂ ತನ್ನ ಹಿಂದಿನ ಸಹಪಾಠಿಯೂ ಆಗಿದ್ದ ಶಾಂತಪ್ಪನೊಡನೆ ಮಾತಾಡುತ್ತಿದ್ದು ಮೊದಲನೆಯ ತರಗತಿ ಮಕ್ಕಳಿಗೆ ಪಾಠ ಹೇಳುವುದಾಗಿ ಅವನನ್ನು ಒಪ್ಪಿಸಿ, ಮಕ್ಕಳನ್ನು ಸುತ್ತ ಗುಡ್ಡೆ ಹಾಕಿಕೊಂಡು, ತಮಾಷೆ ಮಾಡಿ ನಕ್ಕು ನಗಿಸಿ, ಕತೆ ಹೇಳಿ, ನೀತಿಗಳನ್ನು ಬೋಧಿಸಿ, ಉಲ್ಲಾಸ ಹೊಂದುತ್ತಿದ್ದನು. ಆದರೆ ಈ ಉಲ್ಲಾಸ ಮನೆಯನ್ನು ಕಂಡೊಡನೆ ಮುಗಿದು ಹೋಗುತ್ತಿತ್ತು. ಮಹಲನ್ನು ಸೇರುವಲ್ಲಿಗೆ ಅವನಿಗೆ ಮಂಕು ಕವಿದಿರುತ್ತಿತ್ತು. ಅವನು ಮಧ್ಯಾಹ್ನವನ್ನೆಲ್ಲ ಮಲಗಿಯೇ ಕಳೆದುಬಿಡುತ್ತಿದ್ದನು. ಸಂಜೆಯ ಹೊತ್ತು ದೊಡ್ಡ ತಿಟ್ಟಿನ ತುದಿಯಲ್ಲಿ ಕುಳಿತು, ಬೀಸುತ್ತಿದ್ದ ಶುದ್ಧವಾದ ಗಾಳಿಗೆ ಮೈಯೊಡ್ಡಿ, ಇದಿರಿನಲ್ಲಿ ಮುಳುಗುತ್ತ ತನ್ನ ಹೊಂಬಣ್ಣದ ಕಿರಣಗಳ ಸಿರಿಯನ್ನು ಭೇದವಿಲ್ಲದೆ ಎಲ್ಲದರ ಮೇಲೆಯೂ ಹರಡುತ್ತಿದ್ದ ವಿವಿಧಸೌಂದರ್ಯಪ್ರಕಾಶದ ರವಿಯನ್ನು ನೋಡಿ, ಅಸೂಯೆ ಪಡುತ್ತಿದ್ದ. ಯಾರಿಗಾದರೇನಂತೆಂದು ಲಕ್ಷ್ಯಮಾಡದೆ ಹೂ ಹಣ್ಣುಗಳನ್ನು ನೀಡಿ ಗಾಳಿಯನ್ನು ಶುದ್ಧಪಡಿಸಿ ನಿಷ್ಕಾಮಕರ್ಮಕ್ಕಾಗಿ ನಿಂತು ಉಲ್ಲಾಸದಿಂದ ತಲೆಯಾಡಿಸಿ ನಲಿವ ಹಸಿರು ಮರಗಳನ್ನು ಮೆಚ್ಚಿ ತಾನೂ ತಲೆದೂಗುತ್ತಿದ್ದ. ವಿಶ್ವವ್ಯಾಪ್ತಿಯನ್ನು ಸೂಚಿಸುತ್ತ, ಅದರ ಅಗಾಧತೆಯಲ್ಲಿ ಒಂದು ಕಣದಂತಿರುವ ಭೂಮಿಯನ್ನೂ, ಈ ಭೂಮಿ ಕಣದೊಳಗಿನ ಅಣುವಿಗೂ ಸಣ್ಣ ಮಾನವನನ್ನೂ, ಅವನದು ಪತಂಗ ಜೀವನವಾದರೂ ವಿಶ್ವವೇ ಹಿಡಿಸಲಾರದ ಅದರ ಹೆಮ್ಮೆಯನ್ನೂ, ಕಂಡು ಅಣಕಿಸುವ. ನಕ್ಷತ್ರ ರಾಶಿಯನ್ನು ನಿಟ್ಟಿಸಿ ನೋಡುತ್ತ ನಾಚಿಕೊಂಡು, ತನ್ನ ವ್ಯಕ್ತಿತ್ವವನ್ನೂ ಕಳೆದುಕೊಂಡು ವಿಶ್ವದಲ್ಲಿ ಬೆರೆದು ಹೋದ ಛಾಯೆಯಂತೆ ಬಹಳ ಹೊತ್ತು ತನ್ನನ್ನೇ ಮರೆತು ಚಿಂತಿಸುತ್ತಿರುತ್ತಿದ್ದ. ಕತ್ತಲೆಯ ಶಾಂತಿ ಹೊದಿಕೆಯನ್ನು ಕೃಷ್ಣಪಕ್ಷದ ಪ್ರಾಪಂಚಿಕ ಚಂದ್ರ ತೆಗೆದು ಮರುಳೂರನ್ನು ತೋರಿಸಿದ ಮೇಲೆ, ಮತ್ತೆ ಮಾನವನಾಗಿ ಮನೆಗೆ ಮರಳುತ್ತಿದ್ದ. ಮನೆಗೆ ಬಂದಾಗ ಅದು ನಾಟಕಮಂದಿರವೆನಿಸುತ್ತಿತ್ತು. ಜನರು ಸೂತ್ರದ ಗೊಂಬೆಗಳಂತೆ ಕಾಣಿಸುತ್ತಿದ್ದರು. ನಿಸ್ಸತ್ವ ಗೊಂಬೆಯಾಟ ವಿನೋದವಾಗಿದ್ದರೂ ಬೇಸರದ ವಿನೋದವಾಗಿರುತ್ತಿತ್ತು, ಅವನಿಗೆ.

ಮನೆಯಲ್ಲಿ ಎಂದೋ ಮಾತು ಕಡಿಮೆಯಾಗಿತ್ತು. ಈಚೆಗೆ ತಂದೆಯವರ ಕಣ್ಣಿಗೆ ಕಣ್ಣನ್ನೇ ಕೊಡುತ್ತಿರಲಿಲ್ಲ. ಹೀಗಿದ್ದೇ ಅವರಿಂದ ಮಾತು ಹೊರಡುವುದು ಕಷ್ಟವಾಗಿತ್ತು. ಆಡಿದ ಮಾತಿಗೆ ಒಂದೇ ಮಾತಿನಲ್ಲಿ ಉತ್ತರ ಕೊಡುತ್ತಿದ್ದ. ಚಿಕ್ಕಮ್ಮನೊಡನೆ ವಿನಯ ವಿಶ್ವಾಸಗಳಿಂದಲೇ ನಡೆದುಕೊಳ್ಳುತ್ತಿದ್ದ. ಆದರೆ ಅವಳು ಹೆಚ್ಚು ಮಾತಿನವಳಲ್ಲ. ಆದುದರಿಂದ ಅವಳೊಡನೆಯೂ ಸಾಮಾನ್ಯವಾಗಿ ಎಷ್ಟೋ ಅಷ್ಟು ಮಾತಾಗಿತ್ತು. ಮಾವ ಮಾತ್ರ ತನ್ನ ಸ್ವಭಾವಕ್ಕೆ ತಕ್ಕಂತೆ ಹೊತ್ತು ಗೊತ್ತು, ಹಿತಮಿತವನ್ನರಿಯದೆ ತಿವಿದು ತಿವಿದು ತಮಾಷೆ ಮಾಡುತ್ತಿದ್ದ. ಗುರು ಬಹಳ ಬಾರಿ ಉದಾಸೀನದಿಂದ ಉತ್ತರ ಕೊಟ್ಟರೂ ಮಾವ ಬಿಡುತ್ತಿರಲಿಲ್ಲ. ಆಗ ಗುರು ತನ್ನ ಕಟು ಹಾಸ್ಯದಿಂದ ಮಾವನನ್ನು ಕಟ್ಟಿಡುತ್ತಿದ್ದ. ಒಂದು ಬಾರಿ ಮಾವ '' ಲೋ ಗುರು ಇನ್ನೇನು ಬಟ್ಟೆಬರೆಯೋ, ಒಂದೇ ಸಾದಾ ಬಣ್ಣ, ನಮ್ಮನ್ನೆಲ್ಲ ನೋಡು ಎಷ್ಟು ಟೀಕ್ ಟಾಕ್ '' ಅಂದ. ಅಳಿಯ '' ಆ ವೇಷವೆಲ್ಲ ನಿಮಗೇ ಇರಲಿ ಮಾವ. ನಾನೆಲ್ಲೂ ಕುಣಿಯಬೇಕಾಗಿಲ್ಲ. '' ಅಂದುಬಿಟ್ಟ. ಇನ್ನೊಂದು ದಿನ ಮಾವ ಊಟದ ಸಮಯದಲ್ಲಿ '' ಗುರು, ಸರಿಯಾಗಿ ಊಟ ಮಾಡಯ್ಯ '' ಅಂದ. ಗುರು ಸುಮ್ಮನೆ ಏಳುತ್ತಿದ್ದ. '' ನಿಮ್ಮ ಅಪ್ಪನ ಮನೇಲಿ ಏನು ಅನ್ನಕ್ಕೆ ಕಡಿಮೆಯಾಗಿದೆಯೆ ? '' ಮಾವ ನಗುತ್ತ ಮತ್ತೆ ತಿವಿದ. '' ಯಾರ ಅನ್ನ, ಯಾರ ಊಟ ಮಾವ ? '' ಗುರು ಎದ್ದೇಬಿಟ್ಟ. '' ಹೀಗಾದರೆ ಮೈ ಬಂದ ಹಾಗೇ ಬಿಡು '' ಮಾವ ಬಿಡಲಿಲ್ಲ. "ನಮ್ಮ ಮೈ ನಮಗೆ ಸಾಲದೇ ? ಇನ್ನೊಬ್ಬರ ಬೊಜ್ಜು ಯಾಕೆ ಹೊರಲಿ ? '' ಗುರು ಹೊರಟೇಹೋದ. ಮಾವ ಇನ್ನೂ ನಗುತ್ತಿದ್ದ. ಇನ್ನೊಂದು ಸಾರಿ ಗುರು ಯೋಚಿಸುತ್ತ ಕುಳಿತಿದ್ದ. ಮಾವ "ಏನೋ ಗುರು, ಈಚೀಚೆಗೆ ಮೌನವ್ರತ ಅಭ್ಯಾಸ ಮಾಡ್ತಾ ಇರೋ ಹಾಗಿದೆ?" ಅಂದ. ಗುರು "ಹುಂ'' ಎಂದು ಸುಮ್ಮನಾದ. "ಅದೇನು ತಪಸ್ಸು ಯಾಕೆ ?'' ಮಾವ ಎಂದಿನಂತೆಯೇ ಮುಂದುವರಿಸಿದ.'' ನುಡಿ ಹೆಚ್ಚಿದಷ್ಟೂ ನಡತೆ ಕಡಿಮೆಯಾಗುತ್ತೆ" ಗುರು ತನ್ನ ಅಭಿಪ್ರಾಯವನ್ನು ಹೇಳಿದ. '' ಹೊಸ ಥಿಯರಿ ! ಸ್ವಲ್ಪ ವಿವರಿಸಪ್ಪ '' ಮಾವ ಹಾಸ್ಯ ಮಾಡಿದ. '' ಮಾವ, ವಿಧಿ ನಮಗೆ ನಡೆನುಡಿಗಳ ಶಕ್ತಿ ಒಟ್ಟು ತೂಕ ಇಷ್ಟು ಅಂತ ಕೊಟ್ಟಿರುತ್ತೆ. ಒಂದು ಹೆಚ್ಚಾದಷ್ಟು

ಒಂದು ಕಡಿಮೆಯಾಗಲೇಬೇಕು. ಹೆಚ್ಚು ನುಡಿಯಾಡೋದು ಕಡಿಮೆ ನಡತೆ ಮುಚ್ಚೋದಕ್ಕೇ ಆಡ್ತಾರೆ. ನಡತೆ ಹೆಚ್ಚು ಬೆಳೆಸಿಕೊಳ್ಳೋರು ನುಡಿ ಕಡಿಮೆ ಮಾಡಲೇಬೇಕು. " ಗುರು ವಿಶದೀಕರಿಸಿದ. ಮಾವ " ನಿನ್ನ ಥಿಯರಿಗೆ ಏನು ಪ್ರಮಾಣ ?" ಎಂದು ಕೇಳಿದ. " ನಿನ್ನ ಸುತ್ತಮುತ್ತ ನೋಡು" ಗುರು ಹೇಳಿದ. ಮಾವ " ಹ್ಹ ಹ್ಹ ಹಾ ! " ಎಂದು ನಕ್ಕ. " ನಿನ್ನನ್ನೇ ನೋಡಿಕೊ " ಗುರು ಮತ್ತೆ ಹೇಳಿ ಬೇರೆಯ ಕಡೆಗೆ ತಿರುಗಿದ. ಮಾವನ ನಗು ಬೇಗನೆ ನಿಂತಿತು. " ಯಾಕೋ ಇಷ್ಟು ಕಹಿಯಾಗಿದಿ ಮಗು ? " ಮಾವ ಗಂಭೀರವಾಗಿ ಕೇಳಿದ. ಸಾಕಾದಷ್ಟು ಕಾರಣವಿಲ್ಲವೆ ? " ಗುರು ಮರುಪ್ರಶ್ನೆ ಕೇಳಿದ. " ಏನಿದೆ ಅಂಥಾದ್ದು ? " ಮಾವ ತಲೆಯಾಡಿಸಿದ. " ನಿಂಗೆ ಬೇಡ, ಅದಕ್ಕೇ ಕಾಣೋದಿಲ್ಲ. ಕಣ್ಣಿನ ಕುರುಡೇ ಕುರುಡಲ್ಲ, ಮಾವ. " ಗುರು ಎಚ್ಚರಿಸಿದ. " ಹಾಗೇ ಆಗಲಿ ಬಿಡಪ್ಪ. ಅಂತೂ ನಿನ್ನ ಅಷ್ಟು ಮಾತಾಡಿಸಿದೆನಲ್ಲ. ಹ್ಹ ಹ್ಹ ಹಾ ! " ಮಾವ ಪೂರ್ತಿಮಾಡಿದ. ಹೀಗಲ್ಲವೆ ಒಂದೊಂದು ವೇಳೆ ಗುರುವಿನ ನೋಟವೇ ಉತ್ತರವಾಗಿ ಮಾವನ ವಿನೋದ ಅವನ ಗಂಟಲದಲ್ಲೇ ಉಳಿಯುತ್ತಿತ್ತು.

ಸದಾಶಿವ ಮನೆಯ ಮಾತನ್ನೆಲ್ಲ ಗುರುವಿಗೆ ಅವನ ಒಂಟಿಯೂಟದ ವೇಳೆ ವರದಿ ಮಾಡುತ್ತಿದ್ದ. ಸಾಹುಕಾರರು ಆ ದಿನ ಮಾಡಿದ ವ್ಯವಹಾರ, ತೋರಿಸಿದ ಚಮತ್ಕಾರ, ಪ್ರತಿಷ್ಠಿತರಲ್ಲಿ ನಡೆದುಕೊಂಡ ಜಾಣ್ಮೆ, ಅವರಿಗೆ ನಡೆದ ಊಟ ಉಪಚಾರ ಸತ್ಕಾರ, ಆದ ಉಪಕಾರ, ತಾನು ಮರೆಯಲ್ಲಿ, ನಿಂತು ಕೇಳಿದ ಮಾತುಕತೆ, ಸಾಲಗಾರರು, ರೈತರು ಮತ್ತು ಇತರ ಕನಿಷ್ಠರನ್ನು ಕಂಡ ಬಿಗಿಯ ಧೋರಣೆ, ಇವೆಲ್ಲವನ್ನೂ ಚಾಚೂ ತಪ್ಪದೆ ತನ್ನಮೆಚ್ಚಿಗೆಯ ಮಾತುಗಳೊಡನೆ ಹೇಳುತ್ತಿದ್ದ. ಗುರು ಸದಾಶಿವನನ್ನು ಚಿಕ್ಕತನದಿಂದಲೂ ಪ್ರೀತಿಸುತ್ತಿದ್ದ. ಅವನ ಸರಳಸ್ವಭಾವವನ್ನು ಕಂಡಿದ್ದ. ಅವನು ' ಮರುಳೂರಿನ ಮುರುಕು ' ಎಂದು ಹಾಸ್ಯ ಮಾಡುತ್ತಿದ್ದ. ಅವನು ವಹಿಸುತ್ತಿದ್ದ ಅಧಿಕಾರವನ್ನು ಅರಿತು " ಇಷ್ಟೊಂದು ಸೇವೆ ಮಾಡಿದ ಜೀವಕ್ಕೆ ಈ ಸದರವೇನು ಹೆಚ್ಚು. " ಎಂದು ಸಹನೆಯಿಂದಿರುತ್ತಿದ್ದ. ಅವನು ಏನು ಹೇಳಿದರೂ ಅವನನ್ನು ನೋಯಿಸುವ ಮಾತಾಡಲು ಗುರುವಿಗೆ ಮನಸ್ಸು ಬರುತ್ತಿರಲಿಲ್ಲ. ಅವನು ಹೇಳಿದುದನ್ನೆಲ್ಲ ಕೇಳುತ್ತ, ಕನಿಕರದ ನಸುನಗೆಯನ್ನು

ತೋರಿಸುತ್ತ, ಸುಮ್ಮನಿರುತ್ತಿದ್ದ ಸದಾಶಿವನಿಗೆ ಸಂಭಾಷಣೆಯಲ್ಲಿ ಎರಡು ಪಕ್ಷವೂ ಮಾತಾಡಬೇಕೆಂಬ ನಿಯಮವೇನಿರಲಿಲ್ಲ. ಗುರುವಿನಂತಹ ವ್ಯಕ್ತಿಯಲ್ಲೇ ಅವನ ಆಸಕ್ತಿ ಜಾಸ್ತಿ. ಉಪ್ಪು ಬಡಿಸಿದಾಗ ಮೊದಲಾದ ರಿಕಾರ್ಡು ಗುರು ಊಟದಿಂದ ಏಳುವ ವರೆಗೂ ಒಂದೇಸಮನೆ ನಡೆಯುತ್ತಿತ್ತು. ಗುರುವಿಗೆ ಒಂದೊಂದು ದಿನ ತಾನು ತಿನ್ನುತ್ತಿದ್ದುದು ಅನ್ನವೋ ಮಾತೋ ಎನ್ನುವ ಭ್ರಮೆ ಬರುತ್ತಿತ್ತು. ಕಾಲೇಜಿನ ಲೆಕ್ಚರ್ ನೆನಪಾಗಿ ನಡುಕ ಬರುತ್ತಿತ್ತು. ಒಂದು ದಿನ ಸದಾಶಿವ ಬೆಲ್ಲದ ಕತೆ ಹೇಳಿದ. " ಗುರು, ಇವತ್ತು ನೋಡು, ನಿಮ್ಮಪ್ಪ ಏನು ವ್ಯಾಪಾರ ಮಾಡಿದಾರೆ ಅಂತೀಯ ? ಸಾವಿರಾರು ರೂಪಾಯಿ ಲಾಭ. " ಗುರು ಏನೆಂದು ಕೇಳಲಿಲ್ಲ. ಈ ಲಾಭಗಳು ನಿತ್ಯಗಟ್ಟಲೆಯಾಗಿದ್ದುವು. ಆದರೆ ಸದಾಶಿವ ಅಲ್ಲಿಗೇ ಸುಮ್ಮನಾದಾನೆ ? ಮುಂದುವರಿಸಿದ. "ನೋಡು, ಕಬ್ಬಿನ ಆಲೆ ಸುತ್ತಮುತ್ತ ಮೊದಲಾಗಿದೆಯೋ ಇಲ್ಲವೋ? ಬೆಲ್ಲದ ಧಾರಣೆ ವೀಸೆಗೆ ಒಂದೂಕಾಲು ರೂಪಾಯಿ ಇದ್ದದ್ದು ಆರಾಣೆಗೆ ಇಳಿದು ಬಿಟ್ಟಿತ್ತಂತೆ. ಇನ್ನೂ ಇಳಿಯುತ್ತಿತ್ತಂತೆ. ಸಾಹುಕಾರರು ನಾಗಪ್ಪನ ಹತ್ತಿರ ಹತ್ತುಸಾವಿರರೂಪಾಯಿ ಕಳಿಸಿ ಎಲ್ಲೆಲ್ಲಿ ಇದ್ದ ಬೆಲ್ಲವೆಲ್ಲ ಸುಮಾರು ನಾಲ್ಕೈದು ಸಾವಿರ ಮಣ ಕೊಂಡು—ಹೇಗೆ ಬಿತ್ತು ಅಂತೀಯ ? ನಾಲ್ಕಾಣೆಗೆ ವೀಸೆ—ಲಾರಿಗಳಲ್ಲಿ ಸಾಗಿಸಿ ತರಿಸಿ ಗಡಂಗಿನಲ್ಲಿ ತುಂಬಿಬಿಟ್ಟಿದಾರೆ. ಈಗಾಗಲೇ ಬೆಲ್ಲದ ಧಾರಣೆ ತಟ್ಟನೆ ಎಂಟಾಣೆಯಾಗಿ ಹನ್ನೆರಡಾಣೆಗೂ ಏರಿಬಿಟ್ಟಿದೆಯಂತೆ. ಇನ್ನೂ ಒಂದೂವರೆ ರೂಪಾಯಿ ಆಗುತ್ತೆ ವೀಸೆಗೆ ಅಂತಾ ಇದ್ದರು. ಯಾಕೆ ಗೊತ್ತೆ ? ಸಕ್ಕರೆ ಕಂಟ್ರೋಲ್ ಹೋಗಿ ರೇಷನ್ ಬರುತ್ತಂತೆ. ಸರಕಾರ ಗುಟ್ಟಾಗಿ ತೀರ್ಮಾನಿಸಿದೆಯಂತೆ. ಸಾಹುಕಾರರಿಗೆ ಸಮಾಚಾರ ಬಂದಿದೆ. ಗುಟ್ಟು ಗೊತ್ತಾಯ್ತು ? ಇದೆಲ್ಲ ನಂಗೆ ಹೇಗೆ ಗೊತ್ತಾಗುತ್ತೆ ಅಂದುಕೋತೀಯೋ ? ನಾನು ಎಲ್ಲ ಕಡೆಗೂ ಒಂದು ಕಿವಿ ಕೊಟ್ಟೇ ಇರುತ್ತೇನಿ. ಇವನೇನು ಅಡಿಗಿಯೋನು ಅಂತ ನನ್ನ ಮುಂದೆ ಹೆಚ್ಚಾಗಿ ಮುಚ್ಚೋದಿಲ್ಲ ಅನ್ನು. ಇದರ ಮೇಲೆ ನಾಗಪ್ಪ ಇದಾನೆ. ರೈತರು ಅವರು ಇವರು ಇದಾರಲ್ಲ. ಇಷ್ಟಕ್ಕೂ ಸಾಹುಕಾರರಿಗೆ ನನ್ನಲ್ಲಿ ಎಷ್ಟು ನಂಬಿಕೆ ಗೊತ್ತೆ ? ನಿಂಗೆ ಅಂತ ಇದನ್ನೆಲ್ಲ ಹೇಳ್ತೇನಿ. ಯಾಕೆ ? ನಾಳೆ ನೀನು ತಾನೆ ಹೀಗೇ ಈ ಮನೆತನ ಬೆಳಿಸಿಕೊಂಡು ಬರೋನು ? ಇನ್ನೊಬ್ಬರ ಹತ್ತಿರ ತುಟಿ ಪಿಟಕ್ ಅಂದೇನೆ?

ಶಿವ ಶಿವ! ಈ ವಿಷಯವನ್ನೇನೋ ಖುದ್ದು ನಾಗಪ್ಪನೇ ಎಲ್ಲ ಹೇಳಿದ—ಸಾಹುಕಾರರ ಮಾತಿನಿಂದ ಬಂದ ಸೂಚನೆ ಅಂತ. ' ಇದೇನಪ್ಪ ಇಷ್ಟೊಂದು ಬೆಲ್ಲ ತಂದೆಯಂತೆ ' ಅಂತ ಕೇಳಿದೆ, ಆಗ ಎಲ್ಲ ಹೊರಗೆ ಬಂತು. ' ಇನ್ನು ಜನವೆಲ್ಲ ಬೆಲ್ಲಾನೇ ತಿನ್ನಬೇಕು ಅದು ನಮ್ಮ ಬೆಲ್ಲಾನೇ–ಕೇಳಿದಷ್ಟು ಕೊಟ್ಟು' ಅಂದ. ಸರಕಾರ ಸಕ್ಕರೆ ವಿಷಯ ಫಜೀತಿ ಮಾಡಿಕೊಂಡಿದೆಯಂತೆ. ಸಾಕಾದಷ್ಟು ಒದಗಿಸಲಾರದಂತೆ. ನಮಗೇನು ಭಯವಿಲ್ಲ ಅನ್ನು. ಆ ಸಕ್ಕರೆ ಕಂಟ್ರೋಲ್ ಬರುತ್ತೆ ಅಂತ ಸುಳಿವು ತಿಳಿದ ಕೂಡಲೆ ಮುನ್ನೂರು ನಾನೂರು ಮೂಟೆ ಜಮ ಮಾಡಲಿಲ್ಲವೆ ? ಅದನ್ನ ಜನ ವೀಸೆಗೆ ಮೂರು ರೂಪಾಯಿಯನ್ನೇ ಕೊಟ್ಟು ಎಷ್ಟು ತಗೊಂಡು ಹೋದರೂ ಇನ್ನೂ ಬಿದ್ದಿದೆಯಂತೆ—ಬೆಟ್ಟದ ಹಾಗೆ. ಕೊಟ್ಟ ದುಡ್ಡಿನ ಎಷ್ಟರಷ್ಟೋ ಆಗಲೇ ಬಂದು ಹೋಯ್ತು ಅಂತ ಇಟ್ಕೊ. ಇನ್ನೂ ಹಾಗೇ ಕರ್ಚಾಗ್ತಾ ಇದೆ. ಆಗೂ ಹೋಗುತ್ತೆ ಅನ್ನು. ಸಕ್ಕರೆ ಬೇಕಾದೋರು ದುಡ್ಡಿಗೆ ಹೆದರ್ತಾರೇ ? ಆ ಸರಕಾರಿ ಇನ್ಸ್‌ಪೆಕ್ಟರು ಬಂದು ಐನೂರು ಕಿತ್ತುಕೊಂಡು ಹೋದ. ಅದೊಂದು ನಷ್ಟದ ಬಾಬ್ತು. ಆದರೂ ಪರವಾಗಿಲ್ಲ, ಸಾವಿರಾರು ರೂಪಾಯಿ ಫಾಯಿದೆ ಆಯ್ತು, ಅದರಲ್ಲೂ. ಇದರಲ್ಲೂ ಎಳೇ ಬೆಲ್ಲ ಸಾವಿರ ಮಣದಷ್ಟು ಇದೆಯಂತೆ. ಹುಳಿತರೆ ಗುಂಡಿಮಾಡಿ ಹೂಳಿಸಿದರಾಯ್ತು ಅಂತಾರೆ ಸಾಹುಕಾರರು. ನೋಡಬೇಕು. ಈಗಲೇ ಮಾರೋಹಾಗಿಲ್ಲ. ಒಂದೂವರೆ ರೂಪಾಯಿ ಆದ ಹೊರತು ಮಾತಾಡೋ ಹಾಗಿಲ್ಲ ಅಂದುಬಿಟ್ಟಿದಾರೆ ಸಾಹುಕಾರರು. ಅದೇನು ಪ್ರಚಂಡ ಬುದ್ಧಿ, ಲೆಕ್ಕಾಚಾರ! ಯಾರು ಯಾರಿಗೂ ಬರೋದಿಲ್ಲ. ನಿನ್ನ ಒಬ್ಬನ್ನ ನೋಡಬೇಕು ಅಷ್ಟೆ... " ಹೀಗೇ ಹೇಳಿದ. ಗುರು ಸುಮ್ಮನೆ ಬೆಪ್ಪಾಗಿ ಕುಳಿತುಬಿಟ್ಟ. " ಯಾಕೆ, ಪಾಯಸ ತಿನ್ನು " ಅಂದ ಸದಾಶಿವ. " ಇಲ್ಲ ಇಷ್ಟೊಂದು ಬೆಲ್ಲ-ಸಕ್ಕರೆ ಕತೆ ಕೇಳಿ ಕೇಳೀ ಹೊಟ್ಟೆ ಸಿಹಿಯಾಗಿ ಹೋಯ್ತು. ಇನ್ನೆಲ್ಲಿ ಸೇರುತ್ತೆ? ಮುಖಕ್ಕೆ ಹಾಕಿ ತಿಕ್ಕಿದ ಹಾಗಾಯ್ತು." ಅಂದ.

ಇನ್ನೊಂದು ದಿನ ತಿಂಡಿಯ ಹೊತ್ತಿನಲ್ಲಿ ಸದಾಶಿವ " ಅಬ್ಬಬ್ಬ, ಈ ಹಳ್ಳಿಯೋರು ಎಷ್ಟು ಹಾಳಾಗ್ತಾ ಇದಾರೆ ಅಂತೀಯ ? ಅವರ ಕಟ್ಟು ಸುಟಿಯೇನು, ದಾಕ್ಷಿಣ್ಯವೇನು, ಉದ್ಧಟತನವೇನು, ಬಹಳ ಕೆಟ್ಟಿದಾರಪ್ಪ. ನಾನು

ನೋಡಿದ ಹಾಗೆ ಹೀಗಿರಲಿಲ್ಲ. ಏನು ನಮ್ರತೆ, ದೈನ್ಯ, ಹೇಗಿದ್ದರು. ಇವತ್ತು ಆ ಚಿತ್ತೂರಿನ ಚಿಕ್ಕ ಬಂದಿದ್ದ. ಈಗೇನೋ ಪಟೇಲನಾಗಿದಾನಂತೆ. ಆದರೆ ಏನು, ಬಂದು ಕುರ್ಚಿಯ ಮೇಲೇ ಕೂತುಕೊಳ್ಳೋದೇ ? ಅದೂ ಸಾಹುಕಾರರ ಮುಂದೆ? ನಾನೂ ಅವರಿಗೆ ಕಾಫಿ ಕೊಡೋದಕ್ಕೆ ಹೋಗಿದ್ದೆ. ಆಶ್ಚರ್ಯವಾಯ್ತು. ಸಾಹುಕಾರರು " ಏನೋ ಚಿಕ್ಕ, ಈಗ ಬಹಳ ದೊಡ್ಡ ಮನುಷ್ಯ ಆಗಿರೋ ಹಾಗೆ ಕಾಣುತ್ತೆ. ಕುರ್ಚಿಯೇ ಬೇಕು " ಅಂದ ಮೇಲೆ "ಇಲ್ಲ ದಣಿಯೋರೆ, ನಾನೆಲ್ಲಿ ದೊಡ್ಡೋನು ತಮ್ಮ ಮುಂದೆ. ತಪ್ಪಾಯ್ತು." ಅಂತ ಹಲ್ಲು ಕಿರೀತ ಕೆಳಗೆ ನೆಲದ ಮೇಲೆ ಕೂತ. ಅದೂ ಯಾತಕ್ಕೆ ಬಂದಿದ್ದಾಗ ಹೀಗೆ ಅಂತ? ಬಡ್ಡಿ ಸೋಡಿ ಬಿಡಿಸಿಕೊಳ್ಳೋಕೆ ಬಂದಾಗ. ನೋಡು ಎಷ್ಟು ಚೆನ್ನಾಗಿದೆ ! ಸಾವಿರ ಅಸಲಿಗೆ ಸಾವಿರ ಬಡ್ಡಿ ಆಗಿದೆಯಂತೆ. ಇಲ್ಲಿಯವರೆಗೂ ಮಲಗಿದ್ದು ಜಮೀನು ಮನೆ ಹರಾಜಿಗೆ ಬಂದ ಮೇಲೆ ಓಡಿ ಬಂದಿದ್ದ–ಅಂಗಲಾಚೋದಕ್ಕೆ. ಅದೆಷ್ಟು ಹೊತ್ತು ಪಂಚಾಯ್ತಿ ಮಾಡಿದ ಅಂತ. ಜತೆಗೆ ಬೇರೆ ನಾಲ್ಕು ಜನ. ಸಂಖೆಯಿಂದ ಗೆಲ್ಲಬೇಕು ಅಂತ. ಒಬ್ಬೊಬ್ಬರೂ ಅವನಿಗೆ ಲಾಯರೆ. ಗಂಟೆ ಕಾಲ ಮಾತೊಡೋರೆ. ಅಬ್ಬಬ್ಬ ! ಸಾಹುಕಾರರ ಸಹನೆಯಾಗೋ ಹೊತ್ತಿಗೆ ತಡೀತು. ನಾನಾಗಿದ್ದರೆ ಎದ್ದು ಹೋಗೊ ಅಂತ ಯಾವಾಗಲೋ ಹೇಳಿ ಕಳಿಸಿಬಿಡುತ್ತಿದ್ದೆ. ಬಡವ, ಬಡ್ಡೀನೆ ಬಿಡಿ ಅಂತ ಶುರುಮಾಡಿದ. ಎಲ್ಲ ಬುದ್ಧಿವಂತಿಗೆ! ಚೌಕಶಿ, ಹಾಗೆ ಶುರುಮಾಡಿದರೆ ಅಷ್ಟಿಷ್ಟಾದರೂ ಬಿಡ್ತಾರೆ ಅಂತ. ಆಮೇಲಿಂದ ನೂರು ನೂರು ಐವತ್ತು ಆಗ್ತಾ ಹೆಚ್ಚಿತು. ಸಾಹುಕಾರರು ಸವಿಯಾಗಿ ಮಾತಾಡಿದರೇ ಹೊರತು ಜುಂ ಅಂದಿದ್ದರೆ ಹೇಳಬೇಕಲ್ಲ. ಪಟ್ಟು ಹಿಡಿದು ಕೂತಿದ್ದರು. ಒಂದು ಚಿಕ್ಕ ಕಾಸು ಬಿಡಲಿಲ್ಲ. ಯಾಕೆ ಬಿಡಬೇಕು? ದುಡ್ಡು ಅವರದ್ದಲ್ಲವೆ, ಬಡ್ಡಿ ಅವರದ್ದಲ್ಲವೆ? ಇವನ್ನ ಆಗ ಸಾಲಮಾಡಿ ಈಗ ಕುಯ್ಯೊ ಮರ್ರೊ ಅಂತ ಅನ್ನು ಅಂತ ಯಾರು ಹೇಳಿದರು ? ನಿಮ್ಮಪ್ಪ ಮಾಡಿದ್ದೇ ಸರಿ. ಹಾಗೆಲ್ಲ ಮರುಗಿ ಬಿಟ್ಟರೆ ನಾಳೆ ಲೇವಾದೇವಿ ಏನಾಗಬೇಕು ಹೇಳು ? ಇಷ್ಟಕ್ಕೂ ಏನು ಅನ್ಯಾಯ ಮಾಡಿದ್ದಕ್ಕೆ ಬಡ್ಡಿ ಬಿಡಬೇಕು. ಕಂಡು ಕಂಡು ತಗೊಂಡು ಹೋಗಲಿಲ್ಲವೆ ಹಣಾನ? ಅನುಭವಿಸಲಿ. ಕಡೇಗೆ ಇಪ್ಪತ್ತು ಹತ್ತು ರೂಪಾಯಿ ಸೋಡಿಗೆ ಇಳಿದು ಬಂದ, ಕರ್ಚಾದರೂ ಕಳೀಲಿ ಅಂತ.

ಉಹುಂ. ಏನು ಸಾಗಲಿಲ್ಲ, ಸಾಹುಕಾರರಲ್ಲಿ. ಹೇಳಿ ಹೇಳಿ ಸಾಕಾಗಿ, ತಂದಿದ್ದ ಸಾವಿರವನ್ನ ಬಡ್ಡಿಗೆ ಕಟ್ಟಿ, ಮನೆ ಮಾರಿ ಅಸಲು ತೀರಿಸುತೀನಿ, ಹರಾಜು ನಿಲ್ಲಿಸಿ ಅಂತ ಹೇಳಿ ಹೋದ. ಗೊಳೋ ಅಂತ ಏನೋ ಅತ್ತ ಅನ್ನು. ಆಗ ಸಂಕಟವಾಯ್ತು ಮುಂಡೇಗಂಡನ್ನ ನೋಡಿ. ಆದರೆ ಯಾರೇನು ಮಾಡೋದು ಸಾಧ್ಯ? ಎಲ್ಲ ತಾನೇ ಸ್ವಂತ ಕೈಯಿಂದ ಮಾಡಿಕೊಂಡದ್ದು. ಬಡ್ಡಿ ಮೊದಲೇ ಕೊಟ್ಟುಬಿಟ್ಟಿದ್ದರೆ?........" ಎಂದು ಉದ್ದವಾಗಿ ಹೇಳಿದ. ಆದರೆ ಗುರುವಿಗೆ ಇದೆಲ್ಲ ಆಗಲೇ ಹಳೆಯದಾಗಿತ್ತು.

ಉತ್ಸವವಾದ ಮಾರನೆಯ ದಿನ ಎಣ್ಣೆ ಒತ್ತುತ್ತ ಕಾರಿನ ಕತೆ ಹೇಳಿದ. "ಸದ್ಯ, ನಿಮ್ಮಪ್ಪನ ಹಳೇ ಹರಕು ಮುರುಕು ಕಾರು ವ್ಯಾಪಾರ ಆಯ್ತಪ್ಪ ನಿನ್ನೆ. ಎಲ್ಲಿಗೆ ಯಾರು ಹೋದರೂ ನೆಚ್ಚಿಕೆಯೇ ಇಲ್ಲ, ತಲಪುತಾರೆ, ಬರುತಾರೆ, ಅಂತ. ಹೋದೋರು ಹೋದಲ್ಲೇ. ಇಷ್ಟು ದೊಡ್ಡ ಸಾಹುಕಾರರಲ್ಲಿ ಇಂಥ ಕಾರು ಅಂದರೆ ನಾಚಿಕೆಗೇಡಾಗಿತ್ತು. ಇಷ್ಟಕ್ಕೂ ಅದನ್ನಿಟ್ಟುಕೊಂಡಿರೋದು ಯಾಕೆ? ಬಹುಮಾನಕ್ಕೇ? ಅದರ ಉಪಯೋಗ ಅಷ್ಟರಲ್ಲೇ ಇದೆ ಸಾಹು ಕಾರರಿಗೆ. ಅದೇ ಅಮ್ಮಾವರು ಹೇಳೋದು 'ಯಾತಕ್ಕದು, ಬರಿ ದಂಡ. ಮನೆಯೋರಿಗೆ ಅದರ ಕೆಲಸವಿಲ್ಲ. ಬರಿ ಆಗಾಗ ಹೋಗೋರು ಬರೋರಿಗೆ ಆಗಿದೆ. ಅಷ್ಟೊಂದು ಖರ್ಚು ಯಾಕೆ?' ಅಂತ ನಾನೇ ಕೇಳಿದೀನಿ. ಅದಕ್ಕೆ ಸಾಹುಕಾರರು 'ನಿಂಗೆ ತಿಳೀದು ಸುಮ್ಮನಿರು. ಇಂಥ ಮನೆತನದೋರು ಎಂ. ಎಲ್. ಎ, ಒಂದು ಕಾರಿಗೆ ಗತಿಯಿಲ್ಲ ಅಂತ ಅನ್ನೋದಿಲ್ಲವೆ? ಇಷ್ಟಕ್ಕೂ ಖರ್ಚು ನಮಗೆ ಒಂದು ಲೆಕ್ಕವೆ? ಅದರಿಂದ ಎಷ್ಟು ಗೌರವ ಏನು ಕತೆ! ನಿಂಗೆ ಹೇಗೆ ಗೊತ್ತಾಗುತ್ತೆ?' ಅಂತ ಅಂದುಬಿಡುತ್ತಿದ್ದರು. ಅದೇನೋ ನಿಜ ಅನ್ನು. ಆದರೆ ಇಂಥ ಕಾರು ಇರೋದಕ್ಕಿಂತ ಇಲ್ಲದೆ ಇರೋದೆ ಮಾನ ವಾಗಿತ್ತು. ಈಗಲಾದರೂ ಸಾಗಿಹೋಗುತ್ತಲ್ಲ. ವಾರದಲ್ಲೇ ದುಡ್ಡು ಕೊಟ್ಟು ತಗೊಂಡು ಹೋಗ್ತಾರಂತೆ. ನಾಲ್ಕೂವರೆ ಸಾವಿರಕ್ಕೇ ಕೊಟ್ಟುಬಿಟ್ಟ ರಂತೆ. ಅಷ್ಟೊಂದು ತಪ್ಪಾಯ್ತು ನೋಡು. ಐದು ಸಾವಿರಕ್ಕೆ ಒಂದು ಚಿಕ್ಕ ಕಾಸು ಕಡಿಮೆಯಾದರೂ ಕೊಡಬೇಡಿ ಅಂತ ನಾನೇ ಮುಂದುವರಿದು ಹೇಳಿದ್ದೆ. ಸಾಹುಕಾರರು ನಗುತ್ತ 'ನೀನೇ ತಗೋ' ಅಂದರು. ನಂಗೇ-ಕಪ್ಪ ಅಡಿಗೆಮನೆಯಿಂದ ಊಟದ ಮನೆಗೆ, ಹೋಗೋದಕ್ಕೆ? ಇಷ್ಟಕ್ಕೂ

ನನ್ನಲ್ಲಿ ಏನು ಹಣ ಉಳಿದಿವೆ ಅಂತೀಯ ? ಬಂದ ಅಲ್ಪ ಸ್ವಲ್ಪವೆಲ್ಲ ಅಷ್ಟೆ ಸಿನೇಮಾ ನೋಡಿ, ಸಿಗರೇಟು ಸೇದಿಬಿಟ್ಟರೆ ಆಗಿಹೋಗುತ್ತೆ. ಏನೋ ನಿನ್ನ ಮದುವೇಲಿ, ಕುಸುಮಳ ಮದುವೇಲಿ ಏನಾದರೂ ನಂದಾಗಿ ಓದಿಸಬೇಕು ಅಂತ ನಾಲ್ಕು ಕಾಸು ತೆಗೆದಿಡುತ್ತಿದೀನಿ, ಅಷ್ಟೆ. ಹಾಗೇಂತ ಇದನ್ನೆಲ್ಲ ಹೇಳಲಿಲ್ಲ ಅವರ ಹತ್ತಿರ ಅನ್ನು. ತಗೊಂಡದ್ದು ಆರು ಸಾವಿರ. ಅಂದರೇನು ಆಗಲೇ ಹಳೇದು. ಅಷ್ಟರ ಮೇಲೆ ಆರೇಳು ವರ್ಷ ಆಯ್ತು ಆ ಡ್ರೈವರ್ ರಾಜು ಕೈಗೆ ಸಿಕ್ಕಿ ಕೆಟ್ಟು ಕಿಸಾತೆದ್ದು ಹೋಗಿ ಲದ್ದಿಯಾಗಿದೆ. ಮೂರು ಸಾವಿರ ಕೂಡ ಬಾಳೋದಿಲ್ಲ ಅಂತಾನೆ ರಾಜು. ಯಾರೂ ಇಷ್ಟಕ್ಕೂ ತಗೊಳ್ಳೊಲ್ಲ ಅಂದರಂತೆ. ಎಲ್ಲ ಪಾರ್ಟುಗಳೂ ಹಾಗೆ ಹಾಗೇಯಂತೆ. ಏನೋ ಅಲ್ಲಿ ಇಲ್ಲಿ ಅಷ್ಟು ರಿಪೇರಿ ಮಾಡಿಸಿ–ಸಾಯೋನಿಗೆ ಇಂಜಕ್ಷ್ಷನ್ ಕೊಟ್ಟು ಸಾವು ತಡೆಯೊ ಹಾಗೆ–ಬಣ್ಣ ಹಾಕಿಸಿ ಆ ಸಾಹಿತಿ ಅಂತ ಬಂದಿದ್ದರಲ್ಲ ಆ ಆಫೀಸರು, ಅವರಿಗೇ ತಗಲು ಹಾಕಿದರಂತೆ. ಶುದ್ಧ ಬೆಪ್ಪುತಕ್ಕಡಿ. ಸಾಹುಕಾರರೇ ಹಾಗೆಂದು ನಕ್ಕರು. ಯಾವುದೋ 'ಹಂಬರ್' ಅಂತ ಇಪ್ಪತ್ತು ಇಪ್ಪತ್ತೈದು ಸಾವಿರದ ಗಾಡಿ ಇರುತ್ತಂತಲ್ಲ. ಅದನ್ನ ತಾವು ತಗೋಬೇಕು ಅಂತ, ಇದನ್ನ ಮಾರುತೀನಿ ಅಂತ ಹೇಳಿದರಂತೆ. ಅದನ್ನೇ ತಂದರೂ ತರಬಹುದು. ಅವರಿಗೇನಪ್ಪ ಕಡಿಮೆ ? ಈಶ್ವರ ಬೇಕಾದ ಹಾಗೆ ಕೊಟ್ಟಿದ್ದಾನೆ. ಕೊಡುತ್ತಲೂ ಇದಾನೆ. ಹೀಗೇ ಇಟ್ಟಿರಲಿ. ಕೆಟ್ಟ ನೌಕರರನ್ನು ಕಳಿಸೋವಾಗ ಸರ್ಟಿಫಿಕೇಟು ಕೊಡ್ತಾರಲ್ಲ ಸಾಹುಕಾರರು, ಹಾಗೆ ರಾಜು ನಮ್ಮ ಕಾರನ್ನು ಹೊಗಳಿ ಮಾಡಿ ಗಂಟು ಹಾಕಿದ. ಸಾಹುಕಾರರೇನು ಕಡಿಮೆ ಹೊಗಳಿದರೇ? ನಾನೇ ಕೇಳಿದೆ. ಇದನ್ನೆ ಮಾಡು ಅಂತ ಆ ರಾಜುಗೆ ಎಷ್ಟು ಕಾಲದಿಂದ ಹೇಳುತ್ತಿದ್ದರು ಅಂತೀಯೆ? ಅವನಿಗೆ ಬಗೆಹರಿದಿರಲಿಲ್ಲ. ಅವನೂ ಸೋಮಾರಿ ಅನ್ನು. ಅದೂ ಅಲ್ಲದೆ ದಿನ ಬೆಳಗಾದರೆ ಆ ರಿಪೇರಿ ಈ ರಿಪೇರಿ ಅಂತ ದುಡ್ಡು ಮಾಡಿಕೋತಿದ್ದ. ಅದನ್ನ ಅವನೇ ಕೈಯಾರ ತಪ್ಪಿಸಿಕೊಳ್ಳೋದಕ್ಕೆ ಇಷ್ಟವಿರಲಿಲ್ಲವೋ ಏನೋ. ಈಗ ದಣಿಯೋರೆ ಹುಡುಕಿದ ಮೇಲೆ ಮೇಳ ಕಟ್ಟಲೇಬೇಕಲ್ಲ. ಇಂಥ ಚಾತುರ್ಯದ ಕೆಲಸಾನ ನಿಮ್ಮ ಮಾವಂಗೆ ಹೇಳಿದ್ದರು. ಅವರು ಮಾಡುತ್ತಾರೇ ? ಚೆನ್ನಾಯ್ತು. ಅವರು ಮಾಡೋದೊಂದೇ, ಭಾವನ್ನ ಬೋಳಿಸುತ್ತ ಇರೋದು. ಮಾವನ್ನ

ಹೀಗಂದ ಅಂತ ಸಿಟ್ಟುಮಾಡಿಕೋಬೇಡಪ್ಪ. ನಿಜವಾದ ಮಾತನ್ನ ಹೇಳಿದೆ, ಅಷ್ಟೆ. ಅಂತೂ ಸುಡುಗಾಡು ಕಾರು ಸುಡುಗಾಡಿಗೇ ಹೋಯ್ತು. 'ದುಡ್ಡು ಬಂದ ಮೇಲೆ ಹೇಗೋ ಅವರಿಗೆ ಮುಟ್ಟಿಸಿಬಿಟ್ಟರಾಯ್ತು' ಅಂತಾರೆ ಸಾಹು ಕಾರರು. ರಾಜು 'ಹುಂ' ಅಂದಿದಾನೆ. ಸಾಹುಕಾರರು ಸಾಹಿತಿಗಳಿಗೆ 'ನಿಮಗಾಗಿ ಐನೂರು ಬಿಟ್ಟಿದೀನಿ' ಅಂದರಂತೆ. ಅವರು ಉಬ್ಬಿಹೋದರು. ನಾಳೆ ಸರ್ಕೀಟಿಕೆ ಹೊರಡಲಿ ಗೊತ್ತಾಗುತ್ತೆ, ಮೂರು ಮೂರು ಮೈಲಿಗೆ ಮುರಿದು ಬೀಳೋದು. ಆತಿಥ್ಯ ಮಾಡಿದ್ದಕ್ಕೂ ಸಾರ್ಥಕವಾಯ್ತು, ಹ ಹಾ! ಸಾಹುಕಾರರು ಸೊಗಸಾದ ವ್ಯಾಪಾರ ಮಾಡಿದರು" ಸದಾಶಿವನಿಗೆ ನಗು ಹಿಡಿಸದಾಯಿತು, ನಗುವಿನಿಂದ ಆದರುತ್ತ ನೀರನ್ನು ಎಲ್ಲೆಲ್ಲೋ ಸುರಿದುಬಿಟ್ಟ.

"ಇದು ಸರಿಯೇ ಸದಾಶಿವ?" ಗುರು ತಡೆಯಲಾರದೆ ಕೇಳಿದ.

"ಏನು ನೀರೇ. ಏನೋ ನಕ್ಕು........"

"ಅಲ್ಲ, ಕಾರಿನ ವ್ಯಾಪಾರ."

"ಯಾಕೆ? ಅದರಲ್ಲೇನಿದೆ ತಪ್ಪು? ಸರಿಯಾದ ಗಿರಾಕಿ ಸಿಕ್ಕರೆ ಮಾರ ಬೇಡವೆ? ಅಂಥ ಗಿರಾಕಿ ಸಿಕ್ಕಬೇಕಲ್ಲ" ಸದಾಶಿವ ಇನ್ನೂ ನಕ್ಕ.

ಗುರುವಿಗೆ ವ್ಯಥೆಯಾಯಿತು. 'ಇಂಥ ಮುಗ್ಧನೂ ಈ ವಾತಾವರಣ ದಲ್ಲಿ ಹೇಗೆ ವಕ್ರವಾಗಿದ್ದಾನೆ' ಎಂದು ಸಂಕಟಪಟ್ಟುಕೊಂಡು ಸುಮ್ಮನಾದ. 'ಇವನಿಗೆ ಬೋಧಿಸಿದರೇನಾಗುತ್ತೆ? ತಿದ್ದಬೇಕಾದುದು ಬೇರೆಡೆಯಲ್ಲಿ, ಮೂಲದಲ್ಲಿ. ಎತ್ತಿಗೆ ಜ್ವರ ಬಂದರೆ ಎಮ್ಮೆಗೆ ಬರೆಹಾಕಿ ಏನು ಉಪಯೋಗ?' ಅಂದುಕೊಂಡ. ಆದರೆ ತಂದೆಯ ಎದುರಿಗೆ ನಿಂತು ವಿರೋಧಿಸುವುದು ಅವನಿಗೆ ಸಾಧ್ಯವಾಗಿರಲಿಲ್ಲ. ಅಂದುಕೊಂಡಾಗಲೆಲ್ಲ ಮನಸ್ಸು ಹಿಂಜರಿಯು ತ್ತಿತ್ತು. ಅವರು ಎಷ್ಟು ಮುದ್ದಿನಿಂದ ಬೆಳೆಸಿದ್ದರೂ ಸಲಿಗೆಯೊಡನೆ ವಿಚಿತ್ರ ವಾದ ಭಯಭಕ್ತಿಗಳೂ ರೂಢಿಯಾಗಿ ಬಂದಿದ್ದುವು. ಜತೆಗೆ, ಇಷ್ಟೊಂದು ಮಹತ್ವದ ಪ್ರೇಮಬಾಂಧವ್ಯವನ್ನು ಕಠಿಣ ಮಾತಿನಿಂದ ಹೇಗೆ ಹಿಗ್ಗಿಸುವುದು, ಕಡಿಯುವುದು ಎಂಬುದೇ ತೋಚದಂತಾಯಿತು. ತಂದೆಯ ಮುಖವನ್ನು ನೋಡದಾಗ ಇದ್ದ ಎದೆಯ ಗಟ್ಟಿತನ, ಕಾಠಿಣ್ಯ ಅವರ ಮುಖವನ್ನು ನೋಡಿದಾಗ, ಆ ಆಶೆ ದೈನ್ಯ ಪ್ರೇಮ ತುಂಬಿ ಮಗನೇ ಮೂರು ಜಗತ್ತೋ ಎನ್ನುವಂತಿದ್ದ ಕಣ್ಣನ್ನು ಕಂಡಾಗ ಕರಗಿ ಹೋಗುತ್ತಿತ್ತು. ತನ್ನ ಹಲವು

ಬಾರಿಯ ನಿರ್ಧಾರವನ್ನು ಹಿಂದಿರಿಗಿಸಿತ್ತು. ಅವರ ಮುಂದೆ ಅಸಹಾಯನಾಗಿ ದುರ್ಬಲನಾಗಿ ನಡೆದುಕೊಂಡುಬರುತ್ತ ತಡೆಯಲಾಗದೆ ತನ್ನ ಮೈಯನ್ನೇ ತಾನು ಪರಚಿಕೊಳ್ಳುತ್ತಿದ್ದ. ಅವರು "ಏನಪ್ಪ ಊಟ ಇಷ್ಟು ಹೊತ್ತಾಯ್ತೆ?", "ಯಾಕಪ್ಪ, ಸಪ್ಪಗಿದೀಯ ? ಮೈಗೆ ಸರಿಯಾಗಿದೆಯೆ ?" "ರಾತ್ರಿ ನಿದ್ದೆ ಸರಿಯಾಗಿ ಬಂದಿತ್ತೇನಪ್ಪ? ಕಣ್ಣೇಕೆ ಕೆಂಪಾಗಿವೆ ?", "ಸ್ನಾನದ ನೀರು ಸಾಕಾದಷ್ಟು ಬಿಸಿಯಾಗಿತ್ತೆ?" ಎಂದು ಕೇಳುತ್ತಿದ್ದ ಸಾಮಾನ್ಯ ಪ್ರಶ್ನೆ ಗಳಲ್ಲಿ ಕೂಡ ಅವರ ಎದೆಯಾಳದಲ್ಲಿ ತುಂಬಿರುವ ವಾತ್ಸಲ್ಯಭಾವನೆ ಎದ್ದು ಬಂದು ಇವನನ್ನು ಕವಿದು ದಿಂಗ್ಮೂಢನನ್ನಾಗಿಸುತ್ತಿದ್ದುವು. ಆಗ ಅವನಿಗೆ ತಂದೆ ಮಾತ್ರ ಕಾಣುತ್ತಿದ್ದ, ಸಾಹುಕಾರ ಕಾಣುತ್ತಿರಲಿಲ್ಲ. ಇದರ ಜತೆಗೆ "ಲೋ, ಸದಾಶಿವ, ಗುರಪ್ಪನಿಗೆ ಹಾಲುಬಾಯಿ ಇಷ್ಟ. ಮಾಡೋ", "ದಾಸ, ಗುರುಪ್ಪನ ಹಾಸಿಗೆ ಕೊಡವಿ ಹಾಸಿದೆಯೇನೋ ? ರೂಮು ಸರಿಯಾಗಿಟ್ಟಿ ಯೇನೋ?" ಎಂದು ಮುಂತಾಗಿ ಸಣ್ಣವಿಷಯಗಳನ್ನೂ ವಿಚಾರಿಸಿಕೊಳ್ಳುತ್ತಿ ದ್ದುದು; ತಾವೇ ತನಗಿಲ್ಲದ ತಲೆಯ ಎಣ್ಣೆ, ಸಾಬೂನು, ಟೂಥ್ ಪೇಸ್ಟ್ ಇವನ್ನೆಲ್ಲ ನೋಡಿಕೊಂಡು ತರಿಸಿಡುತ್ತಿದ್ದುದು; ಕೊಳೆ ಬಟ್ಟೆಗಳನ್ನು ಅಗಸ ನಿಗೆ ಹಾಕಿ ಮಡಿಮಾಡಿಸಿ ತರಿಸಿಡುತ್ತಿದ್ದುದು—ಹೀಗೆ ತಾನೇ ಮಾಡಿಕೊಳ್ಳ ಬಹುದಾದುದನ್ನೆಲ್ಲ ಅರಿಯದ ಕಂದನಿಗೆ ತಾಯಿ ಮಾಡುವ ಸೇವೆಯ ರೀತಿ ಯಿಂದ, ಭಾವನೆಯಿಂದ ಮಾಡುತ್ತಿದ್ದುದು ಇವು ಅವನನ್ನು ಮೆತ್ತಗೆ ಮಾಡಿ ದಾಕ್ಷಿಣ್ಯದಲ್ಲಿ ಕಟ್ಟಿಹಾಕಿದ್ದುವು. ಪರೋಕ್ಷವಾಗಿ ತನ್ನ ಬಗ್ಗೆ ವ್ಯಕ್ತಪಡಿಸಿದ ಹೆಮ್ಮೆ, ವಿಶ್ವಾಸ, ಗೌರವ; ತನ್ನಲ್ಲಿ ಕಾಣಬಯಸಿದ್ದ ಬೆಟ್ಟದಷ್ಟು ಬಯಕೆಗಳು; ಇವಕ್ಕೆಕಾದಿದ್ದ ಗತಿ; ಇವೇ ತಂದೆಗೆ ಅಗಾಧವಾದ ಶಿಕ್ಷೆಯೆಂದು ಅರಿತ ಗುರುವಿಗೆ ಅಪರಾಧಿಯ ಭಾವನೆಯೇ ಬರುತ್ತಿತ್ತು. ಆಗ ಅವನು ಮಿಲಿಮಿಲಿ ಒದ್ದಾಡುತ್ತಿದ್ದ. ಇನ್ನು ತಂದೆಯ ಇದಿರಿಗೆ ನಿಂತು "ನೀವು ಮಾಡುತ್ತಿರುವುದು ಸರಿಯಲ್ಲ" ಎಂದು ಹೇಗೆ ಹೇಳಿಯಾನು? ತಂದೆಯನ್ನು ನೋಯಿಸಿಯಾನು? ಗುರುವಿಗಂತೂ ಇದು ಸಾಧ್ಯವಾಗಿರಲಿಲ್ಲ. ಅವನು ಆ ಕಣ್ಣುಗಳಿಂದ, ಮಾತು ಗಳಿಂದ, ತಪ್ಪಿಸಿಕೊಂಡು ದೂರಾಗಿದ್ದು, ತನ್ನ ವ್ಯಕ್ತಿತ್ವದ ಗಟ್ಟಿತನವನ್ನು ಬೆಳೆಸಿಕೊಳ್ಳುವುದಕ್ಕೆ, ಭಾವನಾಸ್ವಾತಂತ್ರ್ಯಸಂಪಾದನೆಗೆ ಹೋರಾಡುತ್ತಿ ದ್ದನು. ಆದರೇನು, ಜಯಪ್ರದನಾಗಿರಲಿಲ್ಲ, ಆಗುವಂತೆಯೂ ಇರಲಿಲ್ಲ.

ಇದರಿಂದಲೇ ಅವನ ಬೇಸರ, ನಿರುತ್ಸಾಹ, ಕಹಿ, ಕೋಪ, ಎಲ್ಲರಿಗೂ ಕಾಣು ತ್ತಿದ್ದ ಮಂಗು.

ಕವಿವರರ ಕವಿತೆಗಳನ್ನು ಓದಿ ಒಹಳವಾಗಿ ಮೆಚ್ಚಿಕೊಂಡು, ಅವರ ತತ್ವಗಳಲ್ಲಿ ಗಾಢವಾದ ನಂಬಿಕೆಯನ್ನು ಇಟ್ಟುಕೊಂಡಿದ್ದುದರಿಂದ, ಅವರ ಕವಿತೆಗಳನ್ನು ಮತ್ತೆ ಮತ್ತೆ ಓದಿ ನೋಡಿ, ಶಾಂತಿ ಪಡೆಯಲು, ದಾರಿ ಹುಡು ಕಲು, ನೋಡಿದ. ಸಾಧ್ಯವಾಗಲಿಲ್ಲ. ಅವರೇ ಬಂದಾಗ ಬಹಳ ತೃಪ್ತಿಹೊಂದಿ, ಅವರ ಸೇವೆ ಮಾಡಿ, ಜೀವನದ ಗತಿಯ ಬಗ್ಗೆ ಸಾಮಾನ್ಯವಾಗಿ ಚರ್ಚೆ ಮಾಡಿ, ತನ್ನ ಅನುಮಾನಕ್ಕೆ ಸಮಾಧಾನ ಹುಡುಕಿದ. ಆದರೆ ಅವರು ಬಹುವಾಗಿ ತಮ್ಮ ಆರ್ಥಿಕ ತಾಪತ್ರಯವನ್ನೇ, ತಮ್ಮ ಕಾಲೇಜಿನ ರಾಜ-ಕೀಯದಿಂದ ತಮಗಾಗುತ್ತಿದ್ದ ತೊಂದರೆಗಳನ್ನೇ ತೋಡಿಕೊಳ್ಳುತ್ತ ಕಾಲ ಕಳೆದಿದ್ದುದರಿಂದ ಇವನಿಗೆ ಲಾಭವಾಗಿರದಿದ್ದುದಲ್ಲದೆ ಬೇಸರ ಇನ್ನು ಹೆಚ್ಚಾಗಿತ್ತು. ಅದಕ್ಕೇ ಅವರನ್ನು ಇನ್ನೆರಡು ದಿನಗಳು ಇದ್ದು ಹೋಗುವಂತೆ ಅವನು ಒತ್ತಾಯಪಡಿಸಲಿಲ್ಲ.

ಈಚೆಗೆ ಅವನು ತಾನಾಗಿಯೇ ಮಾತನಾಡಿಸುತ್ತಿದ್ದ ವ್ಯಕ್ತಿಯೆಂದರೆ ದಾಸ ಒಬ್ಬನೇ. ಬುದ್ಧಿ ತಿಳಿದಾಗಿನಿಂದ ಅವನ ಚರಿತ್ರೆಯನ್ನು ತಿಳಿದು ಕೊಂಡು ಅವನಿಗಾಗಿ ಮರುಗುತ್ತಿದ್ದ. ಅವನ ಸಮಾಧಾನ, ತೃಪ್ತಿ, ಪ್ರಾಮಾಣಿ-ಕತೆ, ಸ್ವಾಮಿನಿಷ್ಠೆ, ಪ್ರೀತಿ ಇವುಗಳನ್ನು ಕಂಡು ಆಶ್ಚರ್ಯಪಡುತ್ತಿದ್ದ. ಅವನ ಸುಖ-ದುಃಖಗಳನ್ನು ಆಗಾಗ ವಿಚಾರಿಸಿಕೊಳ್ಳುತ್ತಿದ್ದ. "ಏನು ದಾಸಜ್ಜ, ಯೋಚಿಸುತ್ತಾ ಇದೀಯೆ ?" ಎಂದರೆ ದಾಸ "ಏನೂ ಇಲ್ಲ ನನ್ನಪ್ಪ. ಏನು ಬೇಕು ನಂಗೆ ಅಷ್ಟೊಂದು ? ಇಲ್ಲೇನೈತೆ ನಂಗೆ ಯೋಚನೆ ?" ಎನ್ನು ತ್ತಿದ್ದ. "ಯಾರಾದರೂ ಏನಾದರೂ ಅಂದರೆ ?" ಎಂದು ಕೇಳಿದರೆ "ಅಂದರೆ ಏನಾಯ್ತಪ್ಪ ನಮ್ಮದೇನು ಹೋಯ್ತು ಹೇಳು?" ಎಂದು ಕೇಳಿ "ಹತ್ತು ಮಾತಾಡೋವಾಗ ಒಂದು ಅತ್ತಿತ್ತ ಹೋಗ್ತದೆ. ದಣಿಯೋರು ಅನ್ನೋಕೂ ಸರಿಯೆ, ಸಲಹೋಕೂ ಸರಿಯೆ. ತಪ್ಪೇನಾಯ್ತು? ಮಗನ ಹಾಗೆ ನೋಡಿ ಕೋತ ಇದಾರೆ. ಯಾರಪ್ಪ ಇಷ್ಟು ನೋಡಿಕೊಳ್ಳೋರು ಈ ಕಾಲದಲ್ಲಿ, ಅದೂ ನನ್ನಂಥೋರನ್ನ? ನನ್ನ ಮಗನೇ ಕೈಬಿಟ್ಟ." ಎಂದು ತನಗಾಗಿದ್ದ ಅನ್ಯಾಯವನ್ನೂ ನೆನೆಯದೆ ತೃಪ್ತಿಯಿಂದಲೇ ಹೇಳುತ್ತಿದ್ದ. ಅವನ ಮಗನ

ಮಾತನ್ನೆತ್ತಿದರೆ “ ಅದು ಯಾಕೆ ಬಿಡು ಮೋಗ. ನೀನಿಲ್ಲವೆ, ನಿನ್ನ ತಂಗಿ ಇಲ್ಲವೆ? ನಂಗೆ ಬೇರೆ ಯಾವ ಮೋಗದ ಯೋಚನೆ ಯಾಕೆ ” ಅನ್ನುತ್ತ ನೆನ-ಪನ್ನು ಅರಳಿಸುವಂತೆ ಮುಖ ತಿರಿಗಿಸಿಕೊಳ್ಳುತ್ತಿದ್ದ. ಮುದುಕ, ಮಗನಿಗಾಗಿ ಮರುಗುತ್ತಿರುವನೆಂದು ಅನುಮಾನ ಬಂದರೂ, ಮರುಕ್ಷಣದಲ್ಲಿ ಅವನು ತೋರಿಸುತ್ತಿದ್ದ ಹರ್ಷ, ಲವಲವಿಕೆ, ಆ ಅನುಮಾನಕ್ಕೂ ಅನುಮಾನ ತರುತ್ತಿತ್ತು. ‘ಇವನೀಗ ತತ್ವಜ್ಞಾನಿ, ಖುಷಿ’ ಎಂದುಕೊಂಡು ‘ಇವನ ಶಾಂತಿ ನನಗೆ ಬರಬಾರದೇ’ ಎಂದು ಗುರು ಹಂಬಲಿಸುತ್ತಿದ್ದನಾದರೂ ‘ಅದೂ ತಪ್ಪು. ಅನ್ಯಾಯದಲ್ಲಿ ಕ್ರೋಧವಿರಬೇಕು. ಅದೊಂದು ಶ್ರೇಷ್ಠ ಸಾಧನ—ಮಹ-ತ್ಕಾರ್ಯಕ್ಕೆ. ಅದೂ ನನಗೆ ಸಾಕಾದಷ್ಟು ಇಲ್ಲವಲ್ಲ. ಇದ್ದಿದ್ದರೆ ಹೀಗೆ ಮೂಗನಾಗಿರುತ್ತಿದ್ದೆನೆ? ಶುದ್ಧ ಅಪ್ರಯೋಜಕ. ಹೇಡಿ....’ ಎಂದು ನಿಂದಿಸಿಕೊಂಡು ಕೊರಗುತ್ತಿದ್ದ, ನಾಚುತ್ತಿದ್ದ.

ಇವನೊಡನೆ ಇನ್ನೂ ಸರಸವಾಡಿ ಮಾತಿಗೆಳೆಯುತ್ತಿದ್ದ ವ್ಯಕ್ತಿಯೆಂದರೆ ಕುಸುಮ ಒಬ್ಬಳೇ. ಅಣ್ಣನಿಗೆ ತಂಗಿಯಲ್ಲಿ ಬಹಳ ಮಮತೆ, ಪ್ರೇಮ. ತನಗಿಂತ ನಾಲ್ಕು ವರ್ಷ ಚಿಕ್ಕವಳಾದವಳನ್ನು ನಲವತ್ತು ವರ್ಷ ಚಿಕ್ಕವಳೋ ಎನ್ನುವಂತೆ ಭಾವಿಸಿ ಅವಳ ಹುಚ್ಚಾಟಕ್ಕೆಲ್ಲ ಹಾದಿ ಕೊಡುತ್ತಿದ್ದ. ತನಗೆ ಬೇಕಿಲ್ಲದ, ತಾನು ಸಹಿಸಲಾಗದ ವಿಷಯಗಳಲ್ಲೂ ನಸುನಗುತ್ತ ಸೈರಿಸುತ್ತ ನಗೆಯಾಟ ಚೇಷ್ಟೆಗಳಷ್ಟರಿಂದಲೇ ಕಾಡಿಸಿ ಪೀಡಿಸಿ ಸಿಟ್ಟಾಗಿಸಿ ಜಗಳ ವಾಡಿಸಿ, ಅಳಿಸಿ ಕಡೆಯಲ್ಲಿ ನಗಿಸಿ, ಅವಳ ಭ್ರಮೆ ಚಾಪಲ್ಯಗಳನ್ನೆಲ್ಲ ಪೂರ್ತಿಗೊಳಿಸುತ್ತಿದ್ದ. ಅವಳು ತನ್ನ ಸ್ನೇಹಿತೆ ಯಾರಲ್ಲೋ ಇದ್ದ ಹೊಸ ಮಾದರಿಯ ಹೇರ್‌ಪಿನ್ನನ್ನು ಬೆಂಗಳೂರಿನಿಂದ ತರಹೇಳಿದರೆ “ ಆಹಾ ನಿನಗಿರೋ ಕೂದಲಿಗೆ ಅದೊಂದು ದಂಡ” ಎಂದು ಹೀಯಾಳಿಸುತ್ತಿದ್ದ. ಅದಕ್ಕೆ ಅವಳು ‘ಅದೇನಾಗಿದೆ ನೋಡು, ಸ್ವಲ್ಪ. ಸ್ಕೂಲಿನಲ್ಲಿ ಇನ್ನು ಯಾರಿಗೂ ಈ ತರಹ ಇಷ್ಟು ಅಲೆಕೂದಲು ಇಲ್ಲವೇ ಇಲ್ಲ. ನಿಂಗೆ ನಂದೆಲ್ಲ ಹಾಗೇ. ಏನೋ ಅಷ್ಟು ಪಿನ್ ತಗೊಂಡು ಬಾರೋ ಅಂದರೆ ನನ್ನೇ ಅಲ್ಲಗಳೀತಾನೆ....”ಎಂದು ಅವಳು ಮೊದಲು ಮಾಡಿ, ನೀಳವಾದ ಜಡೆಯನ್ನು ಅವನ ಮುಖಕ್ಕೆ ಹಿಡಿ-ಯುತ್ತಿದ್ದಳು. ಹೀಗೆ ಮೊದಲಾದ ಮಾತು ವಾಗ್ವಾದ, ಜಗಳ, ಗುಡುಗು ಸಿಡಿಲುಗಳಲ್ಲಿ ಹಾಯ್ದು, ಕಣ್ಣೀರ ಮಳೆಯಾಗಿ ಹರಿದು, ನಗೆಯ ಹೊಗೆ

ಯಾಗಿ ಹೋಗುತ್ತಿತ್ತು. ಅನಂತರ ಒಪ್ಪಿಗೆಯಾಗಿ ಪಿನ್ನಿನ ತರಹವನ್ನು ತಿಳಿದುಕೊಳ್ಳುವ ವಿಶ್ವಪ್ರಯತ್ನದಲ್ಲಿ ಇನ್ನೊಂದು ಮರಿ ಜಗಳವಾಗಿ ಅಂತೂ ವಿಷಯ ಅವನ ತಲೆಗೆ ಹಾಗೂ ಹೀಗೂ ಹತ್ತುತ್ತಿತ್ತು. ಗುರು ಒಂದು ದಿನವೆಲ್ಲ ಬೆಂಗಳೂರಿನಲ್ಲಿ ಅಲೆದಾದರೂ ಆ ವಿಚಿತ್ರ ಪಿನ್ನನ್ನು ಇಟ್ಟುಕೊಂಡಿದ್ದ ಮೂಲೆಯ ಸಣ್ಣ ಅಂಗಡಿಯನ್ನು ಪತ್ತೆ ಹಚ್ಚಿ, ಭೀಮ ಸ್ವರ್ಣಕಮಲವನ್ನು ತಂದಂತೆ ತಂದು, ಸುಳ್ಳು ಹೇಳಿ, ಕೀಟಲೆ ಮಾಡಿ, ರೇಗಿಸಿ, ಕಡೆಗೆ ಕೊಟ್ಟು ಅದರ ಬೆಲೆಯನ್ನು ನೂರ್ಮಡಿ ಹೆಚ್ಚಿಸುತ್ತಿದ್ದ. ಹೀಗೆಯೇ ಕನ್ನಡಿ ಕೇಳಿದರೆ ಮುಖ, ಪೌಡರಿಗೆ ಹೇಳಿದರೆ ಮೈಬಣ್ಣ, ಬಳೆಗೆ ಹೇಳಿದರೆ ಮೈತುಂಬು, ಪಾಠ ವಿವರಣೆ ಕೇಳಿದರೆ ಬುದ್ಧಿ, ಇವುಗಳ ಚರ್ಚೆ ಸಿದ್ಧವೇ. ಕಡೆಗೆ ನಡೆ-ಯುವುದೆಲ್ಲ ಅವಳ ಅಪೇಕ್ಷೆಗೆ ಇಮ್ಮಡಿಯಾಗಿಯೇ. ಸಾಲದುದಕ್ಕೆ ಆ ಹಳೆಯ ಕಾಲದ ಹುಚ್ಚು ಗಂಡ ಬೇರೆ ಯಾವಾಗಲೂ ಅವನ ಜೇಬಿನಲ್ಲೇ ಕುಳಿತಿ-ರುತ್ತ ಕರೆದ ಕ್ಷಣವೇ ಹೊರಗೆ ಬಂದು, ಭಾವ ಹೇಳಿದ ಹಾಗೆ ಕೇಳಿ, ಹೆಂಡತಿ ಯನ್ನು ಈಗಿನಿಂದಲೂ ಗೋಳು ಹೊಯ್ದುಕೊಳ್ಳುತ್ತಿದ್ದ. ಪ್ರತ್ಯಕ್ಷದಲ್ಲಿ ಹೇಗಿದ್ದರೂ ಪರೋಕ್ಷದಲ್ಲಿ ತಂಗಿಯ ಬಗ್ಗೆ ಅವನಿಗಿದ್ದ ಹೆಮ್ಮೆ ಸ್ವಲ್ಪವಲ್ಲ. ಚಿಕ್ಕಮ್ಮ ಅವಳ ಅಲಂಕಾರದ ಹಂಬಲನ್ನು ಆಕ್ಷೇಪಿಸಿದರೆ "ಏನು ಚಿಕ್ಕಮ್ಮ, ಎಲ್ಲ ನಿನ್ನ ಹಾಗೇ ಇರುತ್ತಾರೇ? ಕುಸುಮ ಈಗಿನ ಹುಡುಗಿ, ಚೆಲುವೆ ಬೇರೆ. ಅಲಂಕಾರ ಮಾಡಿಕೊಂಡರೂ, ಒಪ್ಪುತ್ತೆ. ಮಾಡಿಕೊಳ್ಳಲಿ ಬಿಡು. ಈ ವಯಸ್ಸಿನಲ್ಲೇ ಅವರಿಗೆ ಅದೆಲ್ಲ ಚಪಲ. ಅಷ್ಟು ಸ್ವಲ್ಪವನ್ನೂ ತೀರಿಸಿಕೊಳ್ಳ ಬೇಡವೆ—ಪಾಪ? ಏನು ತಪ್ಪು? ಜೀವನದ ಗಾಣಕ್ಕೆ ಸಿಕ್ಕಿದ ಮೇಲೆ ಬೇರೆ ಬೇರೆ ಹಂಬಲುಗಳು ಇವನ್ನು ತಳ್ಳಿಹಾಕುತ್ತವೆ. ಇಂಥಾದ್ದೆಲ್ಲ ತೀರಬೇಕಾದ ಕಾಲ ಈಗ. ಇವಳನ್ನೇ ಆಕ್ಷೇಪಣೆ ಮಾಡುತ್ತೀಯಲ್ಲ, ಬೆಂಗಳೂರು ಕಾಲೇಜಿನ ಹುಡುಗೀರನ್ನ ನೋಡಬೇಕು. ನಿಂಗೆ ಮಾತೇ ನಿಂತುಹೋಗುತ್ತೆ. ಹುಡುಗರಾದ ನಮಗೇ ಅನ್ನಿಸುತ್ತೆ 'ಇದೇನು ಅಬ್ಬರ ಇವರದ್ದು ಅಂತ!" ಎಂದು ಸಮಾಧಾನ ಕೊಡುತ್ತಿದ್ದ. "ಹಾಗಾದರೆ ನಾಲ್ಕು ಅಕ್ಷರ ಕಲಿತಿದೀನಿ ಅಂತ ಹೊರಗಿನ ಗಂಡಸರಲ್ಲಿ ಅವಳು ತೋರಿಸೋ ಸಲಿಗೆಯೂ ಸರಿ-ಯೆನಪ್ಪ?" ಎಂದು ಕೇಳಿದರೆ "ಅದೂ ಹುಡುಗತನದ ಚೆಲ್ಲಾಟವೇ. ಬೇರೆ ಕಡೆಯಿಂದ ಬೀಸಿದ ಗಾಳಿಯೇ. ಅವಳಲ್ಲ ಕಾರಣ. ಫ್ಯಾಷನ್ನೇ ಬದಲಾ-

ಯಿಸುತ್ತಾ ಇದೆ, ಕಾಲದೊಡನೆ ಸ್ವಲ್ಪ ಎಚ್ಚರಿಕೆಯಿಂದ ಇದ್ದರಾಯ್ತು ತಪ್ಪೇನಿಲ್ಲ. ಒಂದು ವೇಳೆ ತಪ್ಪಿದ್ದರೂ ಇನ್ನು ಮೇಲೆ ಆ ಸೆಳೆತವೇ ಜೋರಾಗುತ್ತೆ. ಹಿಂದಿನೋರು ಸೈರಿಸಿ ಸರಿಹೋಗಿಸಿಕೊಳ್ಳಬೇಕು, ಅಷ್ಟೆ" ಎಂದು ಹೇಳುತ್ತಿದ್ದ. ಅವಳು "ನೀನು ಯಾವಾಗಲೂ ನಿನ್ನ ತಂಗಿಯನ್ನು ಬಿಟ್ಟು ಕೊಡೋದಿಲ್ಲ, ಬಿಡು. ಅದೆಂಥ ಅಭಿಮಾನವೋ ಕಾಣೆ. ಈಗ ನೀನಿಲ್ಲವೇನಪ್ಪ—ಹಾಗಾದರೆ ?" ಎಂದು ಕೇಳಿದರೆ "ನಾನೂ ಬದಲಾಯಿಸಿದೀನಿ ಚಿಕ್ಕಮ್ಮ, ಹೊರಗೆ ಹೆಚ್ಚಾಗಿಲ್ಲದೇ ಇರಬಹುದು. ನನ್ನ ದಾರಿಗೂ ಹಿಂದಿನ ನಂಬಿಕೆ ರೂಢಿ ನೀತಿಗಳಿಗೂ ವ್ಯತ್ಯಾಸವಿದೆ" ಎಂದು ಉತ್ತರ ಕೊಡುತ್ತಿದ್ದ. "ಅದೇನೋ, ನಂಗಂತೂ ವ್ಯತ್ಯಾಸ ತೋರೋದಿಲ್ಲ" ಅಂದರೆ "ನಂಗೆ ತೋರಿಸೋದಕ್ಕೆ ಧೈರ್ಯವಿಲ್ಲ, ಚಿಕ್ಕಮ್ಮ" ಎಂದು ಮುಗಿಸಿ ಅವಳಿಗೆ ಅನುಮಾನ ಆಶ್ಚರ್ಯವನ್ನುಂಟುಮಾಡುತ್ತಿದ್ದ.

ಇಂಥ ಅಣ್ಣನೊಡನೆ ಚೆಲ್ಲಾಟವನ್ನು ರೂಢಿಯಾಗಿಸಿಕೊಂಡಿದ್ದ ತಂಗಿ ಅವನನ್ನು ಇನ್ನೂ ಆಗಾಗ ಕೆಣಕುತ್ತಿದ್ದಳು. ಅವಳ ಆಟದಲ್ಲಿ ಇವನು ಈಗಲೂ ಸೇರಿಕೊಂಡು ನಸುನಗುತ್ತಲೇ ಪ್ರಶ್ನೋತ್ತರಗಳನ್ನು ಸಾಗಿಸಿದರೂ ಅದರಲ್ಲಿ ಹಿಂದಿನ ಬಿಸಿಬಿಸಿ ಆಸಕ್ತಿಯಿರಲಿಲ್ಲ. ಇದು ಅವಳ ಗಮನಕ್ಕೂ ಬರದೆ ಇರಲಿಲ್ಲ. ವಸಂತಸಾಹಿತ್ಯೋತ್ಸವದ ಮಾರನೆಯ ದಿನಕ್ಕಾಗಿ ಕಾಮೇಶ್ವರಯ್ಯನವರಿಗೆ ಕೊಟ್ಟ ಮಾತಿನಂತೆ ಅವರ ಕಾಲವನ್ನು ತುಂಬುವುದಕ್ಕೆ ಅಣ್ಣನ ಸಹಕಾರ ಬೇಕಾಗಿತ್ತು. ತನಗೇನೋ ಅಯ್ಯನವರ ಬಳಿಯಿದ್ದು ಮಾತು-ಕತೆಯಾಡುವುದು, ಅವರನ್ನು ಎಲ್ಲಿಯಾದರೂ ಕರೆದುಕೊಂಡು ಹೋಗುವುದು ಬಹಳ ಹಿತವಾಗಿತ್ತು. ಆದರೆ ಶಾಲೆಯಲ್ಲಿ ಜತೆಗಾತಿಯರೊಡನೆ ಉತ್ಸವದ ಏರ್ಪಾಡಿನಲ್ಲಿ ಸಹಕರಿಸದಿದ್ದರೆ ಅವರು ಏನೆಂದುಕೊಳ್ಳುವರೋ ಎಂದು ಯೋಚನೆ. ಅವರಿಗೆ ತಾನು ಹೋಗದ ಕಾರಣ ಗೊತ್ತಾದರೆ, ಅಸೂಯೆ ಹುಟ್ಟಿಸಿದ ಗೇಲಿಯಿಂದ ತನ್ನ ಗತಿಯೇನಾಗುವುದೋ ಎಂಬ ಭಯ. ಆಗಲೇ ಸ್ನೇಹಿತರಲ್ಲಿ ಪಿಸಿಪಿಸಿ ಗುಸಗುಸದ ಮಾತು, ಕಿಲಕಿಲದ ನಗೆ, ಕಣ್ಣುಮಿಟಕು ಕಡಿಮೆಯಿರಲಿಲ್ಲ. ಆಗಲೇ ಹಲವರು "ಕುಸುಮ, 'ಕಾಮೇಶ್ವರಯ್ಯನವರ ವ್ಯಕ್ತಿಪರಿಚಯ'ದ ವಿಷಯ ಮಾತಾಡೇ", "ಅವರ ವಿಷಯಕ್ಕೆ ಪುಸ್ತಕ ಬರೀತೀಯೇನೇ?", "ಅದೃಷ್ಟಶಾಲಿಯಮ್ಮ!'

"'ಪ್ರೇಮ' ಪುಸ್ತಕ ಅವರಲ್ಲಿ ಚರ್ಚೆ ಮಾಡಿದೆಯೇನೆ? ಅದರಲ್ಲಿ ಬರೆದಿರೋದೆಲ್ಲ ಅವರ ಭಾವನೆಯೇ? ಅದೇಥ ರಸಿಕರೇ ಅವರು. ಅವರ ಹತ್ತಿರ ದಿನವೂ ಮಾತಾಡುತ್ತೀಯಲ್ಲ", "ಅವರೇ ಆಡಿಸುತ್ತಾರೇನೇ?" "ಆಮೇಲೆ ಎಲ್ಲ ಹೇಳಬೇಕು—ನಡೆದದ್ದು ಆಡಿದ್ದೆಲ್ಲ ಅಂ?" ಹೀಗೆ ಆಗಲೇ ತಿವಿದು, ಕಚಗುಳಿಯಿಟ್ಟು, ಮುಂದಿನ ಪುರಾಣಕ್ಕೆ ಪೀಠಿಕೆ ಹಾಕಿದ್ದರು. ದಿನದಿನಕ್ಕೂ ಗಳಿಗೆಗಳಿಗೆಗೂ ಇದು ಬೆಳೆಯುತ್ತಿತ್ತು. ಹೀಗಿದ್ದು ಮನೆಯಲ್ಲಿ ಇದ್ದು ಬಿಡಲು ಮನಸ್ಸೊಪ್ಪದೆಯೆ ಆ ಬೆಳಿಗ್ಗೆ ಅಣ್ಣನನ್ನು ನೋಡಲು ಹೋದಳು. ಆವನು ತಲೆ ಬಾಚಿಕೊಳ್ಳುತ್ತಿದ್ದು, ಕನ್ನಡಿಯಲ್ಲೇ ಅವಳ ಬರವನ್ನು ಕಂಡು ತಟ್ಟನೆ ತಿರಿಗಿ "ಓಹೋ, ಬೆಳಗಿನ ಹೂವಿನ ಹಾಗಿದೀಯೆ ಹೆಸರಿಗೆ ತಕ್ಕಹಾಗೆ. ಎಲ್ಲಿಗೆ, ಇಷ್ಟು ಶೃಂಗಾರ ಮಾಡಿಕೊಂಡು? ಏನು ಸಮಾಚಾರ?" ಎಂದು ನಸುಗುತ್ತಲೇ ಕೇಳಿದ. ಆದರೆ ಅವಳೂ ಕನ್ನಡಿಯ ಪ್ರತಿಬಿಂಬದಲ್ಲೇ ಅವನ ಚಿಂತೆಯ ಮುದ್ರೆಯನ್ನು ಕಂಡಿದ್ದಳು. ಅದೇ ತನ್ನ ಮೇಲೆ ಕೊಂಚ ತಣ್ಣೀರನ್ನೂ ಎರಚಿತ್ತು.

"ಸ್ವಲ್ಪ ಕೆಲಸವಿತ್ತು."

"ಹಾಗಾದರೆ ತಾನೆ ಅಣ್ಣನ ಹತ್ತಿರ ಬರೋದು. ಏನು ಈ ಸಾರಿ ಗೆಜ್ಜೆಯೋ, ಕಾಲುಂಗುರವೋ? ಓ ಕಾಲುಂಗುರಕ್ಕಿನ್ನೂ ಮದುವೆಯಾಗಿಲ್ಲವಲ್ಲ, ದೊಡ್ಡಕಲ್ಲಪ್ಪನ್ನ."

"ಬಿಡಣ್ಣ, ಹಳೇ ಮಾತು. ಯಾಕೆ ವೇಷ ಹಾಕ್ತೀಯ?"

"ವೇಷ!"

"ನಂಗೇನು ತಿಳಿಯೋದಿಲ್ಲವೆ?"

"ನೀನೇನವ್ವ ನನ್ನ ತಂಗಿ ಅಲ್ಲವೆ? ಬಹಳ ಜಾಣೆ. ಎಲ್ಲ ಊಹಿಸಿಯೇ ತಿಳಿದುಕೊಳ್ಳಬಲ್ಲೆ. ಹೇಳು ಅದೇನು ಮತ್ತೆ."

"ಯಾಕಣ್ಣ ಹೀಗೆ ಮಂಕಾಗಿರುತ್ತೀ ಈಚೀಚೆಗೆ?"

"ಮಂಕು!" ಅವನು ಗಟ್ಟಿಯಾಗಿ ನಕ್ಕ.

"ಹೂಂ, ಶುದ್ಧ ಮಂಕು!" ಅವಳ ಗಾಂಭೀರ್ಯ ಚೆಲ್ಲಾಟಕ್ಕಿಟ್ಟಿತು.

"ಅಯ್ಯೋ ಮಂಕೇ!" ಅವನು ಇನ್ನೂ ನಕ್ಕ.

"ಅಯ್ಯೋ, ಹೇಳಣ್ಣ. ಇರಲಿ ಈ ಆಟ. ಏನು, ಕಾಮೇಶ್ವರಯ್ಯ

ನೋರ ' ಪ್ರೇಮಿ 'ಯ ನಾಯಕ ಮಂಕು ಕಿಶೋರನ ಹಾಗೆ ನೀನೂ ಅನುರಾಗದಲ್ಲಿದ್ದೀಯೋ ? "

" ಹೂಂ ! " ಅವಳ ಹತ್ತಿರ ಬಂದು ಕಿವಿಯಲ್ಲಿ ಪಿಸಿಗುಟ್ಟಿ ಕೆನ್ನೆಯನ್ನು ತಿವಿದ. ಗುರುವಿನ ಎದೆ ತಂಗಿಯನ್ನು ಕಂಡು ಹಗುರವಾಗಿತ್ತು.

" ಥೂ ! ನೀನು ಮಾಡೋದು ಇಷ್ಟೇ. ವ ತ್ತೆ ಕನ್ನಡಿಯ ಮುಂದೆ ಹೋಗಬೇಕು. "

" ನಿಂಗೆ ಇನ್ನೇನು ಕೆಲಸ ? ಯಾವ Prince Charming ಬರ್ತಾನೆ ಅಂತಾ ಹೀಗೆ ಕಾದಿದೀಯೋ, ಅಲಂಕಾರ ಮಾಡಿಕೋತೀಯೋ ಕಾಣೆ. ಕಡೆಗೆ ಸಿಕ್ಕೋನು ಗೊತ್ತೇ ಇದೆಯಲ್ಲ........"

" ಸಾಕುಮಾಡು. ಮತ್ತೆ ಮಾತು ತಿರುಗಿಸಬೇಡ. ನಂಗೆಲ್ಲ ಗೊತ್ತಿದೆ, ಈ ಬುದ್ಧಿವಂತಿಕೆ. ಹೇಳು ಮತ್ತೆ. "

" ಏನನ್ನ ? "

" ಅದೇ ಹೇಳಿದೆನಲ್ಲ. ಆ ಅದೃಷ್ಟಶಾಲಿ ಹುಡುಗಿ ಯಾರು ? "

" ಹುಡುಗಿಯೇ ?... ....ಇದಾಳೆ ಒಬ್ಬಳು. "

" ನೋಡಿದೆಯಾ, ನಂಗೆ ಗೊತ್ತು. ಅವಳ ಹೆಸರು ? "

" ಏಕಾಂತ. "

" ಏಕಾಂತ ! ಅದೆಂಥ ಹೆಸರೋ ? ಬಹಳ ನವೀನವಾಗಿದೆ. "

" ನಿನಗೆ ಹೆಣ್ಣು ಹುಟ್ಟುತ್ತಲ್ಲ, ಮೊದಲನೇದು ?—ಅದಕ್ಕಿಡು "

" ಹೋಗೋ. ಅವಳೇನು ಕಾಲೇಜುಮೇಟೇನು ? "

" ಇಲ್ಲ, ಲೈಫ್‌ಮೇಟು ಇದೇನು ಮೇಟು ಮೇಟು ಅಂತ. ಸಂಗಾತಿ ಅನ್ನಬಾರದೆ. ಹುಟ್ಟಲಿಲ್ಲ ಬೆಳೀಲಿಲ್ಲ, ಬರಿ ಇಂಗ್ಲೀಷೆ ಇಂಗ್ಲೀಷು ಮೊಟ್ಟೆ."

" ಇರಲಿ ಆ ಮಾತೆಲ್ಲ ಯಾಕೆ. ಎಲ್ಲಿದಾಳೆ ಅವಳು ? "

" ಇನ್ನು ಹೆಚ್ಚು ಹೇಳೋದಿಲ್ಲ. "

" ನೋಡಿದೆಯಾ ನೋಡಿದೆಯಾ ? ನಂಗೆ ಹೇಳೋದಿಲ್ಲವೋ ? ನಾನು ಯಾರಿಗೂ ಹೇಳೋದಿಲ್ಲ. "

" ಹಾಗೋ ? ಭಾಷೆಯೋ ? "

" ಹುಂ, ಭಾಷೆ. "

" ಹಾಗಾದರೆ ಇನ್ನೂ ಹತ್ತಿರ ಬಾ. "

ಕುಸುಮ ಇನ್ನೂ ಹತ್ತಿರ ಹೋದಳು.

" ದೊಡ್ಡ ತಿಟ್ಟನ ಮೇಲೆ " ಅವನು ಪಿಸಿಗುಟ್ಟಿದ.

" ಥೂ! ಬರಿ ಸುಳ್ಳು! ಮೋಸ! ನನ್ನ ಕಂಡರೇ ಹೀಗೆ ನಿಂಗೆ ಬರಿ ಚೆಲ್ಲಾಟ. "

" ಇನ್ನು ನಿನ್ನ ಪ್ರಿಯನ ವಿಚಾರ ಹೇಳು ಮತ್ತೆ? "

" ಹುಂ, ಹೇಳ್ತೀನಿ ಬಾ ಅಂತ. ನಿಂದು ಹೇಳಿದೆಯಲ್ಲ. ಅವನ ಹೆಸರು ನಿಶಾಕಾಂತ್ ಅಂತ. ಅವನೂ ದೊಡ್ಡ ತಿಟ್ಟಿನ ಮೇಲೇ ಬರ್‍ತಾನೆ, ರಾತ್ರಿಹೊತ್ತು. "

" ಓ, ಸರಿ, ನಂಗೆ ಗೊತ್ತು. ನೋಡಿದೀನಿ. "

" ಅಯ್ಯೋ ಹೇಳಣ್ಣ, ಪೀಡಿಸಬೇಡ. ನಿಜವೆ? "

" ಹುಂ ಕಣೆ ಹುಚ್ಚಿ, ನಿಜವಾಗಿ. "

" ಓ ಬಿಡೊ ನಾನೇನು ಅಷ್ಟು ಪೆದ್ದು ಅಂದುಕೊಂಡೆಯ? ದೊಡ್ಡ ತಿಟ್ಟಿನ ಮೇಲಿರುತ್ತೆ ಮಣ್ಣು. ಅದೊಂದು ನಿರ್ಜನ ಪ್ರದೇಶ. "

" ಏಕಾಂತ ಅಲ್ಲವೆ? "

" ಓಹೋ ಅದೇಯೋ, ಅರ್ಥ ? "

" ಪೆದ್ದೀ ಪೆದ್ದೀ. "

" ಹಾಗೇ ಆಗಲಿ. ಪೆದ್ದೀ. ಹೇಳು ಮತ್ತೆ. "

" ಅಯ್ಯೋ ಒಳ್ಳೇ ಹುಡುಗಿಯಾಯ್ತಪ್ಪ. ಹೇಳು ಮತ್ತೆ, ಹೇಳು ಮತ್ತೆ. ಏನು ಹೇಳಲಿ ? "

" ಯಾಕೆ ಹೀಗು ಮಂಕು ? "

" ನಾನೇನು ಮಂಕಲ್ಲ. "

" ಮಂಕಲ್ಲದೇ ಇದ್ದರೆ ಪೆಚ್ಚು. "

" ಅದು ಬಿಡು, ಯಾಕೆ ಬಂದೆ ಹೇಳು? "

" ಯಾಕೊ. ನಿನ್ನ ನೋಡಿದರೆ ಏನು ಹೇಳೋದಕ್ಕೂ ಮನಸ್ಸೇ ಬರೋದಿಲ್ಲ. "

" ಅಂಥಾದ್ದೇನೆ? ಏನಾಗಿದೀನಿ ? "

" ಏನು ಹೇಳಲಣ್ಣ ? ಯಾವಾಗಲೂ ಅತೃಪ್ತಿ ನಿನ್ನ ಮುಖದ ಮೇಲೆ ತೇಲ್ತಾ ಇರುತ್ತೆ. "

" ನಿಜ. " ಅವನ ಮುಖ ನಗೆವೇಷವನ್ನೊಗೆದು ಚಿಂತೆಯನ್ನು ಮತ್ತೆ ಧರಿಸಿತು.

" ಯಾಕೆ ? ಇಂಥಾ ಮನೇಲಿ ಹೀಗೆ ? "

" ಅದೇ ಅತೃಪ್ತಿಕಾರಣ "

" ಏನು ತಪ್ಪು ಇಲ್ಲಿ ? " ಅವಳಿಗೆ ಆಶ್ಚರ್ಯವಾಯಿತು.

" ನೀನೇ ನೋಡಿಕೊ ಕುಸುಮ. ಹೇಳಿ ತಿಳಿಸೋದಲ್ಲ ಅದು. ಅವರವರಿಗೇ ಗೊತ್ತಾಗಬೇಕು. "

" ನಂಗೇನು ಗೊತ್ತಾಗೋದಿಲ್ಲ. "

" ನೀನೂ ಈ ವಾತಾವರಣದ ಮಗುವೇ. "

" ನೀನು ? "

" ನಾನು ಹತ್ತುಕಡೆ ಹೊರಗೆ ನೋಡಿದೀನಿ. "

" ಏನು ವ್ಯತ್ಯಾಸ ? "

" ಅದೆಲ್ಲ ದೊಡ್ಡ ಕತೆ. ಈಗ ಪುರುಸತ್ತಿಲ್ಲ. ಒಂದು ದಿನ ನಿಂಗೇ ತಿಳಿಯುತ್ತೆ. ತಿಳಿಯದಿದ್ದರೆ ನಾನೇ ನಿಂಗೂ, ಎಲ್ಲರಿಗೂ ತಿಳಿಸುತ್ತೀನಿ. ಈಗ ಬೇಡ. "

" ನಿನ್ನ ಒಗಟು, ಮುಚ್ಚುಮರೆ ನಂಗೆ ಗೊತ್ತಾಗೋದಿಲ್ಲ. "

"ಹೋಗಲಿ ಬಿಡು. ಬಂದದ್ದು ಹೇಳು. ನಾನು ಹೊರಗೆ ಹೋಗಬೇಕು."

" ಕಾಮೇಶ್ವರಯ್ಯನವರನ್ನೂ ಕರೆದುಕೊಂಡು ಹೋಗಬಾರದೆ ? "

" ಯಾಕೆ, ನಿಂದೇನು ಶಿಫಾರಸು. ಅವರೇ ಬರಲಿ ಬೇಕಾದರೆ. "

" ಅಲ್ಲ. ನನ್ನಿಂದ ತಾನೆ ಅವರು ನಿಂತದ್ದು. ಅದಕ್ಕೇ ಹೇಳಿದ್ದೆ 'ನಿಮಗೆ ಹೊತ್ತು ಹೋಗೋದಕ್ಕೆ ನಮ್ಮಣ್ಣ ನಿಮ್ಮ ಜತೇಲಿರುತ್ತಾನೆ' ಅಂತ. ನಾನು ನಾಳೆ ಉತ್ಸವಕ್ಕೆ ಸಿದ್ಧಮಾಡಬೇಕು, ಸ್ಕೂಲಿಗೆ ಹೋಗಿ "

" ಹಾಗೋ ? ಇಲ್ಲದಿದ್ದರೆ ನೀನೇ ನೋಡಿಕೋತಾ ಇದ್ದೆ ಅಂತಲೋ ಅರ್ಥ ? "

" ಹಾಗೇ ಏನಲ್ಲ. "

“ ಹಾಗೇ ಹಾಗೇ. ”

“ ಆಗಲಿ, ಈಗ ಹೇಳಲೇ ಅವರಿಗೆ ? ”

“ ಹೇಳು. ನಾನೇ ಬೇಕಾದರೂ ಕೇಳುತ್ತೀನಿ. ಆದರೆ........”

“ ಆದರೇನು ? ”

“ ನಿನ್ನ ‘ ಹೀರೋ ’ ನಂಗೆ ಹಿಡಿಸೋದಿಲ್ಲ—ಯಾಕೊ. ”

“ ನನ್ನ ‘ ಹೀರೋ ’ನೋ. ” ಅವಳು ಮುನಿಸು ತೋರಿಸಿದಳು.

“ ತಪ್ಪು ತಿಳಿಬೇಡ ಕುಸುಮ. ಆತ, ಯುವಕ ಯುವತಿಯರು ಬಹಳ ಜನಕ್ಕೇ ಆರಾಧ್ಯದೇವತೆ ಹಾಗಿದಾನೆ. ”

“ ನಿಜವೇ ನಿಜ. ನಿಂಗಲ್ಲವೋ ? ”

“ ಅಲ್ಲ. ”

“ ಯಾಕೆ ? ”

“ ಬಹಳ ಹಗುರದ ಮನುಷ್ಯ ಅಂತ ಕಾಣುತ್ತೆ. ”

“ ಅದು ಹೇಗೆ ? ”

“ ಅವರ ಪುಸ್ತಕ ಅಷ್ಟು ಓದಿ ಬಂದಿರೋ ಅಭಿಪ್ರಾಯ. ”

“ ಯಾಕೆ ? ಅವರ ಪುಸ್ತಕಗಳು ಚೆನ್ನಾಗಿಲ್ಲವೆ ? ಪ್ರಪಂಚವೇ ಓದಿ ಹುಚ್ಚಾಗಿದೆ. ”

“ ಅದೇ ಕಾರಣ—ಹುಚ್ಚಾಗಿಸಿದ್ದು. ”

“ ಈ ಮಾತಿನ ಚಾತುರ್ಯಕ್ಕೇನು ? ನೀನು ಅವರ ಪುಸ್ತಕ ಓದಿ ಅರ್ಥ ಮಾಡಿಕೊಂಡೇ ಇಲ್ಲ. ”

“ ಅರ್ಥ ಮಾಡಿಕೊಳ್ಳೋದಕ್ಕೇನಾದರೂ ಇದ್ದರಲ್ಲವೆ, ಅಪಾರ್ಥ, ಅನರ್ಥ ಬಿಟ್ಟು. ”

“ ಪ್ರೇಮದ ಮನಶ್ಶಾಸ್ತ್ರ ಎಷ್ಟು ಚೆನ್ನಾಗಿ ತೋರಿಸಿದಾರೆ ! ”

“ ಏನು ಆ ಪುಟಪುಟದ ಜಿಡ್ಡು, ಕೈ, ಮೈ, ಮನಸ್ಸಿಗೆಲ್ಲ ಹತ್ತಿ ಕೊಳ್ಳೋದು, ಪ್ರೇಮವೆ ? ಬರಿ ದೈಹಿಕ ಆಕರ್ಷಣೆ, ಚಿತ್ತಭ್ರಮಣೆ. ಪ್ರೇಮ, ಹಾಲಿನ ಹಾಗಿರಬೇಕು ಕಣೇ, ಹೆಂಡದ ಹಾಗಲ್ಲ. ”

“ ನಿಂಗೆ ಬಹಳ ಗೊತ್ತು, ಅವರಿಗಿಂತ. ಮುದುಕನ ಹಾಗೆ ಆಡುತ್ತೀ. ”

" ಹೌದು, ವಯಸ್ಸೇನೋ ಬೇಗ ಬೇಗ ಮೇಲೆ ಆಗತುಕೋತಾ ಇದೆ, ಅನ್ನಿಸುತ್ತೆ. "

" ಹಾಗೆ ಒಪ್ಪಿಕೊ. ಈಗೇನು ಅವರನ್ನೂ ಜತೆಗೆ........"

" ಓಹೋ, ಆಗಲೇ ಹೇಳಿದೆನಲ್ಲ. ಅದೇ ಲೌಕಿಕ ತಾನೆ " ಅವನು ನಕ್ಕು "ಬಂದು ನಾನೂ ಕರೀತೀನಿ, ಹೇಳು" ಗುರು ಕೈಚೌಕ ಹುಡುಕುತ್ತಿದ್ದ.

೫

*   *   *

ಕುಸುಮ ಕಾಮೇಶ್ವರಯ್ಯನವರ ಬಳಿಗೆ ಹೋದಳು. ಅವರು, ಹಾಸಿಗೆಯ ಮೇಲೇ ಮಲಗಿ ಚಾವಣಿಯನ್ನು ನೋಡುತ್ತಿದ್ದವರು ಇವಳು ಒಳಗೆ ಕಾಲಿಟ್ಟೊಡನೆ ಅರ್ಧ ಎದ್ದು ಇವಳ ಕಡೆಗೆ ದಿಟ್ಟಿಸಿ ನೋಡಿ " ಓ, ಎಷ್ಟು ಸೊಗಸಾ........" ಎಂದು ಅರ್ಧಕ್ಕೇ ತಟ್ಟನೆ ನಿಲ್ಲಿಸಿದರು. ಕುಸುಮ ಬಂದ ಕಾರಣವನ್ನು ತಿಳಿಸಿದಳು. ಅವರು ಅತೃಪ್ತಿಯಿಂದ ಹುಬ್ಬುಗಂಟಿಕ್ಕಿ, " ನಿಮ್ಮಣ್ಣಂದು ವ್ಯಾಕುಲದ ಪ್ರಕೃತಿ. ಅವನ ಸಂಗ ಏನೂ ಹಿತವಿಲ್ಲ. ಬಂದಾಗಿನಿಂದಲೂ ನೋಡಿದೀನಲ್ಲ. ನಿನ್ನ ಹಾಗೆ ನನ್ನ ತಿಳಿದುಕೊಳ್ಳಲಾರ. ನೀನೆಲ್ಲಿಗೆ ಹೊರಟೆ ? " ಎಂದು ಪ್ರಶ್ನಿಸಿದರು. "ಸ್ಕೂಲಿಗೆ. ಉತ್ಸವಕ್ಕೆ ಸಿದ್ಧಮಾಡಬೇಕಲ್ಲ" ಎಂಬು ಕಾರಣ ಹೇಳಿದಳು. ಅವರು ಕೊಂಚವೇ ಯೋಚಿಸಿ " ನಿನ್ನ ಕತೆಗಳನ್ನು ತೋರಿಸುತ್ತೀನಿ ಅಂದಿದ್ದೆಯಲ್ಲ, ಎಲ್ಲಿ ? " ಎಂದರು. ಕುಸುಮ ಸಂತೋಷದಿಂದ ಬಿರಿಯುವಂತಾದಳು. " ತಂದುಕೊಡಲೆ ? " ಎಂದು ಆತುರದಿಂದ ಕೇಳಿದಳು. ಅವರು " ಅಷ್ಟೇ ಸಾಲದು. ನಾನು ಸೋಮಾರಿ. ನಂಗೆ ಓದಿ ಹೇಳಬೇಕು. ಆಗಾಗ ನನ್ನ ಸಲಹೆಯನ್ನು ಕೊಡುತ್ತ ಹೋಗುತ್ತೀನಿ. ಆದರಿಂದ ತಿದ್ದಿಕೊಳ್ಳಬಹುದು. ಆಮೇಲೆ ನನ್ನ ಪ್ರಕಾಶಕರಿಗೆ ಕೊಟ್ಟು ಅಚ್ಚು ಹಾಕಿಸೋಣ " ಎಂದು ಪ್ರೋತ್ಸಾಹಿಸಿದರು. ಕುಸುಮಳಿಗೆ ಇದಕ್ಕಿಂತ ಹೆಚ್ಚೇನು ಬೇಕು ? ತಕ್ಷಣವೇ ಒಪ್ಪಿಕೊಂಡು ತನಗೆ ತಲೆಯ ನೋವೆಂದು ಸಂಗಾತಿಯವರಿಗೆ ಚೀಟಿ ಕಳುಹಿಸಿಬಿಟ್ಟಳು.

ಗುರು, ಅಯ್ಯನವರನ್ನು ಕರೆಯಲು ಬಂದಾಗ ಕುಸುಮ ಕುರ್ಚಿಯ ಮೇಲೆ ಕುಳಿತು ತನ್ನ ಕತೆಯೊಂದನ್ನು ಓದುತ್ತಿದ್ದಳು. ಅವರು ಹತ್ತಿರದ ಮಂಚದ ಮೇಲೆ ಕಾಲು ಚಾಚಿ ಮಲಗಿ ಕೇಳುತ್ತಿದ್ದವರು ಎದ್ದು ಕುಳಿತರು. ಕುಸುಮ ತನ್ನ ಸಂಭ್ರಮದಲ್ಲಿ ಅಣ್ಣನಿಗೆ ಏರ್ಪಾಡು ಬದಲಾಯಿಸಿದುದನ್ನು ಕೂಡ ತಿಳಿಸಲಿಲ್ಲ. "ಹೊರಗೆಲ್ಲಾದರೂ ದಯಮಾಡಿಸೋದು ಉಂಟೆ?" ಗುರು ಕೇಳಿದ. "ನೀವೆಲ್ಲೊ ಹಳ್ಳಿಗಳಿಗೆ ಹೋಗುತ್ತೀರಂತೆ. ಹಳ್ಳಿಗೂ ನಂಗೂ ಬಹಳ ದೂರ. ಅಲ್ಲದೆ ನಡೆಯಲಾರೆ, ಅಷ್ಟೊಂದು. ಕ್ಷಮಿಸಿಬಿಡಿ. ನಿಮ್ಮ ತಂಗಿಯ ಕೆಲಸವನ್ನೇ ಅಷ್ಟು ಮಾಡುತ್ತಾ ಇದೀನಿ" ಅವರು ತಪ್ಪಿಸಿಕೊಂಡರು. ಗುರುವಿಗೆ ಬೇಕಾಗಿದ್ದುದೂ ಅಷ್ಟೆ. ರೋಗಿ ಬಯಸಿದುದೂ ಹಾಲು ಅನ್ನ, ವೈದ್ಯ ಹೇಳಿದುದೂ ಅದೇ. ಸ್ವಲ್ಪ ದೂರ, ಬೇರೆ ಸ್ಥಳಗಳನ್ನು ಸೂಚಿಸುವ ಲೌಕಿಕ ಅವನಿಗಿರಲಿಲ್ಲ. "ಸರಿ, ಹಾಗಾದರೆ" ಎಂದುಬಿಟ್ಟು, ಕುಸುಮಳ ಕಡೆಗೆ ನೋಡಿ ನಕ್ಕು, ಹೊರಟುಹೋದ.

ಆಗಲೂ, ಮಧ್ಯಾಹ್ನವೂ ಕತೆಗಳ ವಿಮರ್ಶೆಯಾಯಿತು. ಪ್ರಶಂಸೆಯೇ ಬಹಳವಾಗಿತ್ತು. ಅಲ್ಲೊಂದು ಇಲ್ಲೊಂದು ಸಲಹೆ. ಕುಸುಮ ಕೂಡಲೇ ಅದರಂತೆ ತಿದ್ದಿ ಅಲ್ಲಲ್ಲಿ ಸರಿಪಡಿಸಿದಳು. ಇನ್ನೇನು ತನ್ನ ಕತೆಗಳು ಯಾವ ಪತ್ರಿಕೆಯನ್ನೂ ಕಾಣದೆಯೇ, ಸಂಪಾದಕರಿಂದ ವಾಪಸು ಬರದೆಯೇ, ಸಂಕಲನವಾಗಿ ಅಚ್ಚಾಗುವುವೆಂದು ಹೆಮ್ಮೆ ಸಂತೋಷಗಳಿಂದ ತುಂಬಿಹೋದಳು. ಅವಳ ಕೃತಜ್ಞತೆ ಹೇಳಲಾರದಷ್ಟಾಯಿತು. ಇದರಿಂದ ತಾನೂ ಸಾಹಿತಿಯೆಂಬ ಅಭಿಪ್ರಾಯವು ಬಂದು ಈ ವರೆಗೆ ಅವರಲ್ಲಿದ್ದ ಅಂಜಿಕೆ ಕಡಿಮೆಯಾಗಿ, ಧೈರ್ಯ ಹೆಚ್ಚಿತು. ಹಾಗೆಯೇ ಮಾತುಕತೆ ಚರ್ಚೆಗಳಾಗಿದ್ದುದರಿಂದ, ಒಡನಾಡಿಯ ಸಲಿಗೆ ಬೆಳೆಯುತ್ತ ಬಂದಿತ್ತು. ಹಿಂದಿನ ಲಜ್ಜೆ, ಸರಳತೆಗೆ ದಾರಿ ಮಾಡಿತು. ಅವಳು ಧೈರ್ಯವಾಗಿ ಅವರ ಕಣ್ಣನ್ನು ನೋಡಿ ಮಾತನಾಡುವಂತಾದಳು.

ರಾತ್ರಿ ಊಟಕ್ಕೆ ಮುಂಚೆ ಅವಳೇ ಅವರ ಪುಸ್ತಕವೊಂದನ್ನು ಅವರ ಬಳಿಗೆ ತೆಗೆದುಕೊಂಡು ಹೋಗಿ ತನಗೆ ತಿಳಿಯದ ಭಾಗವನ್ನು ವಿಶದೀಕರಿಸಬೇಕೆಂದು ಕೇಳಿಕೊಂಡಳು. ಅವರು ಅವಳ ಕೈಯಲ್ಲಿದ್ದ ಪುಸ್ತಕದಲ್ಲೇ ಬಗ್ಗಿ ನೋಡಿ ಕಷ್ಟವಾದ ಆ ಭಾಗಗಳನ್ನು ನಿಧಾನವಾಗಿ ಓದಿಕೊಂಡರು.

ಆಗ ಅವರ ಮುಖ ಅವಳದ್ದಕ್ಕೆ ಬಹಳ ಹತ್ತಿರವಾಗಿ ಬರುತ್ತಿತ್ತು, ಅವರ ಉಸಿರು ಕೂಡ ಅವಳ ಕೆನ್ನೆ ಕೈಗಳ ಮೇಲೆ ಬೆಚ್ಚಗೆ ಹಾಯುತ್ತಿತ್ತು. ಇದರಿಂದ ಅವಳಿಗೆ ಹಿಂದೆಂದೂ ಅನುಭವಿಸದಿದ್ದ ವಿಚಿತ್ರ ಬಗೆಯ ಆನಂದ ಉಂಟಾಯಿತು. ಅವರ ಪುಸ್ತಕಗಳನ್ನೇ ಓದಿ, ಅಲ್ಲಿಯ ಕೆಲವು ಪಾತ್ರಗಳಲ್ಲಿ ತನ್ನನ್ನು ಕಂಡು, ಎಂತೆಂತಹ ಕಲ್ಪನೆಯ ಸುಖವನ್ನೊ ಆಗಲೇ ಅನುಭವಿಸಿದ್ದಳು. ಆದರೆ ಅವು ಯಾವುವೂ ಈ ರೀತಿ ಇರಲಿಲ್ಲ. ಈ ಓದಿನಲ್ಲಿ ಒಂದೊಂದು ವೇಳೆ ಕೈಬೆರಳುಗಳು ತಾಗಿದಾಗಲಂತೂ ಅವಳ ಮೈ ಜುಂ ಅನ್ನುತ್ತಿತ್ತು, ಕೂದಲು ನೆಟ್ಟಗಾದಂತಾಗುತ್ತಿತ್ತು. ಈ ಸುಖವನ್ನು ಮತ್ತಷ್ಟು ಮತ್ತಷ್ಟು ಅನುಭವಿಸಬೇಕೆಂದು ಮನಸ್ಸು ಆತುರಪಡಿಸುತ್ತಿತ್ತು. ಆ ರಾತ್ರಿ ಅವಳಿಗೆ ತನಗೆ ಅತ್ಯಂತ ಪ್ರಿಯವಾದ 'ಪ್ರೇಮಿ' ಪುಸ್ತಕದ ಮೇಲೂ ಮನಸ್ಸನ್ನು ನಿಲ್ಲಿಸಲಾಗಲಿಲ್ಲ; ಎಲ್ಲೋ ಆಕಾಶದಲ್ಲಿ ತೇಲಾಡುತ್ತಿತ್ತು. ಪುಸ್ತಕ ಮಾತ್ರ ಕೈಯಲ್ಲಿ ಅದೇ ಪುಟದಲ್ಲಿತ್ತು. ಅತ್ತ ಪುಸ್ತಕವನ್ನು ಇಟ್ಟು ಮಲಗಲು ಕಣ್ಣು ಮುಚ್ಚಿದಳು. ಆದರೆ ನಿದ್ದೆಗೆ ಮುಂಚೆಯೇ ಕನಸುಗಳು ಕಂಡುವು. ಕಲ್ಪನಾ ರಾಜ್ಯದ ರಾಣಿಯಾಗಿದ್ದಳು. ಎಷ್ಟು ಹೊತ್ತಾದರೂ ನಿದ್ದೆ ಹತ್ತಲಿಲ್ಲ. ಹೊರಳಾಡಿ ಹೊರಳಾಡಿ ಮೈನೋವು ಬಂದಿತು. ಬೆಳಗು ಯಾವಾಗ ಆದೀತೊ, ಮತ್ತೊಂದು ಪುಸ್ತಕವನ್ನು ತೆಗೆದುಕೊಂಡು ಹೋಗಿ ಚರ್ಚೆ ಮಾಡೇನೆ ಎಂದು ಮನಸ್ಸು ಹಾತೊರೆಯುತ್ತಿತ್ತು. ಇಷ್ಟಾದರೂ ಅವಳ ಮನಸ್ಸಿನ ಭಾವನೆ ಅವಳಿಗೇ ಸ್ಪಷ್ಟವಾಗಿರಲಿಲ್ಲ. ಏನೋ ಒಂದರ ಮೇಲೊಂದು ಕಲ್ಪನೆ, ಭಾವನೆ, ಉಲ್ಲಾಸ, ವೇದನೆ–ಕಲೆಸುಮೇಲೋಗರ. ಬೆಳಕಿಗೆ ಸ್ವಲ್ಪ ಜೊಂಪು ಹತ್ತಿರಬೇಕು.

ಮಾರನೆಯ ದಿನ ಬೆಳಗ್ಗೆ ಕುಸುಮ ಕನ್ನಡಿಯ ಮುಂದೆ ನಿಂತಷ್ಟು ಹೊತ್ತು ಇನ್ನೆಂದೂ ನಿಂತಿರಲಿಲ್ಲ. ಇಷ್ಟಾದರೂ ಅವಳಿಗೆ ತೃಪ್ತಿಯಿಲ್ಲ. ಅವಳು ಇನ್ನೂ ಕೋಣೆಯಲ್ಲಿರುವಾಗಲೇ ತಾಯಿ ಅಲ್ಲಿಗೆ ಬಂದಳು.

" ಕುಸುಮ, ಇದೇನು ಇನ್ನೂ ಪೂರೈಸಲೇ ಇಲ್ಲ. ಸ್ಕೂಲಿಗೆ ಎಷ್ಟು ಹೊತ್ತಿಗೆ ಹೋಗುತ್ತೀ? " ಏನನ್ನೋ ಮೊದಲು ಮಾಡುವಂತೆ ಕೇಳಿದಳು.

" ಇವತ್ತೂ ಹೋಗೋದಿಲ್ಲಮ್ಮ. ದಾಸನ ಕೈಲಿ ಚೀಟಿ ಬರೆದು ಕಳಿಸಿ ಉತ್ಸವದ ಏರ್ಪಾಡು ಹೇಗೆ ನಡೀತಿದೆ ಅಂತ ತಿಳಿದುಕೋತೀನಿ. "

" ಯಾಕೆ, ನೀನೂ ಹೋಗಿ........"

" ಇಲ್ಲ. ಅತಿಥಿಗಳು ಒಬ್ಬರನ್ನೇ ಬಿಟ್ಟು ಹೋಗೋದು ಚೆನ್ನಾಗಿಲ್ಲ. ನಾನೇ ಉಳಿಸಿಕೊಂಡಿದೀನಿ. "

" ಅದಕ್ಕೆ ನೀನೇ ಜವಾಬ್ದಾರಳೇ ? "

" ಹುಂ, ಅಣ್ಣಂಗು ಅವರಿಗೂ ಅಷ್ಟಕ್ಕಷ್ಟೆ. ಅಪ್ಪನಿಗೆ ಮೈಯಲ್ಲಿ ಬೇರೆ ಚೆನ್ನಾಗಿಲ್ಲ. ಇದ್ದರೂ........"

" ಮಗು ನಿನ್ನೆಯೆಲ್ಲ ಅವರ ಕೋಣೆಯಲ್ಲೇ ಕಳೆದೆ. ಎಷ್ಟಾದರೂ ಹೊರಗಿನೋರು. ಎಲ್ಲರೂ ಏನು ಅಂದುಕೋತಾರೆ ? "

" ಏನು ಅಂದುಕೋತಾರಮ್ಮ ? ಏನು ತಪ್ಪು ಮಾಡಿದೆ ? ಏನು ಬಾಗಿಲು ಹಾಕಿಕೊಂಡು ಸರಸಸಲ್ಲಾಪ ನಡೆಸುತ್ತಿದ್ದೀನೆ? ಏನೋ ಸಾಹಿತ್ಯ ವಿಷಯ ಮಾತಾಡಿ ತಿಳಿದುಕೋತಾ ಇದೀನಿ. ನನ್ನ ಕತೆಪುಸ್ತಕ ಅಚ್ಚು ಹಾಕಿಸುತ್ತಾರಂತೆ. ಅದನ್ನೆಲ್ಲ ಚರ್ಚೆ ಮಾಡುತ್ತಿದ್ದೆವು. ತಪ್ಪಾಯ್ತೆ ? ಈಗ ಸಂಗೀತದ ಮೇಷ್ಟ್ರು ಬರೋದಿಲ್ಲವೆ ? ಹಾಗೇ. ಅವರು ನಂಗೆ ಗುರುಗಳ ಹಾಗಿದಾರೆ. ಹೀಗೆಲ್ಲ ಅನ್ನಬಹುದೇನಮ್ಮ ? " ಕುಸುಮಳ ಕಣ್ಣಿನಲ್ಲಿ ನೀರೇ ಬಂತು. ' ಗುರುಗಳು ' ಅಂದಾಗ ಅವಳಿಗೇ ಯಾಕೋ ಮನಸ್ಸಿನಲ್ಲಿ ಕೊಂಚ ಕಸಿವಿಸಿಯಾಯಿತು.

" ಮಗು, ನಿನ್ನ ನೋಯಿಸಬೇಕು ಅಂತ ಆಡಲಿಲ್ಲ. ಎಚ್ಚರಿಕೆ ಕೊಟ್ಟೆ, ಅಷ್ಟೆ. ನೀನೇನು ಸಣ್ಣೋಳಲ್ಲ. ಯೋಚಿಸಿ ತಿಳಿದ ಹಾಗೆ ಮಾಡಮ್ಮ."

" ಅಪ್ಪ ಹೀಗೆ ಒಂದು ದಿನವೂ ಅಂದಿಲ್ಲ. ನೀನೇ ಆಗಾಗ ಕುಟು ಕುತ್ತಾ ಇರುತ್ತೀ. ಏನೋ ಆಗಿಹೋಯ್ತು, ಅಂತ. ನಮ್ಮ ಮನೇಲಿ ಏನು ಮುಖಕ್ಕೆ ಘರದೆ ಇದೆಯೆ ? ನಾನೂ ನಿನ್ನ ಹಾಗೇ ಹೆದರಿ ತಗ್ಗಿ ಹೊರಗೇ ಬರದೆ ಹೆಂಗಸರ ಜತೆ, ಇಲ್ಲ, ಒಳಗೆ ಒಬ್ಬಳೇ ಮುದುರಿಕೊಂಡು ಮುಗ್ಗಾಗಿ ಕೂತಿರಬೇಕೆ ? ಬಿಡಮ್ಮ, ನನ್ನ ಸ್ವಭಾವವೇ ನಿಂಗೆ ಗೊತ್ತಾಗೋದಿಲ್ಲ, ನನ್ನಲ್ಲಿ ನಂಬಿಕೆಯಿಲ್ಲ" ಕುಸುಮ ತಪ್ಪಿತಸ್ಥರು ವಾದಿಸುವಂತೆ, ಒಂದು ಮಾತಾಡುವ ಕಡೆ ನಾಲ್ಕು ಆಡಿದಳು.

" ನಿಮ್ಮ ತಂದೆಯ ಪ್ರೇಮ ಅಂದರೆ ಅಸಾಧಾರಣ. ನೀನೇನು ಮಾಡಿದರೂ ಅವರಿಗೆ ಸರಿಯೆ. ನಿನ್ನ ನೋಯಿಸೋದು ಅನ್ನೋದನ್ನ

ಅರಿಯರು, ನಿಜ. ನಾನು ತಾಯಿ. ನಂಗೂ ಹಾಗೇ. ಆದರೆ ನಿನ್ನ ಹಿತಕ್ಕಾಗಿ ಒಂದೊಂದು ಮಾತು ಆಡುತ್ತೀನಿ. ತಪ್ಪು ತಿಳಿದುಕೋಬೇಡ. ನಿಂಗೆ ನಿನ್ನಲ್ಲಿ ನಂಬಿಕೆ ಇದ್ದರೆ ಸರಿ." ತಾಯಿ ಹೊರಟುಹೋದಳು.

ಅವಳು ಹೇಳಿದ ನಂಬಿಕೆಯ ಮಾತು ಕುಸುಮಳನ್ನು ಕಲಕಿತು. 'ನನ್ನಲ್ಲಿ ನಂಗೆ ನಂಬಿಕೆಯಿದೆಯೆ? ಇದೆಯೆ? ಯಾಕಿಲ್ಲ? ಇದೆ ಇದೆ' ಎಂದು ಹತ್ತಾರು ಬಾರಿ ಹೇಳಿಕೊಂಡಳು. ಹಾಗೆಯೇ ಕೊಂಚಕಾಲ ನಿಂತು ಯೋಚಿಸಿದಳು. 'ಹುಂ, ಇದೆಲ್ಲ ಬರಿ ಭ್ರಾಂತಿ, ಹಳೇ ತರಹದ ಭಾವನೆ, ಪದ್ಧತಿ, ಹುಂ' ಎಂದುಕೊಂಡು ಮತ್ತೆ ಕನ್ನಡಿಯ ಕಡೆಗೆ ತಿರಿಗಿ "ಅಯ್ಯೊ, ಕಣ್ಣೀರಿನಿಂದ ಪೌಡರು ಹಾಳಾಯ್ತು" ಎಂದು ಮತ್ತೆ ಸರಿಪಡಿಸಿಕೊಂಡು, ಒಳಗೆ ಆಗುತ್ತಿದ್ದ ಅಲ್ಪಸ್ವಲ್ಪ ತಳಮಳವನ್ನು ಅದುಮಿಕೊಂಡು, 'ಸರಸಿಯ ಸಲ್ಲಾಪ' ಹಿಡಿದು ಅತಿಥಿಗಳಲ್ಲಿಗೆ ಹೋದಳು.

ಈ ದಿನ ಪುಸ್ತಕವೇನು ಸಾಗಲಿಲ್ಲ. ಅವರು ಓದಿನ ಈ ನೆಪದಲ್ಲಿ ಹತ್ತಿರವೇ ಬಂದು ಕುಳಿತರು. ಬರಿಯ ಸರಸಸಲ್ಲಾಪವೇ ನಡೆಯಿತು. ಕುಸುಮ ಅವರ ಪುಸ್ತಕಗಳನ್ನೇ ಓದಿದ್ದರೂ ಈಗ ಮೊದಲನೆಯ ಬಾರಿಗೆ ಗಂಡಸಿನ ರಸಿಕತೆ ಎಷ್ಟು ಮಟ್ಟಕ್ಕೇರಬಹುದು, ರಸಿಕ ಗಂಡಿನ ಸಂಗ ಎಷ್ಟು ಸುಖವನ್ನು ಕೊಡಬಹುದು ಎಂಬುದನ್ನು ಅರಿತಳು. ಈ ಪ್ರಬಂಧವು ಕಳ್ಳತನದಲ್ಲಿ ನಡೆಯುತ್ತಿದ್ದುದು ಅದರ ರುಚಿಯನ್ನು ಇಮ್ಮಡಿಯಾಗಿಸಿತ್ತು. ಊಟಕ್ಕೆ ಏಳುವ ಹೊತ್ತಿಗೆ ಕುಸುಮಳಿಗೆ ಇನ್ನೂ ಹುಡುಗಿಯಾಗಿದ್ದ ತಾನು ತಟ್ಟನೆ ಹೆಂಗಸಾದಂತೆ ಭಾಸವಾಯಿತು. ಈ ಕೆಲವು ಗಳಿಗೆಗಳಲ್ಲಿ ವರ್ಷಗಳಷ್ಟು ಬೆಳೆದಿದ್ದಂತೆ ತೋರಿತು. ಪ್ರಪಂಚವೇ ಹೊಸ ಬಗೆಯಾಗಿ ಕಾಣುತ್ತಿತ್ತು. ಅವಳು ಆಟವನ್ನು ಬಿಟ್ಟು ಜೀವನಕ್ಕಾಗಿ ತವಕಿಸುತ್ತಿದ್ದಳು. ಕನ್ನಡಿಯ ಮುಂದೆ ನಿಂತು ನೋಡಿದಳು. ತನ್ನ ಹೊರರೂಪರೇಖೆಯಲ್ಲೂ ಬದಲಾವಣೆ ಆದಂತೆ ಅವಳಿಗೆ ತೋರಿತು. ತನ್ನ ಬದಲಾವಣೆಯು ಅವಳಿಗೆ ಹೆಚ್ಚು ಹೆಚ್ಚು ತಿಳಿದಷ್ಟೂ ಹೆಚ್ಚು ಹೆಚ್ಚು ಆಶ್ಚರ್ಯವಾಯಿತು. ಇಂದಿನ ವರೆಗೆ ಎಷ್ಟೋ ಬಾರಿ ಪುಸ್ತಕಗಳನ್ನು ಓದಿ, ಸ್ನೇಹಿತರೊಂದಿಗೆ ಆಡಿ ಚಿತ್ತೋದ್ರೇಕವನ್ನು ಅನುಭವಿಸಿದ್ದಳು. ಆಗ ಮೈ ಮನಸ್ಸು ಬಿಸಿಬಿಸಿಯಾದಂತಿರುತ್ತಿತ್ತು. ಆದರೆ ಈಗ ಅವೆಲ್ಲ ಉಗುರುಬೆಚ್ಚಿನ ನೀರಿನಂತೆ ಕಂಡವು—ಈಗಿನ ಕಾವು

ಆಷ್ಟೊಂದು ಏರಿತ್ತು. ಮಧ್ಯಾಹ್ನ ಶಾಲೆಗೆ ಲೌಕಿಕಕ್ಕಾಗಿ ಕೊಂಚ ಮುಂಚೆ ಹೋಗಿದ್ದು ಸಿದ್ಧತೆಗಳನ್ನು ನೋಡಿಕೊಂಡು ಬಂದಳು. ಅಲ್ಲಿದ್ದಾಗ ಒಬ್ಬ ಹುಡಿಗಿ "ಕುಸುಮನ್ನ ನೋಡೆ'' ಅಂದಳು. "ಏನಾಗಿದೀನೆ?'' ಕುಸುಮ ಅಧೈರ್ಯದಿಂದ ಕೇಳಿದಳು. "ಹೊಸ ಕುಸುಮದ ಹಾಗೆ ಕಾಣುತ್ತಿ. ರೀತಿಯೇ ಬದಲಾಯಿಸಿದೆ" ಅಂದಳು ಹುಡುಗಿ. ''ಸಾಹಿತಿಗಳ ಬಳಕೆ ಅಂದರೆ ಸಾಮಾನ್ಯವೇ? ಪ್ರಭಾವ ಕಾಣದೇ ಇರುತ್ತೇ?"ಇನ್ನೊಬ್ಬ ಹುಡುಗಿ ನಕ್ಕಳು. ಕುಸುಮಳ ಮುಖ ಕೆಂಪೇರಿತು. ಎಲ್ಲರು ಇನ್ನೂ ನಕ್ಕರು. ಹಿಂದಾಗಿದ್ದರೆ ''ಸಾಕು ಸುಮ್ಮನಿರೇ, ಈ ಢೋಂಗಿ, ಈ ಚೇಷ್ಟೆ ಯಾರಿಗೆ ಹೇಳಿಕೊಡುತ್ತೀಯ? '' ಎಂದು ದಬಾಯಿಸುತ್ತಿದ್ದಳು. ಈಗ ಹಾಗೆನ್ನಲು ತನಗೇ ಧೈರ್ಯ ಸಾಲದು. ಆದುದರಿಂದ '' ಏನೋ ಇದ್ದರೂ ಇರಬಹುದು, ಯಾಕಾಗಬಾರದು?'' ಎಂದು ಒಂದು ಬಗೆಯ ರೀವಿಯಿಂದಲೇ ಹೇಳಿದಳು. ಮನೆಗೆ ಬಂದ ಮೇಲೆ, ತನ್ನ ಪಾಲಿಗೆ ಆಗಲೇ ಬಂದಿದ್ದು ತಾನು ಹಿಂದೆಯೇ ಬರೆದಿಟ್ಟಿದ್ದ ಪರಿಚಯದ ಭಾಷಣವನ್ನು ಚೆನ್ನಾಗಿ ಬಾಯಿಪಾಠ ಮಾಡಿಕೊಂಡಳು.

ಸಂಜೆಯ ಉತ್ಸವಕ್ಕೆ ಮನೆಯವರೆಲ್ಲರಿಗೂ ಕರೆಯಿತ್ತು. ಸಾಹುಕಾರರ ಕೆಮ್ಮು ಉದ್ರೇಕವಾಗಿ ಅವರು ಮಲಗಿದ್ದರು. ಇಷ್ಟಕ್ಕೂ ಅವರು ಅಧ್ಯಕ್ಷತೆಯ ಜವಾಬ್ದಾರಿಯನ್ನು ಹೊರದ ಕಡೆಗೆ ಹೋಗುತ್ತಿದ್ದುದು ಬಹಳ ವಿರಳ. ಗುರುವಿನ ಬಳಿಗೆ ಈಗ ಗೊಂದಲವೇ ಆಗುತ್ತಿರಲಿಲ್ಲ. ಕುಸುಮ ಒಂದು ಬಾರಿ ಒತ್ತಿಯೂ ಹೇಳಿದಳು. ಆದರೂ ಒಪ್ಪದೆ '' ನಾನು ಕೇಳೋದು ಏನೂ ಇಲ್ಲ—ಅವರಿಂದ. ಅಗಿದದ್ದೇ ಅಗಿಯೋದಕ್ಕೆ ಬೇಸರ. ಏಕಾಂತವೇ ಹೆಚ್ಚು ತಿಳಿಸುತ್ತೆ. ಉದ್ರೇಕಿಸೋದಿಲ್ಲ, ಶಾಂತಿ ಕೊಡುತ್ತೆ. ಓದುವ ಕಾಲ, 'ಕೇಳುವ ಕಾಲ ಹೋಯ್ತು. ಈಗ ಯೋಚಿಸೋ ಕಾಲ" ಎಂದು ಅವಳನ್ನು ಮಾಮೂಲಿನಂತೆ ರೇಗಿಸಿ, ಆವಳಿಂದ ಬೈಸಿಕೊಂಡು, ತಿಟ್ಟಿಗೆ ಹೊರಟುಹೋದ. ಸಣ್ಣಮ್ಮ ''ನಂಗೆ ಒಂದು ಅಕ್ಷರವೂ ಬರೋದಿಲ್ಲ. ಹಳಬಳು. ಆವರು ಹೇಳೋದೆಲ್ಲ ಹೇಗೆ ಅರ್ಥವಾದೀತು? ದಂಡ.'' ಎಂದುಬಿಟ್ಟಳು. ನಾಟಕ, ಪುರಾಣ, ಹರಿಕಥೆ ಇಂಥವಕ್ಕಲ್ಲದೆ ಆವಳು ಬಾಕಿಯ ಸಂದರ್ಭಗಳಿಗೆ ಹೋಗುತ್ತಲೇ ಇರಲಿಲ್ಲ. ಹೀಗಾಗಿ ಕುಸುಮ ಮತ್ತು ಅಯ್ಯನವರು ಇಬ್ಬರೇ ಕಾರಿನಲ್ಲಿ ಹೊರಟರು.

ಈ ಉತ್ಸವ ವಸಂತಸಾಹಿತ್ಯೋತ್ಸವದ ಮರಿಯಂತೆ ಅದೇ ಮಾದರಿ

ಯಿಂದ ನಡೆಯಿತು. ಕುಸುಮ ಮಾಡಿದ ಪುಟ್ಟ ಪರಿಚಯಭಾಷಣವನ್ನು ಕೇಳಿ ಅಯ್ಯನವರಿಗೆ ಆಶ್ಚರ್ಯವಾಯಿತು. ಹಿಂದೆ ಪ್ರಶಂಸೆ ಎಷ್ಟನ್ನೋ ಕೇಳಿದ್ದರು. ಆದರೆ ಹೀಗೆ—ಇಷ್ಟು ಆತ್ಮೀಯ! ಸಜೀವ! ಅವರಿಗೆ ನೆನೆಪಿರಲಿಲ್ಲ. ಅವರ ಎದೆಯುಬ್ಬಿತು. ಗೆಲುವಿನ ನಗೆ ಅವರ ಮೊಗದಲ್ಲಿ ನಲಿದಾಡಿತು. ಅಧ್ಯಕ್ಷಿಣಿಯರ ಪದ್ಧತಿಗನುಸಾರವಾದ ನಿರ್ಜೀವ ಭಾಷಣ ಅವರ ಕಿವಿಯನ್ನೇ ಹೊಗಲಿಲ್ಲ. ಅಯ್ಯನವರು 'ಮುಂದಿನ ಹೆಂಗಸು' ಎಂಬ ವಿಷಯದಲ್ಲಿ ಸರಸ, ಸ್ವಾರಸ್ಯ, ಭಾವೋದ್ರೇಕದ ಭಾಷಣವನ್ನು ಒಂದೂವರೆ ಗಂಟೆಯ ಕಾಲ ಮಾಡಿದರು. ಈ ಕಾಲದಲ್ಲಿ ಹುಡುಗಿಯರ ಪಿಸಪಿಸವೂ ಕೂಡ ಅಡಗಿ ಹೋಗಿತ್ತು. ಮಂಗಳ ಮುಗಿದೊಡನೆ ಹುಡುಗಿಯರೆಲ್ಲರೂ ಜಗಲಿಯನ್ನು ಮುತ್ತಿದರು. ಅಯ್ಯನವರೊಡನೆ ಒಂದೆರಡು ಮಾತನ್ನಾಡಲು ಸ್ಪರ್ಧೆ ಬಹಳವಾಗಿ ನಡೆಯಿತು. ಅವರ ಮಾತುಗಳನ್ನು ಕೇಳುವದಕ್ಕಂತೂ ಸುತ್ತಲೂ ತುದಿಗಾಲಿನಲ್ಲಿ ನಿಂತು ಕತ್ತನ್ನು ಕೊಕ್ಕರಿಸಿಕೊಂಡಿದ್ದರು—ಹತ್ತಿರದ ನಾಲ್ಕು ಹುಡುಗಿಯರನ್ನು ಬಿಟ್ಟು. ಎಲ್ಲರಿಗೂ ಕಣ್ಣು ಊರಗಲವಾಗಿತ್ತು. ಕಿವಿ ನೆಟ್ಟಗಾಗಿತ್ತು. ಬಾಯಿ ತೆರೆದೇ ಇತ್ತು. ಈ ಹರಟೆ, ನಗು ಬಹಳ ಹೊತ್ತೇ ಆದುವು. ಎಷ್ಟೋ ಹುಡುಗಿಯರು–ಸಾಹಿತ್ಯದ ಫ್ಯಾನ್‌ಗಳಲ್ಲಿ ಅಗ್ರಗಣ್ಯರು–ಆಟೋಗ್ರಾಫ್‌ಗಳನ್ನೂ ಬರೆಯಿಸಿಕೊಂಡರು. ಈ ಕಾಲದಲ್ಲೆಲ್ಲ ಕುಸುಮ ಅಯ್ಯನವರ ಪಕ್ಕದಲ್ಲೇ ನಿಂತು ಅವರಿಗೆ ಸಿಗುತ್ತಿದ್ದ ಮೆಚ್ಚಿಗೆಯನ್ನು ಕಂಡು ಬೆರಗಾಗಿ ಹೆಮ್ಮೆಪಡುತ್ತ ಆನಂದಿಸುತ್ತಿದ್ದಳು. ಹೆಡ್‌ಮಿಸ್ಟ್ರೆಸ್‌ರವರು "ಇನ್ನು ಸಾಕು. ಅತಿಥಿಗಳನ್ನು ಹೆಚ್ಚು ದಣಿಸಬಾರದು. ಈಗಾಗಲೇ ಬಹಳ ಹೊತ್ತಾಯ್ತು." ಎಂದು ಹತ್ತನೇ ಬಾರಿಗೆ ಹೇಳುತ್ತಿದ್ದರೂ ಅವರ ಮಾತಿಗೆ ತರಗತಿಯ ಲೆಕ್ಚರಿನ ಗತಿಯೇ ಆಯ್ತು. ಹುಡುಗಿಯರು ಕೋಟೆಯನ್ನು ಒಡೆಯಲೂ ಇಲ್ಲ, ಮಾತನ್ನು ಬಿಡಲೂ ಇಲ್ಲ. ಕಡೆಗೆ ಹಾಲಿನ ಗಡಿಯಾರ ಎಂಟು ಹೊಡೆದ ಮೇಲೆ, ಮಿಸ್ಟ್ರೆಸ್, ತಾವೇ ಕೋಟೆಯನ್ನು ಕೈಗಳಿಂದ ಒಡೆದು ಅತಿಥಿಯನ್ನು ಕರೆದುಕೊಂಡು ಹೋಗಿ ಕಾರಿನಲ್ಲಿ ಕೂಡಿಸಿದರು. ಕುಸುಮ ಹುಡುಗಿಯರ ನೂಕು ನುಗ್ಗಿನಲ್ಲಿ ಸಿಕ್ಕಿ ಹೆಣಗಿ ಕಾರಿನ ಸುತ್ತದ ಎರಡನೆಯ ಕೋಟೆಯನ್ನು ಭೇದಿಸಿ ಕಾರನ್ನು ಹೊಗುವುದಕ್ಕೆ ಸ್ವಲ್ಪ ಹೊತ್ತೇ, ಬೇಕಾದಷ್ಟು ಶ್ರಮವೇ ಹಿಡಿಯಿತು. ಕಾರು ಹೊರಟ ಮೇಲೆ

ಗುಂಪು ಗುಜುಗುಟ್ಟುತ್ತ ನೂರಾರು ಶಾಖೆಗಳಾಗಿ ಒಡೆದು ಸರಿಯಿತು. ಮೊದಲೇ ಅಯ್ಯನವರಲ್ಲಿ ಕುಸುಮಳ ಮೆಚ್ಚಿಗೆ ಗೌರವ ಅಪಾರವಾಗಿದ್ದುವು. ಈಗ ಇವರಿಗೆ ತನ್ನ ಜತೆಗಾತಿಯರು ಕೊಟ್ಟ ಮರ್ಯಾದೆ, ಅಪೂರ್ವ ಸ್ವಾಗತ, ತೋರಿಸಿದ ಹುಚ್ಚು, ಇವಳ ಹುಚ್ಚನ್ನು ನೂರ್ಮಡಿಯಾಗಿಸಿತು.

ಕಾರು ಪೇಟೆಯ ಮಧ್ಯದಲ್ಲಿ ನಿಂತುಹೋಯಿತು. ರಾಜು ಏನೇನೊ ಮಾಡಿದ. ಎಂದಿನಂತೆ ಜುಂ ಅನ್ನಲಿಲ್ಲ. ಇವರಿಬ್ಬರೂ ಅಷ್ಟು ಇಷ್ಟು ಹೊತ್ತು ನೋಡಿದರು. ಕಾರಿನ ಸುತ್ತ ಜನ ಸೇರಲು ಮೊದಲಾಯಿತು. ಇದು ಇಬ್ಬರಿಗೂ ಸರಿಹೋಗಲಿಲ್ಲ.

" ಕಾರು ಹಿಂದಿನಿಂದ ಬರಲಿ. ನಾವು ನಡೆದುಕೊಂಡು ಮುಂದೆ ಹೋಗುತ್ತಿರೋಣ. ಇದೇನು ಸಂತೆ ಸೇರುತ್ತಿದೆ! " ಅಯ್ಯನವರು ಸೂಚಿಸಿದರು.

" ಹಾಗೇ ಆಗಲಿ. " ಅವಳಿಗೂ ಇದೇ ಹೊಳೆದಿತ್ತು.

ರಾಜುವಿಗೆ ಹೇಳಿ ಇಬ್ಬರೂ ಹೊರಟರು. ಪೇಟೆಯನ್ನು ಕಳೆದು ಊರಿನ ತುದಿಗೆ ಬಂದಾಗ ಎಂಟೂವರೆ. ಅಲ್ಲಿಂದ್ಲ ಮರ್ಯಾದೆ ಮಹಲು ಇನ್ನೂ ಎರಡೂವರೆ ಫರ್ಲಾಂಗ್ ದೂರ. ಮರಗಳ ಸಾಲಿನ ದಾರಿ. ಗಾಳಿಯಲ್ಲಿ ಮರಗಳು ಅಲೆದಾಡುತ್ತಿದ್ದುವು. ಮುರುಕು ಚಂದ್ರನ ಮಾಸಲು ಬೆಳಕು ಮರಗಳ ಮಧ್ಯೆ ಸುಳಿದಾಡುತ್ತಿತ್ತು. ಜನರ ಓಡಾಟವಿರಲಿಲ್ಲ. ಈಗ ಕುಸುಮಳಿಗೆ ಯಾಕೋ ಅಧೈರ್ಯವಾಯಿತು. ಆದರೆ ಅದರಲ್ಲೂ ಒಂದು ವಿಚಿತ್ರ ತೃಪ್ತಿ 'ಕಾರು ಬಿಟ್ಟು ಬಂದದ್ದು ಸರಿಯೆ ?' ಅನ್ನಿಸಿತು. ಆದರೂ ಅಲ್ಲಿರುತ್ತಿದ್ದುದೂ ಚೆನ್ನಾಗಿರುತ್ತಿರಲಿಲ್ಲ. ಕಾರನ್ನು ಶಪಿಸಿದಳು. ಆದರೆ ಪೂರ್ತಿ ಮನಸ್ಸಿನಿಂದಲ್ಲ.

" ಇನ್ನೂ ಕಾರು ಬರಲಿಲ್ಲ. " ಆತಂಕದಿಂದ ಹಿಂದಿರುಗಿ ನೋಡಿದಳು.

" ಇನ್ನೇನು ಸ್ವಲ್ಪ ದೂರವಿದೆಯಲ್ಲ. ಕಾಲು ಸೋತಿತೆ ? "

" ಇಲ್ಲ. "

" ಅಧೈರ್ಯವೇ ? " ನಗುತ್ತ ಕೇಳಿದರು.

" ಇಲ್ಲ. ಸರಿ, ನೀವಿರುವಾಗ ಎಲ್ಲಿಯದು ? "

" ಸರಿ ಮತ್ತೆ. ನಡೆದೇ ಹೋಗೋಣ. "

" ಹುಂ. ಆದರೂ ಕಾರು ಬಂದಿದ್ದರೆ........"

ಇಬ್ಬರೂ ಕೊಂಚ ದೂರ ನಡೆದರು. ಈವರೆಗೆ ಸ್ಕೂಲು, ಊರುಗಳ ಮಾತೇ ಸಾಗಿತ್ತು. ಕುಸುಮ ಎಲ್ಲವನ್ನೂ ಆವೇಶದಿಂದ ಬಣ್ಣಿಸಿ ಎಲ್ಲಕ್ಕೂ ಉತ್ತರ ಕೊಟ್ಟಿದ್ದಳು.

" ನಿನ್ನ ಸಣ್ಣ ಬಾಷಣ ತುಂಬ ಚೆನ್ನಾಗಿತ್ತು " ಅವರು ಬೇರೆಯ ವಿಷಯವನ್ನು ಮೊದಲು ಮಾಡಿದರು ಕುಸುಮ ತಟ್ಟನೆ ಕತ್ತೆತ್ತಿ ಅವರ ಮುಖವನ್ನು ನೋಡಿದಳು. ಅವರು ನಸುನಗುತ್ತಿದ್ದರು.

" ಏನು ಹಾಸ್ಯವೊ ? " ಅವಳು ಅನುಮಾನಿಸಿದಳು.

" ಇಲ್ಲ. ಅಷ್ಟು ಸ್ವಾರಸ್ಯವಾದ ಪರಿಚಯ ನನಗಾಗಿರಲೇ ಇಲ್ಲ. "

" ಸರಿ, ಸರಿ. ಅದು ಮಹಾ. ನಿಮ್ಮ ಭಾಷಣದ ಮುಂದೆ ನನ್ನದೇ. ಏನೋ ರಂಗನ ಮುಂದೆ ಸಿಂಗ ಅನ್ನೋ ಹಾಗೆ ? "

" ಹಾಗೆಂದರೇನು. ಎಲ್ಲ ವಸ್ತುವಿಗೂ ವ್ಯಕ್ತಿಗೂ ಒಂದೊಂದು ವೈಶಿಷ್ಟ್ಯ ಇದ್ದೇ ಇರುತ್ತೆ........'' ಹೀಗೇ ಅವರು ಮಾತನಾಡುತ್ತಿದ್ದರು. ಅವಳ ಗಮನ ಮಾತ್ರ ಎಲ್ಲೋ ಇತ್ತು. ಅವರು ತಟ್ಟನೆ ಮಾತನ್ನು ನಿಲ್ಲಿಸಿದರು

" ನೀನು ಏನೋ ಯೋಚನೆ ಮಾಡುತ್ತಿದೀಯಲ್ಲ ? "

" ಇಲ್ಲ. "

" ಉಹುಂ. ಏನೋ ಇದೆ. ಮನಸ್ಸಿನಲ್ಲಿ—ಹೇಳು. "

ಕುಸುಮಳಿಗೆ ಏನೂ ತೋಚಲಿಲ್ಲ. ಅವಳು ಏನು ಯೋಚಿಸುತ್ತಿದ್ದ ಳೆಂಬುದು ಅವಳಿಗೇ ತಿಳಿಯದಾಯಿತು. ಅಂತೂ ಏನನ್ನಾದರೂ ಹೇಳ ಬೇಕೆಂದು ತಟ್ಟನೆ ನೆನೆಸಿಕೊಂಡು, " ಅಲ್ಲ, ' ಮನುಷ್ಯ ಎದೆಯಿಂದ ಕೆಡುತ್ತಾನೇ ಹೊರತು ಚರ್ಮದಿಂದಲ್ಲ ' ಅಂತ ಹೇಳಿದಿರಲ್ಲ. ಅದು ಸರಿಯೆ?" ಏನನ್ನೋ ಕೇಳಿಬಿಟ್ಟಳು.

'' ಸರಿ. ಕಾರ್ಯಕ್ಕಿಂತ ಕಾರಣ ಮುಖ್ಯ. ನಮ್ಮಲ್ಲಿ ಕೆಟ್ಟ ಅಭಿಪ್ರಾಯ ಹುಟ್ಟಿದರೊಂದು ಹೊರತು ಇನ್ನೇನು ಮಾಡಿದರೆ ತಾನೆ ಏನು ? ಮಸಲ ಹೀಗೆ ನಿನ್ನ ಕೈಹಿಡಿದುಕೊಂಡೆ, ಅದರಿಂದ ಏನಾಯ್ತು ? ಅಪ್ಪ ಮಗಳು ಅಣ್ಣ ತಂಗಿ ಸೋಕೋದಿಲ್ಲವೆ ? '' ಹೀಗೆನ್ನುತ್ತಲೇ ಅವಳ ಕೈಯನ್ನು ಹಿಡಿದುಕೊಂಡರು. ಕುಸುಮಳ ಶರೀರವಲ್ಲಿ ವಿದ್ಯುಚ್ಛಕ್ತಿ ಹರಿದಂತಾಯಿತು.

ನಿಜ, ಅಣ್ಣ ಅಪ್ಪ ಹೀಗೆಯೇ ಎಷ್ಟೋ ಬಾರಿ ಮಾಡಿದ್ದರು. ಅಪ್ಪ ತಲೆ ಸವರಿದ್ದರು. ಅಣ್ಣ ಕೆನ್ನೆ ತಿವಿದಿದ್ದ. ಆದರೆ ಆಗ ಒಂದು ಬಾರಿಯೂ ಹೀಗೆ ಆಗಿರಲಿಲ್ಲ. ಕೈ ತಾನಾಗಿ ಕೊಂಚ ಹಿಂದೆಳೆದುಕೊಂಡಿತು.

" ಯಾಕೆ ಭಯವೇನು—ಇದರಿಂದ ? "

"ಇಲ್ಲ. ಅದರಲ್ಲೇನಿದೆ, ನೀವೇ ಅಂದ ಹಾಗೆ...." ಅವಳು ಕೈಯನ್ನು ಪೂರ್ತಿಯಾಗಿ ಹಿಂದಕ್ಕೆ ತೆಗೆದುಕೊಳ್ಳಲಿಲ್ಲ. ಹಾಗೆ ಮಾಡಿದ್ದರೆ ಅವರೇನು ಅಂದುಕೊಂಡಾರು? ಅವರ ತತ್ವಗಳಲ್ಲಿ ಅಪನಂಬಿಕೆ ತೋರಿಸಿದಂತಾಗ ಲಿಲ್ಲವೆ ? ಇಷ್ಟಕ್ಕೂ ತಾನೇನು ಹಳೆಯ ಗುಷ್ಠೆ—ಇದಕ್ಕೆಲ್ಲ ಹೆದರುವುದಕ್ಕೆ? ಅಲ್ಲದೆ-ಅಲ್ಲದೆ ಅದೇನು ಅಪೂರ್ವ ಅನುಭವ! ಬೆಳಗ್ಗೆ ಬೇಕಾದಷ್ಟು ಸರಸದ ಮಾತುಗಳಾಗಿದ್ದುವು. ಆದರೆ ಇದು.... !

" ನೋಡಿದೆಯಾ, ನಿಂಗೇ ತಿಳಿಯಿತು—ನಿಜ. ಹಾಗೇ ಮಕ್ಕಳನ್ನು ಮುದ್ದಿಸುತ್ತೀವಿ ಅನ್ನು. ಮುತ್ತಿಡುತ್ತೀವಿ. ಅದರಲ್ಲಿ ತಾನೆ ಏನು? ಕೆಟ್ಟದು?"

" ಅಂ ? " ಅವಳು ಬೆರಗಾಗಿ ಅವರ ಕಡೆ ಕಣ್ಣಗಲಿಸಿ ನೋಡಿದಳು.

ಉತ್ತರವಾಗಿ ಅವರು ಅವಳನ್ನು ಸೆಳೆದುಕೊಂಡು ಮುತ್ತಿಟ್ಟರು. ಅನಿರೀಕ್ಷಿತವಾಗಿ ಒಮ್ಮೆಯೇ ನಡೆದುಬಿಟ್ಟ ಸಂಗತಿ ಅವಳಿಗೆ ದಿಗ್ಭ್ರಮೆಯನ್ನುಂಟು ಮಾಡಿತ್ತು. ಏನು ಮಾಡಲೂ ತೋಚಲಿಲ್ಲ. ಮೈ ಜುಂ ಎಂದು ನಡುಗಿ ಬೆವರಿ ಹೋಯಿತು. ಜ್ವರದ ಕಾವೇರಿತು. ಭಯೋಲ್ಲಾಸ! ಕ್ಷಣ ಕಾಲ ಕಳೆದ ಮೇಲೆ ಅವಳು ಚೇತರಿಸಿಕೊಂಡು ಅವರಿಂದ ಬಿಡಿಸಿಕೊಂಡಳು. " ನೀವು ಹೀಗೆ ಮಾಡಬಾರದಾಗಿತ್ತು '' ಎಂದು ಅರೆಮನಸ್ಸಿನಿಂದ ಆಕ್ಷೇಪಿಸಿದಳು.

" ಛೀ ಹುಚ್ಚಿ ! ಈಗ ನೀನೇ ಹೇಳಲಿಲ್ಲವೆ, ಇಂಥಾದ್ದರಲ್ಲೆಲ್ಲ ಏನೂ ಇಲ್ಲ ಅಂತ ? ನನಗಂತೂ ಮಗುವನ್ನು. ....."

" ನಾನೇನು ಮಗುವಲ್ಲ. ಹೆಂಗಸು. " ಹೀಯ್ಯಾಳಿಸಿಕೊಂಡವಳಂತೆ ಸಿಟ್ಟಿನಿಂದ ಹೇಳಿದಳು.

" ಹಾಗೋ. ನಿಜ. ಹಾಗಾದರೆ ನಿಂಗೆ ಇದೆಲ್ಲ ತಿಳಿಯುತ್ತೆ ಅನ್ನು ! ಬರಿ ಪುಸ್ತಕದ ಹುಳುವಲ್ಲ ? " ಅವರು ನಕ್ಕು " ಮತ್ತೇಕೆ ಈ ಮುನಿಸು?" ಎಂದು ಕೇಳಿದರು.

" ಮುನಿಸಲ್ಲ........ಆದರೆ........" ಅವಳಿಗೆ ಮಾತು ಹೊರಡಲಿಲ್ಲ.

" ಆದರೆ ಇಷ್ಟವಿಲ್ಲವೆ ? "

" ಭಯವಾಗುತ್ತೆ. "

" ಭಯ ! ಯಾತರ ಭಯ ? ಜಗತ್ತನ್ನೇ ಎದುರಿಸಿದರಾಯ್ತು—ಇಬ್ಬರೂ ಕೂಡಿ..."

" ಆಂ ! " ಕುಸುಮ ಕಣ್ಣರಳಿಸಿ ಅವರ ಕಡೆ ನೋಡಿದಳು.

" ಏನು ? "

ಆವಳಿಗೆ ಏನು ಹೇಳಲೂ ತೋರಲಿಲ್ಲ. ತುಟಿಗಳು ಮುಖ ಎಲ್ಲ ಕೆಂಡದಂತೆ ಸುಡುತ್ತಿದ್ದುವು. ಪುಸ್ತಕಗಳಲ್ಲಿ ಓದಿದ ಅಂಶ ಉದ್ರೇಕಿಸುತ್ತಿದ್ದರೆ ಪ್ರತ್ಯಕ್ಷ ಅನುಭವದಿಂದ ಲಜ್ಜೆ, ಭಯ, ಆನಂದ- ಹತ್ತಾರು ಭಾವನೆಗಳು ಬೆರೆದು ಭಾವೋನ್ಮಾದವೇ ಅವಳನ್ನು ಆವರಿಸಿಕೊಂಡಿತ್ತು. ಅವಳಿಗೆ ಅವರ ಸಮೀಪ, ಹಾಗೂ ದೂರ, ಚಿಟಿಕಿಮುಳ್ಳು ಆಡಿಸಿದಂತಿತ್ತು. ಇಬ್ಬರ ಮಧ್ಯೆ ಕ್ಷಣಕಾಲ ಇದ್ದ ಮೌನ ತಡೆಯಲಾರದಂತಿತ್ತು. ಏನು ಹೇಳಬೇಕು ? ಮಾಡಬೇಕು ?

" ಯಾರೋ ಬರ್‍ತಾ ಇದಾರೆ " ದೂರದಲ್ಲಿ ದೀಪ ಕಂಡು ಅವಳಿಗೆ ಪರಿಹಾರ ಉಂಟಾಯಿತು.

ಇಬ್ಬರೂ ಮೌನವಾಗಿ ನಡೆಯತೊಡಗಿದರು.

" ಇತ್ತ ಕಡೆ ಕಳ್ಳರು ಕಾಕರ ಭಯವಿಲ್ಲವೊ ? " ಅವರು ಯೋಚಿಸುತ್ತ ಕೇಳಿದರು.

" ಅಂ ? ಇಲ್ಲ." ಅವಳು ತನಗೆ ತಿಳಿಯದೆಯೇ ಅವರಿಗೆ ಹತ್ತಿರವಾಗಿ ಸರಿದುಕೊಂಡಳು.

" ಅಲ್ಲ, ನಿಮ್ಮ ಮಹಲು ಊರಿನಿಂದ ಇಷ್ಟು ದೂರವಾಗಿದೆಯಲ್ಲ ಅಂತ ಕೇಳಿದೆ ಅಷ್ಟೆ. "

" ಕಾವಲು ಇರ್‍ತಾರೆ. "

" ಅದು ಹೊರಗಡೆ. ಮನೆಯ ಒಳಗೆ ? "

" ಒಳಗೆ ಯಾರಿದಾರೆ ? ಎಲ್ಲ ನಮ್ಮೋರೆ. "

" ಆಳು ಕಾಳು. "

" ಎಲ್ಲ ನಂಬಿಕಸ್ತರೇ. "

" ಕೋಣೆಯಲ್ಲಿ ಹಣ ಇಟ್ಟುಬಂದಿದ್ದೆ........"

" ಏನೂ ಭಯವಿಲ್ಲ. ''

" ನಿಮ್ಮ ಕೋಣೆಗಳಿಂದ ಏನೂ ಹೋಗಿಲ್ಲ, ಇದು ವರೆಗೆ ? ''

'' ಇಲ್ಲ."

'' ರಾತ್ರಿಹೊತ್ತಿನಲ್ಲಿ ? "

" ಉಹುಂ. "

" ಇಷ್ಟಕ್ಕೂ, ಆಗಳಿ ಹಾಕಿಕೊಂಡು ತಾನೆ ಮಲಗೋದು? "

'' ಇಲ್ಲವಲ್ಲ " ತಲೆಯಾಡಿಸಿದಳು.

'' ಓ "

ಈ ಸಾಮಾನ್ಯ ಮಾತುಗಳ ಅರ್ಥ ಅವಳಿಗೆ ಆಗ ಆಗಲಿಲ್ಲ.

ಗುರು ಹತ್ತಿರ ಬಂದ. ದಾಸ ಹಿಂದೆ ದೀಪವನ್ನು ತರುತ್ತಿದ್ದ

'' ಅಣ್ಣ! ''

" ಏನೋ ಬಹಳ ಹೊತ್ತಾಯ್ತು. ಪ್ರೇಮದ ತಂಗಿ ಬರಲಿಲ್ಲ ಅಂತ ಹುಡುಕಿಕೊಂಡು ಬಂದೆ. ಕಾರು ಎಲ್ಲಿ? " ಅವನು ನಸುನಕ್ಕ.

'' ಪೇಟೆ ಮಧ್ಯದಲ್ಲೇ ಕೆಟ್ಟುಹೋಯ್ತು '' ಕುಸುಮಳಿಗೆ ಕೊಂಚ ಧೈರ್ಯ ಬಂತು. 'ಸದ್ಯ ಅಣ್ಣ ಕಂಡಿರಲಾರ' ಎಂದುಕೊಂಡಳು.

'' ಇದುವರೆಗೂ ನೋಡಿ ಈಗ ತಾನೆ ಬಿಟ್ಟು ಬಂದೆವು. ಎಷ್ಟು ಮಹಾ ದೂರ " ಅಯ್ಯನವರು ಕುಸುಮಳ ಮಾತಿಗೆ ಸೇರಿಸಿದರು.

'' ನಿಜ '' ಗುರು ಅವರೊಡನೆ ಹಿಂತಿರಿಗಿದ.

ಉಳಿದ ದಾರಿಯಲ್ಲಿ ಗುರು ಅಯ್ಯನವರೊಡನೆ ಮಾತಾಡಲಿಲ್ಲ. ಕುಸುಮ ಯಾರೊಡನೆಯೂ ಮಾತಾಡುವ ಸ್ಥಿತಿಯಲ್ಲಿರಲಿಲ್ಲ. ಕನಸಿನಲ್ಲಿ ನಡೆಯುವವಳಂತೆ ನಡೆದಳು. ಅವಳು ಅಗಾಧವಾದ ವಿದ್ಯುಚ್ಛಕ್ತಿ ಹರಿಯುತ್ತಿದ್ದ ತಂತಿಯಂತಿದ್ದಳು. ಎಲ್ಲರೂ ಮೌನದಲ್ಲೇ ನಡೆದು ಮಹಲನ್ನು ಮುಟ್ಟಿದಾಗ ಒಂಬತ್ತೂವರೆ. ಸಾಹುಕಾರರು, ಸಣ್ಣಮ್ಮ, ಸದಾಶಿವ ಎಲ್ಲರೂ ವರಾಂಡದಲ್ಲೇ ಆತುರದಿಂದ ಕಾಯುತ್ತಿದ್ದರು. ನಂಜಪ್ಪ ಮಾತ್ರ ನಿದ್ದೆಹೋಗಿದ್ದ. ಕಾರಣ ತಿಳಿದೊಡನೆ ಸಾಹುಕಾರರು '' ಆ ಕಾರಿಗೆ ಇದೇ ಆಖೈರು ನಾಳೆ ತೊಲಗುತ್ತೆ '' ಎಂದರು. ಸಣ್ಣಮ್ಮ '' ಏನಾದರೂ

ಕಾಯ್ಬ್ಡ, ಕಾರಿನಲ್ಲಿ ಬಂದಿದ್ದರೆ ಚೆನ್ನಾಗಿತ್ತು" ಎಂದು ಗೊಣಗಿಕೊಂಡಳು. ಸದಾಶಿವ "ಮಗು ತುಂಬ ದಣಿದಿದಾಳೆ, ನಡೆದು" ಅಂದ.

ಮಾರನೆಯ ದಿನ ಬೆಳಿಗ್ಗೆಯೇ ಕಾಮೇಶ್ವರಯ್ಯನವರು ಊರಿಗೆ ಹೊರಟರು. ಅವರು ಕಾರಿನ ಬಳಿಗೆ ಬಂದರೂ ಕುಸುಮಳ ಸುಳಿವೇ ಇರಲಿಲ್ಲ. ಗುರುವಿಗೆ ಇದು ಆಶ್ಚರ್ಯವೆನಿಸಿತಾದರೂ 'ಎಲ್ಲೋ ಅಲಂಕಾರದಲ್ಲೇ ಮುಳುಗಿದಾಳೆ' ಎಂದುಕೊಂಡು "ಕುಸುಮಾ! ಕುಸೂಮಾ" ಎಂದು ಕೂಗಿದ. ಸಾಹುಕಾರರೂ ಕೂಗಿದರು. ಆದರೆ ಕುಸುಮ ಹೊರಗೆ ಬರಲೇ ಇಲ್ಲ. "ಹೋಗೋ ನೋಡೋ, ಮಗೂಗೆ ಹೇಳೋ" ಎಂದು ಸಾಹುಕಾರರು ದಾಸನನ್ನು ಅವಳ ಕೋಣೆಗೇ ಕಳುಹಿಸಿದರು. ಅವನು ಒಬ್ಬನೇ ವಾಪಸು ಬಂದು "ಅವ್ವನಿಗೆ ಬಾರಿ ತಲೆನೋವಂತೆ. ಕ್ಷಮಿಸಬೇಕಂತೆ" ಅಂದ. ಕೂಡಲೇ ಅಯ್ಯನವರು "ಪಾಪ, ತೊಂದರೆ ಪಡಿಸೋದು ಬೇಡ. ನಿನ್ನೆಯೇ ಬೀಳ್ಕೊಂಡಿದೀನಿ, ಸಾಕು. ನನ್ನ ಪ್ರಣಾಮ ಹೇಳಿಬಿಡಿ" ಎಂದು ಕಾರನ್ನು ಹತ್ತಿದರು. ಅದು ಹೊರಟು ಹೋಯಿತು.

ಗುರುವೂ ಸಾಹುಕಾರರೂ ಒಡನೆಯೇ ಕುಸುಮಳ ಕೋಣೆಗೆ ಹೋದರು. ಅವಳು ಅರಿಬೋರಲಾಗಿ ಬಿದ್ದುಕೊಂಡಿದ್ದಳು. ಇವರು ಒಳಗೆ ಹೋದರೂ ಏಳಲಿಲ್ಲ, ತಿರಿಗಲೂ ಇಲ್ಲ. "ಚಿನ್ನ, ಏನಾಗಿದೆ ಅಷ್ಟು ತಲೆನೋವೆ?" ಸಾಹುಕಾರರು ಮಂಚದ ಹತ್ತಿರ ಹೋಗಿ ಕೇಳಿದರು.

"ಹುಂ" ಕುಸುಮ ಇದ್ದಂತೆಯೇ ಉತ್ತರ ಕೊಟ್ಟಳು.

"ಪುಟ್ಟ, ಇತ್ತಕಡೆ ತಿರಿಗು" ಸಾಹುಕಾರರು ಮಗಳನ್ನು ಮುಟ್ಟಿ ಮೆತ್ತಗೆ ತಮ್ಮ ಕಡೆಗೆ ಎಳೆದುಕೊಂಡರು. ಕುಸುಮ ವಿಧಿಯಿಲ್ಲದೆ ಇತ್ತ ಹೊರಳಿದಳು. ಆದರೆ ಮುಖದ ಮೇಲೆ ಕೈ ಅಡ್ಡಲಾಗಿತ್ತು. ಸಾಹುಕಾರರು ಅವಳ ಕೈ ತೆಗೆಯಲು ಹೋಗಿ "ಇದೇನು ಇಷ್ಟು ಬಿಸಿ! ಜ್ವರ ಬಂದಿದೆಯೆ?" ಅಂದು ಹಾಗೇ ಹಣೆಯನ್ನು ಮುಟ್ಟಿದರು. ಹುಂ. ಜ್ವರ ಬಂದಿತ್ತು. ಈಗ ಸಣ್ಣಮ್ಮನೂ ಬಂದಿದ್ದಳು. ಅವಳೂ ಮಗಳನ್ನು ಮುಟ್ಟಿ ನೋಡಿದಳು. ಗುರುವೂ ಕೈಹಿಡಿದು ನೋಡಿದ. ದಾಸನನ್ನು ಔಷಧಿಗಾಗಿ ಕಳುಹಿಸಿದ್ದೂ ಆಯಿತು. ಸಾಹುಕಾರರು ಅವಳ ಕೈಯನ್ನು ಮೃದುವಾಗಿ ಮುಖದಿಂದ ಸರಿಸುತ್ತ "ಯಾಕೆ, ಕಣ್ಣೇ ಬಿಡೋದಕ್ಕೆ ಆಗೋದಿಲ್ಲವೆ?" ಎಂದರು,

"ಏನಿಲ್ಲ" ಕುಸುಮ ಕಣ್ಣುಬಿಟ್ಟಳು. ಆದರೆ ಯಾರ ಕಡೆಯೂ ನೋಡಲಿಲ್ಲ.

"ಇದು ಯಾಕೆ ಕಣ್ಣು ಹೀಗೆ ಕೆಂಡದ ಹಾಗಿದೆ?" ಸಣ್ಣಮ್ಮ ಕೇಳಿದಳು. ಕುಸುಮ ಸುಮ್ಮನೆ ತಲೆಯಾಡಿಸಿದಳು.

"ಮುಖವೆಲ್ಲ ಆಗಲೇ ಎಷ್ಟು ಬತ್ತಿ, ಮಾಸಿ ಹೋಗಿದೆ!" ಸಣ್ಣಮ್ಮ ಸಂಕಟಪಟ್ಟಳು.

"ಪಾಪ, ಅದು ಕುಸುಮ ಅಲ್ಲವೆ? ಸ್ವಲ್ಪ ಕಷ್ಟವನ್ನೂ ಸಹಿಸಲಾರದು" ಸಾಹುಕಾರರು ಕನಿಕರಿಸಿದರು.

"ಎಲ್ಲ ಆ ಹಾಳು ಪುಸ್ತಕಗಳು—ಜ್ವರದ ಕ್ರಿಮಿಗಳು. ಹೊತ್ತು ಗೊತ್ತಿಲ್ಲದೆ ಅವನ್ನು ನುಂಗಿ ನುಂಗಿ ಆರೋಗ್ಯ ಹಾಳು ಮಾಡಿಕೋತಾಳೆ" ನಂಜಪ್ಪ ಕಾರಣ ಹೇಳಿದ.

"ಏನಿಲ್ಲ ಆ ಥಂಡಿ ಹವದ್ದು. ನಿನ್ನೆ ಅಷ್ಟು ದೂರ ಅದರಲ್ಲಿ ನಡ ಕೊಂಡು ಬಂತು ಮಗು, ತಡೀಲಿಲ್ಲ" ಈಗ ಕಾಫಿ ತೆಗೆದುಕೊಂಡು ಬಂದಿದ್ದ ಸದಾಶಿವ ಹೇಳಿದ. ಗುರು ಮಾತ್ರ ಸುಮ್ಮನಿದ್ದ.

"ಎಲ್ಲ ಹೊರಗೆ ಬನ್ನಿ. ಪಾಪ ಮಲಗಿಕೊಳ್ಳಲಿ. ಮದ್ಯಾನ್ಹ ನೋಡೋಣ" ಸಾಹುಕಾರರು ಹೊರಗೆ ಬಂದರು. ಗುಂಪೂ ಹಿಂಬಾಲಿಸಿತು. ಗುರು ಯೋಚಿಸುತ್ತ ತನ್ನ ಕೋಣೆಗೆ ಹೋದ. ಕುಸುಮ ಮತ್ತೆ ಬೋರ ಲಾದಳು.

೬

* * *

ಅದೇ ಸಂಜೆ ಗುರುವಿನ ಹೆಸರಿಗೆ ಒಂದು ಟೆಲಿಗ್ರಾಂ ಬಂದಿತು. ಅವನ ಸ್ನೇಹಿತ ನೊಬ್ಬ ಕೊಟ್ಟಿದ್ದ. ಗುರುವು ಮೊದಲ ದರ್ಜೆಯಲ್ಲಿ ಪಾಸಾದನೆಂದೂ ತಾನು ಎರಡನೆಯ ದರ್ಜೆಯೆಂದೂ ತಿಳಿಸಿದ್ದ. ಗುರುವಿಗೆ ಅತ್ಯಾಶ್ಚರ್ಯವಾಯಿತು. ತಾನು ಪಾಸಾಗುವುದಾಗಿ ತಂದೆಯವರಿಗೆ ಹೇಳಿದ್ದರೂ ಈ ವಿಷಯದಲ್ಲಿ ಅವನಿಗೆ

ಅನುಮಾನವಿತ್ತು. ಆದರೆ ಈಗ ಮೊದಲ ದರ್ಜೆ! ತನ್ನ ಕಣ್ಣನ್ನು ತಾನೇ ನಂಬಲಾರದಾದ. ಅಲ್ಲದೆ ಸ್ನೇಹಿತ ಎರಡನೆಯ ದರ್ಜೆ, ತನಗಿಂತ ಎಷ್ಟೋ ಬುದ್ಧಿವಂತ, ಎಷ್ಟೋ ಚೆನ್ನಾಗಿ ಬರೆದಿದ್ದವನು! ಯೋಚಿಸಿದಷ್ಟೂ ನಾಚಿಕೆ ಹೆಚ್ಚಾಯಿತು.

"ಪಾಸಾಯ್ತೆ? ಫಸ್ಟ್‌ಕ್ಲಾಸೇ, ಭಲೇ!" ಸಾಹುಕಾರರು ಟೆಲಿಗ್ರಾಂ ಕಡೆಗೆ ಇಣಿಕಿ ನೋಡುತ್ತ ಸಂತೋಷದಿಂದ ಕೂಗಿಕೊಂಡರು. ಆದರೆ ಗುರು ಸುಮ್ಮನಿದ್ದ. ನಗಲೂ ಇಲ್ಲ.

"ಕೇಳಿದೆಯ? ಗುರು ಫಸ್ಟ್‌ಕ್ಲಾಸು!" ಸಾಹುಕಾರರು ಒಳಗಡೆಗೆ ಆತುರದಿಂದ ಕೂಗಿದರು.

"ಆಂ! ಗೊತ್ತೇಯಿತ್ತು" ಸಣ್ಣಮ್ಮ ಒಳಗಿನಿಂದ ಬರುತ್ತ ಹೇಳಿ ಹಿಗ್ಗಿದಳು.

"ಏನು ಅಷ್ಟು ಬುದ್ಧಿವಂತ ಅಂತಲೋ?" ಸಾಹುಕಾರರೂ ಹಿಗ್ಗುತ್ತ "ಪಾಪ, ಕುಸುಮ ಚೆನ್ನಾಗಿದ್ದರೆ ಎಷ್ಟು ಕುಣಿದಾಡುತ್ತಿದ್ದಳೋ ಅಣ್ಣನ ವಿಜಯ ಕೇಳಿ!" ಎಂದು ಪೂರ್ತಿಮಾಡಿದರು.

"ಎಲ್ಲಪ್ಪ ಅಳಿಮಯ್ಯ, ತಿಂಡಿ? ಯಾವಾಗ?" ನಂಜಪ್ಪ ಕೇಳಿದ. ಗುರು ಉತ್ತರ ಕೊಡಲಿಲ್ಲ.

"ಇಗೊ, ಇಗೊ" ಸದಾಶಿವ ಧಾವಿಸುತ್ತ ಬಂದ. ತಂದಿದ್ದ ಕೊಬ್ಬರಿ ಸಕ್ಕರೆಯನ್ನು ಎಲ್ಲರಿಗೂ ಹಂಚಿದ.

"ಸದಾಶಿವ ಬೇಕಾದರೆ ಸಮಯಕ್ಕೆಲ್ಲ ಸರಿ" ಸಾಹುಕಾರರು ಬಾಯಿ ಬಿಟ್ಟು ಹೊಗಳಿದರು.

"ತಮ್ಮ ಮನೆ ತಯಾರಿ" ಸದಾಶಿವ ಹಲ್ಲು ಕಿರಿದ.

"ಇದೇನಪ್ಪ, ಗುರು ಇಷ್ಟರಲ್ಲೇ ಸರಿಮಾಡುತ್ತೀಯೋ, ಇನ್ನೇನಾದರೂ ಉಂಟೋ ಮುಂದೆ?" ನಂಜಪ್ಪ ಕೆದಕಿದ.

"ಇಷ್ಟೇ ಎಲ್ಲಾದರೂ ಉಂಟೇನೋ ಮೂಢ. ಭರ್ಜರಿ ಪಾರ್ಟಿ ಕೊಡುತ್ತಾನೆ ಊರಿನ ದೊಡ್ಡ ಮನುಷ್ಯರಿಗೆಲ್ಲ."

"ನಾನೂ ಆ ಪಟ್ಟೀಲಿ ಇದೀನೆ?"

"ಅದೇನೋ ನಿನ್ನ ಅಳಿಯನ್ನೇ ಕೇಳು. ಹ್ಹಹ್ಹಹಾ!"

" ಪಾರ್ಟಿ ಯಾಕಪ್ಪ ಇದಕ್ಕೆಲ್ಲ ?" ಗುರು ಮೃದುವಾಗಿ ವಿರೋಧಿಸಿದ.

" ಹಾಗೆಂದರೇನು. ಮರ್ಯಾದೆ ಮನೆತನದ ಮಗ ಫಸ್ಟ್‌ಕ್ಲಾಸಿನಲ್ಲಿ ಪಾಸಾದರೆ ಬೇಡವೆ ? ಅದೂ ಡಿಗ್ರಿ ಪರೀಕ್ಷೆ. ಮರ್ಯಾದೆ ವಿಚಾರವಿಲ್ಲವೆ ? ಸಂತೋಷದ್ದಲ್ಲವೆ ? "

" ಇದೇನು ಮರ್ಯಾದೆ ವಿಚಾರವೋ. ಇದು ನಿಜ ಹೌದೋ ಇಲ್ಲವೋ?"

ಚೆನ್ನಾಯ್ತು ಚೆನಾಯ್ತು. ನಿಜವಲ್ಲದೆ ಇರುತ್ತೇ ? ನಾಳೆ ಪತ್ರಿಕೆಯಲ್ಲಿ ಬೇಕಾದರೆ ನೋಡಿದರೂ ಆಯ್ತು. "

" ಈ ಸಂತೋಷಕೂಟವೇನು ಬೇಡಾಪ್ಪ. "

" ಅದೆಲ್ಲ ನಿಂಗೆ ಯಾಕಪ್ಪ. ಮಾಡೋನು ನಾನು. ನನ್ನ ಮಗನ ಉದ್ದಿಶ್ಯ ಅಷ್ಟೆ. ನಿಂಗೇನು ಕಷ್ಟ. ಹಾಗೆಲ್ಲ ಅನ್ನಬಾರದು, ಮಗು. ನಮಗೆ ಇಂಥಾ ಸಂತೋಷ ಎಲ್ಲಿ ಸಿಗತ್ತಪ್ಪ ? "

" ನಂಗೇನು ಇಷ್ಟ ಸುತರಾಂ ಇಲ್ಲ. "

" ನಂಗೋಸ್ಕರ ಸೈರಿಸಿಕೊ ಆಯ್ತೆ ?.... ಲೋ, ಸದಾಶಿವ ನಾಳೆ ಏನು ಮಾಡ್ತೀಯೆ ? "

" ಊಟವೋ, ಟೀಪಾರ್ಟಿಯೋ ? " ಸದಾಶಿವ ಕೇಳಿದ.

" ಊಟವೇ " ನಂಜಪ್ಪ ಮಧ್ಯೆ ಬಾಯಿ ಹಾಕಿದ.

" ನಿಂಗೆ ಎಲ್ಲ ಹೊಟ್ಟೆ ತುಂಬ ಆಗಬೇಕು. ಉಹುಂ. ಊಟ ಹಳೀ ತರಹ, ಇಂಥಾ ಸಮಯಕ್ಕೆ. ಟೀ ಪಾರ್ಟಿಯೇ ಸರಿ. "

" ಹಾಗಾದರೆ ಜಿಲೇಬಿ, ಮೈಸೂರು ಪಾಕ್, ಜಾಮೂನು, ಬೋಂಡ, ವಡೆ.... ' ನಂಜಪ್ಪನ ಪಟ್ಟಿ ಮುಗಿಯಲೇ ಇಲ್ಲ.

" ಸರಿ ಸರಿ, ನಿನ್ನ ಪಟ್ಟಿ ಪೂರ್ತಿಯಾಗೋ ಹೊತ್ತಿಗೆ ನನ್ನ ಆಸ್ತಿಯೇ ಹಾಳಾಗಿರುತ್ತೆ. ಎರಡು ಸಿಹಿ, ಎರಡು ಕಾರ...."

" ಮೂರು ಮೂರು " ನಂಜಪ್ಪ ಅಂಗಲಾಚಿದ.

" ಆಗಲಿ ಆಗಲಿ. " ಸಾಹುಕಾರರು ಸಂತೋಷದಿಂದಲೇ ಒಪ್ಪಿಕೊಂಡರು.

" ಕಾಫಿ, ಹಣ್ಣು, ಬೀಡ, ಸಿಗರೇಟ್–ಇದ್ದೇ ಇವೆಯಲ್ಲ. " ನಂಜಪ್ಪ ಪೂರ್ತಿಮಾಡಿದ.

"ಆಗೇ ಆಗತ್ತಲ್ಲ. ಸುಮಾರು ನೂರು ಜನ ಅನ್ನು, ಏನು ಸದಾಶಿವ?"

" ಅಪ್ಪಣೆ."

"ಈ ರೇಷ್ಟ ಸಕ್ಕರೇಲಿ ಇಷ್ಟೊಂದು ಜನಕ್ಕೆಲ್ಲಿ? ಹೆಚ್ಚು 'ಕೋಟ'...." ನಂಜಪ್ಪ ಅನುಮಾನಿಸಿ ಸೂಚಿಸಿದ.

" ಅದೆಲ್ಲ ಸದಾಶಿವನಿಗೆ ಗೊತ್ತಿದೆ ಅಲ್ಲವೇನೋ ? "

" ಹೌದು. ಅದೇ ನಾಗಪ್ಪನಿಗೆ...."

"ಹುಂ. ಹುಂ. " ಸಾಹುಕಾರರು ಅಷ್ಟಕ್ಕೇ ನಿಲ್ಲಿಸಿದರು.

ಗುರು ತಂಗಿಯನ್ನು ವಿಚಾರಿಸುವುದಕ್ಕೆ ಹೋದ. ಇಷ್ಟು ಹೊತ್ತಿಗೆ ಆವಳು ಸ್ವಲ್ಪ ಚೇತರಿಸಿಕೊಂಡು ಜನರ ಕಣ್ಣನ್ನು ಇದಿರಿಸುತ್ತಿದ್ದಳು.

" ಅಣ್ಣಾ, ಅಭಿನಂದನೆಗಳು! " ಸೋತ ಸ್ವರದಲ್ಲಿ ಹೇಳಿದಳು.

" ಅಯ್ಯೊ, ನಂದೇನು ದೊಡ್ಡ ಯೋಗ್ಯತೆಯಲ್ಲ ಕುಸುಮ " ಅವನು ಖಿನ್ನನಾಗಿಯೇ ಹೇಳಿದ.

" ಅದೇಕಣ್ಣಾ, ಹಾಗಂತೀಯೆ—ಫಸ್ಟ್ ಕ್ಲಾಸ್ ಹೊಡೆದು. "

" ಅಯ್ಯೊ, ಕುಸುಮ ನೀನಿನ್ನೂ ಮಗು."

" ಮಗು! " ಕುಸುಮ ಬೆಚ್ಚಿದಳು.

" ಅದೇನು ಅಷ್ಟೊಂದು ಗಾಬರಿ. ಇನ್ನೂ ಎಳೇ ಮಗು. ತಿಳಿತೆ? ನಿಂಗೆ ಇನ್ನೂ ಏನೂ ತಿಳಿಯದು" ಅವನು ನಕ್ಕ.

" ನೀನು ಹೀಗೇ ಯಾವಾಗಲೂ. ನಿನ್ನನ್ನೇ ಜರಿದುಕೊಳ್ಳೋದು ನಿನ್ನ ಕಾಹಿಲೆ."

" ಸದ್ಯ, ನಿನ್ನ ಕಾಹಿಲೆಯಿಂದ ಗುಣವಾಗು, ನೀನು "

" ನನ್ನ ಕಾಹಿಲೆಯೆ? ಅಣ್ಣಾ, ಏನೋ ಗೊತ್ತಿಲ್ಲ " ಯೋಚಿಸುತ್ತ ಹೇಳಿದಳು.

" ಯಾಕೆ? ಏನದು? "

" ನಾಳೆ ಹೊತ್ತಿಗೆ ಹೇಗೆ ಸಾಧ್ಯ ಅಂತ ಸೂಚಿಸಿದೆ " ಆವಳು ಚೇತರಿಸಿಕೊಂಡು ಮಾತನ್ನು ತಿರಿಗಿಸಿಕೊಂಡಳು.

" ಹಾಗೇ? ಎಲ್ಲ ಸರಿಯಾದೀತು ನೋಡೋಣ. ನಂಗಂತೂ ಇದೆಲ್ಲ ಬೇಡ. "

" ನಂಗೆ ಗೊತ್ತು. ನೀನು ನನ್ನ ಹಾಗಲ್ಲ. ಚಪಲವಿಲ್ಲ. ಇದರಲ್ಲೆಲ್ಲ ಅಪ್ಪನ ಮನಸ್ಸು ನೋಯಿಸೋದು ಯಾಕೆ? "

" ಓಹೋ, ಇದೇನು ದೊಡ್ಡೋಳ ಹಾಗೆ ಮಾತಾಡುತ್ತೀಯ ಇವತ್ತು? "

" ಅಣ್ಣ, ನಾನೇನು ಹುಡುಗಿಯಲ್ಲ ಇನ್ನೂ. "

" ಹೂಂ! " ಗುರು ತಲೆಯಾಡಿಸಿದ. " ಏನಾದರೂ ಆಗಲಿ. ಇದಕ್ಕಾದರೂ ಗುಣವಾಗು ಬೇಗ."

" ಬರುತ್ತೀನಿ, ಅಂತೂ. "

ಮಾರನೆಯ ದಿನ ಬಂದ ಪತ್ರಿಕೆ ತಾರನ್ನೇ ಸ್ಥಿರಪಡಿಸಿತು.

ಸಂತೋಷಕೂಟವು ಸಾಹುಕಾರರ ವೈಭವಕ್ಕೆ ಸರಿಯಾದ ವಿಜೃಂಭಣೆಯಿಂದ ಸೊಗಸಾಗಿಯೇ ನಡೆಯಿತು. ಮಹಲಿನ ವಿಸ್ತಾರವಾದ ಬಯಲಿನಲ್ಲಿ ಹೊಸ ಪದ್ಧತಿಗನುಸಾರವಾಗಿ ಏರ್ಪಾಡಾಗಿತ್ತು. ಮುನಿಸಿಪಲ್ ಮತ್ತು ಸರಕಾರಿ ಕಚೇರಿಗಳು, ಶಾಲೆಗಳು ಇವುಗಳಿಂದ ಎರವಲಾಗಿ ತಂದ ಕುರ್ಚಿ ಮೇಜುಗಳು ಕುದುರೆಯ ಲಾಳದ ಆಕಾರದಲ್ಲಿ ಇಡಲ್ಪಟ್ಟಿದ್ದುವು. ಸಾಹುಕಾರರ ಬಿಳಿಯ ಮಗ್ಗಲುಹಾಸಿಗೆಗಳ ಜತೆಗೆ ಅವರ ಬಟ್ಟೆಯಂಗಡಿಗೆ ಸರಕಾರ ಒದಗಿಸಿದ್ದ ಮಲ್ಲಿನ ಥಾನುಗಳು ಮೇಜುಗಳನ್ನು ಮುಚ್ಚಿ ಶೋಭಿಸುತ್ತಿದ್ದುವು. ಸಾಹುಕಾರರ ಚೈನಾ ತಟ್ಟೆ ಬಟ್ಟಲ ಸೆಟ್ಟು ಮಧ್ಯದ ಮೇಜಿನ ಮೇಲಿತ್ತು. ಹೋಟಲುಗಳು ಅವರಿವರ ಮನೆ–ಎಲ್ಲೆಲ್ಲಿ ಇದ್ದುವೋ ಅಲ್ಲಿಂದ ತಂದ ಇತರ ಚೈನಾ ಸೆಟ್ಟುಗಳು ಇತರ ಮೇಜುಗಳ ಮೇಲಿದ್ದುವು. " ಎರಡು ದಿನ ಹೆಚ್ಚು ಕಾಲ ಸಿಕ್ಕಿದ್ದರೆ ಬೆಂಗಳೂರಿನಿಂದಲೇ ಇನ್ನೂ ಉತ್ತಮವಾದುವುಗಳನ್ನು ತರಬಹುದಾಗಿತ್ತು " ಎಂದು ಸಾಹುಕಾರರು ಕೊರಗಿದರು. ಪ್ರತಿ ಮೇಜಿನ ಮಧ್ಯದಲ್ಲೂ ಎರಡು ಮೂರು ಕಡೆ ಸೇಬು, ಕಿತ್ತಳೆ, ಬಾಳೆ, ದ್ರಾಕ್ಷಿಹಣ್ಣುಗಳು ಗೋಪುರವಾಗಿಟ್ಟಿದ್ದ ತಟ್ಟೆಗಳಿದ್ದುವು. ಸುತ್ತಲೂ, ಒಂದು ದೊಡ್ಡ ತಟ್ಟೆ, ಟೀ ಬಟ್ಟಲು, ಬಸಿ, ಚಮಚ ಈ ಸೆಟ್ಟುಗಳು ಹಲವು, ಎರಡೆರಡು ಕಡೆ ಕಾಫಿ ಗಿಂಡಿ, ಹಾಲಿನ ದಾನಿ, ಸಕ್ಕರೆ ಬಟ್ಟಲು. ಪ್ರತಿ ತಟ್ಟೆಯಲ್ಲೂ ಮೈಸೂರು ಪಾಕು, ಜಾಮೂನು, ಜಿಲೇಬಿ, ಬೋಂಡ, ಕಾರದವಲಕ್ಕಿ ವಡೆ ಧಂಡಿಯಾಗಿದ್ದುವು. ಸಾಲದುದಕ್ಕೆ ಅಲ್ಲಲ್ಲಿ ದೊಡ್ಡ ತಟ್ಟೆಗಳ ಮೇಲೆ ಈ ತಿಂಡಿಗಳ ಗೋಪುರಗಳು ಬೇರೆ; ದೊಡ್ಡ ಚಮಚೆ, ಬಡಿಸಿಕೊಳ್ಳುವುದಕ್ಕೆ. ಅಲ್ಲಲ್ಲಿ ಸ್ಟ್ಯಾಂಡುಗಳ ಮೇಲಿದ್ದ

ಊದುಬತ್ತಿ ಘಮಘಮವನ್ನು ಎಲ್ಲ ಕಡೆಗೂ ಹರಡುತ್ತಿತ್ತು. ರೇಡಿಯೋ ಹಾಡುತ್ತಿತ್ತು.

ಮುಖ್ಯವಾದ ಮೇಜಿನ ಸುತ್ತ ಸಾಹುಕಾರರೂ ಮತ್ತು ಅಮಲ್ದಾರರು ಪೋಲೀಸ್ ಇನ್ಸ್ಪೆಕ್ಟರು, ಮುನಿಸಿಫರು, ಜೋಡಿದಾರರು, ಮುನಸಿಪಲ್ ಅಧ್ಯಕ್ಷರು, ಮಳಿಗೆ ನಂಜುಂಡಪ್ಪನವರು, ಹೈಸ್ಕೂಲುಗಳ ಮುಖ್ಯೋಪಾಧ್ಯಾಯರು, ಮುಂತಾಗಿ ಪುರಪ್ರಮುಖರು ಕುಳಿತಿದ್ದರು. ನಂಜಪ್ಪನೂ ಈ ಮೇಜನ್ನೇ ಆಕ್ರಮಿಸಿಕೊಂಡಿದ್ದ. ಗುರು ಇಲ್ಲೇ ಇರಬೇಕಾಯಿತು. ಕುಸುಮ ಆದಷ್ಟು ಅಲಂಕರಿಸಿಕೊಂಡು ಸ್ವಲ್ಪ ಹೆಚ್ಚಾಗಿಯೇ ಪೌಡರು ಹಾಕಿಕೊಂಡು ಬಲವಂತದ ಗೆಲವನ್ನು ತೋರಿಸುತ್ತ ಅಲ್ಲೇ ಕುಳಿತಿದ್ದಳು. ಸಣ್ಣಮ್ಮ ಬರುವ ಮಾತಂತು ಇರಲೇ ಇಲ್ಲವಲ್ಲ. ಇತರ ಮುಖ್ಯ ಅಧಿಕಾರಿ ವರ್ಗದವರೂ ವರ್ತಕ ವರ್ಗದವರೂ, ಗಣ್ಯ ಮಹಾಜನರೂ, ಸಾಹುಕಾರರಿಗೆ ಬೇಕಾದವರೂ ಬಾಕಿಯ ಕಡೆಗಳಲ್ಲಿ ಕುಳಿತಿದ್ದರು. ಚಂದ್ರಶೇಖರನಿಗೂ ಸಹಜವಾಗಿಯೇ ಕರೆ ಬಂದಿತ್ತು. ಅವನು ಆಗಾಗ ನೋಟ್ಸ್ ತೆಗೆದುಕೊಳ್ಳುತ್ತಿದ್ದ. ಚೈನಾ ಚಮಚಗಳ ತಾಳಮೇಳಗಳೊಂದಿಗೆ ಕೂಟ ಭರದಿಂದ ಸಾಗಿತು. ಸದಾಶಿವ ರುಚಿರುಚಿಯಾಗಿ ಭಕ್ಷ್ಯಗಳನ್ನು ತಯಾರಿಸಿದ್ದಲ್ಲದೆ, ತಾನು ಕರೆಯಿಸಿಕೊಂಡಿದ್ದ ಸಹಾಯಕರೊಡನೆ ಖಾಲಿಯಾದ ಕಡೆ ತಿಂಡಿ ಕಾಫಿಗಳನ್ನು ಒದಗಿಸುತ್ತ, ಸಹಾಯಕರ ಮೇಲೆ ಕೂಗಾಡುತ್ತ, ಪುಟ ನೆಗೆಯುವ ಚಂಡಿನಂತೆ ಓಡಾಡುತ್ತಿದ್ದ. ಸಾಹುಕಾರರು ತಮ್ಮ ಮೇಜಿನವರನ್ನು ಒತ್ತಿ ಉಪಚರಿಸಿದುದಲ್ಲದೆ ಮಧ್ಯದಲ್ಲಿ ಎದ್ದು ಎಲ್ಲ ಮೇಜುಗಳಿಗೂ ಹೋಗಿ ಬೇಕಾದವರನ್ನೆಲ್ಲ ಮಾತನಾಡಿಸಿ ಅಲ್ಲಲ್ಲಿ ವಿನೋದವಾಡಿ ತಮ್ಮ ಮೇಜಿಗೆ ಹಿಂತಿರಿಗಿದರು. ಅತಿಥಿಗಳೆಲ್ಲ ಸಾಕಾದಷ್ಟು ತಿಂದು ತೇಗಿ ತಟ್ಟೆಗಳಲ್ಲಿ ಚೆಲ್ಲಿದ ಮೇಲೆ ಕೂಟ ಮುಕ್ತಾಯವಾಯಿತು.

ಬರುವಾಗಲೇ ಅತಿಥಿಗಳು ಗುರುವಿಗೆ ಹಸ್ತಲಾಘವ ಕೊಟ್ಟು ಅಭಿನಂದಿಸಿದರು. ಅವನ ಬುದ್ಧಿಶಕ್ತಿಯನ್ನು ಹೊಗಳಿದರು. ಉತ್ತಮ ಭವಿಷ್ಯವನ್ನು ಕೋರಿದರು. ಗುರು ಎಲ್ಲರಿಗೂ ಕುಂಟ ಕೈ ಕೊಟ್ಟು ಸಪ್ಪೆಯಾಗಿ ಸುಮ್ಮನಿದ್ದ. ಕೂಟ ನಡೆಯುತ್ತಿದ್ದಾಗಲೂ ಇದೇ ಪ್ರಶಂಸೆ, ಭವಿಷ್ಯಕ್ಕೆ ಸಲಹೆಗಳು ಒಂದೇ ಸಮನೆ ಹೊರಗೆ ಬರುತ್ತಿದ್ದುವು. "ಪಡೆದರೆ ಇಂಥ

ಸುಪುತ್ರನ್ನ ಪಡೆಯಬೇಕು ಸಾರ್." ಎಂದರು ಭೋಗಪ್ಪನವರು. "ಅವರನ್ನು ನೋಡಿ ಸಾರ್; ಡಿಗ್ರಿ ಪರೀಕ್ಷೆ, ಫಸ್ಟಕ್ಲಾಸಿನಲ್ಲಿ ಮಾಡಿದೀನಿ ಅಂತ ಏನಾದರೂ ಜಂಭವೆ? ಅಂಥ ದೃಷ್ಟಿ ಕೂಡ ಇಲ್ಲ. ಎಷ್ಟು ನಮ್ರವಾಗಿ, ಗಂಭೀರವಾಗಿದಾರೆ." ಎಂದು ಮಳಿಗೆ ನಂಜುಂಡಪ್ಪನವರು ಹೊಗಳಿದರು. ಹೀಗೇ ಇತರರೂ ಒಂದೊಂದು ಮಾತನ್ನಾಡಿದರು. ಸಾಹುಕಾರರು ಕೇಳಿ ಕೇಳಿ ಹಿಗ್ಗುತ್ತ "ಅವನು ಮೊದಲಿನಿಂದಲೂ ಹಾಗೆ. ತನ್ನ ಬೆಲೆಯನ್ನೇ ತಾನು ಅರಿಯ. ವಿನಯದ ಮಿತಿಯನ್ನೂ ಮೀರಿದಾನೆ ಅಂತ ಅಂದುಕೋತ ಇರುತ್ತೀನಿ." ಎಂದು ಮುಂತಾಗಿ ಅವನ ಮೌನಕ್ಕೆ ಕಾರಣ ಕೊಡುವಂತೆ ಹೇಳಿಕೊಳ್ಳುತ್ತಿದ್ದರು. ಗುರುವಿಗೋ ಈ ಪ್ರಶಂಸೆಯ ಒಂದೊಂದು ಮಾತನ್ನು ನುಂಗುವುದೂ ಕಷ್ಟವಾಗಿತ್ತು. ಎದೆ ಹಿಂಡುತ್ತಿತ್ತು. ಗಳಿಗೆ ಗಳಿಗೆಗೂ ಅವನು ಬಿಳಿ ಕೆಂಪಾಗುತ್ತಿದ್ದ. ಕಳ್ಳ ಅಪರಾಧಿಯಂತೆ ಕೇಳುತ್ತ ಅನುಭವಿಸುತ್ತಿದ್ದ. ಒಂದೊಂದು ಬಾರಿ ಒಳಗಿನ ಒತ್ತಡ ಹೆಚ್ಚಾಗಿ ಎದೆ ಬಿರಿಯುವಂತಾಗಿ 'ನಾನು ಇದಕ್ಕೆಲ್ಲ ಯೋಗ್ಯನಲ್ಲ, ಯೋಗ್ಯನಲ್ಲ ಅಯೋಗ್ಯ. ಇದೆಲ್ಲ ಸುಳ್ಳುನಾಟಕ' ಎಂದು ಕೂಗಿಬಿಟ್ಟು ಓಡಿಹೋಗಬೇಕೆಂದೆನಿಸುತ್ತಿತ್ತು. ಆದರೆ ಲೌಕಿಕ ಅವನನ್ನು ತಡೆದಿತ್ತು. ಅವನು 'ಛಿ, ನಾನೂ ಹಾಗೆಯೆ? ಈ ವೇಷಕ್ಕೇ ಕಟ್ಟುಬಿದ್ದಿದೀನಲ್ಲ—ಅಸಹಾಯಕನಂತೆ. ನಂಗೂ ಇತರ ಮರುಳರಿಗೂ ಏನು ವ್ಯತ್ಯಾಸ? ನಾನೂ ಹೆಮ್ಮೆಗೆ ಗುಲಾಮ, ಮರ್ಯಾದೆಗೆ ಗುಲಾಮ. ಯಾರನ್ನು ಯಾಕೆ ಅನ್ನಬೇಕು? ಛೀ! ಛೀ!' ಎಂದುಕೊಂಡು ಒಳಗೇ ಒದ್ದಾಡಿದ. ರೇಗಾಡಿದ. ಕುಳಿತಿದ್ದ. ಈ ಗಾಳಿಯಲ್ಲಿ ಅವನಿಗೆ ಉಸಿರು ಕಟ್ಟಿದಂತಾಗುತ್ತಿತ್ತು. ದೊಡ್ಡ ತಿಟ್ಟಿನ ಗಾಳಿಗಾಗಿ ಹಂಬಲಿಸಿದ. ಕುಳಿತಿದ್ದ.

ಮುನಿಸೀಫರು ಸಾಹುಕಾರರನ್ನು "ಮುಂದೆ ಏನು ಮಾಡಿಸಬೇಕು ಅಂತ ಇದೀರಿ?" ಎಂದು ಕೇಳಿ ತಾವೇ ಮುಂದುವರಿದು "ಎಲ್. ಎಲ್. ಬಿ. ಮಾಡಿಸಿಬಿಡಿ. ನಮ್ಮ ಶಾಖೆಗೇ ಸೇರಿಬಿಡಲಿ. ಬೇಗ ಮುಂದೆ ಬಂದು ಬಿಡುತ್ತಾರೆ. ಅವರಿಗೆ ಮ್ಯಾಜಿಸ್ಟ್ರೇಟರ ಮುಖವಿದೆ" ಎಂದರು. ಅಮಲ್ದಾರರು ಗುರುವಿಗೇ ಹೇಳುತ್ತ "ಅದೆಲ್ಲ ಬೇಡ ಸಾರ್. ಎಂ. ಸಿ. ಎಸ್‌ಗೇ ಕೂತುಕೊಂಡುಬಿಡಿ. ಈ ಸಾರಿ ನಡೆಯುತ್ತಂತೆ. ಅನಾಯಾಸವಾಗಿ ಖಂಡಿತ ರ್‍ಯಾಂಕು ಬಂದೇ ಬರುತ್ತೆ. ನಮ್ಮ ಆಫೀಸರಾಗಿ ಬಂದು-

ಬಿಡೋರಂತೆ. ನಿಮ್ಮಂಥೋರು ಸಿಕ್ಕಬೇಕಲ್ಲ ನಮಗೆ." ಎಂದು ಸ್ತುತಿಸಿದರು. ಸಾಹುಕಾರರು "ಅದೇ ನನ್ನ ಯೋಚನೆಯೂ." ಅಂದು ಕೃತಕ ಹಲ್ಲು ಬಿಟ್ಟರು. ಗುರುವೂ ಸ್ವಲ್ಪ ನಸುನಕ್ಕ. ವ್ಯಂಗ್ಯ ನಗೆ. ಸಾಹುಕಾರರಿಗೆ ಇದನ್ನು ಕಂಡು ಪರಮಾನಂದವಾಯಿತು. ಮಗನ ಇಷ್ಟವೂ ಇದೇ ಎಂದು ಕೊಂಡು ಹಿಗ್ಗಿದರು. "ಇಷ್ಟು ಮೇಧಾವಂತರು ವಿದ್ಯಾಭ್ಯಾಸದ ಶಾಖೆಗೆ ಸೇರಬೇಕು ಸಾರ್. ಅಲ್ಲಿಯ ಕಡಿಮೆ ಸಂಬಳ, ತುತ್ತು ಅನ್ನ, ಹರಕು ಅಂಗಿ, ಕಂಡು ಬುದ್ಧಿವಂತರೆಲ್ಲ ಬೆದರಿ ದೂರವಾಗಿ ಬೇರೆ ಬೇರೆ ಕಡೆಗೆ ಓಡುತ್ತಾರೆ. ಹೀಗಾಗಿ ಬುದ್ಧಿದಾರಿದ್ರ್ಯ ನಮ್ಮಲ್ಲಿ ಇರೋದಕ್ಕಿಂತ ಹೆಚ್ಚಾಗಿ ಇನ್ನೆಲ್ಲೂ ಇಲ್ಲ. ಇವರಿಗೇನು ತಾಪತ್ರಯವಿಲ್ಲ. ಇಂಥವರೇ ವಿದ್ಯಕ್ಕೆ ಸೇವೆ ಮಾಡಬೇಕು. ಇವರಿಗಿರೋ ಶಕ್ತಿ ಒತ್ತಾಸೆಗಳಲ್ಲಿ, ಕಾಲೇಜಿಗೆ ಸೇರಿದರೆ ಹತ್ತು ವರ್ಷದಲ್ಲಿ ಪ್ರಿನ್ಸಿಪಾಲರಾಗಬಹುದು—ಅಡ್ಡಿಯಿಲ್ಲದೆ" ಮುಖ್ಯೋಪಾಧ್ಯಾಯರು ಸ್ವಭಾವಕ್ಕೆ ಸರಿಯಾಗಿ, ಸಕಾರಣವಾದ ಉಪನ್ಯಾಸವನ್ನೇ ಕೊಟ್ಟರು. ಆದರೆ ಇದು ಮುಖ್ಯೋಪಾಧ್ಯಾಯಿನಿಯೊಬ್ಬರಿಂದಲ್ಲದೆ ಬೇರೆ ಯಾರಿಂದಲೂ ಮನ್ನಣೆ ಪಡೆಯಲಿಲ್ಲ. "ಯಾಕೆ ಸಾರ್ ಅವರಿಗೆ ದೇವರು ಏನು ಕಡಿಮೆ ಮಾಡಿದಾನೆ? ಬೇಕಾದ ಹಾಗಿದೆ. ಅದನ್ನೇ ಇನ್ನೂ ಬೆಳೆಸಿಕೊಂಡು ಬಂದು ಮರ್ಯಾದೆ ಮಹಲಿನ ಮಹತ್ವವನ್ನು ಹೆಚ್ಚಿಸಲಿ. ಇದರಲ್ಲಿ ನಮ್ಮ—ಅಂದರೆ ಮರುಳೂರಿನ ವರ್ತಕ ವರ್ಗದ ಬೆಂಬಲ ಸಹಕಾರವೆಲ್ಲ ಅವರ ತಂದೆಯವರಿಗೆ ಹೇಗಿದೆಯೋ ಅವರಿಗೂ ಹಾಗೇ ಇರುತ್ತೆ. ಮುಂದೆ ಚುನಾವಣೆಗೆ ನಿಂತು, ನೀರು ಕುಡಿದ ಹಾಗೆ ಎಂ. ಎಲ್. ಎ. ಆಗಿ, ಮಂತ್ರಿಪದವಿಯನ್ನು ಅಲಂಕರಿಸಬಹುದು. ತಂದೆಯಂತೆ ಮಗ, ತಂದೆಯನ್ನು ಮೀರಿಸಿದ ಮಗ ಆಗೋದರಲ್ಲಿ ಸಂದೇಹವೇ ಇಲ್ಲ. ತಂದೆಯವರು ಮರುಳೂರಿಗೆ ತಂದಿರೋ ಹೆಮ್ಮೆಯೇನು ಸ್ವಲ್ಪವೇ? ಅದನ್ನು ಇಮ್ಮಡಿಯಾಗಿಸಬಲ್ಲರು—ಮಗ" ಮಳಿಗೆ ನಂಜುಂಡಪ್ಪನವರು ತಮ್ಮ ಮನಸ್ಸನ್ನು ಹೇಳಿದರು. "ಅದೂ ಸರಿಯೆ. ಅದೂ ಸರಿಯೆ. ಮುನಿಸಿಪಲ್ ಅಧ್ಯಕ್ಷತೆಯಿಂದ ಮೊದಲು ಮಾಡಿಕೊಂಡರಾಯ್ತು-ಸಾರ್ವಜನಿಕ ಜೀವನಕ್ಕೆ." ಭೋಗಪ್ಪ ತನ್ನ ಒತ್ತಾಸೆಯನ್ನು ಕೊಟ್ಟ. ಸಾಹುಕಾರರು ಮಗನ ಕಡೆ ನೋಡಿದರು. ಅವನ 'ಸ್ಫಿನಿಕ್ಸ್' ಮುಖದಲ್ಲಿ ಏನೂ ಅವರಿಗೆ ಗೊತ್ತಾಗಲಿಲ್ಲ. ಅವರು ಸಲಹೆಯನ್ನು ವಿರೋಧಿಸಲಿಲ್ಲ.

“ಆಗಲಿ ನೋಡೋಣ” ಎಂದು ಸಾಧಾರಣವಾಗಿ ಹೇಳಿದರು. ಪೋಲೀಸ್ ಇನ್‌ಸ್ಪೆಕ್ಟರು ಯಾರಿಗೂ ಹಿಂದೆ ಬೀಳದೆ “ನಮ್ಮ ಡಿಪಾರ್ಟಮೆಂಟು ಕೆಟ್ಟು ಕಿಪಾತು ಎದ್ದು ಹೋಗಿದೆ ಸಾರ್. ಎಲ್ಲೆಲ್ಲೂ ಅಶಕ್ತರು, ಲಂಚಕೋರರು ವಂಚಕರು ಇವರಿಂದಲೇ ತುಂಬಿ ಹೋಗಿದೆ. ‘ಫುಡ್’ ಡಿಪಾರ್ಟಮೆಂಟಿಗೆ ಎರಡನೇ ಕೈ ಅನ್ನಿ. ಸಾಹುಕಾರರ ಸಂತತಿಯವರು, ಇಂಥ ನಿಸ್ಪೃಹರು, ಅಲ್ಲಿಗೆ ಬಂದು ಎಲ್ಲ ತೊಳೆಯಬೇಕಾದದ್ದು ಬಹಳ ಅರ್ಜಂಟಾಗಿದೆ. ಇಂಥವರು ಸೇರಿದರೆ ಸರಕಾರ ಇವರನ್ನು ಬೇಗಲೇ ಮೇಲೆ ಹತ್ತಿಸಿಬಿಡ್ತಾರೆ. ಇವತ್ತು ನಾಳೇಲಿ ಐ.ಜಿ.ಪಿ. ಆಗಿಬಿಡಬಹುದು. ಇನ್ನು ಯಾರಿದಾರೆ ಅಲ್ಲಿ?” ಎಂದು ಒರಟಾಗಿಯೇ ಹೇಳಿದರು. ಇದು ಎಲ್ಲರಿಂದಲೂ ಅರ್ಥಯುಕ್ತವಾದ ನಸುನಗೆಯನ್ನು ತಂದಿತಾದರೂ ಈ ಸಲಹೆಗೂ ಮನ್ನಣೆ ದೊರೆಯಲಿಲ್ಲವೆಂಬುದು ಸ್ಪಷ್ಟವಾಗಿತ್ತು. ನಂಜಪ್ಪನೂ ತುಂಬುವುದರ ಮಧ್ಯೆ ಕೊಂಚ ತಡೆದು, ಬಾಯಿಗೆ ತುಂಬಿಕೊಂಡೇ ಅದು ಗಂಟಲಿನಲ್ಲಿ ಇಳಿಯುವುದರೊಳಗಾಗಿ “ಅವನಿಗೆ ಇದೆಲ್ಲ ಯಾಕೆ ಬೇಕು—ಈ ಪದವಿ ಪಟ್ಟ, ನೌಕರಿ ಚಾಕರಿ ಸಂಬಳ ಸಾರಿಗೆ, ಚೆನ್ನಾಗಿ ತಿಂದು ಉಂಡುಕೊಂಡು ಬೇಕಾದ ಹಾಗೆ ಇರೋದು ಬಿಟ್ಟು. ಏನು ಅವುಗಳ ಅಗತ್ಯ—ಅವನಿಗೆ ? ಪದ್ಯಗಿದ್ಯ ಬರೆದುಕೊಂಡರೇ ಸಾಕು, ಉದ್ಯೋಗ ಬೇಕಾದರೆ. ಅವನು ಆಗಲೇ ಕವಿ, ಗೊತ್ತೆ?” ಎಂದು ಬಾಯಿ ಬರಿದಾದೊಡನೆ ಮತ್ತಷ್ಟು ತಿಂಡಿಯನ್ನು ಮುಕ್ಕಿದ. ಎಲ್ಲರೂ ಗುರುವಿನ ಕಡೆಗೆ ನೋಡಿದರು. ಅವನು ಲಜ್ಜೆಯಿಂದ ಕೆಂಪಾಗಿ “ಮಾವಯ್ಯ, ಸುಮ್ಮನೆ ಇರಬಾರದೆ, ನಿನ್ನ ಕುಚೋದ್ಯ ಸಾಕು.” ಎಂದು “ಅದೆಲ್ಲ ಸುಳ್ಳು. ಏನೋ ಹುಡುಗತನದ ಹುಚ್ಚು ಇರುತ್ತಲ್ಲ.” ಅಂದು ಹೊರಳಿಕೊಳ್ಳಲು ಯತ್ನಿಸಿದ ಸಾಹುಕಾರರು “ಸರಿ, ಸರಿ. ಲೋ ನಂಜಪ್ಪ, ಅವನೂ ನಿನ್ನ ಮೇಲ್ಪಂಗ್ತಿ ಅನುಸರಿಸಲಿ ಅಂತಲೋ ನಿನ್ನ ಆಸೆ ? ಸಾಕು, ಬಾಯಿ ಮುಚ್ಚು !” ಎಂದು ನಕ್ಕರು. ಇತರರೂ ಹಿಂಬಾಲಿಸಿದರು. ನಂಜಪ್ಪ ತಿಂಡಿಯೊಳಗೆ ನಾಲಿಗೆಯನ್ನು ಹೊರಳಿಸಲಾರದೆ “ಇಂಡಿಗೆ ಕರೆದು ವಾಯಿ ಮುಚ್ಚು ಅಂತೀಯಲ್ಲ. ಏನು ನಾಯ ?” ಎಂದು ತೊದಲಿದ. ಎಲ್ಲರೂ ಗೊಳ್ಳೆಂದು ನಕ್ಕರು. ಅಂತೂ ನೆರೆದಿದ್ದವರೆಲ್ಲ ಗುರುವನ್ನು ತಮ್ಮ ತಮ್ಮ ಕಡೆಗೇ ಸೇರಿಸಿಕೊಂಡು ಅತ್ಯುಚ್ಚ ಪದವಿಯನ್ನೇ ಕೊಟ್ಟರು.

ಶುಭಾಶಯಗಳನ್ನು ಕೋರುತ್ತ, ಕೂಟವನ್ನು ಹೊಗಳುತ್ತ ಅತಿಥಿಗಳು ಚದರಿದರು. ಭೋಗಪ್ಪ ಹೋಗುತ್ತ " ಏನು ಸಾಹುಕಾರರೆ ತಮ್ಮ ಪಾರ್ಟಿ ವಿಚಕ್ಷಣೆ ಅಂದರೆ, ಇನ್ನು ಯಾವುದೂ ಇದಕ್ಕೆ ಸರಿಗಟ್ಟಲಾರದು. ನಾನೂ ಈ ವರ್ಷ ನನ್ನ ಆಧ್ಯಕ್ಷತೆಯಲ್ಲೇ ಎಷ್ಟೋ ಮುನಿಸಿಪಲ್ ಪಾರ್ಟಿಗಳನ್ನು ಮಾಡಿಸಿದೀನಿ. ಆದರೆ ಹೀಗೆ ! ನಂಗೆ ಸಾಧ್ಯವೇ ಆಗಿಲ್ಲ. " ಅಂದು ಹೊಗಳಿದ. '' ಅದೇನು ಭೋಗಪ್ಪ ಹೆಚ್ಚು. ನಾನು ಅಸೆಂಬ್ಲಿಗೆ ಹೋಗುತ್ತೀನಲ್ಲ—ಆಗ ಪಾರ್ಟಿಗಳ ಹೊಡತ ಅವುಗಳ ತರಹ ನೋಡಬೇಕು. ದಿನ ಬೆಳಿಗ್ಗೆ ಎದ್ದರೆ, ಕೂತರೆ ಪಾರ್ಟಿ. ಅದೂ ಹೇಗಿರುತ್ತೆ ಅಂತ ? ನೀನು ನೋಡಿಲ್ಲ. ಇಲ್ಲಿ ಏನು ಅನುಕೂಲವಿದೆ, ಮಹಾ. ಅಲ್ಲಿ ದುಡ್ಡು ಎರಚಿದರಾಯ್ತು ಹೋಟಲಿನೋರು—ಇಂಥಾದ್ದರಲ್ಲೇ ಪ್ರವೀಣರು, ನಾಲ್ಕು ಗಂಟೆಗಳಲ್ಲಿ ಎಲ್ಲ ತಯಾರು ಮಾಡಿ ರಾಜೋಪಚಾರ ನಡೆಸಿಬಿಡುತ್ತಾರೆ. ತಿಂದು ತೇಗಿ ಉರುಳಾಡಬಹುದು. ಮಿಲಿಟರಿ ಬ್ಯಾಂಡು ಬೇರೆ ಇರುತ್ತೆ. ಒಂದೊಂದರಲ್ಲಿ. ಅಲ್ಲಿಂದಲೇ ನಾನು ಈ ವಿಚಕ್ಷಣೆ ಕಲಿತದ್ದು. ಆ ಮಾದರಿಯೇ ಇಲ್ಲಿ ಸಾಧ್ಯವಾದಷ್ಟು. ಈಗೇನು, ಪಾರ್ಟಿ ಅಂದರೆ ಅದರ ಚೌಕಟ್ಟು ತರಹ ಎಲ್ಲ ತೀರ್ಮಾನವಾಗಿ ಹೋಗಿದೆ. ಒಂದಕ್ಕೂ ಇನ್ನೊಂದಕ್ಕೂ ವ್ಯತ್ಯಾಸವೇ ಕಾಣೋದಿಲ್ಲ. ಗೊತ್ತೆ ? ಅಷ್ಟು ನಿಯಮಬದ್ಧ. '' ಸಾಹುಕಾರರು ವಿವರಿಸಿದರು.

" ನಿಜ, ತಾವು ಮಾಡಿದ ಇಂಥ ಪಾರ್ಟಿಯೂ ಏನು ಹೆಚ್ಚಲ್ಲ, ಅಂಥಾ—ಚಿನ್ನದಂಥ ಮಗನಿಗೆ. ತಮ್ಮ ಮನೆತನಕ್ಕೇ ಕಳಶಪ್ರಾಯನಾಗಿರುತ್ತಾನೆ. ತಮ್ಮ ಮಗನಲ್ಲವೆ ? ದೇವರು ಚೆನ್ನಾಗಿ ಇಟ್ಟಿರಬೇಕು. "

" ಹುಂ, ನೀನು ಹೇಳಿದ್ದರಲ್ಲಿ ಅತಿಶಯೋಕ್ತಿ ಏನಿಲ್ಲ. ಅಂತೂ ಚೆನ್ನಾಗಿ ಆಶೀರ್ವಾದ ಮಾಡು. "

" ನಮ್ಮ ಆಶಯವೆಲ್ಲ ಅವನಿಗೇ. ಅವನಿಗೇ ಬರಲಿ ? "

" ಆಗಲಿ, ಹೋಗಿ ಬಾ. "

" ಹುಂ, ಮರೆತಿದ್ದೆ. ಆ ಚುನಾವಣೆ ವಿಷಯ ನೆನಪಿದೆಯಲ್ಲ ? "

'' ಸರಿ, ಸರಿ. ನಂಗೆ ಹೇಳಬೇಕೆ ? ''

" ಹತ್ತಿರ ಬರುತ್ತಿದೆ. "

" ಬರಲಿ, ಹೆದರಬೇಡ. ಮುಂಡಿಯೋನೇನು ಹುಲ್ಲುಕಡ್ಡಿ ಅಂತ ತಿಳಿದುಕೊ. ಆಮೇಲೆ ಬಾ. ವಿವರವೆಲ್ಲ ತೀರ್ಮಾನಿಸೋಣ."

" ಹುಂ, ಹುಂ. ಅಷ್ಟು ದಯಮಾಡಿ ಬಿಟ್ಟರೆ—ನಾಳೆ ಬರಲೆ ? "

" ಆಗಲಿ. "

ಭೋಗಪ್ಪ ಹೋದ. ಅಮಲ್ದಾರರು ಸಾಹುಕಾರರ ಕೈಕುಲುತ್ತ " ಸೊಗಸಾದ ಪಾರ್ಟಿ; ಈ ರೇಷನ್ ಕಾಲದಲ್ಲಿ ಇಂಥ ರುಚಿರುಚಿಯಾದ ಇಷ್ಟೊಂದು ಪದಾರ್ಥ, ಇಷ್ಟೊಂದು ಜನಕ್ಕೆ ಮಾಡಬೇಕು ಅಂದರೆ ತಮ್ಮಂಥ ವರಿಂದಲೇ ಸಾಧ್ಯ. ನಾವು ಎಲ್ಲಕ್ಕೂ ಲೈಸೆನ್ಸು ಅದನ್ನೆಲ್ಲ ಕೊಡೋರು ಅಂತ. ಈ ಸಕ್ಕರೆ ರೇಷನ್ ಬಂದ ಮೇಲೆ ನಮ್ಮ ಮನೇಲೂ ಸಕ್ಕರೆಯೆ ಇಲ್ಲ. ಎಷ್ಟು ತರಿಸಿದರೂ ಸಾಲೋದಿಲ್ಲ. ಏನು ಹೇಳಲಿ. ಅಂಥಾದ್ದರಲ್ಲಿ...." ಎಂದು ಹೇಳುತ್ತಿದ್ದರು.

" ಅದೇನು ಸಾರ್. ತಮ್ಮ ದಯದಿಂದಲೇ ಆಯ್ತು. ಇಷ್ಟು ಜನಕ್ಕೆ ತಾವು ಪರ್ಮಿಟ್ ಕೊಟ್ಟು ಉಪಕಾರ ಮಾಡಿದಿರಿ. ಬಹಳ ಹೆಚ್ಚು."

" ನಮ್ಮ ದಯವೇನು ಸಾಹುಕಾರರೆ, ಸರಕಾರ ಈಗ ನಮ್ಮದಾಗಿ ಲ್ಲಪ್ಪ. ಎಲ್ಲ ನಿಮ್ಮದೇ, ಪ್ರಜಾತಂತ್ರದಲ್ಲಿ—ನಿಮ್ಮ ದಯದಿಂದಲೇ ನಾವು ಬಾಳೋದು. ಇಲ್ಲದೆ ಇದ್ದರೆ ನಮ್ಮ ಗತಿಯೇನು ? ಯಾರು ಕೇಳಬೇಕು, ನಮ್ಮನ್ನ ? ಜನರ, ಮುಖಂಡರ, ವಿರೋಧಕ್ಕೆ ಹೆದರದೇ ಇದ್ದ ಕಾಲ ಆಗಿ ಹೋಯ್ತು. ಅವರನ್ನೆಲ್ಲ ಸರಿಹೋಗಿಸಿಕೊಂಡು, ಹೇಳಿದ ಹಾಗೆ ಕೇಳಿ ಕೊಂಡು ಹೋದರೇ ಕೆಲಸ ಉಳಿಯೋದು. ಹಿಂದಿಗೂ ನಾವು ಸೇವಕರೆ— ಪ್ರಜೆಗಳಿಗೆ. ಈಗಂತೂ ಗುಲಾಮರು ಅನ್ನಿ—ಆದರಲ್ಲೂ ಸಾರ್ವಜನಿಕ ಮುಖಂಡರಿಗೆ. ಹ್ಹ ! ಹಾ ! " ಅಮಲ್ದಾರರು ನಗುತ್ತ ಹೋದರು

ವರದಿಗಾರ ಚಂದ್ರಶೇಖರ ಕೈಮುಗಿದಾಗ ಸಾಹುಕಾರರು " ಎಲ್ಲ ಸರಿ ಯಾಗಿ ಬರೆದುಕೊಂಡಿದ್ದೀಯೋ ? '' ಎಂದು ನಗುತ್ತ ಕೇಳಿದರು. ಅವನು "ಅದನ್ನು ನಂಗೆ ಹೇಳಬೇಕೇ ತಾವು? ನಾಡಿದ್ದು ಪತ್ರಿಕೆಯನ್ನು ನೋಡಿದಾಗ ತಮಗೇಗೊತ್ತಾಗುತ್ತೆ'' ಅಂದ. ಶ್ಯಾಮಯ್ಯಂಗಾರಿಯೂ''ನಮಸ್ಕಾರ!" ಅಂದು ಕೈಮುಗಿದು ಬಾಯಿ ತೆಗೆದು ಒಂದು ಕ್ಷಣ ನಿಂತ. ಸಾಹುಕಾರರು " ನಮ ಸ್ಕಾರ '' ಅಂದು ಜೋಡಿದಾರರ ಕಡೆಗೆ ತಿರುಗಿದರು. ಅವನು ಖಿನ್ನನಾಗಿ

ಮುಂದೆ ಸಾಗಿದ. ಶಾನುಭೋಗ ಎಂಜಿನಿಯರ ಹಿಂದೆ ಬಂದ. ಸಾಹುಕಾರರು ಎಂಜಿನಿಯರೊಡನೆ ದೊಡ್ಡ ತಿಟ್ಟಿನ ನಾಲೆ ಸಂಬಂಧವಾಗಿ ಬಹಳ ಮಾತನಾಡಿ ಬೀಳ್ಕೊಟ್ಟು ತಿರಿಗಿದರು. ಈಗ ಶಾನುಭೋಗ ಮುಂದೆ ಬಂದು ಮೂವತ್ತೆರಡು ಹಲ್ಲುಗಳನ್ನೂ ತೋರಿಸುತ್ತ "ಬಹಳ ಅಮೋಘವಾಗಿತ್ತು ಪಾರ್ಟಿ" ಅಂದ. ಸಾಹುಕಾರರು "ಹುಂ!" ಎಂದು ಕೈಮುಗಿದು ಮತ್ತೆ ತಿರಿಗಿ ಎಂಜಿನಿಯರ ಜತೆ ಮತ್ತೆ ಎರಡು ಹೆಜ್ಜೆಯಿಟ್ಟರು. ಶಾನುಭೋಗ ಹಲ್ಲು ಕಿರಿದುಕೊಂಡೇ ಹೋದ, ಮುಂದೆ. ಹೆಡ್‌ಮಿಸ್ಟ್ರೆಸ್ ಹೋಗುತ್ತ ಕುಸುಮಳಿಗೆ "ಏನು ಕುಸುಮ ಒಂದು ದಿನದ ಜ್ವರಕ್ಕೇ ಇಷ್ಟು ಮಾಸಿದಿಯೇ ಬೇಗ ಹುಷಾರಾಗಮ್ಮ!" ಎಂದರು. ಕುಸುಮ ನಸುನಗೆಯ ಛಾಯೆಯನ್ನು ತೋರಿಸಿ ಸುಮ್ಮನಿದ್ದುಬಿಟ್ಟಳು. ಸಾಹುಕಾರರು ಬಾಯಿ ಹಾಕಿ "ಅದೂ ಅಲ್ಲದೆ ನಮ್ಮ ಮಹಲಿಗೆ ಯಾರು ಯಾರೋ ಬಂದಿದ್ದು ನಾಲ್ಕಾರು ದಿನ ಪಟ್ಟಾಗಿ ಠಾಣೆ ಹಾಕಿದ್ದರು. ಅವರಿಗೆ ಉಪಚಾರ ಕುಸುಮಳದ್ದೇ. ಅದರ ಶ್ರಮವೂ ಸೇರಿದೆ. ಮೊದಲೇ ಸೂಕ್ಷ್ಮ" ಎಂದು ತಿಳಿಸಿ "ನಮಸ್ಕಾರ" ಎಂದರು. ಆಕೆಯೂ ನಮಸ್ಕಾರ ಮಾಡಿ ಹೊರಟಳು.

ಅತಿಥಿಗಳೆಲ್ಲ ಹೊರಟು ಹೋದರು. ಮರ್ಯಾದೆಮಹಲಿಗೆ ಮತ್ತೆ ಶಾಂತಿ ಬಂತು. ಗುರು ದೀರ್ಘವಾಗಿ ನಿಟ್ಟುಸಿರು ಬಿಟ್ಟ.

ಮಗನ ಭವಿಷ್ಯದ ತೀರ್ಮಾನಕ್ಕೆ ಸರಿಯಾದ ಕಾಲವು ಒದಗಿ ಬಂದಿತ್ತು. ಆ ದಿನ ಕೂಟದಲ್ಲಿ ಆಡಿದ ಮಾತುಗಳೇ ಇದಕ್ಕೆ ಪೀಠಿಕೆಯನ್ನು ಹಾಕಿದ್ದುವು. ರಾತ್ರಿ ಊಟವಾದ ಮೇಲೆ ಸಾಹುಕಾರರು ಹಾಲಿನಲ್ಲಿ ಅತ್ತಿತ್ತ ಅಡ್ಡಾಡುತ್ತಿದ್ದು ಮಗ ಕೋಣೆಗೆ ಹೋದುದನ್ನು ಕಂಡು ಸ್ವಲ್ಪ ಹೊತ್ತಿನ ಮೇಲೆ ಅಲ್ಲಿಗೇ ಹೋದರು. ಆಗಲೇ ಮಂಚದ ಮೇಲೆ ಕಾಲು ಬೀಸಿ ತಲೆಯ ಕೆಳಗೆ ಕೈಮಡಿಕೆಯಿಟ್ಟು ಚಾವಣಿಯ ಕಡೆ ದುರುಗುಟ್ಟಿ ನೋಡುತ್ತಿದ್ದ ಮಗ ತಟ್ಟನೆದ್ದ.

"ಮಲಗಿಕೊ, ನಿನ್ನ ಪಾಡಿಗೆ ನೀನು. ದಾಸ, ಕೋಣೆ ಹೇಗಿಟ್ಟಿದಾನೆ ಅಂತ ನೋಡೋದಕ್ಕೆ ಬಂದೆ. ಹುಂ. ಈ ಬಟ್ಟೆ ಗುಡ್ಡೆಯನ್ನು ಕುರ್ಚಿಯ ಮೇಲಿಂದ ತೆಗೆದಿಡಬೇಡವೇ ಅವನು. ಲೋ, ದಾಸ!" ಎಂದು ಸಾಹುಕಾರರು ಕೂಗಿದರು.

" ನಾನೇ........" ಗುರು ಎದ್ದ.

" ಛಿ ! ನೀನು ಯಾಕೆ ಮಾಡಬೇಕು. ಇದಾನಲ್ಲ ಅವನು " ಎಂದು ಆಗ ತಾನೆ ಬಂದಿದ್ದ ದಾಸನಿಗೆ " ಇದೆಲ್ಲ ನೋಡಬೇಡವೇನೋ ? " ಎಂದರು. ದಾಸ ಮಾತಾಡಲಿಲ್ಲ. ಅದು, ಸಂಜೆ ಅವನು ಸರಿಮಾಡಿದ ಈಚೆಗೆ ಬಿದ್ದ ಗುಡ್ಡೆ. ಆದರೆ ಕಾರಣ ನೆವ ಹೇಳುವುದು ದಾಸನಿಗೆ ರೂಢಿಯಿಲ್ಲ. ಮಾಡುವುದೇ. ಬಟ್ಟೆಗಳನ್ನು ಮಡಿಸಿ ಸ್ಟ್ಯಾಂಡಿನ ಮೇಲೆ ಹಾಕಿದ.

" ಎಲ್ಲಿ, ಮಂಚದ ಹತ್ತಿರ ಬಿದ್ದ ಎಕ್ಕಡ, ಷೂ, ಬ್ರಷ್ ಬೀರುವಿನಲ್ಲಿಡು. " ಸಾಹುಕಾರರು ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತ ಹೇಳಿದರು. " ಆ ಮಗ್ಗುಲಾಸಿಗೆ ಎಷ್ಟು ಮಾಸಿದೆ, ದಿಂಬು ಎಷ್ಟು ಎಣ್ಣೆಯಾಗಿದೆ, ಬೇರೆ ಹಾಕಬೇಡವೆ ? "

" ನಾಳೆ ಹಾಕಿದರಾಯ್ತು. " ಗುರು ಹೇಳಿದ.

" ಹಾಗೇ ಆಗಲಿ. ಎಲ್ಲಿ ಕಿಟಕಿ, ಗೂಡಿನ ಕನ್ನಡಿ, ಎಣ್ಣೆಸೀಸೆ, ಸಾಬೂನು-ಪೆಟ್ಟಿಗೆ, ಶೇವಿಂಗ್-ಸಾಬೂನು, ಟೂತ್-ಬ್ರಷ್—ಎಲ್ಲ ಸರಿಯಾಗಿ ಮೇಜಿನ ಖಾನಿಯಲ್ಲಿಡು. ಕನ್ನಡಿ ಮೇಲಿರಲಿ. ಹಾಗೇ........ಆ ಪೆಟ್ಟಿಗೆಯ ಮೇಲೆ, ನೆಲದ ಮೇಲೆ, ಮಂಚದ ತುದೀಲಿ, ಇರೋ ಪುಸ್ತಕಗಳನ್ನೆಲ್ಲ ಗಾಜಿನ ಬೀರುವಿನಲ್ಲಿ ತೆಗೆದಿಡು. ಏನೋ ಇದೆಲ್ಲ ನೋಡಿಕೋಬೇಡವೇನೋ ? "

ದಾಸ ಇವನ್ನೆಲ್ಲ ಎಷ್ಟೋ ಬಾರಿ ಮಾಡಿದ್ದ. ಆದರೂ ಗುರು, ಇನ್ನೂ ಬಹಳ ಬೇಗ ಕೆಲಸ ಮಾಡುತ್ತಿದ್ದ.

" ಹುಂ. ಈಗ ಕೋಣೆ ಕೊಂಚ ನೋಡೋ ಹಾಗಿದೆ. ಹೀಗೇ ಯಾವಾಗಲೂ ಇಟ್ಟಿರಬೇಕು, ನೋಡು. ಗಂಟೆಗಂಟೆಗೂ ಬಂದು ನೋಡಿಕೊಂಡು ಹೋಗು, ಬೇಕಾದರೆ. "

" ಅಪ್ಪಣೆ. " ದಾಸ ಹೋದ.

" ಇವತ್ತೇನು ತಾರೀಕು. ಓ. ಎಪ್ರಿಲ್, ಮೇ ತಿಂಗಳ ಕ್ಯಾಲೆಂಡರು ಹಾಳೆ ಹರಿದಿಲ್ಲವೆ?" ಸಾಹುಕಾರರು ಎದ್ದು ಹರಿದು ಜೂನ್ ತಿಂಗಳನ್ನು ಕಾಣಿ

ಸಿದರು. " ಹೂಂ, ಜರ್ಮ್ ನಾಲ್ಕು. ಪಾರ್ಟಿಯಲ್ಲಿ ಅವರು ಹೇಳಿದ್ದೆಲ್ಲ ಕೇಳಿದೆ ಯಲ್ಲ.........ಈ ಎಂ. ಸಿ. ಎಸ್‌ಗೆ ಯಾವಾಗ ಅರ್ಜಿ ಕಳಿಸಬೇಕು? ''

'' ಗೊತ್ತಿಲ್ಲ ''

'' ವಿಚಾರಿಸ್ಕೋಣ, ಅದಕ್ಕೇನು. ಅದೊಂದಾಗಿಬಿಟ್ಟರೆ ಭಾರಿ ಹುದ್ದೆ, ದೊಡ್ಡ ಅಧಿಕಾರ-ರಾಜನ ಹಾಗೆ. ನಮಗೇನು ದುಡ್ಡಿನ ಯೋಚನೆಯಿಲ್ಲ- ನಾನು ಇನ್ನೂ ದುಡಿತಾ ಇದೀನಲ್ಲ. ಎಲ್ಲ ನೋಡಿಕೋತೀನಿ, ಇನ್ನೂ. ನಮ್ಮದು ದೊಡ್ಡ ಮನೆತನ. ಮರ್ಯಾದೆ ಮನೆತನ ಅಂತಲೇ ಬಂದಿದೆಯಲ್ಲ ಹೆಸರು. ಕೇಳಿದೀಯ-ಲ್ಲ ಕಾರಣ? ''

'' ಹುಂ ''

'' ಅದರಲ್ಲಿ ಹಣವಂತರು ಬೇಕಾದಷ್ಟು ಜನ ಆಗಿ ಹೋದರು. ನನ್ನ ಕಾಲದಲ್ಲಿ ನಾನೂ ಆ ಮರ್ಯಾದೆಯನ್ನ ಕಾಪಾಡಿಕೊಂಡು ಬಂದಿದೀನಿ. ಆದರೆ ನಮ್ಮೋರು ಯಾರೂ ದೊಡ್ಡ ಸರಕಾರಿ ಹುದ್ದೆಗೆ ಏರಲಿಲ್ಲ ಅದೊಂದು ನ್ಯೂನತೆ. ನನ್ನ ಕಾಲದಲ್ಲೂ ಆಗೋ ಹಾಗೆ ಕಾಣೆ. ಈ ನಮ್ಮ ಪಕ್ಷದಲ್ಲಿ ಮೂಳೆಗಾಗಿ ಕಚ್ಚಾಡೋ ನಾಯಿಗಳು ಇಷ್ಟೊಂದು ಇರೋವಾಗ, ಎಷ್ಟು ಮಾಡಿದರೂ ತಾನೆ ನಂಗೆ ಮಂತ್ರಿಯ ಅವಕಾಶ ಹೆಚ್ಚಾಗಿ ಕ ಣಲಿಲ್ಲ. ಅದೂ ಅಲ್ಲದೆ ಇವತ್ತಿದ್ದು ನಾಳೆ ಹೋಗೋ ಮಂತ್ರಿ ಪದವಿಗಿಂತಲೂ ಖಾಯಂ ಅಧಿ ಕಾರಿ-ಡೆಪುಟಿ ಕಮೀಷನರ್ ಹಾಗೆ, ಇಲ್ಲ, ರೆವಿನ್ಯೂ ಕಮಿಷನರ್ ಹಾಗೆ— ಇನೆಯಲ್ಲ ಹತ್ತೆಂಟು, ಅದೇ ಒಳ್ಳೇದು, ಹೆಚ್ಚು ಗೌರವ. ಇದೇನು 'ನರಿ-ದ್ರಾಕ್ಷಿ' ಕತೆ ಅಂತ ತಿಳಿದುಕೋಬೇಡ. ನಿಜವಾಗಿ ನನ್ನ ಅಭಿಪ್ರಾಯ ಅದೇ. ಇದೂ ಒಂದು ನಮ್ಮ ಮನೆತನದಲ್ಲಿ ಆಗಿಬಿಟ್ಟರೆ ಮರ್ಯಾದೆ ಮಹಲಿಗೆ— ಭೋಗಪ್ಪ ಹೇಳಿದ ಹಾಗೆ-ಕಳಶ ಇಟ್ಟಹಾಗಾಗುತ್ತೆ.ನಾಳೆ ರಿಟಾಯರ್ ಆದ ಮೇಲೆ ಬೇಕಾದರೆ ಸಾರ್ವಜನಿಕ ಜೀವನಕ್ಕೆ ಸೇರಿ ಮಂತ್ರಿಯೂ ಆಗಬಹುದು. ಅದಕ್ಕೆಲ್ಲ ದಾರಿಯಿದೆ, ಅನ್ನು. ಅಂತೂ ಹೀಗೆ ಶುರುವಾಗಿಬಿಟ್ಟರೆ ನಮ್ಮ ಕನಸೆಲ್ಲ ನನಸಾಗುತ್ತೆ........" ಹೀಗೇ ಸಾಹುಕಾರರು ಬಹಳ ಹೊತ್ತು ಮಾತ ನಾಡಿದರು. ಗುರು ತೆಪ್ಪನೆ ಕುಳಿತು ತುಟಿ ಎರಡು ಮಾಡದೆ ಎಲ್ಲವನ್ನೂ ಕೇಳಿದ.

'' ನಾಳೆ, ಹಾಗಾದರೆ, ಅರ್ಜಿ ಫಾರಂಗೆ ಬರೆದುಬಿಡು. ''

ಗುರು ಇನ್ನೂ ಸುಮ್ಮನಿದ್ದ.

" ಯಾಕೆ, ಅನುಮಾನಿಸೋದಿಲ್ಲ ತಾನೆ ? "

" ಅದು ಬೇಡ. " ಅರ್ಧಸ್ವರದಲ್ಲಿ.

" ಅಂ ! ಬೇಡ! ಯಾಕೆ? " ಸಾಹುಕಾರರಿಗೆ ಛಳಕು ಹೊಡೆದಂತಾಯಿತು. ಇದನ್ನು ಅವರು ನಿರೀಕ್ಷಣೆ ಮಾಡಿಯೇ ಇರಲಿಲ್ಲ.

ಗುರು ಉತ್ತರ ಕೊಡಲಿಲ್ಲ.

" ಯಾಕೆ, ಬೇಡ? " ಆಶ್ಚರ್ಯದಿಂದ, ಅಸಮಾಧಾನದಿಂದ ಕೇಳಿದರು.

" ನಂಗೆ ಯೋಗ್ಯತೆಯಿಲ್ಲ. "

ಈಗ ಸುಮ್ಮನಿರುವುದು–ಸ್ವಲ್ಪ ಹೊತ್ತು–ಸಾಹುಕಾರರ ಸರದಿಯಾಯಿತು.

" ಛಿ! ಎಂಥ ಮಾತಾಡುತ್ತೀಯೆ. ಯೋಗ್ಯತೆ ಇಲ್ಲವಂತೆ. ಚೆನ್ನಾಯ್ತು. ಇನ್ನು ಯಾರಿಗಿದೆ ಯೋಗ್ಯತೆ? ಆ ರೆವಿನ್ಯೂ ಮಂತ್ರಿಯ ಅಳಿಯನಿಗೆ ಬಹಳ ಇದೆಯೋ? ಆ ವಿದ್ಯಾಮಂತ್ರಿ ಭಾವಮೈದುನನಿಗೋ ? ಆಎಂ.ಎಲ್. ಎ ಮುದ್ದೇಗೌಡನ ಮಗ ಹೇಗೆ ಸೇರಿದ ಅಂತ ನಂಗೆಲ್ಲ ಗೊತ್ತಿದೆ. ಆ ಶಿವಮೊಗ್ಗದ ಡೆಪ್ಯುಟಿ ಕಮಿಷನರ ಸೋದರಳಿಯನ್ನ ತಗೊಂಡಾಗ ನಾನೇ ಅಸೆಂಬ್ಲಿಯಲ್ಲಿ ಪ್ರಶ್ನೆ ಕೇಳಿದ್ದೆ. ತಿಳಿತೆ? ನಂಗೆ ಇದೆಲ್ಲ ಏನು ಗೊತ್ತಿಲ್ಲ, ಅಂದುಕೋಬೇಡ. ಈಗ ಯೋಗ್ಯತೆ ಯಾರು ಕೇಳ್ತಾರೆ? ನಿಂಗೆ ಯಾಕೆ ಈ inferiority complex? ಅದೆಲ್ಲ ಬಿಡು. ಹಾಕು ಅರ್ಜಿ. "

" ಬೇಡಪ್ಪ. "

" ನೋಡಿದೆಯಾ ಮತ್ತೆ. ಅದನ್ನೇ ಹೇಳ್ತೀಯಲ್ಲ. ಹಾಗೆ ಮಾಡಬೇಡಪ್ಪ. ನನ್ನ ಮಾತು ಕೇಳು. "

ಗುರು ಸುಮ್ಮನಿದ್ದ.

" ಏನು ಪರೀಕ್ಷೆ ಬೇಜಾರಾಗಿದೆಯೇನು? ಅಥವ ಕಷ್ಟ ಅಂತ ಭಯವೊ?

ಗುರು ಮಾತಾಡಲಿಲ್ಲ.

" ನೀನು ಸುಮ್ಮನೆ ಪರೀಕ್ಷೆಗೆ ಕೂತುಕೊ. ಸಾಕು. ಬಾಕೀದೆಲ್ಲ ನಂಗಿರಲಿ. "

" ನಂಗೆ ಇಷ್ಟವಿಲ್ಲ. "

" ಇಷ್ಟವಿಲ್ಲ! ಈಗಲೇ ನಿಂಗೆ ಏನು ಗೊತ್ತಿದೆ ಹಾಗನ್ನೋದಕ್ಕೆ? ಎಲ್ಲ, ಮಾಡಿದರೆ ತಾನೆ ಗೊತ್ತಾಗೋದು. ಮಾಡಿಕೊಂಡ ಹೆಂಡತಿ ಮೇಲೆ ಪ್ರೇಮ ಹುಟ್ಟೋ ಹಾಗೆ, ಸೇರಿದ ಉದ್ಯೋಗದಲ್ಲಿ ಆಸಕ್ತಿ ಬಂದೇ ಬುರುತ್ತೆ—ಇವತ್ತಲ್ಲ ನಾಳೆ. ಇಷ್ಟವಿಲ್ಲ ಅಂದರೆ ಹೇಗಪ್ಪ ? ನಾನು ಬಹಳ ಇದರ ಆಶೆ ಇಟ್ಟುಕೊಂಡಿದೀನಿ. ಚೆನ್ನಾಗಿ ಯೋಚನೆ ಮಾಡಿ ನೋಡು. ನಡೆಸಿಕೊಡು."

" ಯೋಚನೆ ಬಹಳ ಮಾಡಿದೀನಪ್ಪ. "

" ಮತ್ತೆ ? "

" ನಂಗೆ ಬೇಕಿಲ್ಲ-ಅದು. "

ಸಾಹುಕಾರರ ಎದೆ ಸರ್ರನೆ ಇಳಿದು ಕೆಳಗೆ ಹೋದಂತಾಯಿತು. ಮೈ ತಣ್ಣಗಾಯಿತು. ಉಸಿರು ಸರಿಯಾಗಿ ಆಡಲಿಲ್ಲ. ಕೊಂಚ ಕಾಲ ಜೀವವಿರದ ದೇಹದಂತೆಯೇ ಕುಳಿತಿದ್ದರು. ಮಗ ಇನ್ನೂ ಯೋಚಿಸಿಯಾನು, ಒಪ್ಪಿಯಾನು ಎನ್ನುವ ಆಸೆ ಪೂರ್ತಿಯಾಗಿ ಹೋಗಿರಲಿಲ್ಲ. ಬಹಳ ಹೊತ್ತು ಇಬ್ಬರ ಮಧ್ಯೆ ಮೌನವಿತ್ತು.

" ಇದನ್ನು ನೀನು ಮಾಡಲೇಬೇಕಪ್ಪ. ಇದನ್ನು ಬಹಳ ನೆಚ್ಚಿಕೊಂಡು ಸಂತೋಷಪಟ್ಟಿದೀನಿ. ಅನೇಕ ಕನಸು ಕಂಡಿದೀನಿ, ಗೊತ್ತಾಯ್ತೆ? ತುಂಬ ಆಶಾಭಂಗವಾಗುತ್ತೆ. "

" ............ "

" ಏನು? "

" ನಂಗೆ ತುಂಬ ವ್ಯಥೆಯಾಗುತ್ತೆ. ಆದರೆ ಅಪ್ಪ ಅದು ಸಾಧ್ಯವಿಲ್ಲ. "

" ಸಾಧ್ಯವಿಲ್ಲ! ಸಾಧವಿಲ್ಲ! " ಹುಬ್ಬು ಸ್ವಲ್ಪ ಗಂಟಕ್ಕಿ ಬಿಚ್ಚಿತು.

ಮತ್ತಷ್ಟು ಮೌನ. ಮಗನ ಕಠಿಣತೆ ಹೊಸದು. ಅವರಿಗೆ ಒಡೆಯಲಾಗಲಿಲ್ಲ.

" ಹೋಗಲಿ, ಪ್ರೊಬೇಷನರಿ ಅಮಲ್ದಾರಿಗಾದರೂ ಹಾಕು. ಬೇಕಾದಷ್ಟು ಜನ ಎಂಥೆಂಥವರನ್ನೋ ತಗೋತಾ ಇದಾರೆ. ಸಿಕ್ಕಿಸಿಕ್ಕಿದೋರ ಸಂಬಂದ ಸಲಕಕ್ಕೆಲ್ಲ ಸಮಾರಾಧನೆಯಾಗ್ತಿದೆ. ಒಂದೇ ಒಂದು ಮಾತು ಹೇಳಿಸಿದರೆ ಆಗಿಬಿಡುತ್ತೆ. ಆಮೇಲೆ ಸುಲಭವಾಗಿ ಮೇಲಕ್ಕೇರಿಸಬಹುದು, ಕಷ್ಟವಾಗೋದೇ ಇಲ್ಲ. ಸ್ಪರ್ಧೆಗೆ ಕೂತಿದ್ದರೆ ಹೇಗೋ ಹಾಗೇ ಆಗಿಸೋಣ."

"..........."

' ಅದೂ ಬೇಡವೆ?"

ಗುರು ತಲೆಯಾಡಿಸಿದ. ಸಾಹುಕಾರರ ತಾಳ್ಮೆ ಹದಗೆಡುತ್ತಿತ್ತು. ಕಷ್ಟದಿಂದ ತಡೆದುಕೊಂಡರು. ಯಾರಿಂದಲೇ ವಿರೋಧವನ್ನು—ಅದೂ ಈ ಮಗನಿಂದ—ಕಂಡವರೇ ಅಲ್ಲ.

" ಇನ್ನೇನು ಮಾಡಬೇಕು ಅಂತ ಇದೀಯ ? ಇನ್ನೂ ಮುಂದೆ ಓದುತ್ತೀಯ ?" ನಿರಾಶರಾಗಿ ಕೇಳಿದರು.

" ಓದು ಸಾಕಾಯ್ತು. ವಿದ್ಯ ಕಲಿಯಬೇಕು."

" ವಿದ್ಯ ! ಇಲ್ಲಿವರೆಗೆ ಕಲಿತದ್ದೇನು ?"

" ಕಾಲೇಜು ಅಭ್ಯಾಸ, ಪರೀಕ್ಷೆ ಅಭ್ಯಾಸ."

" ವಿದ್ಯ ಎಲ್ಲಿದೆ ಮತ್ತೆ ?"

" ಜೀವನದಲ್ಲಿ."

" ಓ. ಹಾಗೋ ? ಮತ್ತೆ ನೌಕರಿಯೂ ಬೇಡ ಅಂತೀಯೆ ?"

" ನೌಕರಿಜೀವನ ಯಂತ್ರದ ಹಾಗೆ. ನಿಸ್ಸತ್ವ."

" ಹಾಗಾದರೇನು, ಸ್ವತಂತ್ರಜೀವನ ಮಾಡುತ್ತೀಯೇನು—ನನ್ನ ಹಾಗೆ?"

" ..........."

"ಜಮೀನು-ಸಮೀನು,ಲೇವಾ-ದೇವಿ,ವ್ಯಾಪಾರ-ಸಾಪಾರ,ಕಲಿತುಕೋಬೇಕು ಅಂತಲೋ ?"

" ..........."

" ಯಾಕೆ, ಇದಕ್ಕೂ ಉತ್ತರವಿಲ್ಲ ?"

" ಅದೂ ಬೇಡ."

" ಇದೂ ಬೇಡ. ಏನೂ ಬೇಡ. ಹೇಳಿದ್ದೊಂದೂ ಬೇಡ ಅಂದರೆ ಹೇಗಪ್ಪ ?"

" ನಂಗೆ ಇಷ್ಟವಿಲ್ಲದೇ ಇದ್ದರೆ ಏನು ಮಾಡಲಪ್ಪ ?" ಅರೆಕೋಪ ಅರೆನೋವಿನಿಂದ ಹೇಳಿದ,

"ಇಷ್ಟವಿಲ್ಲ, ಇಷ್ಟವಿಲ್ಲ. ಯಾವುದಕ್ಕೂ ಹೀಗಾದರೆ ಏನು ಮಾಡಬೇಕಪ್ಪ?"

"..........."

"ಹೋಗಲಿ ನೀನೇ ಯಾವುದನ್ನಾದರೂ ಯೋಚಿಸಿದೀಯ?"

ಗುರು 'ಹುಂ' ಎನ್ನುವಂತೆ ತಲೆಯಾಡಿಸಿದ.

"ಏನು?" ಅತ್ಯಾತುರದ ನಿರೀಕ್ಷೆಯಿಂದ ಕೇಳಿದರು.

"ಕವಿಯಾಗುತ್ತೀನಿ."

"ಏನು! ಕವಿ! ಕವಿ! ನಂಗೆ ಕಿವಿ ಕೇಳಿಸುತ್ತಿದೆಯೆ?" ಭ್ರಾಂತರಾದರು. ಗುರು ಬಾಂಬೆಸೆದುಬಿಟ್ಟು ಸಿಡಿಯುವುದನ್ನು ಶಾಂತವಾಗಿ ನೋಡುತ್ತ ಕುಳಿತಿದ್ದ. "ಕವಿ! ಆ ಹಾಳು ನಂಜಪ್ಪ ಹಾಳುಬಾಯಲ್ಲಿ ಹೇಳಿದ ಹಾಗೇ ಅಂತೀಯಲ್ಲಪ್ಪ. ಕವಿ! ಏನು ಬರುತ್ತೆ? ಪದ್ಯ ಬರೆದುಕೊಂಡು ಊರೂರು ತಿರಿಗಿಕೊಂಡು ಉತ್ಸವಗಳಲ್ಲಿ ಹೇಳಿಕೊಂಡು—ಅದರಿಂದ ಏನು ಪ್ರಯೋಜನ ನಮಗೆ? ಮೂರು ಕಾಸು ಹುಟ್ಟೋದಿಲ್ಲ."

"ನಂಗೆ ಯಾಕೆ ಕಾಸು?"

"ಯಾಕೆ ಕಾಸು! ವಿಚಿತ್ರ ಪ್ರಶ್ನೆ! ಹಣವಿಲ್ಲದೆ ಯಾವುದಾಗುತ್ತೆ ಮಗು? ಯಾರಿಗೆ ತಾನೆ ಬೆಲೆ ಬರುತ್ತೆ? ನಮಗೆ ಇಷ್ಟು ಹಣ ಇರೋದರಿಂದಲೇ ಊರಿಗೆ ಊರೇ ಓಲೈಸುತ್ತೆ."

"ಸರಿ. ಮತ್ತೆ. ನಮಗೆ ಬೇಕಾದಷ್ಟು ಇದೆಯಲ್ಲ."

"ಬೇಕಾದಷ್ಟು! ಬೇಕಾದಷ್ಟು ಇರೋದು ಸಾಧ್ಯವೆ—ಯಾರಿಗಾದರೂ? ನಮಗೆ ಏನಿದೆ ಮಹಾ. ಕೂತು ತಿಂದರೆ ಕುಡಿಕೆ ಹಣ ಎಷ್ಟು ದಿನ ಬರುತ್ತೆ? ಇರೋದನ್ನೇ ಮುರಿಸಿಕೊಂಡು ತಿನ್ನೋದು ವಿವೇಕವೆ?"

"ನಮ್ಮ ಆಗತ್ಯಕ್ಕೆ ಸಾಕಾದಷ್ಟು ಇದೆಯಲ್ಲಪ್ಪ. ಹೆಚ್ಚಿಗೆಯಲ್ಲಿ ಏನು ಸುಖ? ಅದು ನಮ್ಮದಲ್ಲ, ಇತರರದು."

"ಹೆಚ್ಚಿಗೆ ಆದರೇನು. ಸಾಧ್ಯವಾದಷ್ಟು ಸಂಪಾದನೆ ಮಾಡಿ ದಾನ ಧರ್ಮ ಮಾಡೋದು."

"ನಮ್ಮದು ಅಲ್ಲದೇ ಇರೋದರ ವಿಷಯದಲ್ಲಿ ಯಾಕೆ ಅಧಿಕಾರ ವಹಿಸಬೇಕು? ಹೆಚ್ಚು ಸಂಪಾದಿಸದೆ ಇರೋದೇ ನಿಜವಾದ ಧರ್ಮವಲ್ಲವೆ?"

" ಅಂ !....ಹಾಗಲ್ಲಪ್ಪ, ಎಂದೆಂದಿಗೆ ಏನೇನು ಬರುತ್ತೋ. ಯಾರು ಕಂಡಿದಾರೆ ? ಅದನ್ನೆಲ್ಲ ಲೆಕ್ಕಕ್ಕೆ ತಗೋಬೇಡವೆ ? "

" ಆ ಲೆಕ್ಕಕ್ಕೆ ಕೊನೆಯೇ ಇಲ್ಲವಲ್ಲ. "

" ಮತ್ತೆ, ಅದಕ್ಕೇ ದುಡೀತಾ ಇರಬೇಕು ಅನ್ನೋದು. "

" ........... " ಈ ವಾದ ಅವನಿಗೆ ಗೊತ್ತಾಗಲಿಲ್ಲ. ಆದರೆ ತಂದೆಯನ್ನು ವಿರೋಧಿಸಲಿಲ್ಲ.

" ಅಲ್ಲದೆ, ಹಣವಿದ್ದ ಕಡೆ ಗೌರವ, ಸ್ಥಾನ, ಅಧಿಕಾರ. ಹೆಚ್ಚು ಹಣವಿದ್ದ ಕಡೆ ಹೆಚ್ಚು. " ಸಾಹುಕಾರರು ಇನ್ನೂ ಮುಂದುವರಿಸಿದರು. ಗುರು ಇದಕ್ಕೆ ತಾನೆ ಏನು ಹೇಳುವುದು ಎಂದು ಸುಮ್ಮನಿದ್ದ. ಸಾಹುಕಾರರಿಗೂ ಕಾರಣ ಗೊತ್ತಾಗದಿದ್ದರೂ ಪೂರ್ತಿ ತೃಪ್ತಿಯಾಗಲಿಲ್ಲ—ಮಗನ ಮೌನದಿಂದಲೋ ಏನೋ.

" ಹಣವೇ ಇಲ್ಲದೆ ಇನ್ನೇನಿದೆ, ಕವಿಯಾಗೋದರಲ್ಲಿ ? "

" ಕಲೆಯ, ಸಾಹಿತ್ಯದ ಸೇವೆ. "

" ಅಯ್ಯೋ, ಅದಕ್ಕೇನಪ್ಪ, ದುಡ್ಡು ಕೊಟ್ಟು ಪುಸ್ತಕ ಕೊಂಡುಕೊಂಡರೆ ಸೇವೆ ಮಾಡಿದ ಹಾಗೆ ಆಗಲಿಲ್ಲವೆ ? ಬೇಕಾದರೆ ಬರೆಯೋರಿಗೂ—ಒಬ್ಬಿಬ್ಬರಿಗೆ—ಅಷ್ಟು ದುಡ್ಡು ಕೊಟ್ಟು ಬರೆಸಿದರಾಯ್ತು. ಅದೂ ನಮ್ಮ ಹೆಸರಿಗೇ ಮಾರೋರೂ ಸಿಗೋದಿಲ್ಲವೆ—ಸಾಕಾದಷ್ಟು ಹಣ ಕೊಟ್ಟರೆ ? ಅದಕ್ಕೆ ಯಾಕೆ ಯೋಚಿಸಿ ಯೋಚಿಸಿ ತಲೆಕೆಡಿಸಿಕೋಬೇಕು ? ಹಣದಿಂದ ಕಲೆ ಹುಟ್ಟಿಸೋದು ಎಷ್ಟರ ಕೆಲಸ. "

" ........... "

" ಅಲ್ಲವೆ ? "

" ನಾವೇ ಮಾಡೋದು ಹೆಚ್ಚಿನ ಕೆಲಸ—ಆಸಕ್ತಿಯಿದ್ದರೆ. "

" ಹುಂ, ಅದೂ ಆಗಲಿ. ಇಷ್ಟಕ್ಕೂ ಅದಕ್ಕೆ ಎಷ್ಟು ಹೊತ್ತು ಬೇಕು—ಅಷ್ಟಿಷ್ಟು ಬರೆಯೋದಕ್ಕೆ ? ಇನ್ನೊಂದು ಉದ್ಯೋಗದ ಜತೆ ಮಾಡಿಕೊಂಡರಾಯ್ತು. ಈಗ ನಿಮ್ಮ ಕವಿಗಳು, ಸಾಹಿತಿಗಳೆಲ್ಲ ಏನು ಮಾಡ್ತಾರೆ—ಹಾಗೇ ಅಲ್ಲವೆ ? "

" ಹೊಟ್ಟೆಪಾಡಿಗೆ ಮಾಡ್ತಾರೆ. "

"ಹಾಗೇ ನಾವೂ ಎರಡನ್ನೂ ಮಾಡಿದರಾಯ್ತು."

"ಒಂದು ಜೀವನವನ್ನೇ ಮುಡುಪಿಟ್ಟರೂ ಸಾಕಾದಷ್ಟುಬಳ್ಳೀ ಕೆಲಸ.."

"ಅಯ್ಯೊ, ಅದೇನು ಮಹಾ ಬಿಡಪ್ಪ, ಕವಿ ಅನ್ನಿಸಿಕೊಳ್ಳೋದಕ್ಕೆ ಎಷ್ಟು ಪದ್ಯ ಬರೆದರೂ, ಎಂಥಾದ್ದು ಬರೆದರೂ ಸಾಕು. ನಾನು ಕಂಡಿಲ್ಲವೆ ?"

"ಹೆಸರಿನ ಮಾತಲ್ಲ. ಸೇವೆ ಆದಷ್ಟು...."

"ಪದ್ಯ ಬರೆಯೋದರಲ್ಲಿ ಏನು ಸೇವೆ ? ಅದರಿಂದ ಏನು ಪ್ರಯೋಜನ ? ಸಾಹಿತ್ಯವಿಲ್ಲದೆ ಜೀವನ ನಡೆಯೋದಿಲ್ಲವೆ ? ಸಾಹಿತ್ಯ ಅನ್ನೋದು ಒಂದು ಸೋಗು."

ಇವರಿಂದಲೇ 'ಸಾಹಿತ್ಯವೇ ಜೀವನದ ಸಾರಸರ್ವಸ್ವ' ಎಂದು ಕೇಳಿದ್ದ ಗುರುವಿಗೆ ಅತ್ಯಾಶ್ಚರ್ಯವಾಯಿತು.

"ಹತ್ತು ಜನಕ್ಕೆ ತಿಳಿವಳಿಕೆ........" ಎಂದು ಧೈರ್ಯ ಮಾಡಿದ.

"ಜೀವನದಲ್ಲಿ ಬರದೇ ಇರೋ ತಿಳಿವಳಿಕೆ ಪದ್ಯದಿಂದೇನು ಬರುತ್ತೆ?"

"..........."

"ಇಷ್ಟಕ್ಕೂ ಸೇವೆ ನಮಗೆ ಸೇವೆಯಾಗಿಯೇ ಮೊದಲಾಗಬೇಕು. Charity begins at home."

"ಇರಬಹುದು. ಆದರೆ ಅಲ್ಲೇ ನಿಲ್ಲಬಾರದು."

"ಏನು ಸೇವೆಯೋ ಬಿಡಪ್ಪ,ನಮಗೆ ಉಪಯೋಗವಿಲ್ಲದ್ದು.ನಾನೇನು ಕಡಿಮೆ ಮಾಡಿದೀನೆ ? ನನ್ನ ಮತ್ತು ದೇಶಾನ ಎರಡನ್ನೂ ಸೇವಿಸಿದೀನಿ. ಎಲ್ಲ ಸೇವೆಯೆ, ಒಂದಲ್ಲ ಒಂದು ತರಹ. ಯಾವುದು ತಾನೆ ಸೇವೆಯಲ್ಲ ? ಸರಕಾರಿ ಉದ್ಯೋಗ ಅಲ್ಲವೆ ? ಚೆನ್ನಾಗಿ ಯೋಚನೆ ಮಾಡಿ ನೋಡು. ನಿಂಗೇ ಗೊತ್ತಾಗುತ್ತೆ. ಇನ್ನೂ ಹುಡುಗತನ, ಹಣದ ವಿಚಾರದಲ್ಲಿ, ಉದ್ಯೋಗದ ವಿಚಾರದಲ್ಲಿ, ಸೇವೆ ವಿಚಾರದಲ್ಲಿ ಏನೇನೋ ಅಭಿಪ್ರಾಯ ಇಟ್ಟುಕೊಂಡಿದೀಯೆ—ಪುಸ್ತಕದ್ದು ಅಂತ ಕಾಣುತ್ತೆ. ಜೀವನದಲ್ಲಿ ಬೇರೆ. ನನ್ನ ಮಾತು ತಗೊ. ಏನು ಅವಸರವಿಲ್ಲ, ನಾನು ಹೇಳಿರೋದರ ಮೇಲೆ ಸ್ವಲ್ಪ ಗಮನವಿಡು. ಇನ್ನೊಂದು ದಿನ ಮತ್ತೆ ಚರ್ಚಿಸೋಣ--ಬೇಕಾದರೆ"

ಸಾಹುಕಾರರು ಎದ್ದರು. ಅವರಿಗೆ ಅತೃಪ್ತಿ ಅಸಮಾಧಾನಗಳು ಅಷ್ಟಿಷ್ಟು

ಆಗಿರಲಿಲ್ಲ. ಆಸ್ತಿ, ಹಣದ ಬಗ್ಗೆ ಅವನ ಅಭಿಪ್ರಾಯ ಅವರನ್ನು ಗಾಬರಿ ಪಡಿಸಿತ್ತು. ' ಇವನು ಹೀಗಾದರೆ ನಾನು ಕೂಡಿಸಿಟ್ಟಿರೋ ಇಷ್ಟು ಐಶ್ವರ್ಯದ ಗತಿಯೇನಾಗುತ್ತೆ ಮುಂದೆ ? ಮರ್ಯಾದೆ ಮನೆತನದ ಕೀರ್ತಿಯೇ, ........ ಆಯ್ಯೋ ! ' ಎಂದುಕೊಂಡು ಒದ್ದಾಡಿದರು. ಆದರೂ ಕಡೆಗೆ ' ದಾರಿಗೆ ಬಂದಾನು ' ಎನ್ನುವ ಆಸೆ ಹೋಗಲಿಲ್ಲ; ಯಾಕೆ, ' ಬಂದೇ ಬರುತ್ತಾನೆ ' ಎನ್ನುವ ಭರವಸೆ ಇದ್ದೇ ಇದ್ದಿತು. ರಾತ್ರಿ ನಿದ್ದೆ ಬರಲಿಲ್ಲ. ನಿದ್ದೆಯಿಲ್ಲದ ರಾತ್ರಿಗಳು ಮೊದಲಾದುವು.

ಗುರುವಿಗೆ ಡುಗಡೆಯಾದಂತಾಯಿತು. ಅವನು ಮತ್ತೆ ಬಿದ್ದುಕೊಂಡು ಮೇಲೆ ನೋಡುತ್ತಿದ್ದ.

೭

* * *

ಸಾಹುಕಾರರಿಗೆ ಈ ಬಗ್ಗೆ ಆಶಾಭಂಗವು ಕಾಯ್ದುಕೊಂಡಿತ್ತು. ಮಗ ಸರಕಾರಿ ನೌಕರಿಗೆ ಒಪ್ಪಲಿಲ್ಲ. ಅವರಿಗೆ ಮನಸ್ಸು ಬಹಳ ಇಳಿದುಹೋಯಿತು. ತಮ್ಮ ಕನಸಿನ ಕಳಶ ಕಳಚಿ ಬಿದ್ದುದಲ್ಲದೆ, ಹೊರಗಡೆ ಅಮಲ್ದಾರರು ಮತ್ತು ಇತರರಿಗೆಲ್ಲ ಉತ್ತರ ಕೊಡುವುದು ಜೇರೆ ಬಹಳ ಕಷ್ಟವಾಯ್ತು. ಮಗ ಕವಿಯಾಗುತ್ತಿದ್ದಾನೆಂದು ಹೇಳುವಂಥವರೆ—ಅವರು ? ಏನೋ ಪ್ರಶ್ನೆ ಬಂದಾಗಲೆಲ್ಲ "ಇನ್ನೂ ತೀರ್ಮಾನವಾಗಿಲ್ಲ. ಯೋಚಿಸಲಿ, ಏನು ಅವಸರ. " ಎಂದು ಹೇಳುತ್ತಿದ್ದರು. ಆದರೆ ಒಳಗೆ ಅವರ ಸಂಕಟವನ್ನು ಅವರೇ ಬಲ್ಲರು. ಆದರೂ ಅವನಿಗೆ ಇನ್ನೂ ವಯಸ್ಸು ಚಿಕ್ಕದು. ತಮ್ಮ ಎಂ. ಎಲ್..ಎ. ಪದವಿಯೂ ಕದಲುವಂತಿರಲಿಲ್ಲ· ಇಷ್ಟಕ್ಕೂ ಸ್ನೇಹ ಎಲ್ಲಿ ಹೋಗುತ್ತಿತ್ತು ? ಅಲ್ಲದೆ ಹಣವಿದ್ದೇ ಇದ್ದಿತಲ್ಲ. ಮಗನೊಬ್ಬ ಬದಲಾಯಿಸಿದರೆ ಎಲ್ಲವೂ ಸಾಧ್ಯ. ' ಈ ಕವಿತೆಯೊಂದು ಅಲೆದು ಬಂದ ಹುಚ್ಚು. ಹಾಗೇ ಹೋಗುತ್ತದೆ ' ಎಂದು ತಿಳಿದು ಇನ್ನೂ ಕುಟುಕು ಆಸೆಯನ್ನು ಇಟ್ಟುಕೊಂಡೇ ಇದ್ದರು. ಆಗಾಗ್ಗೆ ಅವನನ್ನು ಮಾತಾಡಸಿ ದಾರಿಗೆ ತರುವುದಾಗಿ ತೀರ್ಮಾನಿಸಿದರು.

ಇತ್ತ ಗುರುವಿಗೂ ಆಶಾಭಂಗವೇ ಕಾದಿದ್ದಿತು. ಅವನೇನೋ ಹಾಸಿಗೆಯ ಮೇಲೆ ಹಾಗೇ ಮಲಗಿಕೊಂಡು, ಕಾಗದ ಕಡ್ಡಿಗಳನ್ನು ಹಿಡಿದು ಕಾಲುಗಳನ್ನು ಎತ್ತಿ ಬದಲಾಯಿಸುತ್ತ, ಅತ್ತಿತ್ತ ಹೊರಳಾಡುತ್ತ, ಬಿರಿಗಣ್ಣಿನಿಂದ ನೋಡುತ್ತ, ಬೆರಳಾಡಿಸುತ್ತ ಕವಿತ್ವವನ್ನು ಮೊದಲುಮಾಡಿದ. ಆದರೆ ಎಷ್ಟು ದಿನಗಳಾದರೂ ಅದು ಯಾವ ಹದಕ್ಕೂ ಬರಲಿಲ್ಲ ಭಾವಾವೇಶ ಬೇಕಾದ ಹಾಗೆ ಬರುತ್ತಿತ್ತು. ಆದರೆ ಬರಹದ ಅಭಾವ ಕಳೆಯಲಿಲ್ಲ. ಆವೇಶದ ಒತ್ತಡವೇ, ಈ ಮಾತು ಹೊರಡದಿದ್ದುದಕ್ಕೆ ಕಾರಣವೊ ? ಎಂದೆನಿಸಿತು, ಅವನಿಗೆ. ‘ ಬಡವರ ಬವಣೆ ’ ‘ ಹಸಿವಿನ ಹುಚ್ಚು ’ ‘ಕಾಳ್ಗಿಚ್ಚು’ ‘ ತಂದೆ–ಮಗ ’ ‘ ಮರ್ಯಾದೆಯ ತೊಗಲು ’ ‘ ಜಯಭೇರಿ ’ ‘ ನ್ಯಾಯದ ನಿಲುವು ’ ಮೊದಲಾದ ಅನೇಕ ಕವನಗಳು ನಾಲ್ಕು ನಾಲ್ಕು ಸಾಲಿಗೇ ನಿಂತುವು. ಕೋಣೆಯ ತುಂಬ ಕಾಗದದ ಚೂರುಗಳು ಹಾರಾಡುತ್ತಿದ್ದುವು. ಅವನ್ನು ಆರಿಸಿ ಜೋಡಿಸಿಡುವುದು ದಾಸನ ಕೆಲಸಕ್ಕೆ ಬಡ್ಡಿ. ‘ ಕಲಿಗಾಲ’ ವೆಂಬ ಖಂಡಕಾವ್ಯವಂತೂ ತಿಂಗಳುಗಟ್ಟಲೆ ಯೋಚನೆಯಾದ ಮೇಲೂ ಮನಸ್ಸಿನಲ್ಲಿಯೇ ಉಳಿಯಿತು. ಈ ಯತ್ನಗಳ ದೆಸೆಯಿಂದ ಅವನು ಹೊರಗೆ ಹೋಗುವುದೂ ಕಡಿಮೆಯಾಯಿತು. ಕೋಣೆಯಲ್ಲಿ ಮಲಗಿರುವುದು ಹೆಚ್ಚಾಯಿತು. ಕೂದಲು ಉದ್ದವಾಯಿತು. ತನ್ನ ಕಡೆಗೆ ಗಮನ ಇನ್ನೂ ಕಡಿಮೆಯಾಯಿತು. ಮುಖ ಹೆಚ್ಚು ಹೆಚ್ಚಾಗಿ ‘ ಗಾಬೆ ’ ಕಟ್ಟಿಕೊಂಡಿತು.

ಇನ್ನಷ್ಟು ಕಾಲದ ಮೇಲೆ ಮಗ ಏನೊಂದನ್ನೂ ಮಾಡದಿರುವುದನ್ನು ಕಂಡು, ತಂದೆಯವರು ತಮ್ಮ ಶಸ್ತ್ರಾಸ್ತ್ರಗಳನ್ನು ಸಿದ್ಧಪಡಿಸಿಕೊಂಡು ಎರಡನೆಯ ದಂಡಯಾತ್ರೆಗೆ ಹಿಂತಿರಿಗಿದರು. ಆದರೆ ಮಗನ ಕೋಟೆ ಮೊದಲಿನಂತೆಯೇ ಅಭೇದ್ಯವಾಗಿತ್ತು. ನೌಕರಿ ದಂಧೆಗಳನ್ನು ಇನ್ನೂ ಅಲಕ್ಷಿಸುತ್ತಲೇ ಇದ್ದ. ಆದರೆ ಅವನಲ್ಲಿ ಒಂದು ಬದಲಾವಣೆಯಾಗಿತ್ತು. ಕಾವ್ಯಶ್ರೀ ಕೈಬಿಟ್ಟಿದ್ದಳು. ಅವಳ ಒಲಿಯದ ಚೆಲ್ಲಾಟದಿಂದ ಅವನು ಸೋತಿದ್ದ. ಸಮಾಜಸೇವೆಯನ್ನ ಎರಡನೆಯ ಪ್ರೇಯಸಿಯಾಗಿ ಆರಿಸಿಕೊಂಡಿದ್ದ.

“ನಿನ್ನ ಕವಿತೆಯ ಕೆಲಸವೂ ಸಾಗುತ್ತಾ ಇಲ್ಲ ಅಂತೀಯಲ್ಲಪ್ಪ.ಒಳ್ಳೇದೇ ಆಯ್ತು. ಇನ್ನೇನಾದರೂ ಉದ್ಯೋಗ ಮಾಡಬೇಡವೆ ? ಉದ್ಯೋಗಂ ಪುರುಷ ಲಕ್ಷಣಂ. ”

" ಸಮಾಜಸೇವೆ........Social work........"

" ಓ, ಅದೇ ? ಅದಕ್ಕೇನು, ಧಾರಾಳವಾಗಿ ಮಾಡಬಹುದು. ನಾನು ಮಾಡ್ತಾ ಇಲ್ಲವೆ—ಈಗ ? ' ಹರಿಜನ-ಸೇವಾ-ಸಮಿತಿ ', ' ಗ್ರಾಮೋದ್ಧಾರ ಸಂಘ ' ' ಗೋ-ಸೇವಾ-ಸಮಿತಿ ' ಇವುಗಳ ಅಧ್ಯಕ್ಷತೆಗಳನ್ನು ನಿಂಗೇ ಬಿಟ್ಟು ಕೊಡುತ್ತೀನಿ—ಅವರನ್ನೆಲ್ಲ ಒಪ್ಪಿಸಿ. ಈ ಸೇವೆಗಳೆಲ್ಲ ಏನಪ್ಪ ತಂಟೆ ಕೊಡೋದಿಲ್ಲ. ಆಗೊಂದು ಈಗೊಂದು ಭಾಷಣ ಮಾಡಿದರಾಯ್ತು. ಅವಕ್ಕಾಗಿ ಬಂದ ಕೆಲಸ ಬಿಟ್ಟೇನು ಕೂತುಕೋಬೇಕಾಗಿಲ್ಲ. "

" ನಾನು ಕೆಲಸಗಾರನಾಗಬೇಕು ಅಂತಿದೀನಿ. "

" ಏನು, ಅಧ್ಯಕ್ಷ ಕೆಲಸಗಾರನಲ್ಲವೆ—ಸಂಘದಲ್ಲಿ ಅತ್ಯುಚ್ಚ ಪದವಿ ಅಧಿಕಾರದೋನು ? ನನ್ನ ಹೆಸರು ಪತ್ರಿಕೇಲೆಲ್ಲ ಬರೋದನ್ನ ಓದಿಲ್ಲವೆ ? ಅಧ್ಯಕ್ಷ, ಕಾರ‍್ಯದರ್ಶಿ ಇಬ್ಬರನ್ನು ಬಿಟ್ಟು ಬೇರೆಯೋರನ್ನ ಯಾರು ವಿಚಾರಿಸುತ್ತಾರೆ ಅಂತೀಯ ? ಕೆಳಗೆ ಹೋದರೆ ಏನೇನೂ ಪ್ರಯೋಜನವಿಲ್ಲ. ಬರಿ ಕೆಲಸ, ಭಲೆ ಅನ್ನೋರಿಲ್ಲ. Thankless job ಅಂತಾರಲ್ಲ ಹಾಗೆ. ನಾನು ಹೇಳೋ ಹಾಗಾದರೆ, ನಾಲ್ಕು ದಿನ ಕೆಲಸ ಮಾಡಿ ಸಾರ್ವಜನಿಕ ರಂಗದಲ್ಲಿ ಮುಖಂಡನಾಗಿ ಚುನಾವಣೆಗೆ ನಿಂತು ಗೆದ್ದು ಮಂತ್ರಿ-ತಂತ್ರಿ ಏನೇನು ಬೇಕಾದರೂ ಆಗಬಹುದು, ಮಾಡಬಹುದು. ಮಿತಿಯೆಲ್ಲಿ ? " ಮತ್ತೊಂದು ಉಪನ್ಯಾಸ.

ಗುರು ಸುಮ್ಮನೆ ಕೇಳಿದ. ಸಾಹುಕಾರರ ಸ್ವರಸ್ರೋತು ತಾನಾಗಿ ನಿಂತಿತು.

" ಏನು ಯಾವ ಸಂಘದ ಅಧ್ಯಕ್ಷತೆಗೆ ಏರ‍್ಪಾಡು ಮಾಡಲಿ, ಅಥವ ಎಲ್ಲ........"

" ಬೇಡ. "

" ಮತ್ತೆ ? "

" ಕೆಲಸಗಾರತನವೇ ಸಾಕು, ನಂಗೆ. "

ಸ್ವಲ್ಪ ಮೌನ. ಸಾಹುಕಾರರ ಮನಸ್ಸು ಸ್ಥಿಮಿತದಿಂದ ಒಡೆದು ಕೊಳ್ಳುವುದಕ್ಕೆ ಯತ್ನಿಸುತ್ತಿತ್ತು.

" ಏನಪ್ಪ, ನಂಗಿಷ್ಟವಾದದ್ದು ನಿಂಗೆ ಸರಿ ಹೋಗೋದಿಲ್ಲವಲ್ಲ. ಎಲ್ಲ

ಕಡಿಮೆ ಮರ್ಯಾದೆ ಕೆಲಸಾನೇ ಮಾಡಬೇಕು ಅಂತೀಯಲ್ಲ. ನಮ್ಮ ಮರ್ಯಾದೆಗೆ ತಡೆಯುತ್ತೇ—ಇಂಥ ಮನೆತನ; ಸಿರಿತನ, ಸ್ಥಿತಿಗತಿ..''

"ಕಡಿಮೆ ಮರ್ಯಾದೆ ಯಾಕಪ್ಪ? ಸರಿಯಾಗಿ ಮಾಡಿದರೆ ಎಲ್ಲಕ್ಕೂ ಒಂದೇ ಮರ್ಯಾದೆ ಇರಬೇಕು-ಎಲ್ಲ, ನಾವು ಮಾಡೋದರಲ್ಲಿ ಇದೆಯೆ ಹೊರತು ಕೆಲಸದಲ್ಲೇನಿದೆ-ಕಳ್ಳತನ ಸುಳ್ಳತನ ಅಂಥ ಕೆಟ್ಟದ್ದನ್ನು ಬಿಟ್ಟು."

"ಅದೆಲ್ಲ ನಂಗೆ ಗೊತ್ತಿಲ್ಲವೆ ?'' ಸಾಹುಕಾರರಿಗೆ ಮಗ ಇಷ್ಟು ಮಾತಾಡಿದ್ದೂ ಹೆಚ್ಚೆಂದು ಕಂಡಿತು. ಸ್ವಲ್ಪ ಹೊತ್ತು ಸುಮ್ಮನಿದ್ದು "ಅದೇ ತೀರ್ಮಾನವೆ ?'' ಎಂದು ಒತ್ತಿ ಕೇಳಿದರು. ಗುರು ತನ್ನ ಮೌನದ ಅಸ್ತ್ರವನ್ನೇ ಉಪಯೋಗಿಸಿದ ಸಾಹುಕಾರರು ಒಳಗೆ ಉದ್ವೇಗಗೊಂಡರೂ ಇದರ ಮುಂದೆ ನಿರಸ್ತ್ರರಾದರು. ಬೇಸರದ, ನಿರಾಸೆಯ ನೋವು ಒಂದೇ ಉಳಿಯಿತು.

"ಆಗಲಿ ಹಾಗಾದರೆ. ನಿಂಗೆ ತೋರಿದ ಹಾಗೇ ಮಾಡಪ್ಪ. ಯಾವ ಸಮಿತಿ ಸಂಘದ ಕಾರ್ಯದರ್ಶಿಗೆ ಹೇಳಲಿ ?"

"ಹೇಳ್ತೀನಿ, ಯೋಚಿಸಿ.'' ಗುರು ಮುಗಿಸಿದ.

ಸಾಹುಕಾರರು 'ನಾಲ್ಕು ದಿನ ಇದನ್ನೂ ಮಾಡಲಿ, ಅವನಿಗೇ ಸಾಕಾಗುತ್ತೆ. ಆಮೇಲೆ ನೌಕರಿಯ ಕಡೆಗೆ ಒಲಿಸೋದಕ್ಕೆ ಮತ್ತೆ ಯತ್ನಿಸೋದು. ಸಮಯ ಬಂದಿರುತ್ತೆ. ಅವನಿಗೂ ಬುದ್ಧಿ ಬಂದಿರುತ್ತೆ, ಸಮಾಜಸೇವೆಯ ಪೊಳ್ಳು ತಿಳಿದು. ಆಗಲೂ ಒಪ್ಪದೇ ಇದ್ದರೆ ಉಪಾಯ ಮಾಡಿ ಮೇಲಕ್ಕೆ ಎಳೆಯೋದು. ಕ್ರಮೇಣ ಮನಸ್ಸು ಬದಲಾಯಿಸಿ, ಹೇಗಾದರೂ ಒತ್ತಾಯಪಡಿಸಿ, ಮುಂದಿನ ಚುನಾವಣೆಯಲ್ಲಿ ಪಕ್ಷದ ಪೆದ್ದೂರಿನಿಂದ ನಿಲ್ಲಿಸಿದರಾಯಿತು. ಮುಂದೆಲ್ಲ ಸರಿಹೋಗುತ್ತೆ. ದೇವರಿದಾನೆ.' ಎಂದುಕೊಂಡು ಲೆಕ್ಕಾಚಾರ ಹಾಕಿಕೊಂಡರು. ಅವರು ಸುಲಭವಾಗಿ ಸೋಲುವವರಲ್ಲ. ತಮ್ಮ ಯತ್ನ ಮೀರಿದ ಮೇಲೆ ಅವರು ಮಗನಿಗೆ ಸರಿಯಾಗಿ ಬೋಧಿಸುವುದು ತಮಗೆ ಸಾಧ್ಯವಿಲ್ಲವೆಂದು ಕಂಡುಕೊಂಡರು. ಅವರ ಸಂಬಧವೇ ನಿಷ್ಠುರದಿಂದ ಹೇಳುವುದಕ್ಕೂ, ಸದರದಿಂದ ಒತ್ತಾಯ ಪಡಿಸುವುದಕ್ಕೂ, ಅಡ್ಡಿ ಬಂದು ಮಾತುಗಳನ್ನು ತಡೆಯುತ್ತಿದ್ದಂತೆ ತೋರಿತು. ಆದುದರಿಂದ ಅವರಿವರಿಂದ ಹೇಳಿಸಲು ಯತ್ನಿಸಿದರು. ಇದು ಅವರ ಘನತೆಗೆ ಕೊರತೆಯ ವಿಷಯವೇ. ಆದರೂ ಮನೆತನದ ಮತ್ತು ಮಗನ, ಏಳ್ಗೆ ಪ್ರತಿಷ್ಠೆಗಳ, ದೊಡ್ಡ ಗುರಿಯ

ಸಾಧನೆಗಾಗಿ ಆದ ಅಪಮಾನವನ್ನು ನುಂಗಿಕೊಂಡರು. ಅಮಲ್ದಾರರ ಬಳಿ ಚರ್ಚಿಸುತ್ತ ಹಾಗೇ "ನೀವು ಆ ದಾರೀಲೇ ಇರೋರು ಸಾರ್, ಒಂದು ಮಾತು ಹೇಳಿ ನೋಡಬಹುದು ಅಂತ ಕಾಣುತ್ತೆ. ಶಂಖದಲ್ಲಿನ ತೀರ್ಥ. ಹ್ಹಹಾ! ಎಷ್ಟಾದರೂ ನಾವು ತಂದೆ-ಮಕ್ಕಳು ಸಾರ್. ಅಲ್ಲದೆ ಮನೆಗಿಂತಲೂ ಜನಕ್ಕೆ ಹೊರಗಡೆಯಲ್ಲೇ ಅಭಿಮಾನ, ಬೆಲೆ ಜಾಸ್ತಿ. ಹಿತ್ತಲ ಗಿಡದ ಸಮಾಚಾರ. ಹಾಗೆಂದರೆ ನಾನು ಬಲವಂತ ಮಾಡಲಾರೆ ಅಂತಲ್ಲ. ಆದರೂ ಅದಿಲ್ಲದೆ ಆಗೋದಾದರೆ ಒಳ್ಳೇದಲ್ಲವೆ?" ಎಂದು ಮೊದಲು ನಾಲಿಗೆ ಜಾರಿ ತಟ್ಟನೆ ಚೇತರಿಸಿಕೊಂಡು ತಿಳಿಸಿದರು. ಗುರುವಿನ ಸ್ನೇಹಿತ ಚಂದ್ರಶೇಖರನಿಗೆ "ನೀವು ನೀವು ಎಷ್ಟಾದರೂ ಸ್ನೇಹಿತರು. ಒತ್ತಿಹೇಳಬಹುದು. ಚೆನ್ನಾಗಿ ಬುದ್ಧಿಹೇಳು, ಹುಚ್ಚು ಬಿಡು ಅಂತ. ಗೊತ್ತಾಯ್ತೆ? ಇದನ್ನು ಇನ್ನು ಯಾರಿಗೂ ಹೇಳಬೇಡ" ಎಂದು ಹೇಳಿ ಎಚ್ಚರಿಸಿದರು. ಭೋಗಪ್ಪನಿಗ "ನೀನೂ ನನ್ನ ಹಾಗೇ ಸಾರ್ವಜನಿಕ ರಂಗನಲ್ಲಿದ್ದೀಯೆ. ಅನುಭವಸ್ಥ. ಇದರ ಕಷ್ಟ, ನಿಷ್ಠುರ, ಸಮಾಜಸೇವೆಯ ಛಂಗ, ಇವನ್ನು ಚೆನ್ನಾಗಿ ತಿಳಿಸಿ ನೌಕರಿಗೇ ಪ್ರೋತ್ಸಾಹಿಸು, ನೋಡೋಣ" ಎಂದು ಸೂಚಿಸಿದರು. ಇವರೆಲ್ಲ ಒಂದಲ್ಲ ಎರಡಲ್ಲ ಅನೇಕ ಬಾರಿ ಗುರುವಿಗೆ ಉಪನ್ಯಾಸಗಳನ್ನು ಕೊಟ್ಟರು. ಗುರು ಸಾವಧಾನವಾಗಿ ಕೇಳಿದ. ಚರ್ಚೆಗೆ ಮೊದಲು ಮಾಡಿದರು. ನಸುನಗುತ್ತ ಸುಮ್ಮನಿದ್ದುಬಿಟ್ಟ. ಅಮಲ್ದಾರರು ಸಾಹುಕಾರರನ್ನು ಕಂಡಾಗ "ನಿಮ್ಮ ಮಗ ಬಹಳ ದೊಡ್ಡ ಡಿಪ್ಲೊಮಾಟ್- ರಾಜತಂತ್ರ ಕುಶಲ. ರಾಜಕೀಯದಲ್ಲಿ ಬಹಳ ಮೇಲೆ ಬರುತ್ತಾನೆ. ಹೇಗಾದರೂ ಅದಕ್ಕೇ ಸೇರಿಸಿಬಿಡಿ. ಯಾವುದಕ್ಕೂ ಇಲ್ಲ ಅನ್ನೋದಿಲ್ಲ. ಸಿಟ್ಟಾಗೋದಿಲ್ಲ. ಆದರೆ ಒಪ್ಪೋದು ಮಾಡೋದು ಗೊತ್ತಾಗೋ ಹಾಗೇ ಇಲ್ಲ. ಅವನ ಇಷ್ಟವೇ ಅಂತ ಕಾಣುತ್ತೆ." ಅಂದು ಕೈತೊಳೆದುಕೊಂಡರು. ಚಂದ್ರ "ನಾನು ಹೇಳೋ ಅಷ್ಟೆಲ್ಲ ಹೇಳಿದೆ. ಅವನು ಯಾವುದೂ ಹೇಳಲೇ ಇಲ್ಲ. ಈಚೀಚೆಗೆ, ಆಗ ಈಗ, ಅಂಗಡಿ ಕಡೆ ಬರೋದೂ ಬಿಟ್ಟೇಬಿಟ್ಟಿದಾನೆ. ನಾನೇನು ಮಾಡಲಿ—ಇನ್ನು? ತಾವೇ ಅಪ್ಪಣೆ ಕೊಡಿಸಬೇಕು." ಎಂದು ಅವರ ಮೇಲೇ ಭಾರ ಹಾಕಿ "ಆದರೂ ಇನ್ನೂ ಯಾವುದಾದರೂ ದಾರಿಗೆ ಎಳೆಯೋದಕ್ಕೆ ಯತ್ನಿಸುತ್ತೀನಿ. ಪತ್ರಿಕೆ ಹೊರಡಿಸೋದರಲ್ಲಿ ಅವನಿಗೆ ಇಷ್ಟವಿಲ್ಲದೆ ಇಲ್ಲ ಅಂತ ಕಾಣುತ್ತೆ" ಅಂದ. "ಅಯ್ಯೋ,

ಅದರಲ್ಲೆಲ್ಲ ಏನು ದುಡ್ಡು ಬರುತ್ತೆ ಬಿಡೋ. ನಿಮ್ಮೋರೆಲ್ಲ ನಮ್ಮನ್ನ ಕಿತ್ತುಕೊಂಡು ತಿಂದೇ ಬಾಳ್ತಾ ಇದಾರೆ" ಸಾಹುಕಾರರು ತಳ್ಳಿಹಾಕಿದರು. ಭೋಗಪ್ಪ "ಸಾಹುಕಾರರೆ, ತಮ್ಮ ಮಗನೇ—ಗಟ್ಟಿತನದಲ್ಲಿ. ನಂಗೇನು ಜಗ್ಗೋಹಾಗೆ ಕಾಣಲಿಲ್ಲ. ತಮಗಾಗದ್ದನ್ನ ನಾನು ಮಾಡೇನೆ, ಎಲ್ಲಾದರೂ? ಬರಿ ಹುಚ್ಚು, ಏನೋ ಹೇಳಿದೆ–ವ್ಯರ್ಥವಾಗಿ" ಎಂದುಬಿಟ್ಟ. ಸಾಹುಕಾರರು ದಾಕ್ಷಿಣ್ಯ ಕಳೆದುಕೊಂಡಷ್ಟೇ; ತಂದೆ–ಮಗ ಇವರ ಗುಟ್ಟು ಬಿಟ್ಟುಕೊಟ್ಟಷ್ಟೇ ಆಯಿತು.

ಊರಿನ ಹರಿಜನ ಸೇವಾಸಮಿತಿಗೆ ಬರಿ ತಲೆಯಿತ್ತು, ಬಾಲವೇ ಇಲ್ಲ. ಅದಕ್ಕೆ ಸೇರಿದವರೆಂದರೆ ಅಧ್ಯಕ್ಷರು, ಕಾರ್ಯದರ್ಶಿಗಳು—ಜಂಟಿ ಕಾರ್ಯದರ್ಶಿಗಳು ಮತ್ತು ಕಾರ್ಯಕಾರಿ ಸಮಿತಿಯ ಮಹನೀಯರು, ಇಷ್ಟೆ. ಇವರೆಲ್ಲರಿಗೂ ಕತ್ತು ಮುರಿಯುವಷ್ಟು ಸ್ವಂತ ಕೆಲಸವಿದ್ದಿತು. ಎಲ್ಲರೂ ಗಣ್ಯರೂ, ಪುಣ್ಯವಂತರೂ ಆದ ವ್ಯಕ್ತಿಗಳೇ. ವರ್ಷದಲ್ಲಾದ ಒಂದೆರಡು ಸಭೆಗಳಿಗೆ ಇವರು ದಯಮಾಡಿಸುತ್ತಿದ್ದರು. ಬಾಕಿಯಂತೆ ಸಮಿತಿ ಬರಿಯ ಕಾಗದದ ಮೇಲೆ ಇತ್ತು. ಕೆಲಸಗಾರರು ಇರಲೇ ಇಲ್ಲ. ಆದರೂ ಗುರು ಧೈರ್ಯದಿಂದ ಕೆಲಸಗಾರನಾಗಿಯೇ ಸೇರಿದ. ಪ್ರಧಾನ ಕಾರ್ಯದರ್ಶಿ ಲಿಂಗಪ್ಪನಿಗೆ ಅತ್ಯಾಶ್ಚರ್ಯ. ಲಿಂಗಪ್ಪ ಖಾದಿ ಹಾಕುತ್ತಿದ್ದ. ಜೈಲಿಗೂ ಒಂದು ಬಾರಿ ಹೋಗಿದ್ದ. ಇವನಿಗೆ ಮದುವೆಯಾಗಿ ನಾಲ್ಕುಮಕ್ಕಳಿದ್ದರು. ಆದರೆ ಇವನ ಸಂಸಾರವನ್ನೆಲ್ಲ ಇವನ ಅಣ್ಣ ಹೈಸ್ಕೂಲು ಮೇಷ್ಟರು ಬಸಪ್ಪನವರೇ ನೋಡಿಕೊಳ್ಳುತ್ತಿದ್ದರು. ಲಿಂಗಪ್ಪ ಹರಿಜನ ಸಮಿತಿ, ಗೋಸೇವಾ ಸಂಘ, ಗ್ರಾಮೋದ್ಧಾರ ಸಂಘ, ಖಾದಿ ಪ್ರಚಾರ ಸಂಘ, ಕೂಲಿಕಾರರ ಪರಿಷತ್ತು ಇವಕ್ಕೆಲ್ಲ ಪ್ರಧಾನ ಕಾರ್ಯದರ್ಶಿಯಾಗಿದ್ದ. ಊರೂರು ತಿರಿಗಿ, ಉಪನ್ಯಾಸ ಕೊಟ್ಟು, ಪ್ರಮುಖ ವ್ಯಕ್ತಿಗಳನ್ನು ಹಿಡಿದು, ಹೊಸ ಹೊಸ ಸಂಘಗಳನ್ನು ಎಲ್ಲೆಲ್ಲಿಯೂ ಸ್ಥಾಪಿಸುತ್ತ, ಒಳ್ಳೆಯ ವ್ಯವಸ್ಥಾಪಕನೆಂದು ಕೀರ್ತಿ ಗಳಿಸಿದ್ದ. ಸಂಘದ ಲೆಕ್ಕಪತ್ರಗಳನ್ನೂ ಕೂಡ ಸರಿಯಾಗಿ ನೋಡಿಕೊಳ್ಳಲು ಇವನಿಗೆ ಪುರುಸೊತ್ತಿಲ್ಲವೆಂದು ಗುರುವಿನೊಂದಿಗೆ ಗೋಳಾಡಿದ. ಜಂಟಿ ಕಾರ್ಯದರ್ಶಿ ರಾಜಿನಾಮೆ ಕೊಟ್ಟು ಯಾವುದೋ ಕಾಲವಾಗಿತ್ತು. ಆ ಸ್ಥಳವನ್ನು ಭರ್ತಿ ಮಾಡುವುದಕ್ಕೆ ಸಭೆ ಸೇರಿಸಲಾಗದೆ ಆ ಕೆಲಸವನ್ನೂ–ಅದೇನೋ–ತಾನೇ ನೋಡಿಕೊಳ್ಳುತ್ತಿದ್ದ. ಹೀಗಾಗಿ ಅವನಿಗೆ

ಕೆಲಸಗಾರರೊಂದಿಗೆ ಬೆರೆಯುವುದಾಗಲೀ ಕೆಲಸಮಾಡುವುದಾಗಲೀ ಸಾಧ್ಯವೇ ಇರಲಿಲ್ಲ. ಆದರೂ ಅಧ್ಯಕ್ಷರ ಮಗ ಸೇರಿದನೆಂದು ಅವನಿಗೆ ದಾರಿ ತೋರಿಸುವುದಕ್ಕಾಗಿ ಅವನೊಡನೆ ಸಹಕರಿಸಿದ.

ಗುರುವೂ ಲಿಂಗಪ್ಪನೂ ಒಂದು ದಿನ ಹರಿಜನ ಕೇರಿಯನ್ನು ಗುಡಿಸಿದರು; ಬಚ್ಚಲನ್ನು ಬಳಿದರು. ಮಾರನೆಯ ದಿನ ಲಿಂಗಪ್ಪನಿಗೆ ತುರ್ತು ಸಮಿತಿಯ ಕೆಲಸವಿದ್ದು ಪೆದ್ದೂರಿಗೆ ಹೋದ. ಬಂದ ಮೇಲಂತೂ ಅವನಿಗೆ ಕ್ಷಣ ಕಾಲವೂ ಬಿಡುವಾಗಲಿಲ್ಲ. ಗುರುವಿನ ಕಾರ್ಯಪ್ರೇರಣೆಯನ್ನು ಕಾರ್ಯಕಾರಿ ಸಮಿತಿ ಕಿವಿಯ ಮೇಲೇ ಹಾಕಿಕೊಳ್ಳಲಿಲ್ಲ. "ನೀವೇ ಕಾರ್ಯಕಾರಿ ಸಮಿತಿಯವರೇ ಕಾರ್ಯ ನಡೆಸದಿದ್ದರೆ ಹೇಗೆ?" ಎಂದು ಗುರು ಕೇಳಿದಾಗ, "ನಮಗೆ ಇದೇನು. ಹಾಳು ಬಲವಂತ ಬೇಕಿಲ್ಲ," "ನಮ್ಮ ನಮ್ಮ ಕೆಲಸವೇ ಬೇಕಾದಷ್ಟಿದೆ." "ರಾಜಿನಾಮೆ ಕೊಡೋದಕ್ಕೆ ಸಿದ್ಧವಾಗಿದೀನಿ" ಹೀಗೇ ಉತ್ತರಗಳು ಬಂದುವು. ಗುರು ಒಬ್ಬನೇ ಬೀದಿ ಗುಡಿಸಿದ, ಬಚ್ಚಲು ಬಳಿದ. ಕೇರಿಯವರು—ಹೆಂಗಸರು, ಮಕ್ಕಳು, ಗಂಡಸರು ಎಲ್ಲ—ನಿಂತು ದಿನದಿನವೂ ಆಶ್ಚರ್ಯದಿಂದ ನೋಡಿದರು; ಗುಡಿಸಿದಷ್ಟೂ ಕಸ ಹಾಕಿದರು; ಬಳಿದಷ್ಟೂ ಬಚ್ಚಲನ್ನು ತುಂಬಿದರು. ಇತರ ಜನರೂ ಪರಿಷೆ ಸೇರಿ ನಿಂತು ನೋಡಿದರು; ತಮ್ಮಲ್ಲೇ ಗುಸುಗುಸ ಪಿಸಪಿಸ ಮಾತಾಡಿಕೊಂಡರು. "ಅವನಿಗೇನು ಮನೇಲಿ ಬೇಕಾದಷ್ಟಿದೆ ತಿನ್ನೋದಕ್ಕೆ; ಬೇರೆ ಉದ್ಯೋಗವಿಲ್ಲ; ಏನು ಮಾಡ್ತಾನೆ," "ಇದೆಲ್ಲ ಊರಿನ ಮುಖಂಡನಾಗೋದಕ್ಕೆ ಉಪಾಯ. ಆ ಸಿದ್ದಪ್ಪ, ರಂಗಯ್ಯ, ಭೀಮಸೆಟ್ಟಿ ಇವರೆಲ್ಲ ಮುನಿಸಿಪಲ್ ಮೆಂಬರಾಗೋವರೆಗೂ ವರ್ಷಕ್ಕೆ ಒಂದೆರಡು ಸಲ ಚುನಾವಣೆ ಮುಂದೆ ಮಾಡುತ್ತಿರಲಿಲ್ಲವೆ? ಹಾಗೇ." "ನಾಳೆ ಬೆಳಗಾದರೆ ದೊಡ್ಡ ಚುನಾವಣೆ ಕಾದಿದೆಯಲ್ಲ, ತಂದೆಗೆ ವಯಸ್ಸಾಯ್ತು, ಮಗ ನಿಲ್ಲುತ್ತಾನೆ ಅಂತ ಕಾಣುತ್ತೆ" ಮೊದಲಾಗಿ ಅಂದುಕೊಂಡದ್ದು ಇವನ ಕಿವಿಗೆ ಹೇಗೆ ಹೇಗೋ ಬಿದ್ದುವು. ವಾರದ ನಂತರ ಲಿಂಗಪ್ಪ "ಸಾಕು ಬಿಡಿ, ಎಷ್ಟು ದಿನ ಮಾಡೋದು. ದಾರಿ ಹಾಕಿಕೊಟ್ಟಾಯ್ತಲ್ಲ. ಅದೇ ನಮ್ಮ—ಕೆಲಸಗಾರರ ಕರ್ತವ್ಯ. ಇನ್ನು ಅವರ ಹಣೇಬರಹ. ಎಲ್ಲಿಯ ವರೆಗೆ ಉಡಿದಾರ ಲಂಗೋಟಿ ಕಟ್ಟೋದಕ್ಕೆ ಆಗುತ್ತೆ.

ಮಾಡಿದಷ್ಟೂ ಮಾಡಿಸಿಕೋತಾರೆ, ಅಷ್ಟೇ. ಅವರಿಗೆ ಜ್ಞಾನ ಸಾಲದು. ಬೇಕಾದರೆ ನನ್ನ ಜತೆ ಬನ್ನಿ. ಹೊರಗಡೆಗೆಲ್ಲ ಹೋಗಿ ಉಪನ್ಯಾಸ ಕೊಡೋಣ, ಸಂಘಗಳನ್ನು ಸ್ಥಾಪಿಸೋಣ. ಹಾಗೆ ಮಾಡಿದರೆ ಕೆಲಸ ತನ್ನ ಪಾಡಿಗೆ ತಾನೇ ಆಗುತ್ತೆ" ಅಂದ. ಗುರುವಿಗೆ ಉಪನ್ಯಾಸಗಳ ಮೇಲೆ ವಿಶ್ವಾಸ, ಗೌರವ, ಆಸಕ್ತಿ, ಯಾವುದೂ ಇರಲಿಲ್ಲ. ಅವನಿಗೆ ಮರುಳೂರಿನಲ್ಲೂ ಹೊರಗೂ ಉಪನ್ಯಾಸಗಳನ್ನು ಕೇಳಿ ತಲೆ ಚಿಟ್ಟು ಹಿಡಿದಿತ್ತು. ಉಪನ್ಯಾಸಕರ ಜೀವನ ವನ್ನೂ ಅಷ್ಟಿಷ್ಟು ಅರಿತುಕೊಂಡಿದ್ದ. ಆದುದರಿಂದ ಲಿಂಗಪ್ಪನೊಡನೆ ಹೊರಡಲಿಲ್ಲ. ಆದರೆ ಕೆಲಸದ ಅನುಭವ ಇಲ್ಲಿಯೂ ಬೇಸರವನ್ನುಂಟು ಮಾಡಿತ್ತು. ಯಾರಿಗೂ ಹೇಳದೆ ಕೇಳದೆ ಕೈಮುಗಿದುಬಿಟ್ಟ. ಗೋಸೇವಾ-ಸಂಘದ ಕೆಲಸವನ್ನು ಒಂದು ದಿನ ಪರಿಶೀಲಿಸಿದ್ದೇ ಸಾಕಾಯಿತು. ಅದು ನಡೆಸುತ್ತಿದ್ದ ಕೆಲಸವೆಂದರೆ 'ಪಿಂಜರಾಪೋಲ್' ಒಂದೇ. ಇದಕ್ಕೂ ಕಾರ್ಯ ದರ್ಶಿ ಲಿಂಗಪ್ಪನೇ. ಕಾರ್ಯಕಾರಿ ಸಮಿತಿಯೂ ಮುಕ್ಕಾಲು ಪಾಲೆಲ್ಲ ಹರಿಜನ ಸಮಿತಿಯದೇ. ಪಿಂಜರಾಪೋಲ್‌ನಲ್ಲಿ ಮುದಿಹಂಕಾದ ಕೊಳೆಯಾದ ನಾಲ್ಕು ದನಗಳಿದ್ದುವು. ಹಾಕಿದಷ್ಟು ಮೇವನ್ನೂ ಹುಟ್ಟಡಗಿಸುತ್ತಿದ್ದುವು. ಈ ಮೇವನ್ನು ಇತರ ದನಗಳು ಮುಟ್ಟದಂತೆ ನೋಡಿಕೊಳ್ಳಲು ಒಬ್ಬ ಮುದಿ ಆಳಿದ್ದ. ಗುರುವಿಗೆ "ಈ ದನ, ಈ ಆಳು, ಎಲ್ಲ ಸತ್ತರೆ ಯಾರಿಗೆ ಏನು ನಷ್ಟ?" ಎನ್ನಿಸಿತು ಲಿಂಗಪ್ಪನೊಡನೆ ತಾನು ಓದಿದ್ದ ಹೊಸ ಹೊಸ ಯೋಜನೆಗಳನ್ನೆಲ್ಲ ಚರ್ಚಿಸಿದ. ಆದರೆ ಲಿಂಗಪ್ಪ "ದುಡ್ಡು ಎಲ್ಲಿಂದ ಬರ ಬೇಕು? ನಿಮ್ಮಪ್ಪ ಕೊಡೋದು—ಅಧ್ಯಕ್ಷರಾಗಿರೋ ವರೆಗೆ—ಈ ದನಗಳ ಹೊಟ್ಟೆಗೇ ಸಾಲೋದಿಲ್ಲ. ಅವರೇ ಕೊಟ್ಟಗೇನೂ ಕಟ್ಟಿಸಿಕೊಟ್ಟರು. ಊರಿ ನಲ್ಲಿ ಇರೋ ಧರ್ಮಾತ್ಮರು ಅವರೊಬ್ಬರೇ—ಬಾಕಿಯೋರು ಮೂರು ಕಾಸು ಕೊಡೋದಿಲ್ಲ—ಅಧ್ಯಕ್ಷರಾದರೆ ಹೇಗೋ ಕಾಣೆ. ಇಂಥಾದ್ದರಲ್ಲಿ ಇಷ್ಟು ಮಾಡುತ್ತಿರೋದೇ ಹೆಚ್ಚು. ಊರಿನ ಹೆಸರನ್ನಾದರೂ ಉಳಿಸಿದೆ." ಅಂದ. ಗುರುವಿನ ಗಮನ ಗ್ರಾಮೋದ್ಧಾರ ಸಂಘಕ್ಕೆ ತಿರಿಗಿತು. ಆದರೆ ಅದಕ್ಕೆ ಲಿಂಗಪ್ಪನೇ ಕಾರ್ಯದರ್ಶಿಯೆಂದು ತಿಳಿದ ಮೇಲೆ ಕಾರ್ಯಕಾರಿ ಸಮಿತಿಯನ್ನೂ ವಿಚಾರಿಸದೆ ವಿಷಯವನ್ನು ಕೈಬಿಟ್ಟ. ಬಾಕಿಯ ಹತ್ತೆಂಟು ಸಮಾಜಸೇವಾ ಸಂಘಗಳನ್ನು ವಿಚಾರಿಸಲೇ ಇಲ್ಲ

ನಾಯಿಕೊಡೆಗಳಂತೆ ಹುಟ್ಟಿದ ಸಂಘಗಳೆಲ್ಲ, ಮೋಟುಮರದಂತಿರುವುದಕ್ಕೆ ಜನರ ಅಜ್ಞಾನವೇ ಕಾರಣವೆಂಬುದು ಗುರುವಿಗೆ ಹೊಳೆಯಿತು. ಈ ಅಜ್ಞಾನವನ್ನು ತೊಡೆಯುವ ಸಾಧನವನ್ನು ಯೋಚಿಸಿ ಪತ್ರಿಕೆಯ ವಿಷಯಕ್ಕೆ ಹೊರಳಿಕೊಂಡ. ಇದರಿಂದ ಕ್ರಾಂತಿಕಾರಕವಾದ ಬದಲಾವಣೆ ಸಾಧ್ಯವಾಗುವಂತೆ ಅವನಿಗೆ ತೋರಿತು. ಲಿಂಗಪ್ಪನೇನೋ ಇದನ್ನು ಕೇಳಿ "ನಮ್ಮಲ್ಲಿ ಓದುಬರಹ ಎಷ್ಟು ಜನಕ್ಕೆ ಬರುತ್ತೆ? ಉಪನ್ಯಾಸವೇ ವಾಸಿ." ಅಂದ. ಆದರೆ ಉತ್ಸಾಹಭರಿತನಾದ ಗುರು "ಓದಿದವರಿಗೆ ಮೊದಲು ತಿಳಿವಳಿಕೆ ಹುಟ್ಟಲಿ, ಅದು ತಾನಾಗಿಯೇ ಇತರರಿಗೂ ಇಳಿಯುತ್ತೆ" ಎಂದ. ಚಂದ್ರಶೇಖರ ಈ ಸಲಹೆಯಿಂದ ಬಹಳ ಉಬ್ಬಿದ. ಇನ್ನೇನು ಪತ್ರಿಕೆ ಹೊರಟಿತು. ತಾನು ಉಪಸಂಪಾದಕನಾದರೂ ಆಗಬಹುದೆಂದು ಹಿಗ್ಗಿದ.

ಮಗನ ಮೂರನೇ ಲಾಗ, ತಂದೆಗೆ, ಮೂರನೆಯವನಾದ ಚಂದ್ರಶೇಖರನಿಂದ ತಿಳಿಯಿತು. ಎರಡು ಬಾರಿ ತಂದೆಯ ಇಷ್ಟವನ್ನು ನಡೆಸದೆ ಬೇರೆ ನಡೆದು, ಸೋತಿದ್ದ ಗುರು ಇದನ್ನು ನೇರವಾಗಿ ಚರ್ಚಿಸುವುದಕ್ಕೆ ಹಿಂಜರಿದು ಹೀಗೆ ಮಾಡಿದ್ದ. ಅಲ್ಲದೆ ಚಂದ್ರನಿಗೆ ಹೆಚ್ಚು ಪ್ರೋತ್ಸಾಹ ಬೇಕಾಗಿರಲಿಲ್ಲ. ಅವನ ಭವಿಷ್ಯ ಉತ್ತಮಗೊಳ್ಳುತ್ತಿದ್ದಿತಲ್ಲದೆ ಸಾಹುಕಾರರೊಡನೆ ಮಗನಿಗಾಗಿ ಸಂಧಾನ ನಡೆಸುವುದೆಂದರೆ ಅದೇನು ಕಡಿಮೆ ಹೆಮ್ಮೆ ಅನುಕೂಲಗಳ ವಿಷಯವೆ?

"ಇದೆಲ್ಲ ನಿನ್ನದೇ ಕಿತಾಪತಿ ಅಂತ ಕಾಣುತ್ತೆ." ಸಾಹುಕಾರರು ಯೋಜನೆಯನ್ನು ಕೇಳಿದೊಡನೆ ಆಕ್ಷೇಪಿಸಿದರು.

"ನಂದೇನು ನಡೆಯುತ್ತೆ ಸಾಹುಕಾರರೆ? ತಾವೇ ಕಾಣಲಿಲ್ಲವೆ, ಹಿಂದೆ ನನ್ನ ಸೋಲು? ಇದನ್ನು ಅವನೇ ಯೋಚಿಸಿಕೊಂಡಿದಾನೆ. ತಮಗೆ ತಿಳಿಸಬೇಕು ಅಂತಲೂ ಹೇಳಲಿಲ್ಲ. ನಾನೇ ಕೇಳಿದ್ದನ್ನು ತಿಳಿಸಿದೆ ಅಷ್ಟೆ, ಅದು ನನ್ನ ಕರ್ತವ್ಯ ಅಂತ."

"ಊಹೂಂ! ಈ ಹಾಳು ಪತ್ರಿಕೆಯಲ್ಲಿ ಏನಾಗುತ್ತಂತೆ? ಇಲ್ಲಿ ಈ ಮಂತ್ರಿ ಸಂತೋಷಕೂಟ; ಅಲ್ಲಿ ಆ ಮಂತ್ರಿ ಭೇಟಿ; ಅನಾವರಣದ್ದೋ, ಆರಂಭದ್ದೋ, ಸಮಾರಂಭ; ಅದೇ ಮತ್ತೆ ಮತ್ತೆ. ಊರುದ್ದ ಉಪನ್ಯಾಸ, ಪುಟದಗಲ ಚಿತ್ರ; ಎಲ್ಲೆಲ್ಲೋ, ಯಾರು ಯಾರೋ, ಅದರಿಂದ, ಇದರಿಂದ,

ರೈಲು, ಮೋಟಾರು, ವಿಮಾನ, ಯಾತಯಾತರ ಅವಿವೇಕದಿಂದಲೋ ಸತ್ತದ್ದು, ಕೆಟ್ಟದ್ದು; ಯಾವ ಮೂಲೇಲೋ ನಡೆದ ಸಣ್ಣಪುಟ್ಟ ಉತ್ಸವ ಗಿತ್ಸವದ ವರದಿ; ವಿವಾಹಮಹೋತ್ಸವ; ನೂರೆಂಟು ಮುಷ್ಕರ, ಸಂಧಾನ; ಆಹಾರದ ಅವ್ಯವಸ್ಥೆ; ಯುದ್ಧದ ತಯಾರಿ—ಈ ಕೂಗು ಆ ಕೂಗು ಹುಚ್ಚು ಹುಚ್ಚು, ಎಲ್ಲ, ಅಚ್ಚುಹಾಕಿ ಏನಾಗಬೇಕು? ಅದರಿಂದ ಬರೋದೇನು? ಪತ್ರಿಕೇಲೆಲ್ಲ ಉತ್ತಮ ಭಾಗ ಉಪಯೋಗದ ಭಾಗ ಅಂದರೆ ಜಾಹೀರಾತುಗಳು, ಅಷ್ಟೆ. ಆದರಿಂದ ಅವರಿಗೂ ಪತ್ರಿಕೆಯೋರಿಗೂ ನಾಲ್ಕು ಕಾಸು ಬರುತ್ತೆ."

"ಅದೆಲ್ಲ ಸರಿ ಸಾಹುಕಾರರೆ. ತಾವು ಹೇಳಿದ್ದೆಲ್ಲ ಅಕ್ಷರಶಃ ನಿಜ. ಆದರೆ ಗುರು ಪತ್ರಿಕೆಯ ಮೂಲಕ ದೊಡ್ಡ ಕೆಲಸ ಮಾಡಬೇಕು ಅಂತಿದಾನೆ."

"ಅಂಥಾದ್ದೇನು? ಈ ವರೆಗೆ ಆಗದೇ ಇರೋದು. ಸ್ವಾತಂತ್ರ್ಯ ಬಂದಾಯ್ತಲ್ಲ."

"ಹೊಸ ಸಮಾಜ ಕಟ್ಟೋದು."

"ಸರಿ ಸರಿ ಈ ಸಮಾಜಸೇವೆ, ಇದನ್ನ ಕಟ್ಟೋದು, ಬಿಚ್ಚೋದು, ಎಲ್ಲ ಸಾಕಾಗಿದೆ. ಎಲ್ಲ ಆಕಾಶಪುರಾಣ. ನೀನು ಏನೇನೇ ಮಾಡು ಸಮಾಜ ಹೀಗೇ ಇರುತ್ತೆ. ಈಗ ಏನಾಗಿದೆಯಂತೆ ಅದಕ್ಕೆ ರೋಗ?"

"ಅವನು ಅಂತಾನೆ 'ಕಾನೂನಿಗೆ ಒಳಪಡದೆ ಇರೋ ಕಳ್ಳತನ, ದರೋಡೆ, ಅತ್ಯಾಚಾರ,—ನೀತಿಗೆ ವಿರುದ್ಧವಾದುವು, ಬೇಕಾದಷ್ಟಿವೆ. ಈ ಅಪರಾಧಗಳು ಮರ್ಯಾದೆಯ ಮುಸುಕು ಹಾಕಿಕೊಂಡು ಕೂತಿವೆ. ಅವನ್ನೆಲ್ಲ ಜನದ ಗಮನಕ್ಕೆ ತಂದು ಅವುಗಳ ಮೇಲೆ ಹೊಸ ಬೆಳಕು ಚೆಲ್ಲಬೇಕು' ಅಂತ."

"ಅವೇನು ಅಂಥ ಕಳ್ಳತನ, ದರೋಡೆ, ಏನೇನೋ ನಂಗೆ ಬೇರೆ ಗೊತ್ತಾಗೋದಿಲ್ಲ. ಈ ಅಪರಾಧಗಳ ಪರಿಹಾರನೆಲ್ಲ ಅವನೇ ಗುತ್ತಿಗೆ ತಗೊಂಡಿದಾನಂತೋ?"

"ಏನೋ ಶಕ್ತಿಯಿದ್ದಷ್ಟು ತಿದ್ದೋದು ಅಂತಾನೆ."

"ಎಷ್ಟು ಶಕ್ತಿ ಅಂತ ನಂಗೆ ಗೊತ್ತಿದೆ. ಅಂಥ ಅಪರಾಧಗಳಿದ್ದರೆ ಸರಿಯಾಗಿ ಬರೆದು ಕೊಡಲಿ. ಅಸೆಂಬ್ಲಿಯಲ್ಲಿ ಬಿಲ್ ತಂದು ಕಾನೂನಿಗೆ ಒಳಪಡಿಸೋಣ. ಪತ್ರಿಕೆ ಯಾಕೆ?"

"ಅದು ನಂಗೂ ಹೊಳೀತು, ಹೇಳಿದೆ. 'ಅದು ಸಾಧ್ಯವಿಲ್ಲ, ನೀತಿಯ ವಿಷಯ. ತಿಳಿವಳಿಕೆಯಿಂದ ಅಭ್ಯಾಸಕ್ಕೆ ಬರತಕ್ಕದ್ದು—ದೃಷ್ಟಿಬದಲಾವಣೆ ಆಗಬೇಕು ಅದಕ್ಕೆ—ಅಂತಾನೆ."

"ಏನೇನೋ ಒಗಟಿಗಳು. ವಿಷಯ ಚೆನ್ನಾಗಿ ತಿಳಿದುಕೊಳ್ಳದಿದ್ದರೆ ಹೀಗೇ. ಅಸೆಂಬ್ಲಿಗೆ ಸಾಧ್ಯವಿಲ್ಲ ಅಂದರೆ ಹೇಗೆ? ಅದು ಅಪರಾಧ ಹೇಗಾಗುತ್ತೆ? ಬರೀ ಮಾತು. ನೀತಿದೃಷ್ಟಿ, ತಿಳಿವಳಿಕೆ--ದೊಡ್ಡ ಮಾತುಗಳು. ಆದರೆ ಹುಡುಗ-ಬುದ್ಧಿ—ಹೇಳ್ತೀನಿ ಕೇಳು."

"ಅದೂ ಅಲ್ಲದೆ 'ಈಗ ಸಮಾಜದಲ್ಲಿ ಮೇಲು ಕಳಗಿಗೆ ವ್ಯತ್ಯಾಸ ಬಹಳ ಇದೆ. ಇದನ್ನೂ ಕಡಿಮೆ........"

"ಹುಂ, ಕೆಳಗಿನೋರನ್ನ ಮೇಲಕ್ಕೆ ಯಾರು ಬರಬೇಡ ಅಂದರಂತೆ? ನಾನೇ ಹೇಗಿದ್ದು ಹೇಗಾಗಿದೀನಿ? ನಮ್ಮ ಮನೆತನವೇನೋ ಯಾವಾಗಲೂ ಬಹಳ ದೊಡ್ಡದೇ ಅನ್ನು. ನಮ್ಮ ಅಪ್ಪನ ಕಾಲಕ್ಕೆ ನಮ್ಮ ಸ್ಥಿತಿಗತಿ ಬಹಳ ಕೆಟ್ಟುಹೋಗಿತ್ತು. ಆದರೂ ಮುಂದಕ್ಕೆ ಬರಲಿಲ್ಲವೆ ನಾನು—ಸ್ವಪ್ರಯತ್ನದಿಂದ? Self-made man ಅಂತಲೇ ಹೇಳಬಹುದು. ಹೊಡೆದಾಟ ಬೇಕು, ಅಷ್ಟೆ. ಇದು ಬಿಟ್ಟು, ಕೆಲಸ ಮಾಡದೆ ಕುಳಿತು, ಏನೇನೋ ವಿಚಿತ್ರ ಯೋಚನೆ ಮಾಡೋದು."

"ಎಲ್ಲರಿಗೂ ಸಮವಾದ ಅವಕಾಶ........"

"ಏನು, ಅವಕಾಶ ಅನ್ನೋದು, ಅಂಗಡಿ ಪದಾರ್ಥವೆ—ಕೈಗೆ ತಂದು ಕೊಡೋದಕ್ಕೆ? ಎಲ್ಲರೂ ಅವರವರೇ ಕಲ್ಪಿಸಿಕೋಬೇಕು. ಅಷ್ಟು ಇಷ್ಟು, ಹುಟ್ಟುಸ್ಥಿತಿಗತಿಗಳನ್ನೂ ಅವಲಂಬಿಸಿರುತ್ತೆ ಅನ್ನು—ಅವರವರ ಅದೃಷ್ಟ—ಬುದ್ಧಿ, ದೇಹ ಶಕ್ತಿಗಳ ಹಾಗೆ. ಅದಕ್ಕೆ ಯಾರೇನು ಮಾಡೋದು ಸಾಧ್ಯ?"

"ಸಾಧ್ಯವಾದಷ್ಟೂ ಮಾಡೋ ಸರಕಾರ ಸ್ಥಾಪಿಸಬೇಕು ಅಂತಾನೆ."

"ಓಹೋ ಹೊಸ ಸರಕಾರ ಸ್ಥಾಪಿಸ್ತಾನೋ? ಸರಿ, ಸರಿ ಹ್ಹಹಾ!–ಬರೀ ಕನಸು, ಕನಸು, ಹ್ಹಹ್ಹಹಾ! ಸದ್ಯ, ಒಂದು ನೌಕರಿಗೆ ಸೇರಿಕೊಂಡು, ಸರಿಯಾಗಿ ನಡೆಸಿಕೊಂಡು ಬಾ ಅಂತ ಹೇಳು. ಹೇಗೆ ಸ್ಥಾಪಿಸ್ತಾನಂತೆ?"

"ಹೊಸ ಮುಖಂಡರು ಬರೋ ಹಾಗೆ ಮಾಡಬೇಕು, ಸ್ವಾರ್ಥಪರರನ್ನು ಮನೆಗೆ ಕಳಿಸಿ ಅಂತಾನೆ."

ಸಾಹುಕಾರರು ನಗುವನ್ನು ನಿಲ್ಲಿಸಿ ಕೊಂಚ ಯೋಚಿಸಿದರು.

" ಹೂಂ ! ಅದರಲ್ಲೇನೋ ಅಷ್ಟು ಸತ್ವ ಇದೆ ಅಂತ ಕಾಣುತ್ತೆ..... ಹೌದು, ಮುಖಂಡರು ಹಾಗೇ ಬಹಳ ಸ್ವಾರ್ಥಪರರು. ನಿಜ. ಪಾರ್ಟಿಯಲ್ಲಿ ನಾಲ್ಕಾರು ಜನಕ್ಕೇ ಎಲ್ಲ ಅಧಿಕಾರ, ಪದವಿ, ಗೌರವ, ಎಲ್ಲ ಮೀಸಲು. ಬಾಕಿಯೋರು ಮಂತ್ರಿತ್ವದ ಕಡೆಗೆ ಮುಖ ತಿರುಗಿಸೋ ಹಾಗೂ ಇಲ್ಲ. ಹೋದ ಚುನಾವಣೆ ಆದಮೇಲೆ ನಂಗೆ ಎಂಥ ಮೋಸಮಾಡಿದರು ಅಂತ ? ಇಲ್ಲದೇ ಇದ್ದರೆ ನಾನೂ ಒಬ್ಬ ಮಂತ್ರಿಯಾಗೇ ಇರಬೇಕಾಗಿತ್ತು....ಮಂತ್ರಿ ಪದವೀಲಿ ಬಹಳ ಇದೆ ಅಂತಲ್ಲ. ಅದಕ್ಕೆ ಹತ್ತರಷ್ಟು ನೂರರಷ್ಟು ಸಂಪಾದನೆ ಮಾಡಬಲ್ಲೆ ಅಂತ ಇಟ್ಟುಕೊ. ಆದರೂ ಒಂದು ಗೌರವ ಅಂದರೆ ನಮಗೆ ಬೇಡವೆ ?....ಮುಖಂಡತನವೇನೋ ಬದಲಾಯಿಸಬೇಕು. ಸರಿಯಾದದ್ದೇ. ನಮ್ಮ–ಮುಖಂಡತ್ವ—ಹೊಸರಕ್ತದ್ದು–ಸ್ಥಾಪಿತವಾಗಬೇಕು. ನಿಜ. ಆದರೆ ಒಂದು ಪತ್ರಿಕೆಯಿಂದ ಏನಾಗುತ್ತೆ ಇದಕ್ಕೆ ? "

" ನಮ್ಮ ಮಂತ್ರಿ ಗುಡ್ಡೇಗೌಡ ಮುಂದೆ ಬಂದದ್ದು ಇನ್ನು ಹೇಗೆ ಸಾಹುಕಾರರೆ ? ನನ್ನ ಕೇಳಿ. ' ಪ್ರಜಾರಕ್ಷಕ ' ಪತ್ರಿಕೆ ನಡೆಸಿ, ದಿನವಹಿ ಅವನ ಚಟುವಟಿಕೆ, ಫೋಟೋ, ಪ್ರಶಂಸೆ ಹಾಕಿಸಿಕೊಂಡು ಹಾಕಿಸಿಕೊಂಡು ಜನರನ್ನು ಮರಳುಮಾಡಿ ತಾನೆ ಅವನು ತಟ್ಟನೆ ಮೇಲೆ ಹತ್ತಿದ್ದು, ಪಾರ್ಟೀಲಿ. ಆಮೇಲೆ ಮಂತ್ರಿತ್ವ ಎಷ್ಟರ ವಿಷಯವಾಯ್ತು ? "

" ಈಗ ನೋಡು ಗುಡ್ಡೆ ಗುಡ್ಡೆಯಾಗಿ ಮಾಡಿಕೊಂಡಿದಾನಂತೆ. "

" ಅದೇನೋ ಆದದ್ದಂತೂ ಹೀಗೆ. ಯಾರಿಗೆ ತಾನೇ ಸಾಧ್ಯವಿಲ್ಲ, ಏನು ಸಾಧ್ಯವಿಲ್ಲ ಪತ್ರಿಕೆಯಿಂದ ? ಅದು fourth state ಅನ್ನೋದಿಲ್ಲವೆ?"

" ಹುಂ, ಇವರನ್ನು ತಪ್ಪಿಸಬೇಕು. ಪಾರ್ಟಿ ಒಳಗೆ ಆಗದಿದ್ದರೆ, ಬೇರೆ ಪಾರ್ಟಿಯನ್ನಾದರೂ ಕಟ್ಟಿ ಮೆಜಾರಿಟಿಗೆ ಬಂದು ಅಧಿಕಾರ ಹಿಡೀಬೇಕು. ಒಳ್ಳೆ ವಿಚಾರ. ಮಾಡತಕ್ಕದ್ದೇ. "

" ಅದಕ್ಕೇ ಪತ್ರಿಕೆ ಶುರು ಮಾಡಿದರೆ.... " ಚಂದ್ರು ಮುಗಿಸಲಿಲ್ಲ.

ಸಾಹುಕಾರರು ವ್ಯವಹಾರಪರರು ಚತುರರು. ಯಾವುದನ್ನೂ ಹೇಳದೆ ಯೋಚಿಸಿದರು.

" ನೋಡು, ನಾವೇ ಪತ್ರಿಕೆ ಶುರುಮಾಡಿ ಅವರ ಮೈಮೇಲೆ ಬಿದ್ದರೆ–

ಆದಿಲ್ಲದೆ ಆಗುತ್ತೇ ಕೆಲಸ ?— ಅವರ ಕಣ್ಣು ಕೆಂಪಗಾಗುತ್ತೆ. ಅದರಿಂದ ಕೊಂದರೆಯೇ ಬಂದೀತು. ಮೊದಲು 'ಪ್ರಜಾತಂತ್ರ'ದಲ್ಲೇ ಮೆತ್ತಗೆ ಯಾಕೆ ಮೊದಲು ಮಾಡಿಕೋಬಾರದು ?...."

"ಆದರೆ....''

"ಆದರೆ ಗೀದರೆ ಏನು ಇಲ್ಲವಯ್ಯ. ಬೇಕಾದರೆ 'ಗಾಂಧಿ ಬೀಡಿ' ಜಾಹೀರಾತು ಇನ್ನೂ ಅಷ್ಟು ಕೊಟ್ಟರಾಯ್ತು. ಏನಂತೀಯ ?"

"ಅಂ!" ಅನಿರ್ಧಾರದಿಂದ.

"ಅದು ಚೆನ್ನಾಗಿ ಕಚ್ಚಿಕೊಂಡರೆ ಆಮೇಲೆ ಬಹಿರಂಗಕ್ಕೆ ಬಂದು ನಮ್ಮ ಪತ್ರಿಕೇನೇ ಹೊರಡಿಸೋದು. ಅದೇ ಸರಿ. ಆ ಮಾತೇನು ಬಿಟ್ಟೆ ಹಾಗಾಗಲಿಲ್ಲವಲ್ಲ. ತಿಳಿತೆ ? ಪ್ರಜಾತಂತ್ರದಲ್ಲೇ ಬರೀಲಿ ಮೊದಲು. ನೀನೂ ಬರಿ.''

"ಹೇಳ್ತೀನಿ'' ಚಂದ್ರು ವಿಧಿಯಿಲ್ಲದೆ ಕುಗ್ಗಿದ ಉತ್ಸಾಹ ಧ್ವನಿಗಳಿಂದ ಹೇಳಿದ.

ಸಾಹುಕಾರರ ರಾಜಕಾರಣವೊಂದೇ ಈ ಸಲಹೆಗೆ ಕಾರಣವಾಗಿರಲಿಲ್ಲ. ಮಗನ ಶಕ್ತಿ, ದಾರಿಗಳನ್ನು ಪರೀಕ್ಷಿಸುವುದೂ ಆಗಿತ್ತು.

ಇದರಿಂದ ಗುರುವಿನ ಉತ್ಸಾಹ ಕೊಂಚ ತಗ್ಗಿದರೂ ಅವನು 'ಪ್ರಜಾತಂತ್ರ'ಕ್ಕಾಗಿ ಲೇಖನಗಳನ್ನು ಬರೆಯಲು ಮೊದಲುಮಾಡಿದ. ಎಷ್ಟೋ ಯೋಚಿಸಿ ರಾಜಕೀಯ ಸಾಮಾಜಿಕ ವಿಷಯಗಳ ಮೇಲೆ ಅಂಶಗಳನ್ನು ಗುರುತು ಹಾಕಿಕೊಂಡ. ಹಗಲು ರಾತ್ರಿಯೆನ್ನದೆ, ಹೊರಗೆಲ್ಲೂ ಹೋಗದೆ, ಕಡೆಗೆ ಗಡ್ಡವನ್ನೂ ಬೋಳಿಸದೆ, ಆತುರದಿಂದ ಹೆಣಗಿ, ಒಂದೆರಡು ಲೇಖನಗಳನ್ನು ಬರೆದ. ಆದರೆ ಅವುಗಳನ್ನು ಓದಿದಾಗ ಅವು ಬರಿಯ ಬೈಗಳಗಳ ಸರಪಳಿಯಂತೇ ಇದ್ದುವು. ಹೊಡೆದು ಹೊಡೆದು ತಿದ್ದಿ ತಿದ್ದಿ ಮೃದುಮಾಡಿ, ನಕಲುಮಾಡಿ ಒಂದನ್ನು 'ಪ್ರಜಾತಂತ್ರ'ಕ್ಕೆ ಚಂದ್ರನ ಮೂಲಕವೇ ಕಳುಹಿದ. ಜಾಹೀರಾತನ್ನೂ ಕಳುಹಿಸಿದ್ದಾಗಿತ್ತು. ಆದರೂ ಮೂರು ದಿನಗಳ ಮೇಲೆ ಲೇಖನ ವಾಪಸು ಬಂದಿತು. ಗುರುವಿಗೆ '' ತಮ್ಮ ಲೇಖನಕ್ಕಾಗಿ ಸಂಪಾದಕರು ವಂದಿಸುತ್ತಾರೆ. ಆದರೆ ನಮ್ಮ ಪತ್ರಿಕೆಯ ಧೋರಣೆಗೆ ಇದು ಹೊಂದಿಕೊಳ್ಳದಿರುವುದರಿಂದ ಪ್ರಕಟಿಸಲಾಗುವುದಿಲ್ಲವೆಂದು ವಿಷಾದದಿಂದ

ತಿಳಿಸುತ್ತಾರೆ" ಎಂದು ಬರೆದು, ಗೊಜಬಿಜಿ ರುಜು ಹಾಗಿದ್ದ ಕಾಗದವೂ ಬಂದಿತು. ಚಂದ್ರಶೇಖರನಿಗೆ "ನೀವು ಗುರುಪ್ರಸಾದರ ಲೇಖನವನ್ನು ಶಿಪಾರಸು ಮಾಡಿದ್ದು ತಪ್ಪು. ಪ್ರಜಾಸತ್ತೆಯ ಮೂಲತಂತ್ರವಾದ ವ್ಯಕ್ತಿ ಸ್ವಾತಂತ್ರ್ಯಕ್ಕೆ ವಿರೋಧವಾದ ಇಂಥ ಲೇಖನಗಳನ್ನು ನೋಡದೆ ಮಾಡದೆ ಕಳುಹಿಸಬೇಡಿ. ಕೈತಪ್ಪಿ ಬಿದ್ದು ಅನರ್ಥವಾದೀತು. ಕೆಲಸವೇ ಹೋದೀತು" ಎಂದು ಸಂಪಾದಕರೇ ಬರೆದರು. ಹೀಗಾಗಿ ಗುರುವಿನ ಎರಡನೆಯ ಲೇಖನ ವನ್ನು ಚಂದ್ರಶೇಖರ ತೆಗೆದುಕೊಳ್ಳಲಿಲ್ಲ. "ಇವರೇನೋ ಜಂಭ ಮಾಡ್ತಾರೆ. 'ಪ್ರಜಾಪಕ್ಷ'ಕ್ಕೇ ಕಳಿಸು. ಅಲ್ಲಿ ನಂಗೆ ಯಾರೂ ಗೊತ್ತಿಲ್ಲ" ಎಂದು ತಪ್ಪಿಸಿಕೊಂಡ. ಎರಡನೆಯ ಲೇಖನ 'ಪ್ರಜಾಪಕ್ಷ'ಕ್ಕೆ ಹೋಗಿ ವಾಪಸು ಬಂತು. "ಇದು ನಮ್ಮ ಕಾಲಕ್ಕೆ ತೀರ ಮುಂದಾಗಿದೆ. ವಾಚಕರಿಗೆ ರುಚಿಸುವುದಿಲ್ಲ. ಅಂತೂ ಧನ್ಯವಾದಗಳು" ಮತ್ತೊಂದು ಗೊಜಬಿಜಿಯ ರುಜು. ಗುರು ಹತಾಶನಾಗದೆ ಇನ್ನೂ ನಾಲ್ಕು ಲೇಖನಗಳನ್ನು ಬರೆದು, ನಾಲ್ಕು ಬೇರೆ ಬೇರೆಯ ಪತ್ರಿಕೆಗಳಿಗೆ ಕಳುಹಿಸಿದ. ತನ್ನ ವಿಳಾಸಕ್ಕೇ ಹಾಕಿ ಕೊಂಡಂತೆ ಎಲ್ಲವೂ ಹಿಂದಿರುಗಿದುವು. ಒಬ್ಬ ಸಂಪಾದಕ—ಹೆಸರು ತಿಳಿ ಯದು—"ನಿಮ್ಮ ಲೇಖನ ನಮ್ಮ ಸಮಾಜದ ಬುಡಕ್ಕೇ ಕೊಡಲಿ ಹಾಕು ತ್ತದೆ. ಪ್ರಕಟಿಸಲು ಸಾಧ್ಯವಿಲ್ಲ" ಎಂದು ಸ್ಪಷ್ಟವಾಗಿ ಬರೆದ. ಇನ್ನೊಬ್ಬ "ಇದನ್ನು ಪ್ರಕಟಿಸಿದರೆ ಪತ್ರಿಕೆಯೇ ಉಳಿಯುವುದಿಲ್ಲ. ನಮ್ಮ ವಾಚಕರು ಪೋಷಕರು, ದಾತೃ ಪ್ರದಾತೃಗಳು, ಎಲ್ಲ ಬಂಡವಾಳಗಾರರೇ. ಆದುದ ರಿಂದ ಕ್ಷಮಿಸಬೇಕು" ಎಂದು ಬರೆದ. ಮೂರನೆಯವನು ಏನೂ ಬರೆಯು ದೆಯೇ ಲೇಖನವನ್ನು ಹಿಂದಿರಿಗಿಸಿದ. ನಾಲ್ಕನೆಯ ಕಾಗದವನ್ನು ಗುರು ನೋಡದೆಯೇ ಹರಿದು ಹಾಕಿದ. ಅನಂತರ ಎಲ್ಲ ಲೇಖನಗಳನ್ನೂ ಕೋಣೆಯ ಮಧ್ಯದಲ್ಲಿಟ್ಟು ಸುಟ್ಟುಹಾಕಿ ಮಂಚದ ಮೇಲೆ ಬಿದ್ದುಕೊಂಡ.

ಹೊಗೆ ಮನೆಯನ್ನೆಲ್ಲ ಸುತ್ತಿಕೊಂಡಿತು. ಎಲ್ಲರೂ ಓಡಿ ಬಂದರು. ದಾಸ ನೀರನ್ನು ತಂದು ಹುಯ್ದ. ಆದರೆ ಅಷ್ಟು ಹೊತ್ತಿಗೆ ಎಲ್ಲವೂ ಭಸ್ಮ ವಾಗಿತ್ತು. ಕುಸುಮ "ಇದೇನಣ್ಣ?" ಎಂದು ಕೇಳಿದಳು. ಗುರು ಮಲಗಿಕೊಂಡೇ "ನನ್ನ ಪತ್ರಿಕೋದ್ಯೋಗ" ಎಂದು ವ್ಯಂಗ್ಯವಾಗಿ ನಕ್ಕ. ಅವಳು "ನೀನು ಯಾವಾಗಲೂ ಹೀಗೇ ಬಹಳ ಆವೇಶದ ಸ್ವಭಾವದವ. ಹುಚ್ಚರು ಪ್ರಕಟಿಸ

ದಿದ್ದರೆ ನೀನೂ ಹುಚ್ಚನಾದೆಯೆ ?" ಎಂದು ಕೇಳಿದಳು. "ಎಲ್ಲರಗಿಂತಲೂ ದೊಡ್ಡ ಹುಚ್ಚ" ಎಂದು ಬೇರೆಯ ಕಡೆಗೆ ತಿರಿಗಿಕೊಂಡ. ಸದಾಶಿವ "ಮಹಲಿಗೇ ಬೆಂಕಿ ಬಿತ್ತೇನೋ ಅಂತ ಓಡಿ ಬಂದೆ" ಅಂದ. ಸಣ್ಣಮ್ಮ "ಛೀ! ಬಿಡತು ಅನ್ನು" ಅಂದಳು. ನಂಜಪ್ಪ "ಇಲ್ಲೇ ಕಾಫಿ ಕಾಸುತ್ತಾ ಇದೀರೇನೋ ಅಂತ ಬಂದೆ. ಇಷ್ಟೇಯೆ ?" ಎಂದುಕೊಂಡು ಖಿನ್ನನಾಗಿ ಹೋದ. ಎಲ್ಲರೂ ಹೊರಟುಹೋದರು. ಆ ಸಂಜೆ ಸಾಹುಕಾರರಿಗೆ ಕುಸುಮಳಿಂದ ವರದಿ ಹೋಯಿತು ಅವರು "ಸರಿ, ನಾನು ಅಂದುಕೊಂಡಿದ್ದ ಹಾಗೇ ಆಯ್ತು. ಆ ಪೆದ್ದ ಚಂದ್ರನ ಮಾತು ಕೇಳಿ ಪತ್ರಿಕೆ ಹೊರಡಿಸಿದ್ದರೆ ಏನೇನು ಅನರ್ಥವಾಗುತ್ತಿತ್ತೋ. ಸದ್ಯ ಮುಂದಾಗಿ ಯೋಚಿಸಿ ತಪ್ಪಿಸಿ ಕೊಂಡೆ. ಗುರು ಯಾವುದನ್ನೂ ಮಾಡಲಾರ" ಎಂದು ತಲೆಯಾಡಿಸುತ್ತ ನಿಟ್ಟುಸಿರು ಬಿಟ್ಟು, "ನೋಡೋಣ, ಹೇಳಿದ ಹಾಗೆ ಯಾವಾಗ ಕೇಳ್ತಾನೆ, ಅಂತ. ನಾನೇನೋ ಹೇಳ್ತಾ ಇರೋದನ್ನ ಬಿಡೋದಿಲ್ಲ" ಎಂದು ಪೂರ್ತಿ ಮಾಡಿದರು. ಮತ್ತೆ ಮತ್ತೆ ನೌಕರಿ ವಿಷಯವನ್ನು ಹೇಳಿದರು, ತಮ್ಮ ವ್ಯವ ಹಾರದಲ್ಲಿ ಒತ್ತಾಸೆಯಾದರೂ ಆಗೆಂದರು. ಗುರು ಎಲ್ಲಕ್ಕೂ "ಹುಂ" ಎಂದ. ಒಂದನ್ನೂ ಮಾಡಲಿಲ್ಲ.

ಗುರು ಮತ್ತೆ ತನ್ನದೇ ಪ್ರಯೋಗ ಯಾವುದಕ್ಕೂ ಕೈಹಾಕಲಿಲ್ಲ. 'ಎಲ್ಲದರಲ್ಲೂ ಸೋಲೋದೇ ನನ್ನ ಗತಿ. ನನ್ನಿಂದ ಯಾವುದೂ ನಡೆಯೋ ದಿಲ್ಲ. ನಾನೇ ಸೋಲು' ಎಂದು ನೂರು ಸಾರಿ ಹೇಳಿಕೊಂಡ. ಈಚೆಗೆ ಮಹಲಿ ನಿಂದ ಹೊರಗೆ ಹೋಗುವುದೇ ಅಪೂರ್ವವಾಗುತ್ತ ಬಂದಿತ್ತು. ಹೋದಾಗ "ಪೇಟೆಯ ಕಡೆಯೇ ಹೋಗದೆ ಜನರಿಂದ ತಪ್ಪಿಸಿಕೊಂಡು ದೊಡ್ಡ ತಿಟ್ಟಿನ ಮೇಲೆ ಕಳೆದು, ಹಾಗೇ ಹಿಂದಿರುಗುತ್ತಿದ್ದ. ಮುಖ್ಯವಾಗಿ ಕೋಣೆಯಲ್ಲೇ ಕಾಲ ಕಳೆಯುತ್ತಿತ್ತು. ಯಾವಾಗಲೂ ಮಂಚದ ಮೇಲೆ ಬಿದ್ದುಕೊಂಡಿರು ತ್ತಿದ್ದ. ಹಾಗೇ ನಾವೆಲು, ನಾಟಕ, ಜೀವನಕತೆ, ಆತ್ಮಕತೆ, ಪದ್ಯ, ಪ್ರಬಂಧ, ಕತೆ ಯಾವ ಯಾವ ಪುಸ್ತಕಗಳನ್ನೋ ತೆಗೆಯುತ್ತಿದ್ದ. ಯಾವುದೂ ಪೂರ್ತಿ ಯಾಗಲಿಲ್ಲ. ವಿಜ್ಞಾನ—ಅದರಲ್ಲಾಗಿ ಮನಶ್ಶಾಸ್ತ್ರದ ಓದಿಗೆ ಬೇಕಾದಷ್ಟು ಯತ್ನಿಸಿದ. ಉಹುಂ. ನಡೆಯಲಿಲ್ಲ. ಕೊಂಚ ಕಾಲವಾದ ಮೇಲೆ ವೃತ್ತ ಪತ್ರಿಕೆಗಳ ಓದನ್ನೂ ಬಿಟ್ಟುಬಿಟ್ಟ. ಯಾವುದೊಂದೂ ಸಾಗುತ್ತಿರಲಿಲ್ಲ.

ಎಲ್ಲವೂ ಬೇಸರವಾಗುತ್ತಿದ್ದುವು. ದಾಸನಿಲ್ಲದಿದ್ದರೆ ಕೋಣೆ ಏನೇನಾಗಿ ಹೋಗುತ್ತಿತ್ತೊ. ಮೂರು ಮೂರು ದಿನಗಳು ಗಡ್ಡ ಬೋಳಿಸದೆ ತಲೆ ಬಾಚದೆ— ಒಂದೊಂದು ವೇಳೆ ಬಟ್ಟೆಗಳನ್ನೂ ದಿನವೂ ಬದಲಾಯಿಸದೆ ಇದ್ದು ಬಿಡುತ್ತಿದ್ದ. ಬೆಳಿಗ್ಗೆ ಎಚ್ಚರವಾದ ಮೇಲೂ ಅತ್ತಿತ್ತ ಹೊರಳುತ್ತ ಗಂಟೆಗಳ ಕಾಲ ಕಳೆಯುತ್ತಿದ್ದ. ಸದಾಶಿವ ಪೂರಸೆಯ ಬಾರಿಗೆ "ಕಾಫಿ ತರಲೆ?" ಎಂದು ಕೇಳಿದ ಮೇಲೆ ಬಾಯಿಗೆ ಪೇಸ್ಟಿನ ಬ್ರಷ್ ತುರುಕಿಕೊಂಡು ಬಚ್ಚಲ ಮನೆಗೆ ಹೋಗಿ, ಮುಖ ಸೀಟಿಕೊಂಡು, ಒರಸಿಕೊಳ್ಳದೆಯೇ ಬರುತ್ತಿದ್ದ. ಸ್ನಾನ ಯಾವಾಗಲೋ. ಊಟವನ್ನೂ ಆಗ ಈಗ ಬೇಡವೆಂದು ಬಿಡುತ್ತಿದ್ದ. ಕ್ರಮೇಣ, ತಿಂಗಳುಗಳು ಕಳೆದಂತೆ ಗುಣವಾಗದ ಸೋಮಾರಿತನ ಮೇಲೆ ಹೇರಿಕೊಳ್ಳುತ್ತಿತ್ತು. ಸಾಸುವೆಯಷ್ಟು ಕಷ್ಟ ಬೆಟ್ಟದಂತೆ ಕಾಣುತ್ತಿತ್ತು, ಬೆದರಿಸುತ್ತಿತ್ತು. ಯಾವುದಕ್ಕೂ ಯತ್ನಿಸುವುದನ್ನೇ ಬಿಟ್ಟುಬಿಟ್ಟ. ಬೇಕಾಬಿಟ್ಟಿಯ ಜೀವನ ಸಾಗಿಸಿದ. ತಂದೆ "ಹುಷಾರಾಗಿದೀಯೇನಪ್ಪ?" ಎಂದು ಕೇಳಿದರೆ "ಹುಂ, ಇದೀನಲ್ಲ" ಎನ್ನುತ್ತಿದ್ದ. ಸಣ್ಣಮ್ಮ "ಹೀಗೇಕೆ ಇದೀಯ ಗುರು ?" ಎಂದರೆ "ಹೇಗೆ ಚಿಕ್ಕಮ್ಮ ? ಸರಿಯಾಗಿಲ್ಲವೆ ? ಏನೋ ಬೇಸರ, ಕೆಲಸವಿಲ್ಲ ಅಷ್ಟೆ" ಎಂದು ಸಮಾಧಾನ ಹೇಳುತ್ತಿದ್ದ. ನಂಜಪ್ಪ "ಯಾಕೋ ಗುರು ಈ ತಪಸ್ಸು?' ಎಂದು ಹಾಸ್ಯಮಾಡಿದಾಗ "ನಿನ್ನ ತೃಪ್ತಿ ನಂಗೆ ಬರಲಿ ಅಂತ ಮಾವ" ಎಂದು ಸುಮ್ಮನಾಗಿಸಲು ಯತ್ನಿಸಿದ. ಆದರೆ ನಂಜಪ್ಪನೇ ಸುಮ್ಮನಿರುವವನು ? "ನಿಂಗೆ ಯಾತರ ಅತೃಪ್ತಿ—ಇಷ್ಟೆಲ್ಲ ಇರೋವಾಗ?" ಎಂದು ಕೆದಕಿದ. "ಮನುಷ್ಯನಿಗೇ ಇರೋದರಲ್ಲಿ ಅತೃಪ್ತಿ ಸಹಜ. ಅದೇ ಅವನ್ನ ಏಳಿಸೋದು, ಆಗದ ಕಡೆ ಬೀಳಿಸೋದು." ಎಂದ. ನಂಜಪ್ಪ ಏನೂ ಹೇಳದೆ 'ಹುಡುಗರಿಗೆ ವಯಸ್ಸು ಬಂದಮೇಲೆ ಮದುವೆ ಮಾಡಿಬಿಡಬೇಕು. ಇಲ್ಲದಿದ್ದರೆ ಬುದ್ಧಿಯೇ ಹತೋಟೀಲಿ ಇಲ್ಲದೆ ಕೆಡುತ್ತೆ. ಕುಸುಮಾನೂ ಹಾಗೇ ಆಗಿದಾಳೆ" ಅಂದುಕೊಂಡ. ಸದಾಶಿವ "ಮಗು, ಸ್ವಲ್ಪ ಸಂತೋಷವಾಗಿರಬಾರದೆ?" ಎಂದು ಕೇಳಿದಾಗ "ಸದಶಿವ, ನಾನೂ ನಿನ್ನ ಹಾಗೇ ಇದ್ದರೆ ಹಾಗಿರೋದಕ್ಕೆ ಆಗುತ್ತಿತ್ತು" ಎಂದು ಉತ್ತರ ಕೊಟ್ಟ. "ಅಯ್ಯೊ, ಹಾಗೆನ್ನಬೇಡ ಮಗು, ನಾನೆಲ್ಲಿ ನೀನೆಲ್ಲಿ?" ಅಂದ ಸದಾಶಿವ. "ಆ ತರಹದಲ್ಲಿ ಏನೂ ವ್ಯತ್ಯಾಸವಿಲ್ಲ. ಒಂದೇ ಮಣ್ಣಿನ ಕಣಗಳೇ. ಹಾಗೇ

ತಿಳಿದು ನಡೆದುಕೊಳ್ಳದೆ ಇರೋದೇ, ಈ ಬಾಳು ಬಗೆಗೆಟ್ಟಿರೋದಕ್ಕೆ ಕಾರಣ" ಎಂದು ಹೇಳಿ "ನಿನ್ನ ಹಾಗೇ ಅಂದರೆ ಬಾಳಿಗೆ ಹೇಗೊ ಹೊಂದಿಕೊಂಡಿರೋದು—ಮುಖವಾಡ ಕಟ್ಟಿದ ಕುದುರೆಯು ಯಾವ ಗಾಡೀನಾದರೂ ಎಳೆಯೋ ಹಾಗೆ. ನಾನು ಇಷ್ಟವಿಲ್ಲದೇ ಇದ್ದರೆ ಎಳೆಯೋದಿಲ್ಲ. ಒದೀತೀನಿ, ಏಟೂ ತಿನ್ನುತ್ತೀನಿ" ಖಿನ್ನನಾಗಿ ನಕ್ಕ. ಸದಾಶಿವನಿಗೆ ಇದು ಒಗಟಿಯಾಗಿಯೇ ಉಳಿಯಿತು. ದಾಸ ಒಬ್ಬನು ಮಾತ್ರ ಯಾವುದೊಂದನ್ನೂ ಹೇಳಿ ಕೇಳುತ್ತಿರಲಿಲ್ಲ. ದಣಿಯ ಮಗನಿಗೆ ಆದಷ್ಟು ಸೇವೆ ಮಾಡುತ್ತಿದ್ದ. ಇವನನ್ನು ನೋಡುತ್ತ ಗುರು 'ಇವನೇನು ಗುಲಾಮನೋ ಋಷಿಯೋ ?' ಅಂದುಕೊಳ್ಳುತ್ತಿದ್ದ. ಕುಸುಮ "ಅಣ್ಣ, ನೀನು ಹಿಂದಿನ ಹಾಗಿಲ್ಲ ಹೀಗೇಕೆ ಹುಚ್ಚು ?" ಅಂದಾಗ "ಹುಚ್ಚಿ, ಒಂದು ದಿನದ ಹಾಗೇ ಇನ್ನೊಂದು ದಿನ ಹೇಗಿರೋದು ಸಾಧ್ಯ ? ಗಾಳಿಯಲ್ಲಿ ತೂರೋ ಎಲೆ ಹಾಗೆ ನಾವು ಎಲ್ಲರೂ ಎತ್ತ ಕಡೆ ಬೀಸಿದರೆ ಅತ್ತ ಚಲಿಸ್ತಾ ಇರೋದು—ಕೊನೆ ಬರೋವರೆಗೆ. ನಂಗೆ, ಅಂದರೆ ಹೊಟ್ಟೇಲಿ ಒಂದಿಟ್ಟುಕ್ಕೊಂಡು ಹೊರಗೊಂದು ತೋರಿಸೋ ಚಾತುರ್ಯವಿಲ್ಲ, ಅಷ್ಟೆ ವ್ಯತ್ಯಾಸ. ಅಂಥೋನೇ ಹುಚ್ಚ" ಎಂದು ಹೇಳಿದ. ಅವಳ ಕಣ್ಣಲ್ಲಿ ಭಯ ಮೂಡಿತು. ತನ್ನ ಕೋಣೆಗೆ ಹೋಗಿ ಹಾಸಿಗೆಯ ಮೇಲೆ ಬಿದ್ದುಕೊಂಡು ಬಿಕ್ಕಿಬಿಕ್ಕಿ ಅತ್ತಳು. ಅವಳೂ ಅಣ್ಣನಂತೆಯೇ ದಿನ ದಿನಕ್ಕೆ ಹೆಚ್ಚು ಹೆಚ್ಚು ಮಂಕಾಗುತ್ತಿದ್ದಳು. ಅದೇ ಚಿಂತೆಯ ಮುದ್ರೆ, ಅದೇ ಅಲಕ್ಷ್ಯ, ಅದೇ ನಿರುತ್ಸಾಹ. ಆದರೆ ಅವಳು ಅವನ್ನು ಅಷ್ಟಾಗಿ ತೋರಿಸಿಕೊಳ್ಳದೆ ಮುಚ್ಚಿಕೊಳ್ಳಲು ಯತ್ನಿಸುತ್ತಿದ್ದಳು. ಇದೂ ಕೂಡ ಇತರರ ಕಣ್ಣಿಗೆ ಬೀಳದೆ ಇರಲಿಲ್ಲ.

ಮಗನ ಸ್ಥಿತಿಯನ್ನು ಕಂಡು ಸಾಹುಕಾರರು ಬೆದರಿದರು. ಬದಲಾಯಿಸಲು ತಮ್ಮ ಶಕ್ತಿಯನ್ನೆಲ್ಲ ಉಪಯೋಗಿಸಿದುದು ವ್ಯರ್ಥವಾಯಿತು. ಹೇಳಿದುದಕ್ಕೆಲ್ಲ "ಆಗಲಿ, ನೋಡೋಣ" ಎಂದಿಷ್ಟೇ ಗುರುವಿನ ಉತ್ತರ. ವಿಷಯ ಅದಕ್ಕಿಂತ ಮುಂದೆ ಒಂದು ಹೆಜ್ಜೆಯನ್ನೂ ಇಡುತ್ತಿರಲಿಲ್ಲ. 'ಇದೊಂದು ಮನೋರೋಗವಿರಬೇಕು' ಎಂದುಕೊಂಡು ಒಂದು ಬಾರಿ "ಡಾಕ್ಟರನ್ನು ಕರೆಸಲೆ ?" ಎಂದು ಕೇಳಿದರು. ಗುರು ಸುಮ್ಮನೆ ನಸುನಕ್ಕ. ಅದೇ ಗೂಢವಾದ, ವಿಚಿತ್ರವಾದ, ಅವನ ವೈಶಿಷ್ಟ್ಯದ ನಗು. ಸಾಹುಕಾರರನ್ನು ನಿಸ್ಸ

ಹಾಯರಾಗಿಸುತ್ತ, ಕೆರಳಿಸುತ್ತ, ಕಡೆಗೆ ವ್ಯಥೆಗೆ ತಿರಿಗಿಸುತ್ತಿದ್ದ ನಗು. ಅಂತೂ ಒಂದು ದಿನ ಡಾಕ್ಟರೂ ಬಂದರು. "ನಂಗೇನೂ ರೋಗವಿಲ್ಲ ಡಾಕ್ಟರೆ. ಔಷಧದಿಂದ ಏನೂ ಪ್ರಯೋಜನವಿಲ್ಲ" ಎಂದ ಗುರು. ಅವರು ಬಿಡದೆ "ಅವರವರ ರೋಗ ಅವರವರಿಗೇ ತಿಳಿಯೋದಿಲ್ಲ. ನಂಗೆ ಬಿಡಿ, ಅದನ್ನ" ಎಂದು ಹೇಳಿ ಪರೀಕ್ಷಿಸಿ ಟಾನಿಕ್ ಬರೆದುಕೊಟ್ಟರು. ಅದು ಮಾತ್ರ ಬೀರುವಿನಲ್ಲೇ ಉಳಿಯಿತು. ಒಂದು ದಿನ ನಂಜಪ್ಪ, ಸಾಹುಕಾರರಿಗೆ ಮದುವೆಯ ಯೋಜನೆಯನ್ನು ಹೇಳಿ "ಇದು ವಯಸ್ಸಿನ ಖಾಯಿಲೆ, ಅದರಿಂದ ಖಂಡಿತ ಗುಣವಾಗುತ್ತೆ" ಎಂದು "ಎರಡು ಮದುವೆಗಳೂ ಆಗೋದು ಒಳ್ಳೇದು. ಕಾಲ ಬಂದಿದೆ" ಎಂದು ಒತ್ತಾಯಪಡಿಸಿದ. ಎರಡು ಮದುವೆಗಳ ಸುಗ್ಗಿಯನ್ನು ನೆನೆದು ಹಿಗ್ಗಿದ. ಸಣ್ಣಮ್ಮನೂ, ಸದಾಶಿವನೂ ಸಲಹೆಗೆ ಬೆಂಬಲ ಕೊಟ್ಟರು. ಸಾಹುಕಾರರು "ಇದ್ದರೂ ಇರಬಹುದು. ಅವನೊಡನೆ ಸೂಕ್ಷ್ಮವಾಗಿ ಪ್ರಸ್ತಾಪ ಮಾಡಿ ನೋಡು" ಅಂದರು. ನಂಜಪ್ಪ "ನಿಮ್ಮಪ್ಪ ಹೆಣ್ಣು ನೋಡ್ತಾ ಇದಾರಪ್ಪ' ಎಂದು ಮೊದಲು ಮಾಡಿದಾಗ, ಗುರು "ಇದು ಹೊಸ ಔಷಧವೊ? ನಿನ್ನ ತಯಾರಿಕೆ ಇರಬೇಕು ಯಾವ ಹೆಣ್ಣು ಇಲ್ಲಿಗೆ ಬಂದು ಏನು ಸುಖ ಉಣ್ಣಬೇಕು? ಹೆಚ್ಚು ಹುಚ್ಚರಿಗೆ ಇಲ್ಲಿ ಸ್ಥಳ ಇದೆಯೆ ಇನ್ನೂ? ಹ್ಹ! ಹಾ!" ಎಂದು ನಕ್ಕ. ಅವನ ಮಾತು ಅವನಿಗೇ ಅನ್ವಯಿಸುವುದೆಂದುಕೊಂಡು ನಂಜಪ್ಪ "ಹೆಣ್ಣು ಕೊಟ್ಟ ಹೊರತು ಹುಚ್ಚು ತಪ್ಪದು ಅಂತ ಕೇಳಿಲ್ಲವೆ?" ಎಂದು ಹಾಸ್ಯಮಾಡಿದ. "ಇನ್ನೊಂದು ಭಾಗ? ಹುಚ್ಚು ಬಿಟ್ಟ ಹೊರತು ಹೆಣ್ಣು ಕೊಡೋದಿಲ್ಲ ಅನ್ನೋದು? ಅದು ಸರಿಯಲ್ಲವೇನೋ. ಹುಚ್ಚಾಗಲೀ, ಪೆಚ್ಚಾಗಲೀ, ಆಸ್ತಿಪಾಸ್ತಿ ಮುಚ್ಚಿಕೊಂಡಿದ್ದರೆ ಸಾಕು, ಕೊಟ್ಟು ಬಿಡ್ತಾರೆ ಅಲ್ಲವೆ? ಹ್ಹ! ಹಾ! ಬುದ್ಧಿವಂತರು! ವಿವೇಕಸ್ಥರು!" ಎಂದು ಗುರು ಇನ್ನೂ ಗಟ್ಟಿಯಾಗಿ ನಕ್ಕ. "ನಿಂಗೇನಾಗಿದೆ ಸರಿಯಾಗಿದಿಯಲ್ಲ" ಎಂದು ನಂಜಪ್ಪ ತಿದ್ದಲು ಹೊರಟಾಗ, "ಏನು ನಾನು ಸರಯಾಗಿದೀನೆ? ನಿಜವಾಗಿ! ಹಾಗಾದರೆ ನೀನೇ ಹುಚ್ಚ ಮಾವ. ನೀನೇ ಹುಚ್ಚ!" ಎಂದು ಮಾವನ ಕಡೆಗೆ ಬೆರಳು ತೋರಿಸುತ್ತ ಬೇಕಾದಷ್ಟು ನಕ್ಕ. ನಂಜಪ್ಪ ಗಾಬರಿಯಾಗಿ ಪೆಚ್ಚಾಗಿ ನೋಡಿದ. ಮಾತನ್ನು ಮುಂದುವರಿಸಲಿಲ್ಲ. ಹೊರಟು ಹೋದ. ಅವನ ಹಿಂದೆ ನಗು ಮತ್ತೂ ಕೇಳಿಸಿತು.

ನಂಜಪ್ಪ ಭಾವನೊಡನೆ “ ಈಗ ಹೇಗೇ ಹೇಗೋ ಹುಡುಗಾಟ ಆಡ್ತಾನೆ. ಅಷ್ಟೆ. ಆಮೇಲೆ ಒಪ್ಪಿಕೋತಾನೆ ” ಎಂದು ತೀರ್ಮಾನ ಹೇಳಿದ. ಹೆಣ್ಣಿನ ಬೇಟೆ ಮೊದಲಾಯಿತು. ಹಾಗೇ ಕುಸುಮಳಿಗೆ ಗಂಡು ನೋಡುವುದೂ ನಡೆದಿತ್ತು. ಅವಳು “ಮದುವೆ ಬೇಡವೇ ಬೇಡ. ನಾನು ಮಾಡಿಕೊಳ್ಳೋದಿಲ್ಲ ” ಎಂದು ಹಟವನ್ನೇ ತೋರಿಸಿದಳು. ಆದರೆ ಗಂಡನ್ನೇ ಕೇಳದವರು ಹೆಣ್ಣನ್ನು ಕೇಳುತ್ತಾರೆಯೆ ? ‘ ಇದೆಲ್ಲ ಮದುವೆ ಮುಂದಿನ ಮೊಂಡತನ; ಯಾರು ಕಂಡಿಲ್ಲ, ಯಾರು ಮಾಡಿಲ್ಲ ’ ಎಂದುಬಿಟ್ಟು ಸಾಹುಕಾರರು, ನಂಜಪ್ಪ ಇಬ್ಬಗೂ ಕೆಲಸವನ್ನು ಮುಂದುವರಿಸಿದರು.

ಇದು ಹೀಗೆ ಮುಂದುವರಿದರೂ ಸಾಹುಕಾರರಿಗೆ ಮಗನ ಮದುವೆಯ ಯೋಜನೆ ಪೂರ್ತಿಯಾಗಿ ಸಮಾಧಾನವನ್ನು ತಂದಿರಲಿಲ್ಲ. ‘ ಮದುವೆಗಾದರೂ ಅವನು ಕೊಂಚ ವಾಸಿಯಾಗಬೇಡವೆ? ಇವೇನು ಗ್ರಹಚಾರವೋ’ ಎಂದುಕೊಂಡು ಕಾಳಪ್ಪಶಾಸ್ತ್ರಿಗಳಿಗೆ ಹೇಳಿ ಕಳುಹಿಸಿದರು. ಅವರು ಜಾತಕ ಪಂಚಾಂಗಗಳನ್ನು ತಿರುವಿ ಹಾಕಿ “ ಈಗ ಏಳರಾಟ. ಶನಿಕಾಟ. ವಕ್ರಶನಿ, ತುಂಬ ಕ್ರೂರವಾಗಿದಾನೆ. ಒಂದು ಕೊಳದಪ್ಪಲೆ ಕೈಯೆಣ್ಣೆ ಒಂದು ಮರ ಎಳ್ಳು ದಾನ ಮಾಡಬೇಕು. ಜತೆಗೆ ಸಾವಿರ ರೂಪಾಯಿ ದಕ್ಷಿಣೆ ಇಡಬೇಕು” ಎಂದರು. ಸಾಹುಕಾರರು “ ಅಷ್ಟೊಂದೇ ? ” ಎಂದು ಬೆಚ್ಚಿದರು. ಶಾಸ್ತ್ರಿಗಳು “ತಮ್ಮ ಮಗನ ಮೇಲಿರೋ ಗಂಡಾಂತರ ಇನ್ನೊಬ್ಬರು ತಮ್ಮ ಮೇಲೆ ತೆಗೆದುಕೋಬೇಕಲ್ಲ, ಇದೇನು ಹೆಚ್ಚಲ್ಲ” ಅಂದರು. ಈ ದಾನವಾಯಿತು. ಅದು ಫಲಿಸದೆ ಹೋದ ಮೇಲೆ ಶಾಸ್ತ್ರಿಗಳು ಕೂಷ್ಮಾಂಡ ದಾನ ಮಾಡಿಸಿದರು. ದೊಡ್ಡ ಬೂದುಕುಂಬಳ ಕಾಯನ್ನು ತರಿಸಿ ಅದರೊಳಗೆ ತೂತು ಮಾಡಿಸಿ ಮನೆ ದೇವರ ಚಿನ್ನದ ಪ್ರತಿಮೆಯನ್ನಿಟ್ಟು ಕೊಟ್ಟದ್ದಾಯಿತು. ಇದೂ ವ್ಯರ್ಥವಾದ ಮೇಲೆ ಗೋದಾನವಾಗಿ, ಅನೇಕ ಶಾಂತಿ, ಹೋಮ, ಜಪತಪವೆಲ್ಲ ಮುಗಿದು, ಶಾಸ್ತ್ರಿಗಳು ಕಡೆಯದಾಗಿ, ಸಾಹುಕಾರರಿಗೆ “ತಾವು ವಿಘ್ನೇಶ್ವರನ ಗುಡಿ ಕಟ್ಟಿಸಿ ಪ್ರತಿಷ್ಠಾಪನೆ ಮಾಡಿ, ನಾಲ್ಕು ಎಕರೆ ತರಿ ಜಮೀನನ್ನು ದತ್ತಿ ಬಿಟ್ಟು, ನಿತ್ಯ ಪೂಜೆ, ನಂದಾದೀಪಕ್ಕೆ, ಏರ್ಪಾಡು ಮಾಡಿ. ಖಂಡಿತವಾಗಿ ವಿಘ್ನ ಕಳೆದು ಒಳ್ಳೇದಾಗುತ್ತೆ” ಎಂದು ಸೂಚಿಸಿದರು. ಶಾಸ್ತ್ರಿಗಳ ಸಲಹೆಯ ಮೇಲೆ ಕಾಶಿಯಲ್ಲಿ ಅಮೃತಶಿಲೆ ಗಣಪತಿಯ ವಿಗ್ರಹಕ್ಕೆ

'ಆರ್ಡರ'ನ್ನು ಕೊಟ್ಟಾಯಿತು. ತಮ್ಮ ಜನತೆಗೆ ತಕ್ಕದ್ದಾದ ಮಂದಿರವಾಗ ಬೇಕೆಂದು ಸಾಹುಕಾರರು ಬಯಸಿ ಊರಿನ ಪಿ. ಡಬ್ಲ್ಯು. ಡಿ. ಎಂಜಿನೀಯರ ಸಲಹೆಯಂತೆ ಬೊಂಬಾಯಿನ ಪ್ರಸಿದ್ಧ ' ಆರ್ಕಿಟೆಕ್ಟರಿಗೆ ಬರೆದು ಸಾವಿರ ರೂಪಾಯಿ ಕೊಟ್ಟು ಭವ್ಯವಾದ ಕಟ್ಟಡ ನಕ್ಷೆಯನ್ನು ತರಿಸಿದರು. ಸುಮುಹೂರ್ತದಲ್ಲಿ ಶಾಸ್ತ್ರೀಯವಾದ ಪೂಜೆ ಪುರಸ್ಕಾರಗಳಿಂದ ಗುಡಿಯ ಕೆಲಸ ಮೊದಲಾಯಿತು.

## ೮

* * *

ಮುನಿಸಿಪಲ್ ಚುನಾವಣೆ, ಕುರುಕ್ಷೇತ್ರದ ಬಿರುಸಿನಿಂದ ನಡೆಯಿತು. ಎರಡು ತಿಂಗಳ ಹಿಂದಿನಿಂದಲೂ ಪ್ರಚಾರ ಸಿದ್ಧತೆಗಳು ಸಾಗಿದ್ದುವು. ಭೋಗಪ್ಪನ ಒತ್ತಾಸೆಗೆ ಸಾಹುಕಾರರೇ ನಿಂತ ಮೇಲೆ ಅವನಿಗೇನು ಕಡಿಮೆ ? ' ಮಂಡಿ ಶಿವಪ್ಪನ್ನ ಗುಂಡಿಗೆ ಹಾಕಿ', 'ನಿಮ್ಮ ಬಂಧು ಯಾರು?—ಭೋಗಪ್ಪ' 'ಭೋಗಪ್ಪನೇ—ಮರೆತೀರಿ! ಶಿವಪ್ಪನೋ—ಕೆಟ್ಟೀರಿ!' 'ಭೋಗಪ್ಪನಿಗೆ—ಪುರಸ್ಕಾರ. ಶಿವಪ್ಪನಿಗೆ—ತಿರಸ್ಕಾರ' ಇವೇ ಮೊದಲಾದ ಮಾಮೂಲು ಹಾಳೆಗಳು ಮರ ಬುಡಗಳ ಮೇಲೆ, ರಸ್ತೆಗಿದಿರಾಗಿದ್ದ ಗೋಡೆಗಳ ಮೇಲೆ, ಹೋಟಲು, ಸೆಲೂನುಗಳ ಒಳಗೆ ಹೊರಗೆಲ್ಲ ಕಾಣುತ್ತಿದ್ದುವು. ಹಲವು ಕಡೆ ಪ್ರಸಿದ್ಧ ಸಿನೇಮಾ ತಾರೆಯರ ಚಿತ್ರಗಳು ಪ್ರದರ್ಶಿಸಲ್ಪಟ್ಟು ಕೆಳಗೆ " ಪ್ರಸಿದ್ಧ ತಾರೆ, ಭಾನುಮತಿ ಹೇಳುತ್ತಾಳೆ ಕೇಳಿ. ' ನಂಗೆ ಭೋಗಪ್ಪನೇ ಬೇಕು!' " ಎಂದೂ, ಇನ್ನು ಕೆಲವು ಕಡೆ ದೇವರ ಚಿತ್ರಗಳನ್ನು ಅನುಗ್ರಹ ವಿನ್ಯಾಸದಲ್ಲಿ ತೋರಿಸಿ, ಭೋಗಪ್ಪನ ಚಿತ್ರವನ್ನು ಮುಂದೆ ಕಾಣಿಸಿ "ಶ್ರೀ ಪರಮೇಶ್ವರನೇ ಹೇಳುತ್ತಾನೆ ,ನನ್ನ ಅನುಗ್ರಹ ಭೋಗಪ್ಪನ ಮೇಲೆ' " ಎಂದೂ ತೋರಿಸಲ್ಪಟ್ಟಿತ್ತು. ಕೂಲಿ ಹುಡುಗರು ಬೂದಿ ಬಳಿದುಕೊಂಡು ಕೋಡಂಗಿ ಟೋಪಿ ಹಾಕಿಕೊಂಡು 'ನಮಗೆ ಬೇಕು—ಭೋಗಪ್ಪ!' ಎಂದು ದಪ್ಪ ಅಕ್ಷರಗಳಲ್ಲಿ ಕಾಣಿಸಿದ್ದ ತಡಿಕೆಯ ಬಾವುಟಗಳನ್ನು ಹಿಡಿದು, ಬ್ಯಾಂಡು ಬಾವುಟಗ್ಗಳಿಂದ

ಮೆರವಣಿಗೆ ಹೋಗುತ್ತ, ಒಬ್ಬನು 'ನಮಗೆ ಬೇಕು' ಅಂದಾಗ ಇತರರೆಲ್ಲ 'ಭೋಗಪ್ಪ!' ಎಂದು ಕೂಗುತ್ತಿದ್ದರು. ಟಾಂಗಗಳಲ್ಲಿ ಮೈಕ್ರಫೋನ್ ಲೌಡ್‌ಸ್ಪೀಕರುಗಳ ಮೂಲಕ ಭೋಗಪ್ಪನ ಗುಣವರ್ಣನೆಯನ್ನು ಭೋರ್ಗರೆಯುವ ಏರ್ಪಾಡೂ ನಡೆಯಿತು. ಬಾಡಿಗೆ ಕಾರುಗಳ ಹಿಂದೆ ಮುಂದೆ 'ನಿಮ್ಮ ಸೇವಕ—ಭೋಗಪ್ಪ' ಎಂದು ಕಾಣಿಸುವ ಪ್ರಕಟನೆಯ ತಡಿಕೆಗಳನ್ನು ಕಟ್ಟಿ, ಒಳಗೆ ಗ್ರಾಮಫೋನ್ ಇಡಿಸಿ, ರಸ್ತೆಯ ಚೌಕಗಳಲ್ಲಿ ಸಂಗೀತ ಹಾಡಿಸಿ, ಮಧ್ಯೆ ಮಧ್ಯೆ ಭೋಗಪ್ಪನ ಸ್ತೋತ್ರ ಮಾಡಿಸಿದ್ದಾಯಿತು. ಬಿಟ್ಟಿ ಸಿನೇಮಾ, ನಾಟಕ, ಸಂಗೀತ, ವಿವಿಧ ವಿನೋದಾವಳಿಗಳು, ಸೂಳೆಯರ ನರ್ತನ, ಭೋಗಪ್ಪನ ಅಧ್ಯಕ್ಷತೆಯಲ್ಲಿ ನಡೆದುವು. ಸಾಹುಕಾರರ ಸೂಚನೆಯಂತೆ ಶಾಮಯ್ಯಂಗಾರ ಭೋಗಪ್ಪನ ಮೇಲೆ ಲಾವಣಿ ಬರೆದು ನಡೆದ ಸಭೆಗಳಲ್ಲೆಲ್ಲ ಹಾಡುತ್ತ ಹಾಡಿಸುತ್ತಿದ್ದ. ಚಂದ್ರಶೇಖರ, 'ಪ್ರಜಾತಂತ್ರ'ದಲ್ಲಿ ಮೂರು ಮೂರು ದಿನಕ್ಕೊಮ್ಮೆ ಮುನಿಸಿಪಾಲಿಟಿಯ ಉತ್ತಮ ಸೇವೆಯನ್ನು ಪ್ರಶಂಸಿಸಿ, ಇದು ಸಾಧ್ಯವಾಗುತ್ತಿರುವುದು ಭೋಗಪ್ಪನಿಂದಲೇ ಎಂದು ಬರೆದು, ಅವನ ಚಿತ್ರವನ್ನು ಪ್ರಕಟಿಸುತ್ತಿದ್ದ. ಇವಲ್ಲದೆ ಚುನಾವಣೆಗಾಗಿಯೇ ಸಭೆಗಳು ನಡೆದು ಭೋಗಪ್ಪನೇ ಅಲ್ಲದ ಇತರರೂ ಅವನ ಪರವಾಗಿ ಭಾಷಣಗಳನ್ನು ಮಾಡುತ್ತಿದ್ದರು. ಇಂಥ ಕೆಲವು ಸಭೆಗಳಲ್ಲಿ ಸಾಹುಕಾರರೂ ಭಾಗವಹಿಸುತ್ತಿದ್ದರು. ಚುನಾವಣೆಯ ದಿನ ಹತ್ತಿರವಾದಾಗ, ಭೋಗಪ್ಪ ಮತ್ತು ಅವನ ಸ್ನೇಹಿತರು ಮರುಳೂರಿನ ಮನೆ ಮನೆಗೂ ಹೋಗಿ ಮತದಾರರನ್ನು ಪ್ರೋತ್ಸಾಹ, ಬೇಡಿಕೆ, ಬಲವಂತಗಳಿಂದ ತಮ್ಮ ಕಡೆಗೆ ಒಲಿಸಿಕೊಂಡೋ, ಸೆಳೆದುಕೊಂಡೋ ಬರುವ ಯತ್ನವನ್ನು ಹೂಡಿದರು. ಮುನಸಿಪಲ್ ಶಾಲೆಗಳ ಮೇಷ್ಟರುಗಳೂ 'ಉಪ್ಪು ತಿಂದು ಎರಡು ಬಗೆಯದಂತೆ' ಪದ್ಧತಿಗನುಸಾರವಾಗಿ ತಮ್ಮ ಅಳಿಲಸೇವೆಯನ್ನು ಸಲ್ಲಿಸಬೇಕಾಯಿತು. ಮೇಷ್ಟರು, ಪೋಸ್ಟರುಗಳನ್ನು ಬರೆಯುವುದು, ಚೀಟಿ ಹಂಚುವುದು, ಸಭೆಗಳನ್ನು ಏರ್ಪಡಿಸುವುದು, ಹಾಡು ನಾಟಕಗಳಿಗೆ ಮಕ್ಕಳನ್ನು ತಯಾರಿಸುವುದು, ಮನೆ ಮನೆಗೆ ಭೇಟಿ ಕೊಡುವುದು, ಈ ಮುಖ್ಯೋದ್ಯೋಗಗಳಲ್ಲಿ ನಿರತರಾದರು. ಶಾಲೆಗಳ ಕುರ್ಚಿ, ಬೆಂಚು, ಮೇಜುಗಳು, ಸಭೆಯಿಂದ ಸಭೆಗೆ ಸಾಗುತ್ತಿದ್ದುವು. ಮಕ್ಕಳಿಗೆ ಇನ್ನೇನು—

ರಜದ ಸುಗ್ಗಿ. ಅಧ್ಯಕ್ಷರ ಆಪತ್ಕಾಲದಲ್ಲಿ ಸಹಾಯವಾಗದ ಸ್ಕೂಲುಗಳು ಇದ್ದೇನು ? ಅಂತೂ ಒಟ್ಟು ಮುನಸಿಪಲ್ ಸಂಸ್ಥೆಯೇ ಚುನಾವಣೆಗೆ ಮೀಸಲಾಗಿ, ತಮ್ಮ ಪ್ರಿಯ ಅಧ್ಯಕ್ಷರಿಗೋಸ್ಕರ ತಿಂಗಳುಗಟ್ಟಲೆ ತನ್ನ ಸೇವೆಯನ್ನು ಸಲ್ಲಿಸಿತು. ಹೀಗೆ ಭೋಗಪ್ಪನ ಪ್ರಚಾರ, ಮರುಳೂರಿನಲ್ಲಿ ಭೋಗಪ್ಪ ವಾತಾವರಣವನ್ನೆ ನಿರ್ಮಿಸುವುದಕ್ಕಾಗಿ ನಡೆಯಿತು. ಚುನಾವಣೆಯು ಏನೆಂದು ಅರಿಯದ ನಿರಪರಾಧಿ ಸಣ್ಣ ಮಕ್ಕಳೂ ರಾಮಾಯಣ ಮಹಾಭಾರತದ ಕತೆಗಳಿಗಿಂತ ಭೋಗಪುರಾಣವನ್ನೇ ಮನೆಯಲ್ಲಿ, ಬೀದಿಯಲ್ಲಿ ಆಟಪಾಠಗಳಲ್ಲಿ, ಪ್ರದರ್ಶಿಸಿ ಕುಣಿದಾಡುತ್ತಿದ್ದರು. ಇವನ ಎದುರಾಳಿಯ ಪ್ರಚಾರವೂ ಭೋಗಪ್ಪನ ಹೆಜ್ಜೆಯಲ್ಲೇ, ಅವನ ಪ್ರಚಾರದ ನಕಲೇ ಆಗಿತ್ತು. ಆದರೆ ಅವರಿಗೆ ಭೋಗಪ್ಪನ ಬೆಂಬಲವಿಲ್ಲ. ಆದರೂ ತನ್ನ ಶಕ್ತಿ ಸಾಮಗ್ರಿಯನ್ನೆಲ್ಲ ಉಪಯೋಗಿಸಿದ್ದ.

ಚುನಾವಣೆಯ ದಿನದ ಕೋಲಾಹಲವಂತೂ ಹೇಳತೀರದು. ಟೌನ್ ಹಾಲಿನ ಮುಂಭಾಗದಲ್ಲಿ ಹತ್ತು ಸಂತೆಗಳು ಒಂದೇ ಕಡೆ ಕೂಡಿದಂತಿತ್ತು. ಬಾಳೆ ಮಾವುಗಳ ಸಿಂಗಾರ, ಬ್ಯಾಂಡು ಭೇರಿಗಳ ಮೊಳಗು, ಜನರ ಕಿರಿಚಾಟ, ಓಡಾಟ, ಇದೇನು ನೂರು ಮದುವೆಯ ಸಂಭ್ರಮವೋ, ಯುದ್ಧ ಗದ್ದಲವೋ, ಬಯಲಾಟವೋ, ಹುಚ್ಚರ ಸಂಘದ ವಾರ್ಷಿಕೋತ್ಸವವೋ, ಎನ್ನುವ ಅನೇಕಾನೇಕ ಭ್ರಮೆಗಳನ್ನು ತರುತ್ತಿದ್ದುವು. ಎಷ್ಟೋ ಕಾರುಗಳು ಲೆಕ್ಕವಿಲ್ಲದಷ್ಟು ಬಾರಿ ಊರಿನ ದಾರಿಯಲ್ಲೆಲ್ಲ ತಿರುಗಾಡಿ, ಬೀದಿನಾಯಿಗಳನ್ನು ಹಿಡಿದು ಪೆಟ್ಟಿಗೆ ಗಾಡಿಗೆ ತುಂಬುವಂತೆ, ಮತದಾರರನ್ನು ಸೇರಿಸಿಕೊಂಡು ಟೌನ್‌ಹಾಲ್ ಕೆರೆಯಲ್ಲಿ ಮುಳುಗಿಸುತ್ತಿದ್ದುವು. ಎರಡು ಹೆಜ್ಜೆ ದೂರದಲ್ಲಿದ್ದ ಮತದಾರರೂ ಈ ವಾಹನಸೌಖ್ಯಕ್ಕಾಗಿಯೇ ಕಾದಿರುತ್ತಿದ್ದರು. ಈ ಕಾರುಗಳೂ ಅಪ್ಪಿ ತಪ್ಪಿ, ನಡಗೆಯಿಂದ ಬಂದ ಮಹನೀಯರನ್ನು ಎದುರಾಳಿಗಳ ಎರಡು ಗುಂಪಿನವರೂ ಮುತ್ತಿ ಹಾಕಿ, ತಮ್ಮ ತಮ್ಮೊಳಗೇ ಜಗಳ ಕಾಯುತ್ತ 'ಬಲಿ' ಗಳಿಗೆ ಅತಿ ಮರ್ಯಾದೆ ತೋರಿಸಿ, ತಮ್ಮ ಕಡೆಗೇ ಸೆಳೆದುಕೊಂಡು ಹೋಗಿ, ಕೈಬಿಡುತ್ತಿದ್ದರು. ಕಂಡಂತೆ ಕಾಫಿ, ಕಾಣದಂತೆ ಕಾಸು, ಭರಾಟೆಯಿಂದ ವಿನಿಯೋಗವಾದುವು. ಮತದಾರರು 'ನಮಗೆ ಕರಡಿಯೇನು ಶಿಂಗಲೀಕವೇನು' ಎಂದುಕೊಂಡು, ಕೊಟ್ಟ ಕಡೆಗೆ ಕೈಚಾಚುತ್ತ ಸಿಕ್ಕಿದ ಕಾರಿನಲ್ಲಿ

ಕೂಡುತ್ತ ಸೆಳೆದ ಕಡೆ ಹೋಗುತ್ತ, ಕಣ್ಣು ಮುಚ್ಚಿ ಕ್ರಾಸ್ ಹಾಕಿ ಬರುತ್ತಿದ್ದರು. ಎರಡು ಕಡೆಯಲ್ಲೂ ಉಲ್ಲಾಸ, ಆತಂಕಗಳು ಗಳಿಗೆಗಳಿಗೆಗೂ ಬದಲಾಯಿಸುತ್ತಿದ್ದುವು. ಅಮಾವಾಸ್ಯೆಯ ಹುಚ್ಚು ಬಿಟ್ಟಂತೆ, ಜ್ವರದ ಸನ್ನಿ ಕಳೆದಂತೆ ಚುನಾವಣೆ ಕೊನೆಗಂಡಿತು.

ಸಾಹುಕಾರರು ಕಟ್ಟೆಕಡೆಯಲ್ಲಿ ಮತವನ್ನು ಕೊಡಲು ಬಂದಿದ್ದಾಗ, ಭೋಗಪ್ಪ ತಾನೇ ಓಡಿ ಬಂದು, ಪರಾಕು ಹೇಳುವವನಂತೆ ಮುಂದೆ ನಡೆಯುತ್ತ, ಅವರನ್ನು ಕರೆದುಕೊಂಡು ಹೋದ. ಮತ ಕೊಟ್ಟ ಮೇಲೆಯೂ ಹಲ್ಲು ಕಿರಿಯುತ್ತ ಒಂದು ಹೆಜ್ಜೆ ಹಿಂದಾಗಿ ಅವರೊಡನೆ ಬಂದ. ಸಾಹುಕಾರರು ಕಾರಿಗೆ ಹೋಗದೆ ಅವನೊಬ್ಬನನ್ನೇ ಬೇರೆ ಸ್ವಲ್ಪ ದೂರ ಕರೆದುಕೊಂಡು ಹೋಗಿ " ಚೆನ್ನಾಗಿ ನಡೀತಿದೆ ಅಂತೀಯಲ್ಲ, ಫಲಿತಾಂಶ ಖಂಡಿತವೋ ಹಾಗಾದರೆ ? " ಎಂದು ಕೇಳಿದರು.

" ತಮ್ಮ ಆಧಾರವಿದ್ದ ಮೇಲೆ........"

" ಆ ಮಾತೆಲ್ಲ ಆಮೇಲಿರಲಿ. ಖಂಡಿತವೆ ಹೇಳು? "

" ಹುಂ. "

" ಇಲ್ಲದಿದ್ದರೆ, ಅನುಮಾನವಾಗಿದ್ದರೆ ಹೇಳು—ಸ್ಪಷ್ಟವಾಗಿ. "

" ಏನಿಲ್ಲ. "

" ಹಾಗಾದರೆ ಸರಿ.ಹೇಗಾದರೂ ಮಂಡಿಯೋನು ಪ್ರಪಾತಕ್ಕೆ ಬೀಳಲೇಬೇಕು. ತಿಳಿತೆ ? ಕಾಲ ಮೀರಿ ಹೋದ ಮೇಲೆ ಕಣ್ಣು ಕಣ್ಣು ಬಿಡಬೇಡ. ಯಾವುದನ್ನೂ ಅದೃಷ್ಟಕ್ಕೆ ಬಿಡೋ ಹಾಗಿಲ್ಲ. "

" ಇನ್ನು ಯಾತಕ್ಕೂ ಅಗತ್ಯವಿಲ್ಲ, ಸಾಹುಕಾರರೆ—ತಮ್ಮ ದದಿಂದ " ಭೋಗಪ್ಪ ಭರವಸೆ ಕೊಟ್ಟ. ಸಾಹುಕಾರರು ತೃಪ್ತಿಯಿಂದ ಹಿಂದಿರಿಗಿದರು.

ಎಣಿಕೆ ಮುಗಿದ ಕೂಡಲೇ ವಿಜಯಿ ಭೋಗಪ್ಪ ಸಾಹುಕಾರರಲ್ಲಿಗೆ ಬಂದು ಹಿಗ್ಗುತ್ತ, ಫಲಿತಾಂಶವನ್ನು ತಿಳಿಸಿ, ಧನ್ಯವಾದಗಳನ್ನು ಅರ್ಪಿಸಿದ. ಅವರು ಅಭಿನಂದಿಸಿದಾಗ " ತಮ್ಮ ತೂಕ ನನ್ನ ಕಡೆಗೆ ಎಳೀತು. ನಂದೇನಿದೆ, ಇದರಲ್ಲಿ ?" ಎಂದ. ಸಾಹುಕಾರರು ದರ್ಪದಿಂದ ತಲೆದೂಗುತ್ತ "ಈಗ ಏನು ಹೇಳ್ತಾನೆ ಮಂಡಿಯೋನು ? " ಎಂದು ಹೆಮ್ಮೆಯಿಂದ ಕೇಳಿದರು.

" ಏನಂತಾನೆ. ನರಂ ಆಗಿಹೋಗಿದಾನೆ. ಪ್ರತಿಷ್ಠೆಗೋಸ್ಕರ ಕೈಹಾಳು ಬಾಯಿ ಹಾಳು ಮಾಡಿಕೊಂಡು ಕೂತಿದಾನೆ. ''

" ಅವನ ಪ್ರತಿಷ್ಠೆಗೆ ಹಾಗೇ ಆಗಬೇಕು. ಅವನನ್ನು ಇನ್ನೂ ಬಿಟ್ಟೇನೆ? ಮಟ್ಟ ಹಾಕುತ್ತೀನಿ. ಈಗಾಗಲೇ ಅವನ ಮುಖ್ಯವಾದ ವ್ಯಾಪಾರ, ಬೆಲ್ಲ ದ್ದನ್ನು, ನಾನೇ ತಗೊಂಡಿದೀನಿ. ಅವನಿಗೆ ಈ ವರ್ಷ ನೂರು ಮಣ ಸಿಕ್ಕಿತೋ ಇಲ್ಲವೋ. ಇನ್ನು ನೂಲಿನ ವ್ಯಾಪಾರಾನೂ ತಗೊಂಡುಬಿಟ್ಟರೆ ಅವನ ಗತಿ ಆಯ್ತು—ಗಂಗಮ್ಮನ ಪಾಲು, ಊರು ಬಿಟ್ಟು ಓಡಿ ಹೋಗಬೇಕಾಗುತ್ತೆ. ನನ್ನ ಮುಂದೇ ಅವನ ಶ್ರೇಷ್ಠ ! ಹುಂ ! "

" ಮೂಢ ! ತಾವು ಇಲ್ಲಿ 'ಕಿಂಗ್ ಮೇಕರ್' ಅಂತಾರಲ್ಲ ಹಾಗೆ, ಅರಸುಗಳನ್ನು ನೇಮಿಸೋರು ಅಂತ ತಿಳಿದೂ, ನಂಗೆ ತಮ್ಮ ಬೆಂಬಲ ಇದೆ ಅಂತ ತಿಳಿದೂ, ಸೆಣಸಿದ—ವ್ಯರ್ಥವಾಗಿ. "

" ಜಂಭ ಹೆಂಡದ ಹಾಗೆ. ಕುಡಿದರೆ ಕಣ್ಣೇ ಮಂಜಾಗುತ್ತೆ. ಬುದ್ಧಿ ಕೆಡುತ್ತೆ. ಅವನಿಗೆಲ್ಲಿ ಕಾಣಬೇಕು, ನಿಜಾಂಶ, ಈ ಊರಿನ ಮುನಿಸಿಪಲ್ ಅಧ್ಯಕ್ಷತೆಯ ಹಿಂದಿರೋ ಶಕ್ತಿ ನಾನಾಗಬೇಕು ಅಂತ ಹೆಣಗಿದ. ಸತ್ತ. ಹ್ಹ, ಹಾ ! ''

" ಏನೇನೋ ಮಾಡಿಬಿಟ್ಟ, ಇದಕ್ಕಾಗಿ. ನಮಗಿಂತಲೂ ಹೆಚ್ಚು ಸುರಿ ದಿದಾನೆ, ಮತದಾರರಿಗೆ. ಅವನೇನಾದರೂ ಗೆದ್ದುಬಿಟ್ಟಿದ್ದರೆ, ಅಕಸ್ಮಾತು—ಇಲ್ಲ, ಅದಕ್ಕೂ ಅವಕಾಶವೇ ಇರಲಿಲ್ಲ, ಅನ್ನಿ—ಕಟ್ಟಳೀನೇ ತರುತ್ತಿದ್ದೆ ಅವನ ಮೇಲೆ. ಬಿಡುತ್ತಿದ್ದನೆ ? ಈಗ ಅವನೂ ಪತ್ರಿಕೆ, ಲಾಯರು ಕೋರ್ಟು ಅಂತ ಹೋಗ್ತಾನೋ ಏನೋ ಅನ್ನಿಸುತ್ತೆ. ''

" ಹೋಗಲಿ ಸುಮ್ಮನಿರು. ಪತ್ರಿಕೇಲಿ ಅದೂ ಮುಖ್ಯವಾದ ' ಪ್ರಜಾ ತಂತ್ರ ' ದಲ್ಲಿ ಅವನ ಹೆಸರೂ ಬರೋದಿಲ್ಲ. ಅದೆಲ್ಲ ಭದ್ರ ಮಾಡಿದೀನಿ ನಾನು, ಆಗಲೇ. ಕೋರ್ಟು ಅಂದರೆ ದಿವಾಳಿಯಾದ ಅನ್ನು—ಖಂಡಿತವಾಗಿ."

" ಹುಂ ! ತಾವಿರೋವಾಗ ವಿರೋಧವಾಗಿ ಇನ್ನೇನು ಅಷ್ಟೆ. ಅಷ್ಟಕ್ಕೆ ಹೋಗಲಾರ. ಈ ಗುಡುಗಿನಿಂದಲೇ ಎಚ್ಚತ್ತಿರಬೇಕು. ಇನ್ನು ಸಿಡಿ ಲನ್ನು ಎದುರಿಸಾನೇ ? "

“ ಕಟ್ಟಳೆ ತರಲಿ. ಏನು ಭಯಪಡಬೇಕಾಗಿಲ್ಲ. ನೀನು ಎಂದಿನಂತೇ ನಡೆಸಿಕೊಂಡು ಹೋಗು. ”

“ ಅಷ್ಟಲ್ಲದೆ ತಮ್ಮನ್ನು ಕೇಳದೆ ಮಾಡದೆ ಯಾವುದರಲ್ಲೂ ಮುಂದು ವರಿಯೋದಿಲ್ಲ. ತಮ್ಮಂತಹ ದಾರಿ ತೋರಿಸೋರು, ರಕ್ಷಕರು, ಹಿತಚಿಂತಕರು ಸಿಕ್ಕಬೇಕಲ್ಲ. ನನ್ನ ಸುದೈವ, ತಾವು ಇಷ್ಟೊಂದು ದೊಡ್ಡ ಮನಸ್ಸು ಮಾಡಿ ನನ್ನ ನಡೆಸಿಕೊಂಡು ಬಂದಿರೋದು; ಇನ್ನೂ ಅದಕ್ಕೆ ಸಿದ್ಧರಾಗಿರೋದು. ”

“ ಹುಂ, ಹೂಂ ” ಸಾಹುಕಾರರು ಸಂತೋಷದಿಂದ ತಲೆದೂಗಿದರು.

“ ಆಚೆ ನಾಡಿದ್ದು ಸಂಜೆ ಟೌನ್‌ಹಾಲಿನಲ್ಲಿ ಒಂದು ಸಣ್ಣ ಪಾರ್ಟಿ..........”

“ ಬಹಳ ಸಂತೋಷ. ಅದು ಇಲ್ಲದಿದ್ದರೆ ಆಗೋದಿಲ್ಲವಲ್ಲ.”

“ ಹೌದು ಊರಿಗೆ ಊರೇ ಕಾದಿರುತ್ತೆ. ಮಾಡದೆ ಇದ್ದರೆ ನ್ಯೂನತೆಯಾಗುತ್ತೆ. ಮುಂದಿನ ಚುನಾವಣೇಲಿ ಮುಖ ತೋರಿಸಬೇಕಲ್ಲ. ‘Good wi ’ ಸಂಪಾದಿಸೋದು ತಾನೆ ಮೊದಲ ಕೆಲಸ?”

“ ಹೌದು.”

“ ತಾವು ದಯಮಾಡಿ ಬಂದು ಗೌರವ ಬಡಾಯಿಸಿದರೆ........”

“ ಹೇಳಬೇಕೇನಪ್ಪ ? ಬರ್ತೀನಿ.”

“ ಕೃತಾರ್ಥ.”

ಭೋಗಪ್ಪ ‘ಸಣ್ಣ ಪಾರ್ಟಿ’ಯೆಂದು ನಮ್ರತೆಯಿಂದ ಹೇಳಿಕೊಂಡಿದ್ದರೂ ಅದರ ರೀತಿಯನ್ನು ಕಂಡು ‘ಇವನಿಗೆ ಇಂಥಾ ಅನುಕೂಲ ಎಲ್ಲಿಯದು’ ಎಂದು ಸಾಹುಕಾರರು ಬೆರಗಾದರು. ಇದು ಅವರ ಸಂತೋಷ ಕೂಟವನ್ನು ಮೀರಿಸಿದ್ದುದು ಅವರಿಗೆ ಕೊಂಚ ಅಸೂಯೆಯನ್ನು ತಂದಿತು. ಸೊಟ್ಟ ಬಾಯಿ ಮಾಡಿ “ ಬಂಡ್ವಾಳವಿಲ್ಲದ ಬಡಾಯಿ. ಎಲ್ಲಿಯ ಹಣವೋ ಏನೋ” ಎಂದುಕೊಂಡರು. ಕೂಟದಲ್ಲಿ ಮಾಡಿದ್ದ ಏರ್ಪಾಡುಗಳನ್ನೆಲ್ಲ ಅತಿಥಿಗಳು ಬಹುವಾಗಿ ಮೆಚ್ಚಿಕೊಂಡು, ಕೂಟವನ್ನು ಆನಂದದಿಂದ ಅನುಭವಿಸಿ, ಭೋಗಪ್ಪನನ್ನು ಬಾಯಿತುಂಬ ಹೊಗಳಿ ಹೋದರು. ಮಳಿಗೆ ನಂಜುಂಡಪ್ಪನವರು “ ಭೋಗಪ್ಪ ಕ್ರಿಯಾವಂತ. ಮಾಡಬೇಕಾದ್ದೊಂದನ್ನೂ ಬಿಡೋ

ದಿಲ್ಲ" ಅಂದರು. ಬಟ್ಟೆ ಅಂಗಡಿ ಸೀನಪ್ಪ "ನೋಡಿ, ಅವನ ಕ್ರಿಯಾಶಕ್ತಿ. ಎಂಥ ಪಾರ್ಟಿ ಮಾಡಿಸಿದಾನೆ. ಇಂಥದನ್ನು ನಾವು ಕಾಣೇಕಾಣೆವು. ಬಹಳ ನಿರ್ವಾಹಶಾಲಿ. ಏನು ಸುಟಿ, ಲವಲವಿಕೆ!'' ಅಂದರು. ಲಾಯರು ರಾಮಣ್ಣ "ಇವನನ್ನ ಬಿಟ್ಟರೆ ಇನ್ನು ಯಾರಿದಾರೆ? ಮುನಿಸಿಪಲ್ ಪ್ರೆಸಿಡೆಂಟ್ ಅಂದರೆ, ಭೋಗಪ್ಪನೇ ಸರಿ" ಎಂದು ಪ್ರಶಸ್ತಿಪತ್ರ ಕೊಟ್ಟರು. ಬೀಳ್ಕೊಳ್ಳುವಾಗ ಸಾಹುಕಾರರು "ಏನು ಭೋಗಪ್ಪ, ಭರ್ಜರಿ ಪಾರ್ಟಿ ನಡೆಸಿಬಿಟ್ಟೆ, ಬಿಡು" ಅಂದರು. ಅವನು "ಅದೂ ತಮ್ಮ ಸಲಹೆಯೇ ಸಾಹುಕಾರರೆ. ತಾವು ಅವತ್ತು ಅಂದಿರಲಿಲ್ಲವೆ, ಬೆಂಗಳೂರಿನೋರ ವಿಷಯ. ಅವರನ್ನ ಕರೆಸಿಬಿಟ್ಟೆ. ಎಲ್ಲ ಮಾಡಿಬಿಟ್ಟರು ಫಸ್ಟ್‌ಕ್ಲಾಸಾಗಿ. ತಮಗೆ ಒಪ್ಪಿಗೆ ಆದದ್ದು ಇಷ್ಟೇ ತಾನೆ.'' ಎಂದ. "ಹಾಗಾದರೆ ಇನ್ನೂ ಬೇಕಾದಷ್ಟು ದುಡ್ಡು ಇಟ್ಟಿದೀ ಅನ್ನು?'' ಅವರು ಕೇಳಿದರು. "ಎಲ್ಲಿದೆ ಸಾಹುಕಾರರೆ? ಇಲೆಕ್ಷನ್‌ಗೇನು ಕೊಂಚ ಖರ್ಚಾಯ್ತೆ? ಅಂತೂ ಇದಕ್ಕೆಲ್ಲ ಹೇಗಾದರೂ ಹೊಂದಿಸಬೇಕಲ್ಲ." ಎಂದ ಭೋಗಪ್ಪ. ಕೊಂಚ ಹೊತ್ತು ಬಿಟ್ಟು ಹಲ್ಲು ಕಿರಿದು "ಸಾಹುಕಾರರಲ್ಲಿಗೆ ಇನ್ನೇನು ಬರಬೇಕು'' ಅಂದ. ''ಧಾರಾಳವಾಗಿ ಬಾ" ಅವರು ಕೆದಕಲಿಲ್ಲ. "ಇನ್ನೊಂದು ದೊಡ್ಡ ಉಪಕಾರ ತಮ್ಮಿಂದ...." ಎಂದು ಅರ್ಧಕ್ಕೆ ನಿಲ್ಲಿಸಿದ. ಸಾಹುಕಾರರು ಸುಮ್ಮನಿದ್ದರು. "ಎರಡು ಸಾವಿರ ಸಾಲದ ಬಂದಿದೆ'' ಎಂದು ಸೂಕ್ಷ್ಮವಾಡಿದ.

'' ಹಾಗೋ ಸಮಾಚಾರ?" ಸಾಹುಕಾರರಿಗೆ ಇಷ್ಟು ತೃಪ್ತಿ, ಹಾಗೂ ಹಿಂಸೆ.

'' ಇವರದೆಲ್ಲ ಬಾಕಿ ಕೊಡಬೇಕು."

'' ಹುಂ."

'' ತಮಗೂ ಬೇಗನೇ ಕೊಟ್ಟು ಬಿಡುತ್ತೀನಿ.''

'' ಗೊತ್ತು ಗೊತ್ತು. ಆಗಲಿ........'' ಸಾಹುಕಾರರು ಹೋದರು.

ಕೂಟವೆಲ್ಲ ಮುಗಿದ ಮೇಲೆ ಭೋಗಪ್ಪ '' ಮುಖ್ಯವಾದ ಕೆಲಸ ಮುಗೀತು, ಮುಂದೆ ನೋಡೋಣ. ಸದ್ಯ, ಈಗಷ್ಟು ಆರಾಮವಾಗಿ ನಿದ್ದೆ ಮಾಡಬಹುದು'' ಎಂದು ಮಗಳ ಮದುವೆ ಮಾಡಿದವನಂತೆ ಆಕಳಿಸಿದ.

ನಿಂತಂತೆಯೇ ತೂಕಡಿಕೆಯೂ ಬಂದಿತು. ಟೈಫಾಯಿಡ್ ಬಿಟ್ಟವನು ಹಿಂದಿನ ಸ್ಥಿತಿಗೆ ಬರುವಂತೆ, ನಿದಾನವಾಗಿ ಊರು ದಾರಿಗೆ ಬಂದಿತು.

ಭೋಗಪ್ಪನ ಚುನಾವಣೆಯಿಂದ ಮುನಿಸಿಪಲ್ ಸಿಬ್ಬಂದಿಗೆಲ್ಲ ತೃಪ್ತಿ ಹರ್ಷಗಳಾದುವು. 'ಧರ್ಮರಾಯನಂಥ ಮನುಷ್ಯ. ಏನು ಮಾಡಿದೆ, ಬಿಟ್ಟಿ, ಅಂತ' ಕೇಳೋದೂ ಕೂಡ ಇಲ್ಲ—ಯಾರನ್ನೂ" ಎಂದು ಹೊಗಳಿ "ಆ ಶಿವಪ್ಪ ಬಹಳ ಬಿಗಿ. ತನ್ನ 'ಅಂಗಡಿ ಗುಮಾಸ್ತನ್ನೇ ಗೋಳು ಹುಯ್ದು ಕೋತಾನೆ. ಅಧ್ಯಕ್ಷನಾಗಿದ್ದರೆ ನಮ್ಮನ್ನು ತಿಂದೇ ಹಾಕುತ್ತಿದ್ದ. ದೇವರ ದಯದಿಂದ ನಮ್ಮ ಗ್ರಹಚಾರ ಒಳ್ಳೇದಾಗಿತ್ತು" ಎಂದು ಸಮಾಧಾನ ಪಟ್ಟರು. ಚಂದ್ರಶೇಖರನಿಗೆ ಮತ್ತೊಂದು ವರ್ಷ ಜೀವದಾನವಾಯಿತು. 'ಪ್ರಜಾತಂತ್ರ'ದಲ್ಲಿ ಭೋಗಪ್ಪನ ಚಿತ್ರ, ಅದರ ಕೆಳಗೆ ಅವನ ಜೀವನಚರಿತ್ರೆ, ಅವನು ಈ ವರೆಗೆ ಸಾಧಿಸಿದ್ದು, ಇವೆಲ್ಲ ಎರಡು ಕಾಲಂ ಪೂರ್ತಿಯಷ್ಟು ಕಂಡುವು.

ಅಧ್ಯಕ್ಷತೆಯನ್ನು ವಹಿಸಿಕೊಂಡ ಮೇಲೆ ಭೋಗಪ್ಪ ವಾಡಿಕೆಯಂತೆ ಸಾಹುಕಾರರಲ್ಲಿಗೆ ಹೋಗಿ ಬರುತ್ತಿದ್ದ. ಒಂದು ದಿನ ಹಾಗೇ ಸಾಹುಕಾರರು ಹಗುರವಾಗಿ "ನೀವು, ಮುನಿಸಿಪಲ್ ಅಧ್ಯಕ್ಷರು, ಕ್ರಿಯಾವಂತರಲ್ಲ ಕಣಯ್ಯ, ಕೃತಘ್ನರು" ಎಂದರು. ಭೋಗಪ್ಪನಿಗೆ ತಟ್ಟನೆ ಸಾಲದ ಮೇಲೆ ಮನಸ್ಸು ಹೋಯಿತು. "ಕೊಡ್ತೀನಿ ಸಾಹುಕಾರರೆ ಸದ್ಯದಲ್ಲೇ. ಮತ್ತೆ........" ಎಂದು ಕಾರಣವನ್ನು ಮೊದಲು ಮಾಡಿದ.

"ಅದಲ್ಲ ಕಣಯ್ಯ, ನಾ ಹೇಳಿದ್ದು. ಅದಿರಲಿ. ಎಷ್ಟೋ ಕೊಟ್ಟಿಲ್ಲವೆ ಬಿಟ್ಟಿಲ್ಲವೆ ?"

"ಹೌದು, ಹೌದು. ತಮ್ಮ ಬಲವೇ ನಂದು. ಮತ್ತೇನು ಅಪ್ಪಣೆ ಕೊಡಿಸೋಣವಾಯ್ತು ?"

"ಅಲ್ಲ ಕಣಯ್ಯ, ಅಧ್ಯಕ್ಷರು ಅಂತ ಆಗಿ, ನಿಮ್ಮ ನಿಮ್ಮ ಢೋಲು ಬಾರಿಸುತ್ತೀರೇ ಹೊರತು, ಈ ಮುನಿಸಿಪಾಲಿಟಿಗೆ ಹಿಂದೆಲ್ಲ ರಕ್ತಬಸಿದ ಅಧ್ಯಕ್ಷರ ಕಡೆಗೆ ನಿಮ್ಮ ಗಮನ ಹೋಗುತ್ತೇ ? ಅವರಿಗೆ ಕೃತಜ್ಞತೆ ಏನಾದರೂ ಸರಿಯಾದ ರೀತಿಯಲ್ಲಿ ತೋರಿಸಬೇಕು ಅಂತ ಹೊಳೆದಿದೆಯೆ ನಿಮಗೆ?"

"ಇನ್ನೇನು ಮಾಡಬಹುದು ಸಾಹುಕಾರರೆ ? ಮಾಮೂಲಾಗಿ ಅವರ

ಭಾವಚಿತ್ರಗಳನ್ನೆಲ್ಲ ಅನಾವರಣ ಮಾಡಿ. ಟೌನ್‌ಹಾಲಿನಲ್ಲಿ ತಗಲು ಹಾಕೋ ದಂತೂ ಆಗಿದೆ. ತಮ್ಮ ಕಾಲದಿಂದ ನಡೆದುಕೊಂಡು ಬಂದಿದೆ."

"ಅದು ಸರಿ ಕಣಯ್ಯ, ನನ್ನ ಹಿಂದಿನೋರು ಅಂದರೆ ಒಂದು ವರ್ಷ ಎರಡುವರ್ಷ ಇದ್ದು ಹೋದೋನು–ಸಾವಾಸ್ಯ ಅವರಿಗೆ ಇನ್ನೇನು ಮಾಡೋ ದಕ್ಕೆ ಸಾಧ್ಯ ? ಆಯ್ತು. ಬಾಕಿಯೋರು ಎಂಟು ಒಂಬತ್ತು ವರ್ಷ ಒಂದೇ ಸಮವಾಗಿ ಸೇವೆ ಸಲ್ಲಿಸಿದೋರಿಲ್ಲವೆ? '

"ಯಾಕೆ, ತಾವೇ ಒಂಬತ್ತು ವರ್ಷ ಮುನಿಸಿಪಾಲಿಟಿಯನ್ನ, ತಂದೆ ಮಗುವನ್ನು ರಕ್ಷಿಸೋ ಹಾಗೆ, ನೋಡಿಕೊಂಡು ಬರಲಿಲ್ಲವೆ? ಎಂ ಎಲ್. ಎ. ಆದ ಮೇಲೆ ತಾನೆ ಇತರರಿಗೆ ಈ ಭಾರ ಬಿಟ್ಟಿದ್ದು, ತಾವು. ಆಮೇಲೆ ನುಳಿಗೆ ನಂಜುಂಡಪ್ಪನವರೂ ಎಂ. ಎಲ್. ಸಿ. ಆಗೋವರೆಗೆ ತಮ್ಮ ಸಮಯದಿಂದ ಏಳೆಂಟು ವರ್ಷವೇ........"

"ಸರಿ ಸರಿ, ಅದೆಲ್ಲ ಯಾರಿಗೆ ಗೊತ್ತಿಲ್ಲ ಭೋಗಪ್ಪ? ಇಂಥವರದ್ದೆಲ್ಲ ಅಂಗೈಯಗಲ ಫೋಟೋ ತಗಲುಹಾಕಿಬಿಟ್ಟರೆ ಅವರ ಸಾಲ ತೀರಿ ಹೋಯ್ತು ? '

"ಉಂಟೆ ? ಉಂಟೆ ? ಲೈಫ್ ಸೈಸ್ ಚಿತ್ರಾನಾದರೂ ಬರೆಸಿ...."

"ಅದೂ ಮಾಡಬಹುದು ಅನ್ನಿ. ಆದರೆ ತಾನೆ ಅದೂ ಹುಳು-ಗಿಳು ತಿಂದು ಹೋಗೋದೆ. ಏನಾದರೂ ಶಾಶ್ವತವಾಗಿರೋದು ಮಾಡಬೇಡವೇ ನಯ್ಯ ? "

"ಹೌದು, ಹೌದು. ಮಾಡಬೇಕು. ಅದು ವಾಡಿಕೆಯಾಗಿ ಬಂದು ಬಿಡಬೇಕು."

"ನೀನು ಮಾಡಿದರೆ ಮುಂದಿನೋರೂ ಮಾಡೇ ಮಾಡ್ತಾರೆ. ಅವರವರ ಮೇಲಾದರೂ ಅಷ್ಟು ಪ್ರೀತಿ ಇರೋದಿಲ್ಲವೆ ? "

"ಸರಿ ಮತ್ತೆ, ಏನು ಮಾಡೋಣ ಅಂತೀರಿ ತಾವು? "

"ನಂಗೇನು ಹೊಳೆಯಲಿಲ್ಲ. ಏನೋ ಯೋಚನೆ ಈಗ ತಾನೆ ಬಂತು; ಹಾಗೇ ಹೇಳಿದೆ. "

"ಶ್ರೇಷ್ಠವಾದ ಯೋಚನೆ. ಹಿರಿಯರ ಬಗ್ಗೆ ಶ್ರದ್ಧೆ ಕಿರಿಯರಿಗೆ ಅತ್ಯಾವಶ್ಯಕ. "

" ಏನಾದರೂ ಸರಿಯಾಗಿ ಯೋಚಿಸು, ಮತ್ತೆ. "

" ಇನ್ನೂ ನಮ್ಮ ಸ್ಕೂಲು, ಆಸ್ಪತ್ರೆ ಇವಕ್ಕೆ ಯಾವ ಹೆಸರೂ ಇಲ್ಲ. ರಸ್ತೆಗಳು, ಚೌಕಗಳು........"

" ಇವೆಲ್ಲ ಮಾಡಬೇಕಾದ್ದೋವೇ. ಆದರೆ ಅವೆಲ್ಲ ಸುಲಭೋಪಾಯಗಳು. ತೂಕವಾಗಿರೋದಿಲ್ಲ. ಅಲ್ಲದೆ ಈಗ ಕಟ್ಟಿದ, ರಸ್ತೆ, ಚೌಕಗಳಿಗೆ, ಎಲ್ಲೆಲ್ಲೂ ಮುಖಂಡರ ಹೆಸರೇ ಆಗಿಬಿಟ್ಟು. ಈ ತರಹದಲ್ಲಿ ಜನರಿಗೆ ಆಸಕ್ತಿಯೇ ಹೋಗಿ, ಭ್ರಮೆಯಾಗಿ, ಅದರ ಬೆಲೆಯೇ ಕಾಣದ ಹಾಗಾಗಿಬಿಟ್ಟಿದೆ ನಾಲ್ಕನೇ ಕ್ರಾಸ್ ರೋಡ್ ಅನ್ನೋಹಾಗೇ, ನೆಹರು ರೋಡ್ ಅಂತಾ ಇದ್ದಾರೆ; ಚಿಕ್ಕಪೇಟೆ ಚೌಕ ಅಂದ ಹಾಗೇ, ಗಾಂಧಿ ಚೌಕ ಅನ್ನುತ್ತಾರೆ. ಹೆಸರಿನ ಮೇಲೆ ಗಮನವೇ ಬರೋದಿಲ್ಲ. ಏನಾದರೂ ಎತ್ತಿ ತೋರಿಸೋ ಅಂಥಾದ್ದು, ವ್ಯಕ್ತಿಯ ಮೇಲೇ ಗಮನ ಹೋಗೋ ಅಂಥಾದ್ದು, ಹಾಗೂ ಶಾಶ್ವತವಾಗಿರೋ ಹಾಗೆ, ಕಲ್ಲು, ಕಂಚು ಇಂಥಾದ್ದರಲ್ಲಿ ಏನಾದರೂ........"

" ಪ್ರತಿಮೇನೇ ಮಾಡಿ ನಿಲ್ಲಿಸಿದರೋ ಸಾಹುಕಾರರೆ? "

" ಆಂ?........ಹುಂ, ಅದು ಪರವಾಗಿಲ್ಲ ಕಣಯ್ಯ. ನಿಂದು ಒಳ್ಳೇ ಯೋಚನೆ ಭಲೆ! ಮತ್ತೆ, ಮಾಡಿಸಿ ಎಲ್ಲಿ ನಿಲ್ಲಿಸೋದು ಅಂತ? "

" ರಸ್ತೆ, ಚೌಕ........ "

" ಥೂ, ಧೂಳಾಗಿ ಹಾಳಾಗುತ್ತೆ ಕಣಯ್ಯ. "

" ಇನ್ನೆಲ್ಲಿ ಹಾಗಾದರೆ........ಟೌನ್ ಹಾಲಿನ ಮುಂದುಗಡೆಯೇ.... "

" ಅದು ಸರಿಯಾದ ಸ್ಥಳ, ನೋಡು. ಮುಖ್ಯವಾದ ಸ್ಥಳ. ಅವರು ದುಡಿದ ನೆಲ. "

" ಹಾಗೇ ಆಗಲಿ ಸಾಹುಕಾರರೆ. ಎಲ್ಲ ಪ್ರತಿಮೆಗಳಿಗೂ ಆರ್ಡರು ಕೊಟ್ಟು, ಮಾಡಿಸಿ, ಸಾಲಾಗಿ ನಿಲ್ಲಿಸೇಬಿಡೋಣ. ಈ ವರ್ಷ. " ಭೋಗಪ್ಪ ಉತ್ಸಾಹದ ಆವೇಶದಿಂದ ಹೇಳಿದ.

" ಹ್ಹ! ಹ್ಹ! ಹಾ! " ಸಾಹುಕಾರರು ಗಟ್ಟಿಯಾಗಿ ನಕ್ಕರು.

" ಯಾಕೆ ಸಾಹುಕಾರರೆ? "

" ಹುಚ್ಚಪ್ಪ, ಎಲ್ಲ ಪ್ರತಿಮೆಗಳೇ. ಸದ್ಯಕ್ಕೆ ಒಂದು ಮಾಡಿಸು ಸಾಕು,

ಒಂದೊಂದಕ್ಕೆ ಎಷ್ಟಾಗುತ್ತೆ ಬಲ್ಲೆಯಾ ? ಬೊಂಬಾಯಿ ಕಲ್ಕತ್ತಗಳಲ್ಲಿ ಮಾಡಿಸಿ ತರಿಸಬೇಕಾಗುತ್ತೆ; ಬರಿ ರೈಲ್ವೆ ಚಾರ್ಜು ಸಾವಿರಾರು ಆಗುತ್ತೆ. ಒಂದು ಪ್ರತಿಮೆಗೆ, ಏನಿಲ್ಲ ಅಂದರೂ, ಹತ್ತು ಹದಿನೈದು ಸಾವಿರ! "

" ಹತ್ತು ಹದಿನೈದು ಸಾವಿರ! ಮೇಲೆ ಚಾರ್ಜು. ಇದೂ ಆಗಿ ಪ್ರತಿಷ್ಠಾಪನ ಮಹೋತ್ಸವ, ಪಾರ್ಟಿ, ಏನು ಇಪ್ಪತ್ತರ ಹತ್ತಿರಕ್ಕೇ........ "

" ಇನ್ನೂ ಹೆಚ್ಚೇ. ಅಂಥ ಮಹೋತ್ಸವಕ್ಕೆ ಮಂತ್ರಿಗಳಿಗಿಂತ ಕಡಿಮೆ ಯಾದೋರನ್ನ ಕರೆಸೋದಕ್ಕೆ ಆಗುತ್ತೇ? ಅವರಿಗೆ ಸರಿಯಾಗಿ, ನಡೆದುಕೋ ಬೇಕು ಅಂದರೆ ಸಾಮಾನ್ಯವೇ? ಎಲ್ಲ ಪ್ರತಿಮೆಗಳಂತೆ! ಹ್ಹಹ್ಹಹಾ! ಈ ಬಡ ಮುನಿಸಿಪಾಲಿಟಿ ಪಾಪರ್ ಆಗೋದಲ್ಲದೆ ಸಾಲಮಾಡಬೇಕಾಗುತ್ತೆ. "

" ಮತ್ತೆ ಹೇಗೆ ಮಾಡೋದು ಸಾಹುಕಾರರೆ? "

" ಅದಕ್ಕೇ ನಾನು ಹೇಳಿದ್ದು, ಮೊದಲು ಒಂದರ ಯೋಚನೆ ಮಾಡು. ಟೌನ್ ಹಾಲಿನ ಮುಂದೆ ಮಧ್ಯದಲ್ಲಿ ನಿಲ್ಲಿಸು. ಆಮೇಲೆ ಆದಾಗ ಬೇರೆ ಬೇರೆ........"

" ಒಂದಕ್ಕಾದರೂ ಅಷ್ಟು ಹಣ ಬೇಕಲ್ಲ........"

" ಹುಂ. ನಿಮ್ಮ ಬಡ ಮುನಿಸಿಪಾಲಿಟಿಯಿಂದ ಎಂಟು ಸಾವಿರವೋ ಹತ್ತು ಸಾವಿರವೋ–ಎಷ್ಟು ಕೊಡೋದಕ್ಕೆ ಸಾಧ್ಯವೋ ಅಷ್ಟನ್ನ ಸಮಿತಿಯಿಂದ ಅಸ್ತು ಅನ್ನಿಸಿಕೊ. ಒಪ್ಪುತ್ತಾರೆ ತಾನೆ? "

" ಒಪ್ಪದೆ ಏನು ಸಾಹುಕಾರರೆ. ತಮ್ಮ ಹೆಸರು ಹೇಳಿದರೆ ಇಲ್ಲ ಅನ್ನೋರು ಯಾರಿದಾರೆ? ತಮ್ಮಲ್ಲಿ ಎಲ್ಲರೂ ಅಷ್ಟು ಭಯ, ಭಕ್ತಿ, ಪ್ರೇಮ, ಇಟ್ಟುಕೊಂಡಿದಾರೆ. "

" ಇಂಥ ಕೆಲಸದಲ್ಲಿ ಊರಿನೋರಿಗೇನು ಆಸಕ್ತಿ ಇರೋದಿಲ್ಲವೆ? "

" ಇಲ್ಲದೆ ಏನು. ನಿಜ. ಅವರಿಂದಲೂ ಅಷ್ಟಿಷ್ಟು ವಸೂಲಾಗೇ ಆಗುತ್ತೆ. ಮುನಿಸಿಪಾಲಿಟಿಗೆ ಸೇರಿದೋರಂತೂ ಯಥಾನುಶಕ್ತಿ ಕೊಟ್ಟೇ ಕೊಡ್ತಾರೆ. ನಾನು ನೋಡಿಕೋತೀನಿ ಇವರನ್ನ. ಆ ಮೇಷ್ಟ್ರು-ಗೀಷ್ಟ್ರು ಇದಾರಲ್ಲ, ಎಲ್ಲರನ್ನೂ ವಸೂಲಿ ಕೆಲಸಕ್ಕೆ ಹಚ್ಚಿ ಅಷ್ಟಿಷ್ಟು ಕೊಡಿಸುತ್ತೀನಿ. ನನ್ನ ಕೈಲಾದದ್ದೆಲ್ಲ ಮಾಡೇಮಾಡ್ತೀನಿ ಅನ್ನಿ. " ಈ ಸದವಕಾಶ ಅವನನ್ನು ಇನ್ನೂ ಪ್ರೋತ್ಸಾಹಿಸಿತು.

" ಸರಿ ಮತ್ತೆ. ಬಾಕೀದನ್ನು ನೀನೇ ಕೊಟ್ಟೆ " ನಸುನಕ್ಕರು.

" ಏನು, ನಾನೇ! ಅಯ್ಯೋ ಸಾಹುಕಾರರೇ ನನ್ನ ಪಾಡು ತಮಗೆ ಗೊತ್ತಿಲ್ಲ. ಈ ಸಾರಿ ಹುಚ್ಚಾಪಟ್ಟೆ ಕರ್ಚಾಗಿದೆ. ವರ್ಷದ ಕಡೆಯ ಹೊತ್ತಿಗಾದರೂ ಚೇತರಿಸೊಕೋತೀನೋ ಇಲ್ಲವೋ. ಇದ್ದರೆ ಇದಕ್ಕಿಂತ ಹೆಚ್ಚಿನ ಅವಕಾಶ ಬೇಕೆ, ನಂಗೆ? "

" ಏನಪ್ಪ, ಇಂಥ ದೊಡ್ಡ ಮನುಷ್ಯ, ಮುನಿಸಿಪಲ್ ಪ್ರೆಸಿಡೆಂಟು, ನೀನೇ ಹೀಗೆ ಅಂದರೆ ಹೇಗಯ್ಯ? "

" ನನ್ನ ಒಳಗುಟ್ಟು, ತಮಗೆ ತಿಳೀದೇ ಇರೋದು, ಏನಿದೆ? "

" ಆಗಲಿ. ಆಗಲಿ. ಭಯಪಡಬೇಡ. ನೀನು ಇಷ್ಟು ಶ್ರದ್ಧೆ ಉತ್ಸಾಹದಿಂದ ಈ ಕೆಲಸಕ್ಕೆ ಕೈಹಾಕಿರೋವಾಗ, ನಾನು ಸಹಾಯ ಮಾಡದೇ ಇರುತ್ತೀನೇ? ನಿಮ್ಮ ಮುನಿಸಿಪಾಲಿಟಿಗೆ, ಊರಿಗೆ, ಸಾಧ್ಯವಾಗದೇ ಇರೋದು ನಂಗಿರಲಿ. ಆದರೆ ನಾನು ಅಂತ ಕೊಡೋದು ಚೆನ್ನಾಗಿರೋದಿಲ್ಲ. ತಿಳಿತೆ? ನಿಮ್ಮ ಸಾಹುಕಾರರ ಪ್ರತಿಮೆಯೇ ಆಧರೆ........ "

" ಅದಲ್ಲದೆ ಇನ್ನು ಯಾರದ್ದು ಸಾಹುಕಾರರೆ? ನಮ್ಮ ಮುನಿಸಿಪಾಲಿಟಿ ಬೆಳೆಸಿ, ಹೆಸರು ತಂದೋರು ಅಂದರೆ, ತಾವಲ್ಲದೆ ಇನ್ನು ಯಾರಿದಾರೆ? "

" ಸರಿ. ಅದಕ್ಕೇ ನೀನು ಕೊಡು ಅಂದೆ—ಹೆಸರಿಗೆ. "

" ಹಾಗೇ ? ಅದೇನು, ನಂಗೆ ದೊಡ್ಡ ಗೌರವದ ವಿಷಯ. ಬಹಳ ಸಂತೋಷ. "

ಮಾರನೆಯ ದಿನ ಮುನಿಸಿಪಲ್ ಸಮಿತಿಯಲ್ಲಿ ಭೋಗಪ್ಪ ಅಧ್ಯಕ್ಷಸ್ಥಾನದಿಂದ ಈ ಯೋಜನೆಯ ಬಗ್ಗೆ ತಾನೇ ಠರಾವನ್ನು ತಂದು ಅಸ್ತು ಅನ್ನಿಸಿದ. ಹಣದ ಮೇಲೆ ಕೊಂಚ ಚರ್ಚೆಯಾಗಿ, ಮುನಿಸಿಪಾಲಿಟಿ ಎಂಟು ಸಾವಿರವನ್ನು ಇದಕ್ಕಾಗಿ ಬಡ್ಜೆಟ್‌ನಲ್ಲಿ ಕಾದಿರಿಸಬೇಕೆಂಬ ತೀರ್ಮಾನ ಪಾಸಾಯಿತು. ಭೋಗಪ್ಪ, ಮಾರನೆಯ ದಿನವೇ ಊರಿನ ಗಣ್ಯರನ್ನೆಲ್ಲ ಟೌನ್‌ಹಾಲಿನಲ್ಲಿ ಸಭೆ ಸೇರಿಸಿ, ಈ ಪ್ರಸ್ತಾಪವನ್ನು ಚರ್ಚಿಸಿ 'ಸಾಹುಕಾರ್ ವಿಶ್ವೇಶ್ವರಯ್ಯ ಪುರಜನ ಸನ್ಮಾನ ಸಮಿತಿ' ರಚಿತವಾಗಬೇಕೆಂದೂ, ಇದೇ ಹಣ ಕೂಡಿಸುವುದು, ಉತ್ಸವವನ್ನು ನಡೆಸುವುದು, ಈ ಕಾರ್ಯಕ್ರಮಗಳನ್ನು ವಹಿಸಿಕೊಳ್ಳಬೇಕೆಂದೂ, ಠರಾವನ್ನು ಸಭೆಯ ಮುಂದಿಟ್ಟ. ಇಲ್ಲೂ ಒಮ್ಮತದಿಂದಲೇ ಪಾಸಾಯಿತು.

ಚಂದ್ರಶೇಖರ ಇದು ಮುನಿಸಿಪಾಲಿಟಿಯ ಕಾರ್ಯಾಂಗವಾದುದರಿಂದ ಶ್ರೀ ಭೋಗಪ್ಪನವರೇ ಅಧ್ಯಕ್ಷರಾಗಬೇಕೆಂದು ಸೂಚಿಸಿದ. ಶಾಮಯ್ಯಂಗಾರಿ ಅನುಮೋದಿಸಿದ. ಇದೂ ಸಭೆಗೆ ಒಪ್ಪಿಗೆಯಾಯಿತು ಭೋಗಪ್ಪ, ಚಂದ್ರ ಶೇಖರನ ಲವಲವಿಕೆಯನ್ನು ಪ್ರಶಂಶಿಸಿ, ಅವನೇ ಕಾರ್ಯದರ್ಶಿಯಾಗಬೇಕೆಂದು ಸೂಚಿಸಿದ. ಅದೂ ಸಭೆಗೆ ಒಪ್ಪಿಗೆಯಾಯಿತು. ಚಂದ್ರಶೇಖರ, ಅಧ್ಯಕ್ಷರೆ ಕೋಶಾಧ್ಯಕ್ಷರಾಗಿರುವುದರಿಂದ ಬಹಳ ಮಟ್ಟಿಗೆ ತಡೆಬಡೆಗಳು ಕಡಿಮೆ ಯಾಗುವುವೆಂದು ಭಾಷಣ ಮಾಡಿದ. ಶಾಮಯ್ಯಂಗಾರಿ ಅನುಮೋದಿಸಿದ. ಮಳಿಗೆ ನಂಜುಂಡಪ್ಪನವರು ಇವನ್ನು ವಿರೋಧಿಸಿ ಇದು ಸಂಪ್ರದಾಯ ವಿರುದ್ಧವೆಂದರು. ಚರ್ಚೆಯಾಯಿತು. ಕಡೆಗೆ ಅಧ್ಯಕ್ಷರು ಈ ಚರ್ಚೆ ಕ್ರಮಬದ್ಧವಲ್ಲವೆಂದು ಹೇಳಿದರು. ಬೇರೆ ಹೆಸರನ್ನು ಸೂಚಿಸಿದ್ದುದರಿಂದ ಚಂದ್ರಶೇಖರನ ಸೂಚನೆ ಪಾಸಾಯಿತೆಂದರು. ನಂಜುಂಡಪ್ಪನವರು ಕದೀ ಮನೆ ಲಿಂಗಪ್ಪನ ಹೆಸರನ್ನು ಸೂಚಿಸುವುದರಲ್ಲಿದ್ದರೆಂದು ತಿಳಿಸಿದರು. ಅಧ್ಯ-ಕ್ಷರು "ಮೊದಲೇ ಮಾಡಬೇಕಾಗಿತ್ತು, ಹೊತ್ತು ಮೀರಿತು." ಅಂದು ಮುಗಿಸಿದರು.

ಊರಿನಲ್ಲಿ ಹಣದ ಸಂಗ್ರಹಣಸಂಭ್ರಮ ಭರದಿಂದ ನಡೆಯಿತು. ಜನರು "ಆಗಲೇ ಬಂತಪ್ಪ ಮೊದಲನೇ ಪೀಕಲಾಟ. ತೆರಿಗೆ ಕೋಡೋ ದಲ್ಲದೆ ಅದಕ್ಕೆ ಇಂಥಾ ಬಡ್ಡಿ ಬೇರೆ—ಅಸಲಿಗೇ ಹೆಚ್ಚಾಗಿ" ಅಂದರು. ಮುನಿಸಿಪಲ್ ಆಡಳಿತಕ್ಕೆ ಸೇರಿದೋರು "ಕಷ್ಟಕಾಲದಲ್ಲಿ ಬಡ್ತಿ ಕೊಡಬೇಕು. ಅದು ಬಿಟ್ಟು, ಹೀಗೆ ಶೇಕಡ ಐದು ಸಂಬಳದಲ್ಲಿ ಜುಲ್ಮಾನೇನೇ ಶುರು ಮಾಡಿದರಲ್ಲ. ಏನೋ ಭೋಗಪ್ಪನೋರು ಒಳ್ಳೆಯೋರು ಅಂತ ಇದ್ದೆವು" ಎಂದು ಗೊಣಗಿಕೊಂಡು ಪೀಕಿದರು—'ಮೂಗಿನ ಮೂಲಕ'. ಶೀನಪ್ಪ "ಇಗೊ, ಭೋಗಪ್ಪನ ಚಟುವಟಿಕೆ ಮೊದಲಾಯ್ತು. ಸುಮ್ಮನೆ ಕೂಡೋ ಮನುಷ್ಯನೇ ಅಲ್ಲ. ಒಳ್ಳೆ ನಿರ್ವಾಹಶಾಲಿ. ಹಿಂದಿನ ಅಧ್ಯಕ್ಷರಿಗಿಂತ ದೊಡ್ಡ ಹೆಸರು ಮಾಡುತ್ತಾನೆ. ಅವರಿಗಿಂತಲೂ ಹೆಚ್ಚು ವರ್ಷ ಅಧ್ಯಕ್ಷಪದವಿ ಅಲಂಕರಿಸುತ್ತಾನೆ" ಎಂದು ಹೊಗಳಿದ. ಮುಂಡಿ ಶಿವಪ್ಪ "ಇದೇ ಮುನಿಸಿ ಪಲ್ ಕೆಲಸ—ಇವಂದು. ರಸ್ತೆ, ಬಚ್ಚಲಿಗಿಂತ ಪ್ರತಿಮೆಗಳೇ ಅಗತ್ಯ ಜನ ಜೀವನಕ್ಕೆ! ಕಳ್ಳಕಳ್ಳರ ಸಂತೆ. ಒಬ್ಬರಿಗೊಬ್ಬರು ಒತ್ತಾಸೆ. ಇವರ ಮಧ್ಯ

ದಲ್ಲಿ ಇವನು ಎಷ್ಟು ಹೊಡಕೋತಾನೋ—ಜನದ ಕಣ್ಣಿಗೆ ಮಣ್ಣೆರಚಿ” ಎಂದು ಕಟುವಾಗಿ ಟೀಕಿಸಿ “ ಹುಂ.... ನಾನು ಅಧ್ಯಕ್ಷನಾಗಿದ್ದರೆ! ” ಎಂದು ನಿಟ್ಟುಸಿರು ಬಿಟ್ಟ.

ಪ್ರತಿಮೆಯನ್ನು ಮಾಡಿಸಿ ತರಿಸುವ ಪ್ರಶ್ನೆ ಬಂದಿತು. ಸರಕಾರದ ಮಂತ್ರಿಗಳು, ಅಧಿಕಾರಿಗಳು ಹೊರನಾಡುಗಳಲ್ಲಿ ಪ್ರವಾಸಮಾಡಿ, ದೊಡ್ಡ ದೊಡ್ಡ ಯಂತ್ರೋಪಕರಣಗಳಿಗೆ ಲಕ್ಷಾಂತರ ರೂಪಾಯಿಗಳ ಆರ್ಡರ್ ಕೊಟ್ಟು ಬಂದಿದ್ದುದನ್ನು ಭೋಗಪ್ಪ ಕೇಳಿದ್ದ. ಅದರಿಂದ ದಪ್ಪ ದಪ್ಪ ದಳ್ಳಾಳಿ ಗಿಟ್ಟಿಸಿಕೊಂಡಿದ್ದರೆಂದೂ ಯಾರು ಯಾರೋ ಅಂದಿದ್ದುದೂ ಅವನ ಕಿವಿಗೆ ಬಿದ್ದಿತ್ತು. ಈಗ ತನಗೆ ಒಂದು ಸಮಯ ಸಿಕ್ಕಿದಾಗ ಬಿಡುತ್ತಾನೆಯೇ? ತಾನೂ ಕಲ್ಕತ್ತೆ ಬೊಂಬಾಯಿಗಳಿಗೆ ಮೊದಲನೆಯ ತರಗತಿಯಲ್ಲಿ ಪ್ರಯಾಣ ಬೆಳೆಸಿ, ಅಲ್ಲಿ ಹಲವಾರು ದಿನವಿದ್ದು, ಕಡೆಗೆ ಕಲ್ಕತ್ತೆಯಲ್ಲಿ ಚೌಕಶಿಮಾಡಿ, ಶೇಕಡ ಇಪ್ಪತ್ತು ದಳ್ಳಾಳಿ ಗೊತ್ತುಮಾಡಿಕೊಂಡು, ಒಂಬತ್ತು ಸಾವಿರಕ್ಕೆ ಆರ್ಡರ್‌ಕೊಟ್ಟು ಬಂದ. ಅಲ್ಲಿಯ ಕಲೆಗಾರ ಚಂದ್ರಕಿಶೋರ ಬೋಸರು ಇಲ್ಲಿಗೇ ಬಂದು ಸಾಹುಕಾರರ ಮಾದರಿಯನ್ನು ಜೇಡಿಯಲ್ಲಿ ಮಾಡಿಕೊಂಡು ಹೋಗುವುದಾಗಿ ಬರೆದರು. ಅವರ ‘ ಹೋಗ ಬರ ’ ಕರ್ಚಿಗಾಗಿ ಐನೂರು ರೂಪಾಯಿಯನ್ನು ಕಳುಹಿಸಿದ್ದೂ ಆಯಿತು.

ಚುನಾವಣೆ ಧೂಳು ಸ್ವಲ್ಪ ಇಳಿದಂತಾಗಿ, ಭೋಗಪ್ಪ ಅಧ್ಯಕ್ಷತೆಯನ್ನು ವಹಿಸಿಕೊಂಡನೋ ಇಲ್ಲವೋ, ನಾಲ್ಕೂ ದಿಕ್ಕುಗಳಿಂದಲೂ, ನೂರಾರು ಜನ ರಿಂದ, ನೂರಾರು ತರಹದ ಅರ್ಜಿಗಳು ಬಂದು ಕವಿಯಲಾರಂಭಿಸಿದುವು. ನೌಕರವರ್ಗದವರು ಸಂಬಳದಲ್ಲಿ ಬಡ್ತಿ ಕೇಳಿದರೆ, ಊರಿನ ಮಹನೀಯರು ತಮತಮಗಾಗಿ ಏನೇನೋ ಅನುಕೂಲಗಳನ್ನು ಕೇಳುತ್ತಿದ್ದರು; ತಮ್ಮ ತಮ್ಮವರಿಗೆ ನೌಕರಿ, ಕಂಟ್ರಾಕ್ಟು, ಇವುಗಳಿಗಾಗಿ ಶಿಪಾರಸು ಮಾಡುತ್ತಿದ್ದರು. ಅನೇಕರು ಭೇಟಿಯನ್ನು ಒದಗಿಸಿಕೊಂಡು ಮುಖತಃ ಹೇಳುತ್ತಿದ್ದರು. ಇನ್ನೂ ಹೊಸ ಕೌನ್ಸಿಲರ್‌ಗಳಿಗೇ ತಮ್ಮ ಮನೆಯ ಮುಂದೆ ದೀಪ, ನಲ್ಲಿ, ಅವರ ಬೀದಿಗೆ ಟಾರು, ಅಂಗಡಿ ಮುಂಗಟ್ಟಿಗೆ ಲೈಸೆನ್ಸ್ ಇವು ಯಾವೂ ಆಗಿರಲಿಲ್ಲ; ಆಗಲೇ ಇತರರ ‘ ವರಾತ ’. ಎಲ್ಲರೂ ಭೋಗಪ್ಪನ ಸ್ನೇಹಿತರೇ. ಅವನಿಗೆ ಚುನಾವಣೆಯಲ್ಲಿ ಒಂದಲ್ಲ ಒಂದು ವಿಧದಲ್ಲಿ ಸಹಾಯಮಾಡಿದವರೇ. ಯಾರು

ಬೇಕು ಯಾರು ಬೇಡ ? ಯಾರಿಗೆ ಇಲ್ಲ ಅನ್ನುವುದು ? ಭೋಗಪ್ಪ ಆದಷ್ಟೂ ನೌಕರಿ ಕೊಟ್ಟ. ಮುನಸಿಪಲ್ ಬಡ್ಜೆಟ್ ಮುಕ್ಕಾಲು ಭಾಗವೆಲ್ಲ ಸಿಬ್ಬಂದಿಗೇ ಹೋಗುವಂತಿದ್ದರೂ ಹೆದರದೆ ಹೊಸ ಹೊಸ ಸಮಿತಿಗಳು, ಶಾಖೆಗಳನ್ನು ನಿರ್ಮಿಸಿದ. ಆದರೂ ಉಳಿದವರು ಎಷ್ಟೋ ಮಂದಿ. ಲೈಸೆನ್ಸುಗಳನ್ನಂತೂ ನೋಡದೆಯೇ ರುಜುಹಾಕುತ್ತಿದ್ದ. ಆದರೂ ಇನ್ನೂ ಅರ್ಜಿಗಳು, ಶಿಪಾರಸುಗಳು, ಬರುತ್ತಲೇ ಇದ್ದುವು. ಮುನಿಸಿಪಲ್ ಎಂಜಿನಿಯರು "ಹೀಗಾದರೆ ಊರು ಕೆಟ್ಟುಹೋಗುತ್ತೆ. ಈಗಿರೋದೆ ಇಷ್ಟು ಚೆನ್ನ" ಎಂದು ಎಚ್ಚರಿಸಿದಾಗ ಭೋಗಪ್ಪ "ಊರು ಯಾರಿಗೆ ಬೇಕ್ರಿ ಇಲ್ಲಿ ? ಪ್ರತಿಯೊಬ್ಬರಿಗೂ ಅವರ ಮನೆಯೇ ಊರು, ದೇಶ, ಪ್ರಪಂಚ, ಎಲ್ಲ. ತಾವೇ ಪ್ರಪಂಚದ ಪ್ರಜೆಗಳು. ಬೇರೆ ಯಾರೂ ಇಲ್ಲ. ಇಂಥ ಊರು ಏನಾದರೇನು ? ನಾನು ಯಾಕೆ ಕೆಟ್ಟೋನು ಆಗಲಿ ಸುಮ್ಮನೆ ಅಂತ ಏನೇನೋ ಮಾಡ್ತಾ ಇದೀನಿ. ಆದರೂ ಈ ಹಾಳು ಅಧ್ಯಕ್ಷಪದವಿಯಲ್ಲಿ ವಿರೋಧ ಕಟ್ಟಿಕೊಳ್ಳದೆ ಆಗೋದೇ ಇಲ್ಲ ಅಂತ ಕಾಣುತ್ತೆ. ಏನು ಮಾಡಬೇಕೋ ಗೊತ್ತಿಲ್ಲ. ಹುಂ, 'ಮುನಸಿಪಲ್ ಅಧ್ಯಕ್ಷತೆ ಹೂವಿನ ಹಾಸಿಗೆ. ಬೇಕಾದಷ್ಟು ತಿಂದು ತೇಗಿ ನಿದ್ದೆ ಮಾಡಬಹುದು ಅಂತಾರೆ' ಹೊಟ್ಟೇಕಿಚ್ಚಿನ ಜನ. ಇದು ನೋಡಿದರೆ ಮುಳ್ಳಿನ ಕುರ್ಚಿ. ಸ್ವಲ್ಪ ಅನುಭವಿಸಿದೋರಿಗೇ ಗೊತ್ತು. ಥೂ ಹಾಳು! ಇದರಲ್ಲಿ ಏನಿದೆಯೊ ನನ್ನ ಶತ್ರುಗಳಿಗೂ ಬೇಡ. ಏನೋ ಇದೂ ಒಂದು ವರ್ಷ ತಗೊಂಡುಬಿಟ್ಟೆ. ಹೇಗೋ ತಳ್ಳಿಬಿಡುತ್ತೀನಿ" ಎಂದು ಬೇಸರ ಪಟ್ಟುಕೊಂಡು ಹೇಳಿ, ತನ್ನ ಶಕ್ತಿಗೆ ಮೀರಿ ಅನುಕೂಲಗಳನ್ನು ಹಂಚಿದ; ಪ್ರಾರ್ಥನೆಗಳನ್ನು ಸಲ್ಲಿಸಿದ; ನಿರಾಶನಾದ.

ಈ ಗೊಂದಲ, ಆ ಪ್ರತಿಮೆಯ ಚಟುವಟಿಕೆಗಳಲ್ಲಿ ಭೋಗಪ್ಪ ಮುಳುಗಿರುವಾಗಲೇ, ಆ ಮುನಿಸಿಪಲ್ ಶಾಲೆಗಳ ಉಪಾಧ್ಯಾಯರೂ ತಮ್ಮ ಫಜೀತಿಯನ್ನು ಸೇರಿಸಬೇಕೆ-ಕೊಸರಾಗಿ ? ಎಲ್ಲರಂತೆಯೇ ಅವರೂ ಚುನಾವಣೆಯಲ್ಲಿ ಉತ್ಸಾಹದಿಂದ ದುಡಿದಿದ್ದರು; ಭೋಗಪ್ಪನಲ್ಲಿ ಭರವಸೆಯಿಟ್ಟಿದ್ದರು; ಈಗ ಸಂಬಳ ಬಡ್ತಿಗಾಗಿ ಅರ್ಜಿಯನ್ನೂ ಹಾಕಿದ್ದರು. ಭೋಗಪ್ಪ ಅದನ್ನು ತಿರಿಗಿಸಿ ನೋಡಿ "ಏನೋ ಮಾರುದ್ದ ಬರೆದಿದಾರೆ—ಹುಟ್ಟಿದಾಗಿನಿಂದ ಇರೋ ಗೋಳನ್ನೆಲ್ಲ" ಎಂದು ಅರ್ಜಿಯ ಮೇಲೆ 'ಫೈಲ್' ಎಂದು

ಬರೆದು ಅತ್ತಕಡೆ ಹಾಕಿದ್ದ. ಆದರೆ ಉಪಾಧ್ಯಾಯರಿಗೆ ಇದರಿಂದ ತೃಪ್ತಿಯಾಗಲಿಲ್ಲ. ವಾರವಾರಕ್ಕೆ ನೆನಪು ಕೊಟ್ಟರು. ಆ ಕಾಗದಗಳೂ ತಮ್ಮ ಅಣ್ಣನನ್ನೇ ಸೇರಿದುವು. ತಿಂಗಳಾದ ಮೇಲೆ ಮುಖಂಡರು ನಾಲ್ಕು ಜನ ಕಚೇರಿಯಲ್ಲಿ ಭೇಟಿಗಾಗಿ ಬಂದರು. ದವಾಲಿ ಜವಾನ ಬಂದು ತಿಳಿಸಿದಾಗ, ಭೋಗಪ್ಪ ತನ್ನ ಜರತಾರಿ ಪೇಟವನ್ನು ತೆಗೆದು ಮುಂದಿನ ವಿಸ್ತಾರವಾದ ಕರಿಯ ಮರದ ಮೇಜಿನ ಹಸಿರು ಬಟ್ಟೆಯ ಮೇಲಿಟ್ಟು, ತಲೆ ತೆರೆದುಕೊಂಡ. 'ಭೇಟಿಗೆ ಪುರುಸೊತ್ತು ಇಲ್ಲ.' ಎಂದುಬಿಡಬೇಕೆಂದೆನ್ನಿಸಿತು. ಹಿಂದೆ, ಸ್ವಾತಂತ್ರಕ್ಕೆ ಹಿಂದೆ, ದಿವಾನರು, ಮಂತಿಗಳು, ಅಧಿಕಾರಿಗಳೂ ಮಾಡುತ್ತಿದ್ದುದನ್ನು ಅವನು ಮರೆತಿರಲಿಲ್ಲ. ಆದರೆ ಈಚಿನ ಮಂತ್ರಿಗಳ ಮಾದರಿಯನ್ನು ನೆನೆಸಿಕೊಂಡು "ಯಾರಾದರೇನು ನೋಡೋದೆ ಸರಿ. ರಾಜಕೀಯ ಚಾತುರ್ಯ. ಯಾಕೆ ನಿಷ್ಠುರ?" ಎಂದುಕೊಂಡು ಪೇಟವನ್ನು ಮತ್ತೆ ತಲೆಯ ಮೇಲೆ ಇಟ್ಟುಕೊಂಡು, "ಹುಂ, ಬನ್ನಿ ಅನ್ನು ಹಾಳಾಗಲಿ" ಎಂದು ಕಾಗದಗಳಲ್ಲಿ ವ್ಯೆಮರೆತ. ಬರಿಗಾಲು, ಪ್ಲೋಟು ಪಂಚೆ, ಮಾಸಲು ಕೋಟು, ಹರಕು ಪೇಟದ ನಾಲ್ಕು ಜನ ಉಪಾಧ್ಯಾಯರು ಪ್ರವೇಶಿಸಿ, ಒಂದು ಕಡೆ ನಿಂತ ಮೇಲೂ, ಭೋಗಪ್ಪ ಸ್ವಲ್ಪ ಹೊತ್ತು ಸುಮ್ಮನಿದ್ದು ಅನಂತರ ತಲೆಯೆತ್ತಿ "ಓ ಬಂದಿರಾ? ಬನ್ನಿ ಕೂತುಕೊಳ್ಳಿ" ಅಂದು ತನ್ನ ತಿರಿಗು ಕುರ್ಚಿಯಲ್ಲಿ ಸುತ್ತಿ, ಇವರ ಕಡೆಗೆ ತಿರಿಗಿಕೊಂಡ. ಅಲ್ಲಿದ್ದುದು ಎರಡೇ ಕುರ್ಚಿ. ಭೋಗಪ್ಪ ಗಂಟೆಯನ್ನು ಒತ್ತಿದ. ಅವರು "ಪರವಾಗಿಲ್ಲ ಸ್ವಾಮಿ" ಎಂದರು. ಜವಾನ ಬಂದ. ಭೋಗಪ್ಪ "ಹುಂ, ಏನೂ ಇಲ್ಲ, ಬಿಡು" ಅಂದ.

"ಸ್ವಾಮಿ, ನಾವು ಒಂದು ಅರ್ಜಿ...." ಅವರಲ್ಲಿ ಒಬ್ಬ ಮೊದಲುಮಾಡಿದ.

"ಹುಂ, ಅದು ನನ್ನ ಗಮನಕ್ಕೆ ಬಂತು. ನಿಜ, ನಿಮಗೇನೋ ಬಹಳ ಕಷ್ಟನೆ. ಒಪ್ಪಿದೆ. ನಾನೂ ಶಾಲೆ ಸಮಿತಿಯ ಮುಂದಿಟ್ಟಿದ್ದೆ, ಶಿಫಾರಸೂ ಮಾಡಿದೆ. ಆದರೇನು ಸಮಿತಿ ಒಪ್ಪೋದಿಲ್ಲ. ದುಡ್ಡಿಲ್ಲ ಅಂತಾರೆ."

"ಸ್ವಾಮಿ, ತಾವು ಮುತುವರ್ಜಿ ವಹಿಸಬೇಕು. ತಮ್ಮನ್ನೇ ನಂಬಿಕೊಂಡಿದೀವಿ. ಹೋದ ಸಾರಿ, ನಡೆಸಿಕೊಡೋದಾಗಿ ಭರವಸೆ ಕೊಟ್ಟಿದ್ದಿರಿ. ಆಗಂತೂ ಆಗಲಿಲ್ಲ, ಹೋಗಲಿ. ಮತ್ತೆ ಚುನಾವಣೆ ಕಾಲದಲ್ಲೂ ಹಾಗೇ ಅಪ್ಪಣೆ ಕೊಡಿಸೋಣವಾಯ್ತು........"

"ಅದೆಲ್ಲ ಹೇಳಿದರೆ ಏನು ಪ್ರಯೋಜನರೀ. ಎಲ್ಲ ನೋಡಿ, ಆದಷ್ಟು ಮಾಡೋದಕ್ಕೆ ತಾನೆ ಸಾಧ್ಯ?" ಭೋಗಪ್ಪ ಹುಬ್ಬುಗಂಟಿಕ್ಕಿದ.

"ತಮ್ಮ ಕಷ್ಟವೂ ಬಹಳ ಇರುತ್ತೆ. ಇಲ್ಲ ಅನ್ನೊದಿಲ್ಲ ಸ್ವಾಮಿ...."

"ಸರಿ ಮತ್ತೆ. ನೋಡೋಣ. ಸುಮ್ಮನೆ ಇರಿ."

"ಆದರೆ ತುಟಿಗಟ್ಟಕ್ಕೇ ಬಂದಿದೆ ಸ್ವಾಮಿ. ನಾವು ತುಂಬ ಬಡವರು, ಬಹಳ ಮಕ್ಕಳೊಂದಿಗರು. ಈ ಇಪ್ಪತ್ತು ಪ್ಲಸ್........"

"ಅಯ್ಯೊ ಶಿವನೆ! ಅದೆಲ್ಲ ಸರೀರೀ. ಆದರೆ ಹಣ ಎಲ್ಲಿದೆಯಪ್ಪ? ನೀವು, ಎಲ್ಲ ಸ್ಕೂಲೂ ಸೇರಿ, ಐವತ್ತು ಜನರಿದೀರಿ. ಹದಿನೈದು ಕೇಳಿದೀರಿ. ಬೇಡ, ತಲಾಗ ಐವೈದು ರೂಪಾಯಿ ಅಂದರೂ ಐವತ್ತು ಐದಲ ಇನ್ನೂರೈವತ್ತು—ತಿಂಳಿಗೆ. ವರ್ಷಕ್ಕೆ ಮೂರು ಸಾವಿರ ಆಯ್ತು. ಮುನಿಸಿಪಾಲಿಟಿಗೆ ಎಲ್ಲಿಂದ ಬರಬೇಕು ? ಏನು ಕಳ್ಳತನ ಮಾಡಿ ಒದಗಿಸೋಣವೆ? ತಡೀರಿ ನೊಡೋಣ, ಹೊಸ ತೆರಿಗೆ ಗಿರಿಗೆ ಹಾಕಿದರೆ ವಾಡಿದರೆ........"

"ಹಾಗೆ ಅನ್ನಬಾರದು ಸ್ವಾಮಿ. ಏನಾದರೂ ಮಾಡಲೇಬೇಕು. ನಮಗೆ ಕೂಲಿಯೋರಿಗಿಂತ ಕಡಿಮೆ ಬರುತ್ತೆ, ಕಾಲ ಇಷ್ಟು ದಿನೇ ದಿನೇ. ......"

"ನೋಡಿದಿರಾ, ಅದನ್ನೇ ಹೇಳ್ತೀರಲ್ಲ, ಮತ್ತೆ ಮತ್ತೆ. ನಂಗೆ ಗೊತ್ತಿಲ್ಲವೆ? ಅದೆಲ್ಲ ಬಹಳ ಯೋಚನೆ ಮಾಡಿ, ನಿಮ್ಮ ನಮ್ಮ ಹಿತಚಿಂತಕರಲ್ಲಿ ಚೆನ್ನಾಗಿ ಚರ್ಚೆಮಾಡಿ, ಲೆಕ್ಕಶೋಧಿಸಿಯೇ ಹೇಳಿದ್ದು—ತಡೀರಿ ನೋಡೋಣ ಅಂತ."

"ಸ್ವಾಮಿ, ಒಂದು ಸಮಿತಿನಾದರೂ ನಿರ್ಮಿಸಿ, ನಮ್ಮ ಸ್ಥಿತಿಗತಿ........"

"ಏನು ಸಮಿತಿಯೆ? ಸ್ಕೂಲು ಸಮಿತಿ ಇರೋದು ಯಾಕೆ? ಕೈಹುಣ್ಣಿಗೆ ಕನ್ನಡಿಯೆ ಅಂತ, ಕಂಡದ್ದಕ್ಕೆಲ್ಲ ಸಮಿತಿ ಏರ್ಪಡಿಸೋದಕ್ಕೆ ನಾವೇನು ಸರಕಾರಕ್ಕೆ ಕೆಟ್ಟುಹೋದೆವೇನ್ರಿ? ಅದು ಸಾಧ್ಯವಿಲ್ಲ."

ಉಪಾಧ್ಯಾಯರು ಅಲ್ಲಿಗೇ ಬಿಡಲಿಲ್ಲ. ಮತ್ತೆ ಮತ್ತೆ ತಮ್ಮ ಗೋಳನ್ನು ಹೇಳಿಕೊಂಡರು. ಮತ್ತೆ ಮತ್ತೆ ಅವರನ್ನು ತಡೆದು ಭೋಗಪ್ಪ ಅದೇ ಸಮಾಧಾನ ಹೇಳಿದ. ಕಡೆಗೆ ಅವರಲ್ಲಿ ಒಬ್ಬ "ಸ್ವಾಮೀ ನಾವೇನೋ ಹೇಳಿಕೊಳ್ಳೋ ಅಷ್ಟೆಲ್ಲ ಹೇಳಿದೆವು. ತಮ್ಮ ಚಿತ್ತಕ್ಕೆ ಬಂದಿದ್ದರೆ ಚೆನ್ನಾಗಿತ್ತು. ಎರಡು ಕಡೆಗೂ ಕಷ್ಟ ತಪ್ಪಿಸಬಹುದಾಗಿತ್ತು" ಎಂದು ಮುಂದಿನ ಸೂಚನೆ ಕೊಟ್ಟ.

"ಏನು, ಹೆದರಿಸುತ್ತೀರೋ—ಹಾಗಾದರೆ ?"

"ಹಾಗಲ್ಲ ಸ್ವಾಮಿ ನಾವೇನೋ ಬಡವರು. ಆದರೆ ನಮ್ಮ ತಾಳ್ಮೆಗೂ ಒಂದು ಮಿತಿಯಿದೆ. ಅದು ದಾಟಿ ಹೋದರೆ ಏನು ಮಾಡಬಲ್ಲೆವು ? ನಮ್ಮ ಹೊಟ್ಟೇಮೇಲೆ ಹೊಡಕೊಂಡಾದರೂ ನಮ್ಮ ಕಷ್ಟತೋರಿಸಬೇಕು."

"ಏನು ಮಾಡ್ತೀರಿ ? ಚಳುವಳಿ ಹೂಡುತ್ತೀರೋ ?"

"ಈ ಮಾತುಕತೆ ಮುರಿದು ಬಿದ್ದರೆ, ಮುಷ್ಕರ ಹೂಡಬೇಕು ಅಂತ ಎಲ್ಲರೂ ತೀರ್ಮಾನಿಸಿಕೊಂಡಿದಾರೆ. ಅವರನ್ನು ತಡೆಯೋದು ಸಾಧ್ಯವಾಗೋದಿಲ್ಲ—ನಮಗೆ."

"ಓಹೋ ಇಲ್ಲಿಗೆ ಬಂತೋ ? ಪಾಠ ಪಳಿದ್ಯ ಎಲ್ಲಾದರೂ ಹೋಗಲಿ. ತಿಂಗಳುಗಟ್ಲೆ ಸ್ಕೂಲುಗಳನ್ನು ಕೇಳೋರೇ ದಿಕ್ಕೀರೂದಿಲ್ಲ. ಇದರಲ್ಲೆಲ್ಲ ಪ್ರವೀಣರು."

"ಅದಕ್ಕೆಲ್ಲ ಏನು ಮಾಡೋದು ಸ್ವಾಮಿ. ನಾವು ಕೆಲಸ ಮಾಡೋದಿಲ್ಲ ಅಂತೀವೆ? ಸಮಯ ಬಂದ ಹಾಗೆಲ್ಲ ನಡೆದುಕೋಬೇಕು—ಅನ್ನಕ್ಕೆ ಕಲ್ಲು ಬಿದ್ದೀತು ಅಂತ ಹೆದರಿ."

"ಹೂಂ! ನನ್ನೂ ಅಂತೀರೋ ? ಇಷ್ಟು ಧೈರ್ಯ! ನಿಮಗೆ ಯಾರೋ ಒತ್ತಾಸೆ ಕೊಟ್ಟು, ಎತ್ತಿ ಕಟ್ಟುತ್ತಾ ಇದಾರೆ ನನ್ನ ಮೇಲೆ ಅಂತ ಕಾಣುತ್ತೆ."

"ನಮ್ಮ ಹೊಟ್ಟೇನೆ ಸಾಕು ಸ್ವಾಮಿ. ಯಾರು ಯಾಕೆ ಹೇಳಬೇಕು."

"ಹುಂ, ಹುಂ. ಇಲ್ಲದೆ ಇದ್ದರೆ ನಿಮಗೆಲ್ಲಿ ಇಷ್ಟು ಧೈರ್ಯ ? ಆ ಮುಂಡಿ ಶಿವಪ್ಪನ ಕೆಲಸವೇ ಇರಬೇಕು. ಅವನು ಚುನಾವಣೆಯಲ್ಲಿ ಸೋತದ್ದಕ್ಕೆ, ಈಗ ಇದೆಲ್ಲ ಚಿತಾವಣಿ ಮಾಡ್ತಾ ಇದಾನೆ. ಪೇಪರಿಗೆ ಬರೆದ, ಬೇಕಾದಷ್ಟು—ಇಲ್ಲಿಯ ಅವ್ಯವಸ್ಥೆ ಅಂತ. ಅದೇನು ಫಲಿಸಲಿಲ್ಲ. ಈಗ ಹೀಗೆ ನಮ್ಮ ನೌಕರವರ್ಗಕ್ಕೂ ಕೈ ಹಾಕಿದಾನೆ."

"ಇಲ್ಲ ಸ್ವಾಮಿ."

"ಇಲ್ಲ ಅಂದರೆ ಕೆಳ್ತೀನೆನ್ರಿ? ದಿನದ ಬೆಳಕಿನ ಹಾಗೆ ಕಾಣುತ್ತೆ. ಅವನು ಏನೇನೋ ಛ ರವಸೆ ಕೊಟ್ಟಿದಾನೆ. ನಡೆಸೋದು ಇರಲಿ. ಅವನ ಚಳುವಳಿಗೆ ಅಂಗವಾಗಿ ಈ ಮುನಿಸಿಪಾಲಿಟಿಯ ನೌಕರರಾಗಿದ್ದೂ ಅದರ ರಾಜಕೀಯದಲ್ಲಿ ಭಾಗವಹಿಸುತ್ತಿದೀರೋ ? ನೌಕರಿಯ ಕಟ್ಟಳೆ ಕಾನೂನು ಗೊತ್ತಿದೆಯೊ? ಅದರ ಪರಿಣಾಮ......."

"ಸ್ವಾಮಿ, ಇದೆಲ್ಲ ಯಾವುದೂ ಸರಿಯಲ್ಲ. ತಾವು ಹಾಗೆಲ್ಲ ತಿಳಿದುಕೊ ಬಾರದು. ಬರಿ ನಮ್ಮ ಹೊಟ್ಟೆಪಾಡೇ ಹೀಗೆ ಮಾಡಿಸಿದೆ."

"ನಾನು ನಂಬೋದಿಲ್ಲ. ನೀವು ನನ್ನ ಇಷ್ಟಕ್ಕೆ–ಮುನಿಸಿಪಾಲಿಟಿ ಹಿತಕ್ಕೆ ಅನ್ನಿ—ವಿರುದ್ಧವಾಗಿ ನಡೆದರೆ ನಾನೇನು ಸ್ತೊಪ್ಪುಹಾಕೋದಿಲ್ಲ. ತಿಳಿತೆ? ಒಳ್ಳೇ ಮಾತಿನಲ್ಲಿ 'ಬೇಡ ನೋಡೋಣ' ಅಂತ ಬುದ್ಧಿವಾದ ಹೇಳಿದೀನಿ. ಇಷ್ಟರ ಮೇಲೆ ಏನಾದರೂ ಅವಿವೇಕ ಮಾಡಿಕೊಂಡರೆ—ನೀವೇ ಅನುಭವಿ-ಸುತ್ತೀರಿ, ಅದರ ಪರಿಣಾಮ. ಗೊತ್ತಾಯ್ತೆ?"

ಉಪಾಧ್ಯಾಯರು ಕ್ಷಣಕಾಲ ಸುಮ್ಮನಿದ್ದರು. ಭೋಗಪ್ಪ ಕಾಗದಗಳ ಕಡೆಗೆ ಗಮನವನ್ನು ತಿರುಗಿಸಿದ.

"ಅಷ್ಟೆಯೆ ಸ್ವಾಮಿ, ನಮ್ಮ ಪ್ರಾರ್ಥನೆಗೆ........"

"ಅಷ್ಟೆ. ನಾನು ಹೇಳಿದಂತೆ ಬುದ್ಧಿವಂತರಾಗಿರಿ. ದುಡುಕಿ ಕೆಡ ಬೇಡಿ—ಕೂಲಿ ಜನರ ಹಾಗೆ. ನಮಸ್ಕಾರ!"

ಉಪಾಧ್ಯಾಯರು ಇಳಿದ ಮುಖಗಳಿಂದ ಹಿಂತಿರುಗಿದರು. ಭೋಗಪ್ಪ ಸಿಡಿಮಿಡಿಗುಟ್ಟುತ್ತ "ಈ ಹಾಳಾದೋರ ಹತ್ತಿರ ಎಷ್ಟು ತಾಳ್ಮೆಯಿಂದ ಇರ ಬೇಕು ಅಂದರೂ ಆಗೋದಿಲ್ಲ. ಅವರ ಮಾತೇ ಅವರಿಗೆ. ನಮ್ಮ ಅಭಿಪ್ರಾಯ ಅವರ ತಲೆಗೆ ಹೋದರೆ! ಮುಷ್ಕರ ಮಾಡ್ತಾರಂತೆ. ಹುಂ! ಮಾಡಲಿ. ಇವರು ಸ್ಕೂಲುಗಳಲ್ಲಿ ಕಡಿಯೋದು ಅಷ್ಟರಲ್ಲೇ ಇದೆ. ಒಂದೆರಡು ತಿಂಗಳು ಸ್ಕೂಲು ಮುಚ್ಚಿದರೆ ಏನು ನಷ್ಟ. ಈ ಮುಷ್ಕರದ ಮನೋಭಾವ ಬೆಳೀತಾ ಇದೆ—ಎಲ್ಲೆಲ್ಲೂ. ಅದಕ್ಕೆ ಮಟ್ಟ ಹಾಕಬೇಕು" ಎಂದುಕೊಂಡು ಗಂಟೆ ಬಾರಿಸಿ ಹೆಡ್ಮಾಸ್ತರರನ್ನು ಕರೆಸಿದ.

"ಏನ್ರಿ, ನಮ್ಮ ಮೇಷ್ಟರುಗಳಿಗೆ ಸಂಬಳ ಬಟವಾಡೆ ಆಯ್ತೆ?"

"ನಿನ್ನೆ ದಿವಸವೇ ಆಯ್ತು ಸ್ವಾಮಿ."

"ಓ, ಅದಕ್ಕೇ ಇಷ್ಟು ಜೋರು. ಕೈಮೀರಿತು. ಇರಲಿ, ಇಲ್ಲಿ ನೋಡಿ."

"ಸ್ವಾಮಿ."

"ಈ ಮೇಷ್ಟರುಗಳು ಮುಷ್ಕರ ಹಿಡಿಯೋ ಹಾಗೆ ಕಾಣುತ್ತೆ. ಎಲ್ಲ ರಿಗೂ ಒಂದೊಂದು ನೋಟೀಸು ಟೈಪ್ ಮಾಡಿಸಿ ಇಟ್ಟಿರಿ 'ನೀವು ಮುನಿಸಿ-ಪಲ್ ನೌಕರರಾಗಿದ್ದೂ, ಅದರ ರೂಲ್ ಇಷ್ಟನೇ ಕಲಂಗೆ ವಿರೋಧವಾಗಿ

ರಾಜಕೀಯ ಚಳುವಳಿಯಲ್ಲಿ ಭಾಗವಹಿಸಿ ಮುಷ್ಕರ ಹಿಡಿದಿದ್ದೀರಿ. ಇದು ಮಹಾಪರಾಧ. ಇದಕ್ಕಾಗಿ ಕೆಲಸದಿಂದಲೇ ವಜಾ ಮಾಡಬಹುದು. ಪ್ರಾವಿಡೆಂಟ್ ಫಂಡ್ ಭಾಗವನ್ನು ಮುಟ್ಟುಕೋಲು ಹಾಕಿಕೊಳ್ಳಬಹುದು ಆದರೂ ಅಷ್ಟನ್ನು ಮಾಡದೆ ನಿಮಗೆ ಒಂದು ವಾರ ಕಾಲ ಕೊಟ್ಟಿರುತ್ತೆ. ಇದು ತಪ್ಪಿದ ಒಂದು ವಾರದೊಳಗಾಗಿ ಮುಷ್ಕರ ನಿಲ್ಲಿಸಿ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಮುನಿಸಿಪಲ್ ನೌಕರರ ರೂಲು ಇಂಥ ಇಂಥ ಕಲಂ ಪ್ರಕಾರ ಮುಂದಿನ ಕ್ರಮ ಜಾರಿಗೆ ತರಲ್ಪಡುತ್ತೆ' ಅಂತ."

"ಅಪ್ಪಣೆ ಸ್ವಾಮಿ."

"ಸ್ವಲ್ಪ ಜೋರಾಗೇ ಇರಲಿ ಭಾಷೆ. ಕಲಂ ಗಿಲಂ ನೀವೇ ಭರ್ತಿ ಮಾಡಿ. ಮುಷ್ಕರ ಮೊದಲಾದ ದಿನವೇ ಎಲ್ಲರಿಗೂ ನೋಟೀಸ್ ಕೊಟ್ಟುಬಿಡಬೇಕು."

"ಆಗಬಹುದು ಸ್ವಾಮಿ."

ಉಪಾಧ್ಯಾಯರ ಬೆದರಿಕೆ ಪೊಳ್ಳಾಗಿರಲಿಲ್ಲ. ಮಾರನೆಯ ದಿನವೇ ಮುಷ್ಕರದ ಠರಾವನ್ನು ಒಮ್ಮತದಿಂದ ಪಾಸುಮಾಡಿ, ಮನೆಯಲ್ಲಿ ಉಳಿದರು. ಅದೇ ಸಂಜೆ ಅವರಿಗೆ ನೋಟೀಸುಗಳು ತಲ್ಪಿದುವು. ಮುಖಂಡರು ಮತ್ತೆ ಸಭೆ ಸೇರಿಸಿ, ನೋಟೀಸನ್ನು ಎದೆಯಿಲ್ಲದ ವ್ಯವಹಾರವೆಂದು ಖಂಡಿಸಿ, ಇನ್ನೊಂದು ಠರಾವನ್ನು ಒಮ್ಮತದಿಂದ ಪಾಸುಮಾಡಿಸಿ, ಯಾರೂ ಕದಲದೆ ನಿಂತು ಒಗ್ಗಟ್ಟಿನಿಂದ ಹೋರಾಡಬೇಕೆಂದೂ, ಹಾಗಾದರೆ ಸತ್ಫಲವೇ ಸಿದ್ಧವೆಂದೂ, ಪ್ರೋತ್ಸಾಹಿಸಿ ಹುರಿದುಂಬಿಸಿದರು. ವಾರದ ವರೆಗೂ ಒಗ್ಗಟ್ಟು ಒಡೆಯಲಿಲ್ಲ. ಅದು ಕಳೆದ ದಿನ ಅರ್ಧ ಮಂದಿ ಕೆಲಸಕ್ಕೆ ಹಾಜರಾದರು. ಮುಖಂಡರ ಮೇಲೆ ಮೊದಲು ವಜಾ ನೋಟೀಸು ಜಾರಿಯಾಯಿತು. ಅವರು ಕೂಡಲೇ ಉಳಿದವರನ್ನು ಸಭೆ ಸೇರಿಸಿ ಮುಷ್ಕರವನ್ನು ಮುರಿದಿದ್ದ ಸಹೋದ್ಯೋಗಿಗಳ ಅಂಜುಬುರುಕುತನ, ಹೇಯವರ್ತನೆ, ವಿಶ್ವಾಸಘಾತಕತನಗಳನ್ನೂ, ಮುಖಂಡರ 'ವಜಾ'ವನ್ನೂ ಖಂಡಿಸಿ ಮತ್ತೊಂದು ಠರಾವನ್ನು ಮತ್ತೆ ಒಮ್ಮತದಿಂದಲೇ ಪಾಸುಮಾಡಿಸಿದರು. ಇತರರಿಗೂ ವಜಾ ನೋಟೀಸು ಬರುವುದೆಂದು ಸುದ್ದಿ ಹೊರಟು ಇಪ್ಪತ್ತನೆಯ ತಾರೀಕಿನ ಹೊತ್ತಿಗೆ ಇನ್ನೂ ಕಾಲು ಭಾಗ ಮೇಷ್ಟರು ಶಾಲೆಗಳನ್ನು ಸೇರಿದರು. ಮುಂದೆ

ಮುಖಂಡರಿಗೆ ಸಭೆ ಸೇರಿಸಲು ಆಗಲೇ ಇಲ್ಲ. ತಿಂಗಳ ಕಡೆಗೆ ಕಳೆದುಳಿದವರೂ ಕೆಲಸಕ್ಕೆ ಹಾಜರಾದರು. ಮುಷ್ಕರ ನಿಂತಿತು. ಇದರ ಫಲಿತಾಂಶವಾಗಿ ಉಪಾ-ಧ್ಯಾಯರಿಗೆ ಆ ತಿಂಗಳ ಸಂಬಳ ಕಡಿಮೆಯಾಯಿತು. ಮುಖಂಡರು ಮಾತ್ರ ವಜಾ ಆಗಿ, ಅನಂತರ ಅಧ್ಯಕ್ಷರಲ್ಲಿಗೆ ಹೋಗಿ 'ಕಯ್ಯೋ ಮರೋ' ಅಂದು ಅವರನ್ನು ಬೇಡಿ, ಕಾಡಿ, ಕ್ಷಮೆ ಬೇಡಿ, ಒಳ್ಳೆಯ ನಡತೆಯ ಭರವಸೆ ಕೊಟ್ಟು, ಎರಡು ತಿಂಗಳ ಸಂಬಳವನ್ನು ಕಳೆದುಕೊಂಡು ಮತ್ತೆ ಕೆಲಸಕ್ಕೆ ಸೇರಿದರು.

ಮರುಳೂರಿನ ಜನ ಮುಷ್ಕರ ಮೊದಲಾದಾಗ ಉಪಾಧ್ಯಾಯರ ದಿಟ್ಟ ತನವನ್ನು ಮೆಚ್ಚಿದರು, ಬಾಯಿತುಂಬ ಸಹಾನುಭೂತಿ ತೋರಿಸಿದರು. ಆದರೆ 'ಸತ್ಯಾಗ್ರಹ ನಿಧಿ'ಗಾಗಿ ಬಂದಾಗ ಕೈತುಂಬ ಕೊಡಲಿಲ್ಲ. "ನಮ್ಮ ನಮ್ಮದೇ ನಮಗೆ ಸಾಕಾಗಿದೆ, ಈ ಕಷ್ಟಕಾಲದಲ್ಲಿ. ಇನ್ನು ಯಾವ ಯಾವುದಕ್ಕೆ ಎಷ್ಟೆಷ್ಟು ಅಂತ ಕೊಡೋಣ? ಎಲ್ಲಿಂದ ತರೋಣ?" ಎಂದರು. ಮುಷ್ಕರ ಮುಗಿದಾಗ "ಇಷ್ಟೆ ಇವರ ಗಟ್ಟಿತನ. ಈ ಸಂಪತ್ತಿಗೆ 'ಸತ್ಯಾಗ್ರಹ' ಯಾಕೆ ಶುರುಮಾಡಬೇಕಾಗಿತ್ತು. ನಾಚಿಕೆಗೇಡು." ಎಂದು ಕೈತಟ್ಟಿ ನಕ್ಕರು. ಅಂಗಡಿ ಸೀನಪ್ಪ "ಕೊಡೋದು, ಕೊಡೋದು, ಅಂದ್ರೆ ಎಷ್ಟು ಕೊಡೋದು? ಎಲ್ಲಿಂದ ತರೋದು? ಇನ್ನೇನು ನಮ್ಮನ್ನ ತಾನೆ ಕಿತ್ತುಕೊಂಡು ತಿನ್ನಬೇಕು–ರೇಟ್ ಪೇಯರ್ಸ್ನ? ಇವತ್ತು ಮೇಷ್ಟರು, ನಾಳೆ ಗುಮಾಸ್ತರು–ನಾಡಿದ್ದು ಕಸಗುಡಿಸೋರು–ಇದ್ದೇ ಇರುತ್ತೆ ಈ ಫಜೀತಿ. ತಪ್ಪುತ್ತೇ ? ಭೋಗಪ್ಪನ ಆಡಳಿತೆ ಒಳ್ಳೇ ಬಿಗಿ. ಸರಿಯಾಗಿ ಮಾಡಿದ. ಮುಷ್ಕರ ಮುರಿದು ಮೇಲ್ಪಂಗ್ತಿ ಹಾಕಿದ" ಎಂದು ಹೊಗಳಿದ.

೬

* * *

ಕುಸುಮಳಿಗೆ ವರ ಗೊತ್ತಾಯಿತು. ಅವಳು "ನಾನು ಮಾಡಿಕೊಳ್ಳೋದಿಲ್ಲ" ಎಂದು ಎಷ್ಟು ಸಾವಿರ ಸಾರಿಯೋ ಹೇಳಿದಳು. ಸಾಹುಕಾರರು ಸುಮ್ಮನೆ ನಕ್ಕರು. "ತುಂಟ ಹುಡುಗಿ! ಆಗಲಿ, ಆಗಲಿ. ವರ ಬಂದು ನೋಡಿಕೊಂಡು ಹೋಗಲಿ. ನೀನೂ ನೋಡು. ಹುಚ್ಚಿ, ಎಂಥ ವರ! ಭರ್ಜರಿ. ಜಾತಕಗಳಂತೂ ಗಂಡಹೆಂಡಿರದ್ದೇ

ಯಂತೆ. ಅವರ ತಂದೆಯೂ ಲಕ್ಷಾಧೀಶರರೆ. ನಮ್ಮಷ್ಟು ಇರದಿರಬಹುದು. ನಮ್ಮ ರಕ್ತದಷ್ಟೇ ಶ್ರೇಷ್ಠ ಅಂತಲೂ ಹೇಳಲಾರೆ. ಇಂಥಾದ್ದು ಎಲ್ಲಿ ಸಿಕ್ಕ ಬೇಕು, ಇಷ್ಟಕ್ಕೂ. ಆದರೂ ಆ ಮನೆತನವೇನು ಸಾಮಾನ್ಯವಲ್ಲ. ನಮಗೆ ತಕ್ಕದ್ದು ಅಂತಲೇ ತಿಳಿ. ನೀನು ಅದೃಷ್ಟವಂತೆ. ವರ ಝೋಕಾಗಿದಾನೆ. ನೋಡಿದ ಮೇಲೆ ಈ ಬಿನ್ನಾಣವೆಲ್ಲ ಓಡಿ ಹೋಗುತ್ತೆ. ಎರಡನೇ ವರ್ಷ ಎಂಜಿನೀರಿಂಗ್ ಓದಿ ಬಿಟ್ಟುಬಿಟ್ಟದಾನೆ. ಮತ್ತೆ ಓದು ಅಂದರೂ ಆಯ್ತು; ಇಲ್ಲ, ಅದು ಬೇಸರವಾದರೆ, ನಾಲ್ಕು ದಿನ ಇಂಗ್ಲೆಂಡಿಗೋ ಅಮೇರಿಕಕ್ಕೋ ನೆಪಮಾತ್ರಕ್ಕೆ ಹೋಗಿ ಬಾ ಅಂದರೂ ಆಯ್ತು. ಸೊಗಸಾದ ಕೆಲಸ—ಅಸಿ ಸ್ಟೆಂಟ್ ಎಂಜಿನೀಯರ್ ಕೆಲಸ ಕೊಡಿಸಬಹುದು. ಹಾಗೇ ಹೇಳಿದೀನಿ. ರಿಟೈರ್‌ಗೋ ಹೊತ್ತಿಗೆ ಚೀಫ್ ಇಂಜಿನೀಯರ್ ಆಗ್ತಾನೆ. ಬೇಕಾದಷ್ಟು ದುಡ್ಡು—ಎಂಜಿನೀರ್ ಇಲಾಖೇಲಿ—ಗೊತ್ತೆ? ಅಲ್ಲದೆ ಆಸ್ತಿ ಬೇರೆ ಬಿದ್ದಿದೆ. ಒಬ್ಬನೇ ಮಗ. ನೀನು ರಾಣೀ ಹಾಗೆ ಇರಬಹುದು. ಅದು ಬಿಟ್ಟು, ಬೇಡ-ವಂತೆ- ಪೆದ್ದು ಹುಡುಗಿ. ನಿಂಗೇನು ಗೊತ್ತಾಗುತ್ತೆ, ಈ ವಯಸ್ಸಿಗೆ ? ಬರಿ ಗೊಂಡಾಟ. ನಾವು ಹಿರಿಯರು ಹೇಳಿದ ಹಾಗೆ ಕೇಳು" ಎಂದೇ ಹೇಳಿ ಪ್ರೇಮ ದಿಂದ ಅವಳ ತಲೆ ಸವರಿದರು, ಅಷ್ಟೆ. ಕುಸುಮಳಿಗೆ ಏನು ಹೇಳಲೂ ತೋರ-ಲಿಲ್ಲ. 'ಏನೋ ಅವರು ಒಪ್ಪದೇ ಇರಬಹುದಲ್ಲ—ಇನ್ನೂ. ಅದೊಂದಿದೆ' ಎಂದುಕೊಂಡು ಸುಮ್ಮನಾದಳು.

ಅಕ್ಟೋಬರಿನ ಕಡೆಗೆ, ಒಂದು ಮದ್ಯಾನ್ಹ, ದೊಡ್ಡ ಕಾರಿನಲ್ಲಿ ಮುಂದಿನ ನಂಟರು ಬಂದಿಳಿದರು. ಸಿರಿಯೂರ್ ಸಾಹುಕಾರ್ ವಿಷಕಂಠಯ್ಯ ನವರು, ಅವರ ಹೆಂಡತಿ ಗೌರಮ್ಮನವರು ಮತ್ತು ಮಗ ಶ್ರೀಕಂಠ. ವಿಷಕಂಠ-ಯ್ಯನವರು ಸಾಹುಕಾರರ ಪ್ರತೀಕವಾಗಿದ್ದರು. ವೈಶಿಷ್ಟ್ಯವೇನೂ ಇರಲಿಲ್ಲ. ಸ್ವಲ್ಪ ಕೆಚ್ಚು ಕಡಿಮೆ. ಸೀರೆ ಒಡವೆಗಳಲ್ಲಿ ಕಲಸಿಹೋಗಿದ್ದ ಗೌರಮ್ಮ ನವರನ್ನು ಬೇರ್ಪಡಿಸಿ ತಿಳಿಯುವುದು ಕಷ್ಟವಾದ ಕೆಲಸವಾಗಿತ್ತು. ಮಗ, ತಂದೆಯ ಅಚ್ಚೊಂಬುದನ್ನು ಅವನ ಮಧ್ಯ ಬೈತಲೆಯ ಕ್ರಾಪು, ನಸು ಹಳದಿಯ ಬುಷ್ ಕೋಟು, ಬಿಳಿ ಷರಾಯಿ, ಪಠಾಣ ಚಪ್ಪಲಿಗಳೂ, ಮರೆಸಿರಲಿಲ್ಲ. ಅತಿಥಿಗಳಿಗಾಗಿ ಎಲ್ಲವೂ ಸಿದ್ಧವಾಗಿತ್ತು. ಕುಸುಮ ಒಬ್ಬಳೇ ತಂದೆ ತಾಯಿ ಯರ ಇಷ್ಟದಂತೆ ಸಿಂಗರಿಸಿಕೊಂಡಿರದೆ ಹಟಮಾಡುತ್ತಿದ್ದಳು. ರತ್ನಗಂಬಳಿ,

ಹಾಸಿದ ನೆಲ; ರೇಷ್ಮೆ ಹೊದಿಸಿ, ಚಿತ್ರಕೆಲಸ ಮಾಡಿದ ಮಖಮಲ್ ಒರಗು-ದಿಂಬುಗಳನ್ನಿಟ್ಟ ಸೋಫಗಳು; ಕೌಶಲ್ಯದ ಹೆಣಿಗೆ ಕೆಲಸ ಹೊದಿಸಿದ ಟೀ-ಪಾಯಿಗಳು; ಗೋಡೆಯ ಮೇಲೆ ತೂಗು ಹಾಕಿದ್ದ ಚಿತ್ರಗಳು, ಫೋಟೋಗಳು-ಈ ಶ್ರೀಮಂತಿಕೆಯ ಸಾಧನಗಳಿಂದ ಸುಸಜ್ಜಿತವಾಗಿ ಶೋಭಿಸುತ್ತಿದ್ದ, ವಿಶಾಲ ಹಾಲ್‌ನಲ್ಲಿ, ಕುಶಲಪ್ರಶ್ನೆಗಳಾಗಿ, ಅತಿಥಿಸತ್ಕಾರವಾಯಿತು. ಸದಾಶಿವ ತನ್ನ ಜಾಣ್ಮೆಯನ್ನೆಲ್ಲ ತೋರಿಸಿ ಕೇಸರಿಭಾತು, ಬೊಂಡ, ಉಪ್ಪೇರಿ, ಬಾದಾಮಿ ಹಲ್ವಗಳನ್ನು ತಯಾರಿಸಿ, ಕೂಲ್ ಸೇಬು, ದ್ರಾಕ್ಷಿ, ಮಸ್ಕತ್ತ ದಾಳಿಂಬೆಗಳೊ-ಡನೆ ಬೆಳ್ಳಿತಟ್ಟೆಗಳಲ್ಲಿ ತಂದಿಟ್ಟಿದ್ದ. ಬೆಳ್ಳಿಯ ರೈಲುಚಂಬು ಲೋಟಗಳಲ್ಲಿ ಕೇಸರಿಯ ನೀರು; ಬೆಳ್ಳಿಯ ಟೀ ಸೆಟ್ಟಿನಲ್ಲಿ ಘಮಘಮದ ಕಾಫಿ; ಕೈ ತೊಳೆ-ಯಲೂ ಬೆಳ್ಳಿಯ ನೀರುತಂಬಿಗೆ, ತಟ್ಟೆ—ಅತಿಥಿಗಳು ಒಳಗೊಳಗೇ ಮೆಚ್ಚಿ-ಕೊಂಡರು.

ಸಾಹುಕಾರರಿಬ್ಬರೂ ಜಮೀನು ವ್ಯಾಪಾರ ವ್ಯವಹಾರಗಳ ಮಾತಿನಲ್ಲಿ ಮುಳುಗಿದ್ದರೂ, ವಿಶ್ವೇಶ್ವರಯ್ಯನವರು ಭಾವಿ ಅಳಿಯನನ್ನೂ ಬಹಳ ವಿಚಾ ರಿಸಿದರು. ನಸುನಗೆಯನ್ನು ಮೊಗದಿಂದ ತೆಗೆಯದೆಯೇ ಇವರಿಬ್ಬರನ್ನೂ ಸುತ್ತಿ ಸುತ್ತಿ ಉಪಚರಿಸಿದರು. ತಂಗಿಯ ಸಂದರ್ಭದ ಆಸಕ್ತಿಯಿಂದ, ತಂದೆಯ ಮಾತನ್ನು ಮನ್ನಿಸಿ, ಗುರುವೂ ತನ್ನನ್ನು ಕೊಂಚ ತಿದ್ದಿಕೊಂಡು, ಈ ಸಂಭ್ರಮದಲ್ಲಿ ಸೇರಿ, ಶ್ರೀಕಂಠನೊಡನೆ ಕಾಲೇಜು, ಬೆಂಗಳೂರು ಉದ್ಯೋಗ ಮೊದಲಾಗಿ ಮಾತಾಡುತ್ತ ಚೆನ್ನಾಗಿ ನಡೆದುಕೊಂಡ. ಹೆಂಗಸ ರಿಬ್ಬರೂ ಸೀರೆ, ಒಡವೆಗಳಲ್ಲಿ ಮಗ್ನರಾಗಿದ್ದರೂ, ಸಣ್ಣಮ್ಮ, ಗೌರಮ್ಮನನ್ನು ಆಗಾಗ್ಗೆ ಎಚ್ಚರಿಸಿ, ಒತ್ತಾಯದಿಂದ ಉಪಚರಿಸಿದಳು. ಆದರೆ ಮಾತಿನ ಮುಂದೆ ತಿಂಡಿ ತೀರ್ಥ ಸಾಗಲಿಲ್ಲ ನಂಜಪ್ಪನ ನಕಲಿಯೂ ಕೂಡ ಮೇಲು ಮಟ್ಟದಲ್ಲಿತ್ತು.

ಸಾಹುಕಾರರ ಮತ್ತು ಸಣ್ಣಮ್ಮನ ಗಮನ ಅತಿಥಿಗಳ ಮೇಲೆ ಎಷ್ಟೇ ಇದ್ದರೂ, ಒಂದು ಕಣ್ಣು ಕುಸುಮಳ ಕೋಣೆಯ ಮೇಲೇ ಇತ್ತು. ಅವರು ಮುಖದಲ್ಲಿ ಎಷ್ಟೇ ನಸುನಗೆಯನ್ನು ಸುರಿಸುತ್ತಿದ್ದರೂ, ಅವರ ಮನಸ್ಸಿನಲ್ಲಿ ಆತಂಕವಿತ್ತು, ಎದೆಯಲ್ಲಿ ಹೆದರಿಕೆಯಿತ್ತು. ಮಾತು ಸತ್ಕಾರಗಳ ಮಧ್ಯೆ, ಇಬ್ಬರೂ ಅವಕಾಶವನ್ನು ಒದಗಿಸಿಕೊಂಡು, ಅವಳಲ್ಲಿಗೆ ಹೋಗಿ ಪ್ರೋತ್ಸಾ-

ಹಿಸಿ, ಪ್ರಾರ್ಥಿಸಿ, ಒತ್ತಾಯಪಡಿಸಿ, ಬರುತ್ತಿದ್ದರಾದರೂ ಅವಳು ಒಪ್ಪಿ-ಕೊಂಡೇ ಇರಲಿಲ್ಲ. ಅತಿಥಿಗಳು ಎಷ್ಟು ಹೊತ್ತು ತಡೆದಾರು ?

" ಎಲ್ಲಿ ತಮ್ಮ ಮಗಳೂ ಇಲ್ಲೀ ಬರಬಹುದಾಗಿತ್ತಲ್ಲ ? " ವಿಷ ಕಂಠಯ್ಯನವರು ಕಡೆಗೆ ನಸುನಗುತ್ತ ಕೇಳಿಬಿಟ್ಟರು.

ಸಾಹುಕಾರರು ಕೊಂಚ ಪೆಚ್ಚಾಗಿ ಚೇತರಿಸಿಕೊಂಡರು.

" ಏನೋ ಹುಡುಗತನ, ನಾಚಿಕೆ. ಹ್ಹ ! ಹ್ಹ ! ಬರ್ತಾಳೆ ಇನ್ನೇನು. "

" ತಮ್ಮ ಮನೆಗೂ " ನಂಜಪ್ಪ ಸೇರಿಸಿದ. ಎಲ್ಲರೂ ನಕ್ಕರು ........

" ಎಲ್ಲಿ, ನೋಡು ಸ್ವಲ್ಪ " ಸಾಹುಕಾರರು ಸಣ್ಣಮ್ಮನ ಕಡೆ ನೋಡಿದರು. ಅವಳು ಎದ್ದು ಕುಸುಮಳ ಕೋಣೆಗೆ ಹೋದಳು.

" ಮತ್ತೆ..." ಎನ್ನುತ್ತ ಏನೋ ಕೆಲಸವಿದ್ದವರಂತೆ ಸಾಹುಕಾರರೂ ಅವಳನ್ನು ಹಿಂಬಾಲಿಸಿದರು.

ಕೋಣೆಯೊಳಗೆ ಯಥಾಸ್ಥಿತಿ. ಕುಸುಮ, ತನ್ನ ಅಳುವಿನ ಕುಸಕುಸ ಕೇಳಿಸದಂತೆ ದಿಂಬಿಗೆ ಮುಖ ಕೊಟ್ಟು, ಅಳುತ್ತ ಮಲಗಿದ್ದಳು. ತಾಯಿ ಅವಳನ್ನು ತಬ್ಬಿಕೊಂಡು ಏಳಿಸುತ್ತ " ಕುಸುಮ ಇದೇನೆ ಹೀಗೆ ಮಾಡ್ತೀಯೆ? ಇಷ್ಟು ಮಾಡಲಾರೆಯೇನಮ್ಮ–ನಮಗಾಗಿ,ನಿಂಗಾಗಿ? ಮದುವೆ ಅಂದರೆ ಎಷ್ಟು ಸಂತೋಷಪಡಬೇಕು, ಏನು ಕತೆ. ಅದು ಬಿಟ್ಟು....ಬೇಡ, ಏಳಮ್ಮ. ನಿಂಗೆ ಹ್ಯಾಗೆ ಅಂದರೆ, ಇಷ್ಟ ಬಂದ ಹಾಗೆ ಬಂದು ಕ್ಷಣಕಾಲ ಕೂತಿದ್ದು ಬಂದುಬಿಡು. ಬಾಮ್ಮಾ" ಎಂದು ಪಿಸಿಗುಟ್ಟುತ್ತ ಅಂಗಲಾಚಿದಳು.

" ಅಯ್ಯೊ ಅಮ್ಮ, ನಿಂಗೆ ಗೊತ್ತಿಲ್ಲ........" ಕುಸುಮ ಎದ್ದು ಕುಳಿತು, ಅಳುವಿನ ಮಧ್ಯೆ ಹೇಳಿದಳು.

ಈಗ ತಂದೆಯೂ ಬಂದರು.

" ಕುಸುಮಾ, ಚಿನ್ನ. ಇನ್ನೂ ಹೀಗೇ ಇದೀಯ ? ಬೇಗ ಮಾಡು. ಹಟ ಹಿಡೀಬೇಡ. ನನ್ನ ಮಾನ ಉಳಿಸು, ಪುಟ್ಟ, ಕಳೀಬೇಡ " ಅವರೂ ಪಿಸಿಮಾತಿನಲ್ಲಿ ಬೇಡಿಕೊಂಡರು.

" ಬಾ, ನಾನೇ ಬೇರೆ ಸೀರೆ ಉಡಿಸುತ್ತೀನಿ. ಹಳೀ ಸೀರೆ ಬಿಚ್ಚು " ಸಣ್ಣಮ್ಮ ಕುಸುಮಳ ಸೆರಗನ್ನು ಸ್ವಲ್ಪ ಓರೆ ಮಾಡಿದಳು.

" ಬೇಡಮ್ಮ. ಬೇಡ. ಅಯ್ಯೋ ಬಿಡು ! ನಾನೇ ಮಾಡಿಕೋತೀನಿ."

" ಹಾಗೇ ಮಾಡು ತಾಯಿ. ನನ್ನಮ್ಮ. ಬೇಗ ಉಟ್ಕೋ. ನೀರು ತರುತ್ತೇನಿ---ಮುಖ ಒರಸಿಕೊಳ್ಳೋದಕ್ಕೆ '' ಸಣ್ಣಮ್ಮ ಹೋದಳು.

" ಬೇಗ ಬಂದುಬಿಡು. ಕಾಯ್ತನ ಇದಾರೆ. ಒಳ್ಳೇ ಹುಡುಗಿ, ನನ ಚಿನ್ನ! '' ಸಾಹುಕಾರರೂ ಹೊರಗೆ ಹೋದರು.

" ಇನ್ನೇನು ಬರ್ತಾಳೆ '' ಎಂದು ಸಾಹುಕಾರರು ಅತಿಥಿಗಳಿಗೆ ತಿಳಿಸಿದರು.

ಇನ್ನೂ ಹತ್ತು ನಿಮಿಷ.

" ಓ ಅಲಂಕಾರಪೂರ್ತಿಯಾಗಿ ನಟಿ ಇತ್ತ ಬಂದಳು '' ಅಂದ ನಂಜಪ್ಪ.

ಎಲ್ಲರ ಗಮನವೂ ಅತ್ತ ಹೋಯಿತು. ಕುಸುಮ, ತಾಯಿಯ ಜತೆ ಬಂದು ಗೌರಮ್ಮನವರ ಬಳಿಯಲ್ಲಿ ಕುಳಿತಳು. ಪೌಡರ್, ಪಫ್, ಲೋಲಾಕು, ಹೇರ್‌ಪಿನ್. ಬ್ರೋಚ್---ಹಿಂದಿನ ಅಲಂಕಾರ ಒಂದೂ ಇರಲಿಲ್ಲ. ತಲೆಯನ್ನು ಎಷ್ಟೋ ಅಷ್ಟು ಬಾಚಿದ್ದಳು. ಬಿಡಿಗುರುಳುಗಳು ಇನ್ನೂ ಅಲೆದಾಡುತ್ತಿದ್ದುವು. ತಾಯಿ ಕೊಟ್ಟ ಹೂಗಳಲ್ಲಿ ಒಂದೇ ಕೆಂಪು ಗುಲಾಬಿ ಜಡೆಯಲ್ಲಿತ್ತು. ಬಿಳಿಯ ಸೀರೆಯುನ್ನುಟ್ಟು, ರಕ್ತಬಣ್ಣದ ಸಾದಾ ರವಿಕೆ ತೊಟ್ಟಿದ್ದಳು. ತಾಯಿ ಬಲವಂತದಿಂದ ಹಾಕಿದ ಒಂದೇ ಎಳೆ ಚಿನ್ನದ ಹಾರವೇ ಕತ್ತಿನ ಒಡವೆ. ಕಿವಿಯ ವಜ್ರದ ಬೆಂಡೋಲೆ ಮಾತ್ರ ಹಾಗೇ ಇತ್ತು. ಹಿಂದಿನ ಹುಡುಗತನದ ವಯ್ಯಾರ ಈಗ ಹೆಂಗಸಿನ ಗಾಂಭೀರ್ಯಕ್ಕೆ ಎಡೆಗೊಟ್ಟಿತ್ತು. ಮುಖಮುದ್ರೆಯಲ್ಲಿ ಗೆಲುವಿನ ಬದಲು ಚಿಂತೆಯ ಸವಿಛಾಯೆ. ಈಗ ಮನಸ್ಸಿಟ್ಟು ನೋಡಿದ ತಂದೆಗೆ, ಮಗಳು ಮೈತುಂಬಿಕೊಂಡತೆ ಕಾಣಿಸಿತು. ಸಂದರ್ಭವೋ ಏನೋ, ಬಿಳಿಚಿನ ಮುಖಕ್ಕೆ ಕೆಂಪೇರಿಸಿತ್ತು. ಸಾಹುಕಾರರಿಗೆ ಮಗಳು ಬಹಳ ಆಕರ್ಷಣೀಯವಾಗಿ ಕಂಡಳು. ' ಹೆಣ್ಣು ಮಕ್ಕಳು ಎಷ್ಟು ಬೇಗ ಬದಲಾಯಿಸುತ್ತಾರೆ ! ' ಎಂದುಕೊಂಡು ' ಸರಿಯಾಗಿ ಅಲಂಕಾರ ಮಾಡಿಕೊಂಡಿದ್ದರೆ ಇನ್ನೂ ಹೇಗಿರುತ್ತಿದ್ದಳೊ ' ಎಂದು ಕೊರಗಿದರು. ಗುರು ನಿಟ್ಟಿಸಿ ನೋಡಿ, ಆಶ್ಚರ್ಯದಿಂದ ' ನಿಜವಾಗಿಯೂ ಈಗ ನಿರಾಭರಣ ಸುಂದರಿ. ಇಂಥ ಹುಡುಗಿ ಆ ಹಾಳು ಅಲಂಕಾರಗಳಲ್ಲಿ ಹೇಗಾಗಿದ್ದಳು. ಈಗಲಾದರೂ ಸರಿಯಾಗಿದ್ದಾಳಲ್ಲ ' ಎಂದುಕೊಂಡ. ನಂಜಪ್ಪ

ಹೊಸ ಹೆಂಗಸನ್ನು ಕಂಡಂತೆ ಬಾಯಿಬಿಟ್ಟುಕೊಂಡಿದ್ದ. ಅತಿಥಿಗಳೂ—ಅವರಲ್ಲಿಯೂ ಶ್ರೀಕಂಠ—ನಟ್ಟ ನೋಟದಿಂದ ನೋಡಿದರು. ಗೌರಮ್ಮನ ಮುಖವೇನೋ ಕೊಂಚ ಬಿದ್ದು ಅನಂತರ ಎದ್ದಿತು. ಅವಳು ಒಡವೆಗಳನ್ನು ಯೋಚಿಸುತ್ತಿದ್ದಿರಬೇಕು. ಇದನ್ನು ತಿಳಿದ ಸಾಹುಕಾರರು "ಎಷ್ಟೆಷ್ಟೋ ಒಡವೆ ಮಾಡಿಸಿಟ್ಟಿದೆ. ಈಚೆಗೆ ಒಂದನ್ನೂ ಹಾಕಿಕೊಳ್ಳೋದೆ ಇಲ್ಲ. ಅವಳಿಗೆ ಸರಳತೆಯ ಮೇಲೇ ಪ್ರೇಮ" ಅಂದರು. "ಅದೇ ಚಂದ ಒಡವೆ, ವಸ್ತು ಮಾಡಿಸದೇ ಉಂಟೆ, ಇಂಥ ಮನೇಲಿ ?" ವಿಷಕಂಠಯ್ಯನವರು ಹೆಂಡತಿಯ ಕಡೆಗೆ ನೋಡಿದರು. ಅವರು ಸುಪ್ರೀತರಾಗಿ "ನಮ್ಮ ಕಂಠಿಗೂ ಅದೊಂದು ಬೇಡ. ಈಗಿನ ಕಾಲದ ಹುಡುಗರೇ ಹಾಗೆ" ಎಂದು ಸರಿಪಡಿಸಿಕೊಂಡರು. ಇದಾದ ನಂತರ ಸಮಯೋಚಿತವಾಗಿ ವಿಷಕಂಠಯ್ಯನವರೂ ಗೌರಮ್ಮನವರೂ ಕುಸುಮಳಿಗೆ ನಾಲ್ಕಾರು ಪ್ರಶ್ನೆಗಳನ್ನು ಹಾಕಿದರು. ಅವಳು ಗಂಭೀರವಾಗಿಯೇ ತೃಪ್ತಿಕರವಾಗಿಯೇ ಉತ್ತರ ಕೊಟ್ಟಳು. ಆದರೆ ವಿಷಕಂಠಯ್ಯನವರು ನಿರೀಕ್ಷಿಸಿದಷ್ಟು ಉತ್ಸಾಹ ಕಾಣಲಿಲ್ಲ. ಅವರು "ಹುಡುಗಿ ತುಂಬ ನಾಚಿಕೋತಾಳೆ ಅಂತ ಕಾಣುತ್ತೆ." ಎಂದರು. ಸಾಹುಕಾರರಿಗೆ ಏನೂ ತೋರದೆ ಸುಮ್ಮನೆ 'ಹ್ಹ! ಹ್ಹ!' ಎಂದು ತೇಲಿಸಿ ನಕ್ಕರು. ನಂಜಪ್ಪ "ಮುಖ ನೋಡಿ, ಮಾತು ಕೇಳಿ, ಮೋಸ ಹೋಗಬೇಡಿ. ಅವಳ ಹೊಟ್ಟೆತುಂಬ ಚೇಷ್ಟೆಯೇ ತುಂಬಿದೆ. ನಂಗಂತೂ ಮಾವನಾಗಿ ತಡೆದುಕೊಳ್ಳೋದೇ ಅಸಾಧ್ಯವಾಗಿದೆ. ಸದ್ಯ, ನೀವು ಕರೆದುಕೊಂಡು ಹೋದರೆ ಹಾಯಾಗಿ ಇಲ್ಲಿ ಬಾಳಬಹುದು. ಅಂತೂ ನೀವೂ ನೋಡಿ ಮಾಡಿಕೊಳ್ಳಿ. ಈಗಲೇ ಎಚ್ಚರಿಕೆ ಕೊಟ್ಟಿದೀನಿ." ಎಂದು ಹಾಸ್ಯದಲ್ಲಿ ಸಮಾಧಾನ ಕೊಟ್ಟ. ಎಲ್ಲರೂ ನಕ್ಕರು. ಕುಸುಮಳ ಮುಖ ಇನ್ನೂ ಕೆಂಪೇರಿತು. ಹಣೆಯ ಮೇಲೆ ಬೆವರುಹನಿಗಳು ಕೂಡಿದುವು. ಮಾಮೂಲಿನಂತೆ ಹಾಡೂ ಆಯಿತು. ವಿದ್ಯದ ಮಾತಾಡಿದಾಗ ಸಾಹುಕಾರರು 'ಎಸ್. ಎಸ್. ಎಲ್. ಸಿ ಹೆಣ್ಣು ಮಕ್ಕಳಿಗೆ ಸಾಕು ಅಂತ ನನ್ನ ಅಭಿಪ್ರಾಯ. ಹೆಚ್ಚು ಬೇಕಾದರೆ ಓದಿಸಬಹುದು." ಎಂದು ಶ್ರೀಕಂಠನ ಕಡೆಗೆ ನೋಡಿದರು. ಅವನು ತಟ್ಟನೆ ಕುಸುಮಳಿಂದ ಕಣ್ಣು ತೆಗೆದ, ಅಷ್ಟೆ. ವಿಷಕಂಠಯ್ಯನವರು "ನನ್ನ ಅಭಿಪ್ರಾಯವೂ ಅದೇ. ಹೆಚ್ಚು ಓದಿ ಆಗೋದೇನು? ಸಂಗೀತದ ಹಾಗೆ. ಏನೋ

ಸಂಗೀತ ಬರುತ್ತೆ ಅಂತ ಮದುವೆಯ ಹೊತ್ತಿನಲ್ಲಿ ಲಕ್ಷಣವಾಗಿ ನಾಲ್ಕು ಹಾಡು ಹೇಳೋದಕ್ಕೆ ಬಂದರೆ ಸಾಕು. ಆಮೇಲೆ ರೇಡಿಯೋದಲ್ಲಿ ಹಾಡ ಬೇಕಾಗಿದೆಯೆ–ಈಗ ' ಸರಿಗಮಪಧನಿಸ ' ಅಂದೋರೆಲ್ಲ ಹೇಳ್ತಾರಲ್ಲ ಹಾಗೆ? ಹೇಗಿದ್ದರೂ ಮನೆ, ಸಂಸಾರ, ಮಕ್ಕಳು, ಮರಿ, ಅಂದ ಮೇಲೆ ಎಲ್ಲ ಹೋಗೇ ಹೋಗುತ್ತೆ. " ಎಂದರು. ಅದಕ್ಕೆ ಸಾಹುಕಾರರು " ಹುಡುಗರ ಇಷ್ಟ ಹೇಗಿರುತ್ತೊ, ಬೇಕಾದ ಹಾಗೆ ಮಾಡಬಹುದು. '' ಎಂದು ಮಾತನ್ನು ಹೊರಳಿಸಿದರು.

ಇನ್ನಷ್ಟು ಹೊತ್ತು ಏನೇನೋ ಮಾತುಕತೆಗಳಾದ ಮೇಲೆ ವಿಷಕಂಠಯ್ಯನವರು ಸೂಚ್ಯವಾಗಿ ಕುಸುಮಳಿಗೆ " ನೀನು ಬೇಕಾದರೆ ಹೋಗಬಹುದಮ್ಮ " ಅಂದರು. ಸಾಹುಕಾರರು " ನಮಸ್ಕಾರ ಮಾಡಮ್ಮ. " ಅಂದಾಗ ಕುಸುಮ ಹಿರಿಯರಿಗೆ ನಮಸ್ಕರಿಸಿ ಹೋದಳು. ಸಣ್ಣಮ್ಮ ಅವಳನ್ನು ಹಿಂಬಾಲಿಸಿದಳು. ಸಾಹುಕಾರರು "ಸ್ವಲ್ಪ ಬಂದು ಬಿಟ್ಟೆ" ಎಂದು ಬೇಕಾಗಿ ಹೊರಗೆ ಹೋಗಿ " ನಂಜಪ್ಪ! " ಎಂದು ಕರೆದರು. ಅವನೂ ಹೋದ. ಗುರು ಏನೂ ಹೇಳದೆಯೇ ತನ್ನ ಕೋಣೆಗೆ ಹೋದ.

ಕೋಣೆಯನ್ನು ಹೊಕ್ಕವಳೆ ಕುಸುಮ " ದೇವರೆ ಒಪ್ಪದಿರಲಪ್ಪ ! " ಎಂದು ಪ್ರಾರ್ಥಿಸಿದಳು. ಆದರೆ ಸ್ವಲ್ಪ ಹೊತ್ತಿನಲ್ಲೇ ಹಾಲ್‌ನಿಂದ ಮಾತುಗಳು ಕೇಳಿಸಿದುವು:

" ನಮಗೆಲ್ಲ ಒಪ್ಪಿಗೆ.'' ವಿಷಕಂಠಯ್ಯನವರ ಧ್ವನಿ.

ಕುಸುಮಳ ಎದೆ ಹೊಡೆದುಕೊಳ್ಳಲಾರಂಭಿಸಿತು.

" ಬಹಳ ಸಂತೋಷ. ಹಾಗಾದರೆ........" ಸಾಹುಕಾರರು.

" ಬಾಕೀದೆಲ್ಲ ತಮಗೇ ಸೇರಿದ್ದು.''

" ಮಾಘಮಾಸದಲ್ಲೇ ಆಗಿಹೋಗಲಿ. "

" ತಮ್ಮ ಇಷ್ಟದಂತೇ ಆಗಲಿ. ಶುಭಸ್ಯ ಶೀಘ್ರಂ. ''

ಕುಸುಮಳ ಕಿವಿಗೆ ಇನ್ನೂ ಮಾತುಗಳು ಕೇಳಿದುವು. ಆದರೆ ಒಂದೂ ಅರ್ಥವಾಗಲೇ ಇಲ್ಲ. ಬರಿಯ ಶಬ್ದ. ಹಾಗೇ ತತ್ತರಿಸಿ ಕುರ್ಚಿಯನ್ನು ಹಿಡಿದುಕೊಂಡು ಅದರ ಮೇಲೆ ಕುಕ್ಕರಿಸಿಕೊಂಡಳು. ಕಲ್ಲಿನ ವಿಗ್ರಹದ ಹಾಗೆ ನಿಶ್ಚೇಷ್ಟಿತಳಾದಳು. ಕಾರಿನ ಶಬ್ದ ಕೇಳಿಸಿದಂತಾಯಿತು. ತಂದೆ

ತಾಯಿಯರು ಧಾವಿಸುತ್ತ ಬಂದು ಆವೇಶದಿಂದ ಏನೇನನ್ನೋ ಹೇಳಿದರು, ಬೆನ್ನು ತಟ್ಟಿದರು, ತಲೆ ಸವರಿದರು, ನಗುತ್ತ ಹೋದರು. ಕುಸುಮಳಿಗೆ ಕಂಡೂ ಕಾಣಿಸದ, ಕೇಳಿಸಿಯೂ ಕೇಳಿಸದ, ಮುಟ್ಟಿಯೂ ಎಚ್ಚರಿಸದ, ತೀಕ್ಷ್ಣ ಯೋಚನೆಯ ಕನಸು, ಸಮಾಧಿ.

" ಕುಸುಮ !........ಕುಸುಮ್ !........ಕುಸುಮ್ ! "

ಈ ಮೇಲುಮಾತಿನ ಪ್ರೇಮದ ಕರೆ ಕನಸನ್ನು ಒಡೆದು ಎಚ್ಚರಿಸಿತು. ಕುಸುಮ ಕತ್ತೆತ್ತಿದಳು. ಅಣ್ಣ ಬಗ್ಗಿ ಅವಳ ಕಡೆಗೇ ನೋಡುತ್ತಿದ್ದ.

" ಅಣ್ಣಾ ! ಇನ್ನೇನು ಗತಿಯಣ್ಣಾ ನಂಗೆ ! " ಕುಸುಮ ಎರಡು ಕೈಗಳಿಂದಲೂ ಮುಖವನ್ನು ಮುಚ್ಚಿಕೊಂಡು ಬಿಕ್ಕಳಿಸಿದಳು.

" ಯಾಕೆ, ಕುಸುಮ ? ನಿಂಗೆ ಈಗಲೂ ಇಷ್ಟವಿಲ್ಲವೆ ? " ಅವಳ ಕೈಗಳನ್ನು ಮೃದುವಾಗಿ ಬಿಡಿಸಲು ಕೈಹಾಕಿದ.

" ಅದಲ್ಲ........ಅದಲ್ಲ........ಅಣ್ಣಾ, ಹೇಗೆ ಹೇಳಲಿ ? " ಕಸುಮ ಕೈ ತೆಗೆಯದೆ ಬಗ್ಗಿ, ತನ್ನ ತಲೆಯ ಭಾರವನ್ನೆಲ್ಲ ಅವನ ಕೈಗಳ ಮೇಲೇ ಹಾಕಿ ಮತ್ತೂ ಅತ್ತಳು.

" ಯಾವುದು ? ಏನಾಯ್ತು ? " ಆತಂಕದಿಂದ ಕೇಳಿದ.

" ನನ್ನ ಗತಿ........ಆಗಿಹೋಯ್ತು."

" ಏನು ಕುಸುಮ, ಅಂಥಾದ್ದು ? "

" ಅ....ವಿ....ವೇ....ಕ. "

" ಅವಿವೇಕ ! "

" ಮೋಸ ಹೋದೆ........ಹೊಸ ತತ್ವದ ಸೋಗಿಗೆ ಮನಸ್ಸು ಸೋತು ಮೈಮರೆತೆ. ಕೊಟ್ಟ ಭರವಸೆ ನಂಬಿದೆ........ಅಯ್ಯೋ ! "

' ಯಾರು ? "

" ಅವರೇ. "

ಗುರುವಿನ ಮನಸ್ಸು ತಟ್ಟನೆ ಊಹಿಸಿಕೊಂಡಿತು. ಆಗಿದ್ದ ಅನುಮಾನ ಗಟ್ಟಿಯಾಯಿತು.

" ಕಾಮೇಶ್ವ........"

ಕುಸುಮ ಹೌದೆನ್ನುವಂತೆ, ತಲೆಯಾಡಿಸಿದಳು.

"ನಿನ್ನ ಎಚ್ಚರಿಕೆ ತಗೊಳ್ಳದೆ ಹುಚ್ಚಳಾಗಿ........"

"ಆ ಮಾತು ಯಾಕೆ ಕುಸುಮ. ನಾನೂ ಹೀಗೆ ನಿರೀಕ್ಷಿಸಿರಲಿಲ್ಲ."

"ಸಾಯೋಣ ಅಂದರೆ ಮನಸ್ಸು ಬರೋದಿಲ್ಲ. ಅದು ಬೇರೆ......."

"ಛಿ! ಎಂಥ ಮಾತು! ಏನಾಗಿದ್ದಕ್ಕೆ ಇಷ್ಟಕ್ಕೂ?"

"ಪಾಪ ಮಾಡಿದೆ. ಮಹಾ ಪಾಪ!"

"ಹುಚ್ಚು! ಪಾಪ ಎಲ್ಲಿದೆ? ಸಾಮಾಜಿಕವಾಗಿ ತಪ್ಪಾಗಬಹುದು, ಅಷ್ಟೆ. ನೈಸರ್ಗಿಕವಾಗಿ ತಪ್ಪೂ ಅಲ್ಲ."

"ಅಣ್ಣಾ!" ಮೆಲ್ಲನೆ ತಲೆಯೆತ್ತಿ ಕೃತಜ್ಞತೆಯ ಕಣ್ಣುಗಳಿಂದ ನೋಡಿದಳು.

"ಹೌದು" ಭರವಸೆ ಕೊಟ್ಟ.

"ಆದರೆ ಈ ಅವಮಾನ ಹೀನಾಯ........"

"ರೂಢಿ ಹೊರಿಸಿದ ಕ್ರೂರ ಹೊರೆ---ಎಚ್ಚರ ತಪ್ಪಿ ಅನಾನುಕೂಲ ವಾಗದಿರಲಿ ಅಂತ, ಅಷ್ಟೆ. ಅದಕ್ಕಾಗಿ ಹೆದರಬೇಡ; ನೋಯಬೇಡ. ನೀನೇನು ಸಂಸಾರ ಬೇಡ ಅನ್ನೋದಿಲ್ಲವಲ್ಲ. ಹಾಗೆ ಅನ್ನೋರಿಗೆ ಆ ಅವ ಮಾನ ಸೇರಿದ್ದು. ಈಗಲೂ ಸರಿಪಡಿಸಿದರಾಯ್ತು—ಯಾವಾಗಲಾದರೇನು."

ಕುಸುಮ ಅತ್ತಿತ್ತ ತಲೆಯಾಡಿಸಿದಳು.

"ಯಾಕೆ?" ಗುರು ಅನುಮಾನಿಸಿದ.

"ಸರಿಯಾಗೋದಿಲ್ಲಣ್ಣ."

"ಹೇಗೆ?"

"ಎಷ್ಟೋ ಕಾಗದ ಬರೆದೆ—ನನ್ನ ಸ್ಥಿತಿ ತಿಳಿಸಿ."

"ಹುಂ."

"ಉತ್ತರ ಬರಲೇ ಇಲ್ಲ."

"ಹೂಂ!" ಗುರು ತೀಕ್ಷ್ಣವಾಗಿ ಯೋಚಿಸಿದ.

"ಅವರು ಬರೋದಿಲ್ಲ."

"ಬರೋದಿಲ್ಲ! ಕರೆದುಕೊಂಡೇ ಬರುತ್ತೀನಿ."

"ಅಂ! ಹೇಗೆ ಸಾಧ್ಯ, ಅಣ್ಣ?"

"ನಂಗೆ ಬಿಡು."

" ಅಷ್ಟು ಮಾಡ್ತೀಯ ? " ಅವಳ ಬಾಡಿದ ಮುಖ ನಿರೀಕ್ಷಣೆಯಿಂದ ಅರಳಿತು.

" ಖಂಡಿತವಾಗಿ. "

" ಅವರಿಗೆ ಇಷ್ಟವಿಲ್ಲದಿದ್ದರೆ ? " ಭಯ, ಅನುಮಾನ.

"ಏನಾದರೂ ಬರಲೇಬೇಕು;ನಯದಿಂದಲ್ಲದಿದ್ದರೆ ಭಯದಿಂದಲಾದರೂ ಮದುವೆಯ ಮುದ್ರೆ ಬೀಳಬೇಕು. ಅದು ಜವಾಬ್ದಾರಿ ಇರದ ನಡತೆಯ ಹಿಡಿತಕ್ಕೆ ಬೇಕಾದ ಕಟ್ಟು. ಸಾಮಾಜಿಕ ಏರ್ಪಾಡು. ಅದರ ಪವಿತ್ರತೆಯಲ್ಲಿ ನಂಗೆ ನಂಬಿಕೆಯಿಲ್ಲ, ಅವಶ್ಯಕತೆಯಲ್ಲಿದೆ. "

" ಅಪ್ಪ, ಅಮ್ಮ ಒಪ್ಪಬೇಕಲ್ಲ? "

" ಒಪ್ಪದೆಯೇನು ? ಇದಲ್ಲದೆ ಯಾವ ದಾರಿ ಇದೆ ? ಅವನಿಗೆ ಗೊತ್ತಾಗೋದಿಲ್ಲವೆ ? "

" ಮತ್ತೆ ಆ ಮದುವೆ ಬೇರೆ........"

" ಅದು ನಿಂತ ಹಾಗೇ. ನೀನು ಮೊದಲೇ ಹೇಳಿದ್ದರೆ ಇಷ್ಟೂ ಮುಂದುವರೀತಾ ಇರಲಿಲ್ಲ. "

" ಹೇಗೆ ಹೇಳಲಿ ಅಣ್ಣ—ಅವರ ನೆಚ್ಚಿಗೆ ಇಲ್ಲದೆ ? ಯಾವ ಮುಖದಿಂದ ಹೇಳಲಿ ? ಅಂಥಾ ಚಿಂತೆ ದುಃಖ ಅವಮಾನ ಅಪ್ಪ ಅಮ್ಮ—ಎಲ್ಲರಿಗೂ ಇವತ್ತು ಬರೀತಾರೆ ನಾಳೆ ಬರ್ತಾರೆ, ಆಗ ಸರಿಯಾದ ಕಾಲ ಬರುತ್ತೆ, ಗೊತ್ತಾಗಲಿ, ಕೊಂಚ ಸಮಾಧಾನವಾಗಿರುತ್ತೆ ಅಂತಲೇ ಕಾಲ ಹಾಕಿದೆ. ಇವತ್ತಿನ ನಿರಾಸೆ, ಗಾಬರಿ, ದಿಕ್ಕುಗೆಡಿಸಿ ಹೇಳಿಸಿಬಿಟ್ಟುವು. "

" ಒಳ್ಳೇದೇ ಆಯ್ತು........ ಹುಂ, ಅವರದ್ದು ತೀರ್ಮಾನವಾಗದೆ ಬೇರೆಯವರಿಗೆ ಹೇಳೋದು ಸರಿಯಿಲ್ಲ. ಇದು ನೇರವಾಗದಿದ್ದರೆ—ಒಂದು ವೇಳೆ—ಯಾರಿಗೂ ಹೇಳದೆಯೇ ಇದ್ದರೂ ಇರಬಹುದು. "

" ಅದು ಹೇಗಣ್ಣ ? "

" ಮದುವೆ ಬೇಡ ಅಂದು ಅಗತ್ಯವಾದರೆ ಮನೆ ಬಿಟ್ಟೇ ದೂರ ಹೋಗಿ ಇದ್ದುಬಿಡೋದು—ಇಬ್ಬರೂ. ನಾನು ಕೆಲಸ ಮಾಡಿಕೋತೀನಿ. "

" ಅಷ್ಟಕ್ಕೆ ಬರುತ್ತೇನಣ್ಣ ? "

"ಇಲ್ಲ. ಇಲ್ಲ. ಬಂದರೂ ಬಾಳನ್ನು ಎದುರಿಸೋದು, ಅಲ್ಲವೆ ? ಅದರಲ್ಲಿ ಏನು ತಪ್ಪು ? ಯಾಕೆ ಹೀನಾಯ, ಭಯ ?"

"ನಿನ್ನ ಜತೆ ಇದ್ದರೆ ನಂಗೆ ಯಾತರ ಭಯ ?"

"ಹುಂ, ಆ ಮಾತೇಕೆ ಈಗ ? ಎಲ್ಲ ಸರಿಯೇ ಆಗುತ್ತೆ, ನೋಡ್ತಾ ಇರು."

"ಹಾಗೇ ಆಗಲಣ್ಣ—ದೇವರ ದಯದಿಂದ, ನಿನ್ನ ಯತ್ನದಿಂದ."

"ಇವತ್ತೇ ಹೊರಟು ನಾಡಿದ್ದು ಕರೆದುಕೊಂಡೇ ಬಂದು ಬಿಡುತ್ತೇನಿ."

"ಆಹಾ, ಅಷ್ಟೊಂದಾದರೆ ! ಅಣ್ಣ ನೀನು ಇವತ್ತು ಬರದೇ ಇದ್ದರೆ ಏನಾಗುತ್ತಿತ್ತು ! ಅಬ್ಬ ! ನಾನಂತೂ........"

"ಮತ್ತೆ ಹುಚ್ಚಳಾಗಬೇಡ. ಆಗ ನಿಜವಾದ ಅವಿವೇಕವಾದೀತು."

"ಇಲ್ಲ. ಆ ಯೋಚನೆಯಿಲ್ಲ—ನಂಗಾಗಿ ಅಲ್ಲದಿದ್ದರೂ ಅದಕ್ಕಾಗಿ."

"ಅದು ನಿಜವಾದ ತಾಯಿಯ ಹಾಗೆ. ಧೈರ್ಯದಿಂದಿರು. ನಾನಿನ್ನು ಸಿದ್ಧವಾಗಬೇಕು." ಗುರು ಅವಳಿಗೆ ಉತ್ತೇಜನ ಕೊಡುವಂತೆ ಬೆನ್ನು ಸವರಿ ಹೊರಟು ಹೋದ. ಸುಸುಮ ಉದ್ದವಾಗಿ ಉಸಿರನ್ನು ಬಿಟ್ಟು ಹಾಸಿಗೆಯ ಮೇಲೆ ಬಿದ್ದುಕೊಂಡಳು. ಕೈ ದಿಂಬಿಗೆ ತಲೆ ಕೊಟ್ಟು ಮುಂದನ್ನು ಆಸೆ, ನಿರೀಕ್ಷೆಗಳಿಂದ ಯೋಚಿಸಿದಳು. ಭಯ ಮಧ್ಯೆ ಮಧ್ಯೆ ತಲೆ ಹಾಕುತ್ತಿತ್ತು.

ಅದೇ ಸಂಜೆ ಗುರು ಮೈಸೂರಿಗೆ ಹೊರಟ. ಸ್ನೇಹಿತನನ್ನು ನೋಡುವ ನೆಪ ಹೇಳಿದ. ಯಾರೂ ಅಡ್ಡಿಮಾಡಲಿಲ್ಲ. ಡಾಕ್ಟರೂ ಟಾನಿಕ್, ವಿಶ್ರಾಂತಿ ಗಳ ಜತೆಗೆ ಬದಲಾವಣೆಯನ್ನೂ ಸೂಚಿಸಿದ್ದರು. ಇದರಿಂದ ಸಾಹುಕಾರ ರಿಗೂ ಸಮಾಧಾನವೇ ಆಯಿತು. ಗುರುವಿಗೆ ರಾತ್ರಿ ರೈಲಿನಲ್ಲಿ ನಿದ್ರೆ ಬರ ಲಿಲ್ಲ. ಎರಡನೆಯ ತರಗತಿಯ ಮೆತ್ತೆಯ ಮೇಲೆ ಹೊರಳಾಡಿದ. ಎದೆ ಸುಮ್ಮನೆ ಕುದಿಯುತ್ತಿತ್ತು. ತಂಗಿಯ ವ್ಯಥೆ ತುಂಬಿದ ಮುಖ ಮುಂದೆಯೇ ಬಂದು ಬಾಧಿಸುತ್ತಿತ್ತು; ನೋವಿನ ದೃಷ್ಟಿ ಕೊರೆಯುತ್ತಿತ್ತು. ಎಂದಿಗೆ ಬೆಳ ಗಾದೀತೋ, ವಿಷಮ ವಿಷಯ ಎಂದಿಗೆ ಸಮರ್ಪಕವಾಗಿ ತೀರ್ಮಾನ ವಾದೀತೋ, ತಂಗಿ ಧನ್ಯಳಾದಾಳೋ ಎಂದು, ಮನಸ್ಸು ನಾಳೆಯ ದೃಶ್ಯಕ್ಕಾಗಿ ತವಕಪಡುತ್ತಿತ್ತು. ಹತ್ತಾರು ಬಾರಿ ಅದನ್ನು ರಚಿಸಿಕೊಂಡು ತನ್ನ ಭಾಗ ವನ್ನು ಗಟ್ಟಿಮಾಡಿಕೊಂಡ. ಯಾವ ರೀತಿಯೂ ಸಾಕಾದಷ್ಟು ತೃಪ್ತಿಕರವಾಗಿ

ತೋರಲಿಲ್ಲ ಬೇಸರದಿಂದ ಭಂಗಪಟ್ಟ. ಆಸೆ ನಿರಾಸೆಗಳು, ಭರವಸೆ ಆತಂಕಗಳು, ಗಳಿಗೆ ಗಳಿಗೆಗೂ ಅದಲುಬದಲಾಗುತ್ತಿದ್ದುವು. ಬೆಳಗಾದಾಗ ಕಣ್ಣು ಉರಿಯುತ್ತಿತ್ತು, ತಲೆ ನೋಯುತ್ತಿತ್ತು. ಮತ್ತಷ್ಟು ಕಾಲ ಚಿತ್ರಹಿಂಸೆ. ಹನ್ನೊಂದು ಗಂಟೆಗೆ ಮೈಸೂರನ್ನು ಸೇರಿದ ನಿಲ್ದಾಣದಲ್ಲೇ ಹಾಸಿಗೆ ಪೆಟ್ಟಿಗೆಗಳನ್ನಿಟ್ಟು ಊಟಕ್ಕೆ ತಡೆಯದೆ ಕೈಚೀಲವೊಂದನ್ನು ತೆಗೆದುಕೊಂಡು ನೇರವಾಗಿ ಅಯ್ಯನವರ ಮನೆಗಾಗಿ ಹೊರಟ. ದಾರಿಯಲ್ಲಿ, ಹೆಜ್ಜೆಗಿಂತ ಮುಂದಾಗಿ ಎದೆ ಮುಂದೆ ಮುಂದೆ ಜಿಗಿಯುತ್ತಿತ್ತು.

ಮನೆಯನ್ನು ಪತ್ತೆಮಾಡುವುದು ಕಷ್ಟವಾಗಲಿಲ್ಲ. ಆಳೊಬ್ಬ ಬಾಗಿಲನ್ನು ತೆರೆದ.

" ಕಾಮೇಶ್ವರಯ್ಯನವರು ಇದಾರೇ ? "

" ತಾವು ಯಾರು ? "

ಗುರು ತನ್ನ ಹೆಸರನ್ನು ಹೇಳಿದ.

" ನೋಡ್ತೀನಿ, ಇದಾರೋ ಇಲ್ಲವೊ ಅಂತ. ಕೂತುಕೊಳ್ಳಿ. "

ಗುರು ಹಜಾರದಲ್ಲಿ ಕುರ್ಚಿಯ ಮೇಲೆ ಕುಳಿತ. ಆಳು ಮಹಡಿಯ ಮೇಲೆ ಹೋದವನು ಕ್ಷಣಕಾಲದ ಮೇಲೆ ಕೆಳಗಿಳಿದು ಬಂದು " ಎಲ್ಲೋ ಹೋಗಿದಾರೆ. " ಎಂದ.

" ಈ ಹೊತ್ತಿನಲ್ಲಿ ? ಊಟಕ್ಕೆ ಬಂದಿಲ್ಲವೆ, ಇನ್ನೂ ? " ಗುರುವಿಗೆ ಆಶ್ಚರ್ಯವಾಯಿತು, ಹಾಗೂ ಅನುಮಾನವಾಯಿತು. " ಕಾದಿರುತ್ತೀನಿ " ಗುರು ನಿರ್ಧರವನ್ನು ಹೇಳಿದ. ಆಳಿಗೆ ಏನು ಹೇಳಬೇಕೋ ತಿಳಿಯಲಿಲ್ಲ. ಕ್ಷಣಕಾಲ ಸುಮ್ಮನಿದ್ದು "ಆಮೇಲೆ ಬಂದರಾಗುತ್ತೆ " ಎಂದು ಸೂಚಿಸಿದ.

" ಇಲ್ಲ. ಬಹಳ ತುರ್ತು ಕೆಲಸವಿದೆ " ಗುರು ಏಳಲಿಲ್ಲ.

ಮಹಡಿ-ಮೆಟ್ಟಿಲಿನ ಶಬ್ದವಾಯಿತು.

" ಕ್ಷಮಿಸಬೇಕು. ತಕ್ಷಣ ನೆನಪಿಗೆ ಬರಲಿಲ್ಲ. ಬರೀತಾ ಇದ್ದೆ. ನೋಡಿ, ಯಾರು ಯಾರೋ ನಾಲ್ಕು ಪಂಕ್ತಿ ಬರೆದುಕೊಂಡು ಬಂದು ಬಂದು, ಮುನ್ನುಡಿ, ಅದು ಇದು, ಅಂತ ಪೀಡಿಸ್ತಾರೆ. ಸಾಹಿತ್ಯದ ಫ್ಯಾನ್‌ಗಳಂತೂ ಲೆಕ್ಕವಿಲ್ಲ. ಬರೀಗೊಡಿಸೋದಿಲ್ಲ. ಅವರು ಯಾರೋ ಅಂದುಕೊಂಡಿದ್ದೆ. ಹೀಗೆ ಅನ್ನದೇ ಇದ್ದರೆ ವಿಧಿಯಿಲ್ಲ. ತಪ್ಪು ಭಾವಿಸಬಾರದು. ಕ್ಷಮಿಸಬೇಕು.

ಯಾವಾಗ ಬಂದದ್ದು ? ಬನ್ನಿ ಮೇಲೇ.'' ಕಾಮೇಶ್ವರಯ್ಯನವರು ಕೆಳಗಿಳಿದು ಬಂದು ಗುರುವಿನ ಕೈಹಿಡಿದುಕೊಂಡು ಮೇಲಕ್ಕೆ ಕರೆದುಕೊಂಡು ಹೋದರು. ಗುರು ಏನನ್ನೂ ಹೇಳದೆ ಅವರೊಡನೆ ಹೋದ. ಇಬ್ಬರೂ ಕುಳಿತುಕೊಂಡ ಮೇಲೆ ಅಯ್ಯನವರು ಆಳನ್ನು ಕರೆದು " ಕಾಫಿಗೆ ಹೇಳೋ " ಅಂದರು.

" ಹಾಗಾದರೆ, ನನ್ನ ನೆನಪಾಯ್ತು? " ಗುರು ಮೊದಲು ಮಾಡಿದ.

" ಚೆನ್ನಾಯ್ತು ಹಾಗೆಂದರೇನು. ನಿಮ್ಮ ಮನೇಲಿ ಇದ್ದು ಅಂಥ ಆತಿಥ್ಯ ಅನುಭವಿಸಿ ಮರೆಯೋದು ಉಂಟೆ ? "

" ತಮ್ಮಂಥವರಿಗೆ ಅದೂ ಸಾಧ್ಯ—ಅಂದರೆ ಅಂಥ ಕೆಲಸ ಅಂತ."

" ಇಲ್ಲ. ಇಲ್ಲ. ಅಂಥಾದ್ದೇನು ? ''

" ತಾವು ಸುಪ್ರಸಿದ್ಧ ಸಾಹಿತಿಗಳು. ''

" ಹ್ಹ ! ಹಾ ! ಹಾಗಂತಾರೆ ಜನ. ''

" ಹತ್ತೆಂಟು ಹವ್ಯಾಸಗಳು, ಘಟನೆಗಳು, ಜನಗಳು, ಯೋಚನೆಗಳು."

" ನಿಜ. ನಿಜ. ''

'' ಹೀಗಾಗಿ ಮಹತ್ವದ ಘಟನೆಗಳೂ ಕೆಲವು ತಮಗೆ ಮರೆತು ಹೋಗ ಬಹುದು. ''

'' ಹಾಗೇನಿಲ್ಲ. ಪ್ರೊಫೆಸರಷ್ಟು ಕೇಡಿಲ್ಲ ಹ್ಹ ಹಾ ! "

'' ಅಂಥಾ ಘಟನೆಯ ನೆನಪು ಕೊಡೋದಕ್ಕೇ ಬಂದೆ "

'' ಹುಂ ! " ಅಯ್ಯನವರು ಕೊಂಚ ಬೆಚ್ಚಿದರು. ಅವರ ಮುಖ ಗಂಭೀರವಾಯಿತು. ಆದರೆ ತಕ್ಷಣವೇ ತಮ್ಮ ಕೃತಕ ಗೆಲವನ್ನು ತಂದುಕೊಂಡು '' ಅಂಥಾದ್ದೇನು ? " ಎಂದು ನಸುನಕ್ಕರು.

'' ಕುಸುಮ—ನನ್ನ ತಂಗಿಯ ನೆನಪಿರಬೇಕು. "

'' ಓಹೋ. ಅವಳೂ ನನ್ನ ಫ್ಯಾನ್. ಬಹಳ ಬುದ್ಧಿವಂತೆ. ನನ್ನ ಪುಸ್ತಕ ಗಳನ್ನು ಬಹಳ ಮೆಚ್ಚಿಕೊಂಡಿದ್ದಳು. ''

'' ಅದರಿಂದಲೇ ಅನರ್ಥವಾಯ್ತು. "

'' ಅನರ್ಥ !—ನನ್ನ ಪುಸ್ತಕದಿಂದ ! "

'' ಹೌದು. ಅವಳ ಎಳೇ ಮನಸ್ಸಿನ ಮೇಲೆ ಅವುಗಳಿಂದ ಆದ ಪರಿಣಾಮ—ಅಂಥಾದ್ದು. "

" ವಿಚಿತ್ರ ವಿಮರ್ಶೆ ! ಇಂಥಾದ್ದನ್ನ ಈವರೆಗೂ ಕೇಳಿರಲಿಲ್ಲ. "

" ನಾನು ಹೇಳುತ್ತಿದೀನಲ್ಲ. ಇಂಥ ಘಟನೆಗಳು ಇನ್ನೆಷ್ಟಿವೆಯೋ. ನಾನು ಹೇಳೋದು ಒಂದು. "

" ನಿಮ್ಮ ಅಭಿಪ್ರಾಯ ನಿಮ್ಮದು—ಸ್ವಾತಂತ್ರ್ಯವಿದೆ. "

" ಆದರೆ ಅದನ್ನು ಚರ್ಚಿಸೋದಕ್ಕಲ್ಲ ನಾನು ಬಂದದ್ದು. "

" ಮತ್ತೆ ? "

" ಕುಸುಮಳ ಕಾಗದಗಳು ತಮಗೆ ಮುಟ್ಟಿರಬೇಕು. "

" ಇರಬಹುದು. ಆದರೆ ನಂಗೆ ಫ್ಯಾನ್ ಮೇಲ್ ಬಹಳ ಬರುತ್ತೆ. ಎಲ್ಲ ನೋಡೋದಿಲ್ಲ. ಈ ಕಾಗದಗಳ ನೆನಪಿಲ್ಲ. "

ಸೇವಕ ಅಂದಿನ ಎರಡು ಕಾಗದಗಳನ್ನು ತಂದಿಟ್ಟು ಹೋದ.

" ಹಾಗಾದರೆ ಅವುಗಳ ಸಾರಾಂಶವನ್ನೂ ನಾನೇ ಹೇಳಿಬಿಡುತ್ತೀನಿ."

" ಹುಂ. "

" ಕುಸುಮ ಗರ್ಭಿಣಿ. "

ಅವರ ಮುಖ ವಿವರ್ಣವಾಗಿ ಚೀತರಿಸಿಕೊಂಡಿತು.

" ಅದಕ್ಕೆ ? "

" ಅವಳ ರಕ್ಷಣೆ ಭಾರ ತಮ್ಮದು. "

" ಏನು ! ಯಾವುದೋ ಹುಡುಗಿ ಗರ್ಭಿಣಿಯಾಗಿ....ಚೆನ್ನಾಯ್ತು ! ನಂಗೆ ಅರ್ಥವೇ ಆಗೋದಿಲ್ಲ. ಏನೋ ತಪ್ಪಿರಬೇಕು. "

" ದುಷ್ಯಂತನೂ ಹಾಗೇ ಅಂದ. ಆದರೆ ಅವನಿಗೆ ಮರೆವಿನ ಶಾಪವಿತ್ತು. ತಮಗೂ...."

" ಹ್ಹ ! ಅದೊಂದು ಕತೆ. "

" ಬಾಳಿನಲ್ಲೂ ನಡೆಯುತ್ತವೆ. ಸಾಹಿತಿಗಳಿಗೆ ಹೇಳಬೇಕಾಗಿಲ್ಲ. "

" ನೀವು ಖಂಡಿತವಾಗಿ ತಪ್ಪು ತಿಳಿದಿದೀರಿ. ನಿಮ್ಮ ತಂಗಿ ತುಂಬ ಸಲಿಗೆಯ ಸ್ವಭಾವದೋಳು. ಎಲ್ಲೋ ಏನೋ ಆಗಿರಬೇಕು. ನಂಗೂ ಅವಳು ಒಂದು ಪ್ರಶ್ನೆಯೇ...."

" ಅಯ್ಯನವರೆ ! ತಾವು ನನ್ನ ತಂಗಿಯ ವಿಷಯ ಆಡುತ್ತಿದೀರಿ ! ಎಚ್ಚರಿಕೆ ಇರಲಿ ! "

"ಆದರೇನು ನಿಜ...."

"ಸಾಕು! ನನ್ನ ತಂಗಿ ತೀರ ಮುಗ್ಧೆ. ಹಾಲಿನಂಥ ಹುಡುಗಿ. ಅವಳ ಸರಳ ಸ್ವಭಾವವನ್ನು ಕೆರಳಿಸಿ ನಂಬಿಸಿ...."

"ತಪ್ಪುಭಾವನೆ. ನನ್ನ ಜವಾಬ್ದಾರಿಯಲ್ಲ."

"ಅಯ್ಯನವರೆ, ಈ ರೀತಿ ನಿಮಗೆ ಸರಿಯಲ್ಲ— ಅನೀತಿ."

"ನೀವು ಮೋಸಹೋಗಿದ್ದೀರಿ ಖಂಡಿತವಾಗಿ. ನನ್ನದಲ್ಲದ ಹೊರೆ...."

"ಇನ್ನೂ ಅದೇ ಕಪಟ! ಕೇಳಿ, ನನ್ನ ತಂಗಿ ಸುಳ್ಳೆಂದೂ ಕಂಡವಳಲ್ಲ. ನಿಮ್ಮ ಹಾಗೆ ಬಹಳ ಪ್ರಪಂಚವನ್ನು ಕಂಡು ಯುಕ್ತಿ ತಿಳಿದವಳಲ್ಲ. ಯಾಕೆ ಸುಳ್ಳಾಡುತ್ತೀರಿ? ಇತರರಿಗೆ ಹೇಗೋ ಹಾಗೇ ಸಾಹಿತಿಗೆ ಇರಬೇಕಾದದ್ದೂ ಬರೀ ಬುದ್ಧಿವಂತಿಕೆಯಲ್ಲ. ಬರೀ ಬುದ್ಧಿವಂತಿಕೆ ಬರಡು, ಹಾನಿಕಾರಿ. ಅದರೊಂದಿಗೆ ಒಳ್ಳೇ ನಡತೆಯೂ ಬೇಕು. ಆಗಲೇ ತುಂಬು-ಬಾಳು. ಆಗಲೇ ಬರೆದುದಕ್ಕೆ, ಹೇಳಿದುದಕ್ಕೆ ಬೆಲೆ. ದರ್ಶನವಿಲ್ಲದ ಸಾಹಿತ್ಯ ದರಿದ್ರ. ದರ್ಶನ ಲಾಭಕ್ಕೆ ತಪಸ್ಸು ಬೇಕು. ಇಲ್ಲದಿದ್ದರೆ ಸಾಹಿತಿಯ ಭಾವನೆಗಳು ವಕ್ರ; ಪುಸ್ತಕಗಳು ವಿಷಕ್ರಿಮಿಗಳು."

"ನಿಮ್ಮಿಂದ ನಾನು ಪಾಠ ಕಲಿಯಬೇಕಾಗಿಲ್ಲ, ಹ್ಹ!" ತಿರಸ್ಕಾರದಿಂದ.

"ಕಲಿಸಬೇಕಾದ ಕಾಲ ಬಂದಿದೆ" ದೃಢವಾಗಿ.

"ಏನು ಬೆದರಿಕೆ?" ಸಿಟ್ಟಾಗಿ.

"ಅಯ್ಯನವರೆ! ಈ ನಟನೆ ಸಾಕು. ನಮ್ಮನ್ನು ನಾವೇ ಮೋಸ ಮಾಡಿಕೊಂಡು ಬಾಳೋ ಬಾಳು ಎಂಥಾದ್ದು? ಸುಳ್ಳು ಬಾಳು, ಹುಳುವಿನ ಬಾಳು! ಆತ್ಮತೃಪ್ತಿ ಜಗತ್ತಿಗಿಂತ ಹೆಚ್ಚು. ಅದಿಲ್ಲದ ಬಾಳು ಬೀಳು, ಅಯ್ಯನವರೆ, ಯೋಚಿಸಿ. ಚೆನ್ನಾಗಿ ಯೋಚಿಸಿ. ನಿಮ್ಮನ್ನು ಬೇಡಿಕೊಳ್ಳುತ್ತಿದೀನಿ—ನನ್ನ ತಂಗಿಯ ಪರವಾಗಿ. ನ್ಯಾಯದ ಪರವಾಗಿ, ಕನಿಕರಕ್ಕಾಗಿ. ನಿಮಗಾಗಿ. ನಿಮ್ಮ ಎದೆ ಮುಟ್ಟಿಕೊಂಡು ಕೇಳಿ, ನಿಮ್ಮ ಆತ್ಮ ಏನು ಹೇಳುತ್ತೆ ಅಂತ" ಗುರು ಕೇಳಿಕೊಂಡ.

"ಹ್ಹ! ಹಾ! ಆತ್ಮ! ಹ್ಹ! ಹಾ!"

"ಇಲ್ಲದೋರು ಏನು ಬಲ್ಲರು? ಹೀನವಾದ ಜೀವನ ನಡೆಸುತ್ತ, ಹುಚ್ಚು ಬರೆದು, ನಿಮ್ಮನ್ನು ಕೆಡಿಸಿಕೊಂಡು ಜಗವನ್ನೂ ಕೆಡಿಸುತ್ತಿದೀರಿ.

ಹುಂ. ನಿಮ್ಮ ತಪ್ಪಲ್ಲ. ಬುದ್ಧಿ ಕೆಟ್ಟ್ಟು, ನಿಮ್ಮ ಬಲಿಯಾಗಿ, ನಿಮ್ಮನ್ನ ಬೆಳೆಸಿ, ಮರ್ಯಾದೆ ತೋರಿಸಿ, ಹೆಚ್ಚಿಸಿ, ತಾನೇ ಹಾಳಾಗುತ್ತಿರೋ ಲೋಕದ ತಪ್ಪು."

"ಅಧಿಕಪ್ರಸಂಗ ಸಾಕು! ಹುಚ್ಚನೆಂದು ಆಗಲೇ ಊಹಿಸಿದ್ದೆ. ನಿಜ ವಾಯ್ತು. ಹೋಗಿ ಹೊರಗೆ!"

"ಹುಂ, ಒಬ್ಬನಿಗೆ ಇನ್ನೊಬ್ಬ ಹುಚ್ಚ. ಜಗವೇ ಹುಚ್ಚಿನ ಸುತ್ತು. ತನಗೆ ಹುಚ್ಚಿಲ್ಲವೆಂದುಕೊಂಡೋನೇ ದೊಡ್ಡಹುಚ್ಚ. ಅಹಂಕಾರ ವಿಕಾರ ಮಿತಿಮೀರಿದ ಹುಚ್ಚ ನಿಮ್ಮಂಥೋನು."

"ಆಂ! ಇಷ್ಟು ಉದ್ದಟತನ, ನನ್ನ ಮುಂದೆ! ಸಾಕುಮಾಡಿ! ಹೋಗಿ ಹೊರಗೆ!"

"ಹಾಗೇ ಹೋಗೋದಕ್ಕೆ ಬರಲಿಲ್ಲ ಇಷ್ಟು ದೂರ. ಕರೆದುಕೊಂಡು ಹೋಗೋದಕ್ಕೆ!"

"ಏನು ಬಲವಂತವೆ—ಮೋಸ ಫಲಿಸಲಿಲ್ಲ ಅಂತ—ಮರ್ಯಾದಸ್ಥರ ಮೇಲೆ?"

"ಮೋಸ ಯಾರದ್ದು, ನಿಮ್ಮದೋ, ನನ್ನದೋ? ನಿಮಗೇ ಗೊತ್ತು. ನಿಮ್ಮಂಥ ಮರ್ಯಾದಸ್ಥರಿಗೇನು ಕಡಿಮೆಯಿಲ್ಲ—ದಿನ ದಿನವೂ ಎಲ್ಲೆಲ್ಲೂ ನೋಡುತ್ತಿರುತ್ತೀವಿ, ನೂರರಲ್ಲಿ, ಸಾವಿರದಲ್ಲಿ. ಬೇಡಿಕೆ ಬೇಕಾಗದಿದ್ದರೆ ಬಲವಂತವೇ ಸರಿ."

"ಆಂ! ಆಳನ್ನ......."

"ಶ್!" ಗುರು ತೊಡೆಯ ಮೇಲಿದ್ದ ಚಿಲಕ್ಕೆ ಕೈ ಹಾಕಿ ಹೊರತೆಗೆದು ಮೇಲಿದ್ದ. ಟವಲು ಕೆಳಗೆ ಬಿದ್ದಿತು. ರಿವಾಲ್ವರು ಅಯ್ಯನವರನ್ನು ಎದುರಿಸಿತು. ಸಮಯಕ್ಕೆ ಇರಲೆಂದು ತಂದೆಯ ರಿವಾಲ್ವರನ್ನು ತಂದಿದ್ದ. ಅಯ್ಯನವರು ಗಾಬರಿಯಾಗಿ ಎದ್ದು ಎರಡು ಕೈಗಳನ್ನೂ ಮೇಲೆತ್ತಿ ಕಣ್ಣರಳಿಸಿ ನಿಸ್ತೇಜರಾಗಿ "ತ ... ತ.... ತಡೀರಿ! ತಡೀರಿ ಅನರ್ಥ!........" ನಿಸ್ಸಹಾಯರಾಗಿ ತೊದಲಿದರು.

"ಅನರ್ಥಕ್ಕೆ ನಾನು ಹೆದರೋದಿಲ್ಲ. ನನ್ನ ಬಾಳಿಗೆ ಸಾಸಿವೆ ಕಾಳಿನ ಬೆಲೆಯಿಲ್ಲ. ನಿಮ್ಮ ನೀಚತನವನ್ನು ಸುಟ್ಟು ಹಾಕುತ್ತೀನಿ ಬೇಕಾದದ್ದು ಆಗಿ ಹೋಗಲಿ—ನಂಗೆ."

"ಬೇಡ! ಬೇಡ!" ದೈನ್ಯದಿಂದ ಬೇಡಿದರು.

"ನಡತೆಯೊಂದರಿಂಲೇ ನೀವು ಉಳಿಯಬಹುದು."

"ಆಗಲಿ, ಆಗಲಿ. ಒಪ್ಪಿದೆ. ತ........ತಪ್ಪಾಯ್ತು."

"ಇದು ತುದಿನಾಲಿಗೆಯ ಮಾತೊ?"

ಇಲ್ಲ, ಇಲ್ಲ. ಖ....ಖಂಡಿತ. ನಿ....ಮ್ಮ ಮಾತು ನಂಬು....ನಂಬುತ್ತೇನೆ. ಆ....ಆಗಲಿ. ಹೇ....ಕೂತುಕೊಳ್ಳಿ" ಗುರು ಕುಳಿತು ರಿವಾಲ್ವರನು ಕೆಳಗಿಳಿಸಿದ.

ಅಯ್ಯನವರು ಕುರ್ಚಿಗೆ ಕುಸಿದರು. ಅವರ ತುಟಿ ಅದುರುತ್ತಿತ್ತು, ಮುಖ ಬೆವರಿತ್ತು. ರಕ್ತಹೀನವಾಗಿದ್ದ ಮುಖ ಕ್ರಮೇಣ ಕೆಂಪೇರಿತು ಕಣ್ಣು ಮುಚ್ಚಿತು. ತಲೆ ತಾನಾಗಿ ಬಗ್ಗಿ ಮುಂದಿನ ಮೇಜಿಗೆ ಬಡಿಯಿತು. ಬಹಳ ಕಾಲ ಮೌನ ನೆಲಸಿತ್ತು. ಆ ಕಾಲದಲ್ಲಿ ಅಯ್ಯನವರ ಒಳಗೆ ಗೊಂದಲವಾಗಿ ಹಿಂದುಮುಂದುಗಳಿಗೆ ಯುದ್ಧವೇ ನಡೆಯಿತು. ಕಲ*ದ ಬದಿ ನೀರು ತಿಳಿಯಾಗುವಂತೆ, ನಿಧಾನವಾಗಿ ಬುದ್ಧಿ ತಿಳಿಯಾಗುತ್ತಿತ್ತು. ಜ್ವರ ಬಂದಿದ್ದು ಬಿಟ್ಟವನ ಶಕ್ತಿ ಸ್ವಲ್ಪ ಸ್ವಲ್ಪವಾಗಿ ಕೂಡಿಕೊಳ್ಳುವಂತೆ ಜೀವಭಯದ ವಿಷವು ಗಳಿಗೆಯಲ್ಲಿ ಉಡುಗಿಹೋಗಿದ್ದ ಚೈತನ್ಯ ಮೆಲ್ಲಮೆಲ್ಲಗೆ ಹಿಂದಿರಿಗುತ್ತಿತ್ತು. ಅಪಘಾತಕ್ಕೆ ಸಿಕ್ಕಿದವನು ನೆನಪನ್ನೂ ಕಳೆದುಕೊಳ್ಳುವಂತೆ ಅವರ ಹಿಂದು ಮಾಸಿತು. ಮರಣದ ಮಡಿಲಿನಲ್ಲಿ, ಪಾಪಿ ಪಶ್ಚಾತ್ತಾಪ ಪಡುವಂತೆ ಮಾಡುವ ಮಾರ್ಪಾಡು ಸಾವಿನ ಸಮೀಪದಲ್ಲಿದ್ದು ಜಾರಿಕೊಂಡಿದ್ದವನಲ್ಲಿಯೂ ಆಗುತ್ತಿತ್ತು. ಗುರುವಿನ ಔಷಧ ಅಯ್ಯನವರ ಕಾಹಿಲೆಯ ಕ್ರಿಮಿಗಳನ್ನು ಕೊಲ್ಲುತ್ತಿತ್ತು, ರೋಗಿಯನ್ನು ಗುಣಪಡಿಸುತ್ತಿತ್ತು. ಕಡೆಗೆ ಅವರ ಕೈಗಳು ಮೇಜಿನ ಮೇಲಿದ್ದ ಬರಹದ ಹಾಳೆಯನ್ನು ನಿಧಾನವಾಗಿ ಹರಿದುವು. ಅಯ್ಯನವರು ಮೆಲ್ಲಗೆ ಮೇಲೆದ್ದು, ತಲೆ ಬಾಗಿಯೇ ಗುರುವಿನ ಕಡೆಗೆ ಎರಡು ಹೆಜ್ಜೆಯನ್ನಿಟ್ಟು ಮೌನವಾಗಿಯೇ ಕೈ ನೀಡಿದರು. ಗುರು ಸುಮ್ಮನೆ ನಿಟ್ಟಿಸಿ ನೋಡಿದ; ಕೈ ತೆಗೆದುಕೊಳ್ಳಲಿಲ್ಲ. ಅವರೂ ಹಿಂತೆಗೆದುಕೊಳ್ಳಲಿಲ್ಲ

"ನೀವು ನನ್ನ ನಿಜವಾದ ಬಂಧು....ತಿಳಿಯದೆ....ಆಡಿದೆ....ನಡೆದೆ.... ಕ್ಷಮಿಸಿ" ಎಂದು ತಡೆತಡೆದು ಹೇಳಿದರು.

ಅಯ್ಯನವರೇನು ಮಡ್ಡಿಯಲ್ಲ, ಬುದ್ಧಿವಂತರೇ. ಆದರೆ ಅವರ ಬುದ್ಧಿ ದಾರಿ ತಪ್ಪಿತ್ತು, ಅಡ್ಡಾದಿಡ್ಡಿ ನಡೆಯುತ್ತಿತ್ತು, ಅಷ್ಟೆ. ತೀಕ್ಷ್ಣವಾಗಿ ಚಿಂತಿಸಬಲ್ಲ, ಕ್ಷಣದಲ್ಲಿ ಅರಿಯಬಲ್ಲ, ಬೇಗ ಬದಲಾಯಿಸಬಲ್ಲ ಸೂಕ್ಷ್ಮ ಚೈತನ್ಯ.

ಇದೇ ಹೊತ್ತಿನಲ್ಲಿ ಮರ್ಯಾದೆ ಮಹಲಿನಲ್ಲಿ ಬೇರೆಯ ಪ್ರಕರಣ ನಡೆದಿತ್ತು.

ಈ ಬೆಳಗ್ಗೆ ಐದು ಗಂಟೆಗೆ ಸಾಹುಕಾರರು ಎದ್ದು ಪದ್ಧತಿಯಂತೆ ದಿಂಬಿನ ಕೆಳಗೆ ಕೈ ಹಾಕಿದರು. ಬೀಗದ ಕೈಗೊಂಚಲು ಸಿಕ್ಕಿತು. ಜತೆಗೆ ಸಿಕ್ಕಬೇಕಾಗಿದ್ದ ರಿವಾಲ್ವರು ಇರಲಿಲ್ಲ! ಸಾಹುಕಾರರು ಚಕಿತರಾದರು. ಮತ್ತೆ ಮತ್ತೆ ಹಾಸಿಗೆಯನ್ನು ಕೆದರಿ ಹುಡುಕಿದರು. 'ಇಲ್ಲ! ಏನು ಯಾರಾದರೂ ಕದ್ದು........ಇಲ್ಲ. ಇಲ್ಲ. ತಾವೇ ಏನಾದರೂ ನಿನ್ನೆ ರಾತ್ರಿ ಕಬ್ಬಿಣದ ಸೇಫಿನಿಂದ ತೆಗೆದು ಇಟ್ಟುಕೊಳ್ಳಲಿಲ್ಲವೊ? ಹೀಗೆಯೂ ಯಾವಾಗಲೋ ಒಂದೊಂದು ವೇಳೆ ಆಗುತ್ತಿತ್ತು. ಹೌದು, ನಿನ್ನೆ ಮದುವೆಯ ಮಾತುಕತೆ, ಯೋಚನೆಗಳ ಉತ್ಸಾಹದಲ್ಲಿ ಮರೆತಿದ್ದರೋ? ಇರಬಹುದು.' ಸಾಹುಕಾರರು ದಿಗ್ಗನೆದ್ದು ಕೋಣೆಯ ಮೂಲೆಯಲ್ಲಿದ್ದ ಹಣದ ಸೇಫಿನ ಬಾಗಿಲನ್ನು ತೆರೆದರು. ಇಲ್ಲ. ಅದರಲ್ಲಿಯೂ ಇರಲಿಲ್ಲ! 'ವಿಚಿತ್ರ! ಹಿಂದೆಂದೂ ಹೀಗೆ ಆಗಿರಲಿಲ್ಲ' ಎಂದುಕೊಂಡು ಸಾಹುಕಾರರು ಗಾಬರಿಯಾದರು. 'ಯಾರು.... ಯಾತಕ್ಕಾಗಿ?.........ಉಹುಂ............ತಾವೇ ಯಾರಿಗಾದರೂ ಕೊಟ್ಟಿದ್ದರೆ?' ಸಾಹುಕಾರರು ತಲೆ ಕೆರೆದುಕೊಂಡು ಯೋಚಿಸಿದರು. 'ಇಲ್ಲ. ಖಂಡಿತವಾಗಿಲ್ಲ ಮತ್ತೆ? ಕಳುವಾಗಿದೆ!' ಅವರ ಮೈ ಜುಂ ಎಂದಿತು. ಕ್ಷಣ ಬಿಟ್ಟು ಚೇತರಿಸಿಕೊಂಡು ಆತುರದಿಂದ ಸೇಫಿನಲ್ಲಿದ್ದ ನೋಟುಗಳ ಕಟ್ಟುಗಳನ್ನು ತಿರಿಗಿಸಿ ನೋಡಿದರು. ಹಣದ ಚೀಲವನ್ನೂ ಎತ್ತಿ ಬಿಚ್ಚಿ ನೋಡಿದರು. ಗಿರಿವಿಗಾಗಿ ಬಂದಿದ್ದ ಒಡವೆಗಳ ಖಾನೆಯನ್ನು ತೆಗೆದು ಪರೀಕ್ಷಿಸಿದರು. ಎಲ್ಲವೂ ಸರಿಯಾಗಿದ್ದಂತೆಯೇ ಇತ್ತು. 'ಆದರೂ ಯಾರು ಕಂಡರು? ಮತ್ತೆ ರಿವಾಲ್ವರ್! ಕಳ್ಳನಾದರೆ ಹೀಗೆ ಇವನ್ನೆಲ್ಲ ತೆಗೆದುಕೊಳ್ಳದೆ ಇರುತ್ತಿದ್ದನೆ? ಇಲ್ಲ ಮತ್ತೆ? ಯಾರೋ ಕೆಟ್ಟಕೆಲಸಕ್ಕಾಗಿ ಕದ್ದಿದ್ದಾರೆ. ತಮ್ಮ ಮೇಲೆ ಬಂದರೋ?' ಸಾಹುಕಾರರು ಹೆದರಿದರು. 'ಅಥವ ತಮ್ಮನ್ನೇ....

ಇಲ್ಲ....ಈ ವರೆಗೇ ಯಾಕೆ ಮಾಡಲಿಲ್ಲ ?....ಸಮಯ ಸಿಕ್ಕದೆ....' ಅವರು ಗಡಗಡನೆ ನಡುಗಿದರು. '....ನಡೆದದ್ದು ಹೇಗೆ ? ರಾತ್ರಿಯ ಹೊತ್ತು ಕೋಣೆಯ ಅಗಳಿಯನ್ನು ಹಾಕಿಕೊಂಡಿರುತ್ತಿದ್ದರಲ್ಲ. ಇನ್ನೂ ಹಾಗೆಯೇ ಹಾಕಿದೆ. ಮತ್ತೆ ಯಾವಾಗ ?....ನಿನ್ನೆ ?.... ಬೀಗದ ಕೈಗೊಂಚಲು ಸದಾ ತಮ್ಮ ಬಳಿಯೇ ಇರುತ್ತಿತ್ತಲ್ಲ.........ಇಲ್ಲ ! ನಿನ್ನೆ ಆ ಸಂಭ್ರಮದಲ್ಲಿ ಸೋಫದ ಮೇಲೆಯೇ ಮರೆತಿರಲಿಲ್ಲವೆ ? ರಾತ್ರಿ ಹುಡುಕಿದಾಗ ಅಲ್ಲೇ ಇತ್ತು. ಓ, ಆ ಮಧ್ಯದಲ್ಲೇ ನಡೆದಿರಬೇಕು. ಛೆ! ಎಂತಹ ಅಲಕ್ಷ್ಯ, ತಮ್ಮದು ! ಅದರ ಪರಿಣಾಮ ಹೀಗಾಯಿತಲ್ಲ!' ಸಾಹುಕಾರರು ಕೈ ಕೊಡಹಿಕೊಂಡರು. 'ಯಾರ ಕೆಲಸ ಇರಬಹುದು ? ಮನೆಯವರೇ ಯಾರಾದರೂ ಮಾಡಿರಬೇಕು........ ಅಂಥವರು ಯಾರು?........ದಾಸ, ಸದಾಶಿವ........ಛಿ, ಅವರಿಗೇಕೆ ಈ ರಿವಾಲ್ವರು ?....ಏನೋ ? ಏನು ಹೊಂಚೊ, ಹಂಚಿಕೆಯೋ. ಹೇಗೆ ಹೇಳುವುದು? ಹೇಗಾದರೂ....ಪೋಲೀಸಿನವರನ್ನು ಕರೆಯಿಸಬೇಕು. ಅವರೇ ವಿಚಾರಿಸಲಿ ಅಗತ್ಯ ಕಂಡರೆ." ಸಾಹುಕಾರರು ಪೋಲೀಸ್ ಇನ್ಸ್ಪೆಕ್ಟರಿಗೆ ಚೀಟಿಯನ್ನು ಬರೆದು, ನಂಜಪ್ಪನನ್ನ ಎಬ್ಬಿಸಿ, ಅವನೊಡನೆ ಕಳುಹಿಸಿದರು.

"ಕುಸುಮ, ಲೇ ಕುಸುಮ" ತಾಯಿ ಮಗಳನ್ನು ಎಬ್ಬಿಸುತ್ತಿದ್ದಳು.

ಕುಸುಮ ಕಣ್ಣು ತೆರೆದಳು. ಆಗಲೇ ಏಳು ಗಂಟೆಯ ಸಮಯವಾಗಿತ್ತು. ಆ ರಾತ್ರಿ ಮಲಗಿದ್ದ ಹಾಗೆ ಅವಳು ಮಲಗಿ ಎಷ್ಟೋ ತಿಂಗಳುಗಳು ಆಗಿದ್ದುವು.

"ಇನ್ನೂ ಮಲಗೇ ಇದೀಯ—ಹೊರಗೆ ಇಷ್ಟೊಂದು ಗದ್ದಲವಾದರೂ?"

ಹೌದು, ಹಾಲ್‌ನಿಂದ ಹೊಸಬರ ನಡಗೆ, ಮಾತುಗಳ ಶಬ್ದ ಕೇಳಿ ಬರುತ್ತಿತ್ತು.

"ಯಾರಮ್ಮ ಅದು ?"

"ಪೋಲೀಸಿನೋರು."

"ಪೋಲೀಸಿನೋರು!" ಕುಸುಮ ಗಾಬರಿಯಾಗಿ ತಟ್ಟನೆದ್ದು ಕುಳಿತು, "ಯಾಕಮ್ಮ ? ಏನಾಗಿದೆ ?" ಎಂದು ಆತುರದಿಂದ ಕೇಳಿದಳು.

"ನಿಮ್ಮ ತಂದೆ ರಿವಾಲ್ವರು ಕಳುವಾಗಿದೆಯಂತೆ."

"ರಿವಾಲ್ವರೇ ? ಯಾವಾಗ ?" ಕುಸುಮಳ ಎದೆ ಅವಳಿಗೆ ಗೊತ್ತಿಲ್ಲದಂತೆಯೇ ಡವಡವನೆ ಹೊಡೆದುಕೊಂಡಿತು,

" ನಿನ್ನೆ ಸಂಜೆಯೇ ಆಗಿರಬೇಕು ಅಂತಾರೆ. ವಿಚಾರಣೆಯಾದ ಮೇಲೆ ಗೊತ್ತಾಗಬೇಕು. "

" ನಿನ್ನೆ ಸಂಜೆಯೇ ? "

ಅವಳ ಮನಸ್ಸು ಹಿಂದಿನ ಸಂಜೆಗೆ ತಟ್ಟನೆ ಹರಿಯಿತು. ಆ ಸಂಭ್ರಮ, ಆ ಥಳಕು, ಅಣ್ಣನೊಡನೆ ಆದ ಸಂಭಾಷಣೆ, ಅವನ ನಿರ್ಧಾರ, ಭರವಸೆ–ಎಷ್ಟು ಖಂಡಿತವಾಗಿದ್ದ ! ಹೇಗೆ ಸಾಧಿಸುತ್ತಾನೋ ಈ ವರೆಗೆ ಏನಾಗಿದೆಯೋ— ಅವಳ ಮನಸ್ಸು ತವಕಗೊಂಡಿತು. ' ಅವರು ಒಪ್ಪದಿದ್ದರೆ, ಏನು ಗತಿ?.... ಅಣ್ಣನೇನು ಬಿಡುವವನಲ್ಲ, ಹೇಳಿರಲಿಲ್ಲವೆ—ನಯದಿಂದ ಆಗದಿದ್ದರೆ ಭಯ ದಿಂದಲಾದರೂ ಅಂತ............ಭಯ ! ಏನು ಭಯ ? ಹೇಗೆ ಭಯಪಡಿಸು ತ್ತಾನೆ?.........ಓ ! ಇರಬಹುದೆ?' ಅವಳು ಗೊತ್ತಿಲ್ಲದಂತೆಯೇ ಬೆಚ್ಚಿದಳು. ' ಅಯ್ಯೋ, ಅದೇ ?.........ಅಣ್ಣನೇ ತೆಗೆದುಕೊಂಡು ಹೋಗಿರಬಹುದೆ ?.... ಓ, ಹೌದು ಹೌದು, ಅವನೇ.........ಇನ್ನು ಯಾರು?.........ಯಾರಿಗೆ ಬೇಕು, ಅದು?.........ಹಾ ! ಅನಾಹುತವಾದರೆ !.........ಅಣ್ಣ ಅಂಥವನೆ !.....ಅವನ ಲಕ್ಷ್ಯವೇ ಇಲ್ಲ ಅವನಿಗೆ.........ಅಂಥ ಹುಚ್ಚನೇ !....ಹಾಗಾಗಿಬಿಟ್ಟರೆ ಅವನ ಗತಿ ! ಜೈಲು ! ಗಲ್ಲು !....ಅಯ್ಯೊ, ಎಲ್ಲ ತನಗಾಗಿ !' ಅವಳ ಮೈ ಬೆವರಿತು, ಬುದ್ಧಿ ಕವಿಯಿತು, ಏನೋ ಹೇಳಬೇಕೆಂದು, ಕೂಗಿಕೊಂಡುಬಿಡಬೇಕೆಂದು, ಎದೆ ಒಡೆಯುತ್ತಿತ್ತು. ಆದರೆ ಬಾಯಿ ಬರದು; ಕಟ್ಟಿತ್ತು, ಕೆಟ್ಟ ಕನಸಿ ನಲ್ಲಾಗುವಂತೆ. ಏನೂ ಹೇಳಲಾರದೆ ಕಣ್ಣರಳಿಸಿ ತಾಯಿಯನ್ನು ದಿಟ್ಟಿಸಿ ನೋಡಿದಳು, ಆದರೂ ದೃಷ್ಟಿಯೆಲ್ಲೋ.

" ಇದೇನು ಕುಸುಮ, ನಿನ್ನೆ ಸಂಜೆಯ ಹಾಗೇ.........."

ಸಾಹುಕಾರರು ಒಳಗೆ ಬಂದರು.

" ಇಲ್ಲಿದೀಯಾ ? ನೋಡು, ಇನ್ಸ್ಪೆಕ್ಟರು ಎಲ್ಲ ಬರೆದುಕೊಂಡರು. ಅಂತಾರೆ ' ನಿಮ್ಮ ಆಳು ಅಡಿಗೆಯೋನು ಇಬ್ಬರೂ, ನಿಮ್ಮ ಕೋಣೆಗೆ ಸಾಮಾನ್ಯವಾಗಿ ಹೋಗಿ ಬಂದು ಮಾಡ್ತಾ ಇದ್ದರು, ಅಂತೀರಿ. ಅವರ ಮೇಲೇ ನಂಗೆ ಗುಮಾನಿ. ಸ್ವಲ್ಪ ಸ್ಟೇಶನ್ನಿಗೆ ಕರೆದುಕೊಂಡು ಹೋಗಿ ವಿಚಾರಿಸಲೆ ?' ಅಂತ. ಏನಂತೀಯ ? "

" ಛೆ, ಅಂಥಾ ನಂಬಿಕಸ್ತರು—ಇಬ್ಬರೂ. "

" ಮತ್ತೆ, ಇನ್ನು ಯಾರು ತಗೊಂಡಿರಬೇಕು ? ಎಷ್ಟಾದರೂ ಆಳು ಅಡಿಗೆಯೋರು, ಆಳು ಅಡಿಗೆಯೋರೇ; ಹೇಳೋ ಹಾಗಿಲ್ಲ."

" ಇಷ್ಟು ವರ್ಷಗಳೂ ಒಂದಿಷ್ಟು ಅನುಮಾನವೂ ಬಂದಿಲ್ಲ."

" ಕೆಟ್ಟ ಕಾಲ ಯಾವಾಗಲೂ ಬರುತ್ತಿರುತ್ತೇ ? ಒಂದೊಂದು ಸಲ, ಯಾವಾಗಲೋ."

" ಯಾಕೋ ಒಪ್ಪಿಗೆ ಆಗೋದಿಲ್ಲ."

"ನಂಗೂ ನಿರ್ಧರವಾಗಿದೆಯೆ? ಸಂತೋಷವೆ? ಒಪ್ಪಿಗೆಯೆ? ಆದರೇನು, ಕೊಂಚ ಹೆದರಿಸಿ ನೋಡಲಿ. ಏನು ತಪ್ಪು ? ಅದೇ ಕ್ಷೇಮದ ದಾರಿ. ಇಲ್ಲದೆ ಇದ್ದರೆ ಇನ್ನೇನಾದರೂ ಆದರೆ-ಗೀದರೆ ? 'ಆಗಲಿ' ಅಂತ ಅಂದುಬಿಡ್ತೀನಿ, ಆಂ ? " ಸಾಹುಕಾರರು ಹಿಂತಿರಿಗಿದರು.

" ಅಪ್ಪ ! ಅಪ್ಪ ! " ಕುಸುಮಳ ಬಾಯಿ ಬಲವಂತದಿಂದ ಬಿಚ್ಚಿದಂತಾಯಿತು. ಗಂಟಲಿನ ಸ್ವರದಲ್ಲೇ ಕೂಗಿಕೊಂಡಳು. ಅವಳ ತಲೆಯಲ್ಲೆಲ್ಲ ವ್ಯೆಸೂರು ಈಸುತ್ತಿದ್ದರೂ, ಈ ಸಂಭಾಷಣೆಯ ಇಂಗಿತವೂ ಅವಳನ್ನು ಹೊಕ್ಕು ಇರಿದು, ಈ ಮೊದಲೇ ಮಾತಿಗಾಗಿ ಒದ್ದಾಡುತ್ತಿದ್ದ ನಾಲಿಗೆಯ ಮೌನವನ್ನು ಹರಿದು ಕೂಗಿತು.

ಸಾಹುಕಾರರು ಬೆರಗಾಗಿ ತಟ್ಟನೆ ಮಗಳ ಕಡೆಗೆ ತಿರಿಗಿದರು· ಸಣ್ಣಮ್ಮನೂ ಗಾಬರಿಯಿಂದ ಮಗಳ ಕಡೆ ನೋಡಿದಳು.

" ನಿರಪರಾಧಿಗಳು ಅವರು. " ಕುಸುಮ ಆತುರದಿಂದ ಹೇಳಿದಳು.

" ನಿಂಗೆ ಹೇಗೆ ಗೊತ್ತು ? " ಸಾಹುಕಾರರು ಕಣ್ಣನ್ನು ಬಿಡುತ್ತ ಕೇಳಿದರು.

" ಅಣ್ಣನ ಕೆಲಸ ! "

" ಅಣ್ಣನ ಕೆಲಸ ! ಗುರುವಿಂದು ! "

" ಹೌದು ! ಹೌದು ! ಅಯ್ಯೋ ! ಮ್ಯೆಸೂರಿಗೆ ಕಳಿಸು ಈಗಲೇ ಯಾರನ್ನಾದರೂ. ಈಗಲೇ ! ಅನಾಹುತ ! ಅಣ್ಣನ ಜೀವ!...."

" ಏನು ಕುಸುಮ, ಇದು! ಅರ್ಥವೇ ಆಗೋದಿಲ್ಲ. ಏನು ಅನಾಹುತ? ಯಾತಕ್ಕೆ ? "

" ಅಣ್ಣ ಕೊಂದುಬಿಡುತ್ತಾನೆ. ಅವನ ಗತಿ ಆಮೇಲೆ...."

" ಕೊಂದುಬಿಡುತ್ತಾನೆ! ಶಿವ ಶಿವ! ಯಾರನ್ನ, ಯಾಕೆ ? "

" ಕಾಮೇಶ್ವರಯ್ಯನವರನ್ನ. ನಂಗಾಗಿ. ಬೇಗ ಬೇಗ ಕಳಿಸಪ್ಪ, ಯಾರನ್ನಾದರೂ. "

" ನಿಂಗಾಗಿ! ಏನು! ಇದೇನು ಕನಸೋ? ಕುಸುಮ! ಕುಸುಮ! ನೀನು ಎದ್ದಿದೀಯ ? "

"ಅಯ್ಯೋ, ಎಲ್ಲ ಹೇಳ್ತೀನಿ, ಈ ನಿರ್ಭಾಗ್ಯೆಯ ಕತೆ. ಮೊದಲು ಅಟ್ಟು ಯಾರನ್ನಾದರೂ ಅಲ್ಲಿಗೆ. "

ಕುಸುಮ ಮುರಿದುಬಿದ್ದಳು. ಅವಳ ದುಃಖ ಹೊಳೆಯಾಗಿ ಹರಿಯಿತು. ತಂದೆತಾಯಿಗಳು ಭ್ರಾಂತರಾದರು, ಭಯದ ಆವೇಶದಿಂದ ಪ್ರಶ್ನೆಗಳ ಸುರಿ ಮಳೆಯನ್ನೇ ಸುರಿಸಿದರು. ಆದರೆ ಕುಸುಮಳಿಂದ ಬಹಳ ಕಾಲ ಮಾತು ಹೊರಡಲಿಲ್ಲ. ಬಿಕ್ಕಿ ಬಿಕ್ಕಿ ಅಳುತ್ತಿದ್ದಳು.

ಸಾಹುಕಾರರು ಏನೊಂದೂ ತಿಳಿಯದೆ ಹೊರಗೆ ಆತುರದಿಂದ " ಇನ್ಸ್ಪೆಕ್ಟರ್ ಸಾಹೇಬರೆ. ವಿಚಾರಣೆ ಸಾಕು ನನ್ನ ಮಗ ಅಭ್ಯಾಸ ಮಾಡುತ್ತಿದ್ದನಂತೆ. ಅವನೇ ಎಲ್ಲೋ ಇಟ್ಟಿರಬೇಕು. ಆಗತ್ಯವಾದರೆ ಮತ್ತೆ ಹೇಳಿಕಳಿಸುತ್ತೀನಿ " ಎಂದು ಹೇಳಿ ಕಳುಹಿಸಿಕೊಟ್ಟು, ಕೂಡಲೇ ನಂಜಪ್ಪನನ್ನು ಕರೆದು " ಈಗಲೇ ಮೈಸೂರಿಗೆ ಹೊರಡು. ಕಾಮೇಶ್ವರಯ್ಯನೋರ ಮನೆ ವಿಳಾಸ? ಗುರು ಏನು ಅವಿವೇಕ ಮಾಡಿಕೊಂಡಿದಾನೋ, ಆಗಲೇ. ಕೂಡಲೇ ಕರೆದುಕೊಂಡು ಬಾ" ಎಂದು ತಿಳಿಸಿ ದುಡ್ಡನ್ನು ಕೊಟ್ಟು " ಛೆ! ಎಂಥ ಹುಡುಗರು! ಏನು ಗತಿಯೋ ದೇವರೆ! " ಎಂದುಕೊಳ್ಳುತ್ತ ಕೋಣೆಗೆ ಹಿಂದಿರಿಗಿ ಬಂದು ಬಾಗಿಲನ್ನು ಹಾಕಿಕೊಂಡರು. ಮಂಚದ ಬಳಿಯ ಕುರ್ಚಿಯ ಮೇಲೆ ಕುಳಿತು, ಆತಂಕ, ಆತುರ, ಭಯಗಳಿಂದ ಮಗಳನ್ನು ನೋಡುತ್ತ ಕುಳಿತರು. ಮಗಳ ಬಳಿಯಲ್ಲಿ ಕುಳಿತು ಉಕ್ಕುಕ್ಕಿ ಬರುತ್ತಿದ್ದ ಅವಳ ದುಃಖವನ್ನು ಸಂತೈಸಲು ಸಣ್ಣಮ್ಮ ತನ್ನ ಶಕ್ತಿಯನ್ನೆಲ್ಲ ಉಪಯೋಗಿಸುತ್ತ ವಿಫಲಳಾಗಿದ್ದಳು.

ಕಡೆಗೆ ಕುಸುಮ ತಡೆತಡೆದು ನಾಲ್ಕು ಮಾತಾಡಿದಳು. ತಂದೆತಾಯಿಗಳಿಗೆ ಹೆಚ್ಚು ಬೇಕಾಗಿರಲಿಲ್ಲ. ಆಗಲೇ ಊಹಿಸಿಕೊಂಡಿದ್ದರು. ಸಾಹುಕಾರರು ತಲೆಯ ಮೇಲೆ ಕೈಹೊತ್ತು ತೀಕ್ಷ್ಣವಾಗಿ ಚಿಂತಿಸಿದರು. ಸಣ್ಣಮ್ಮ

ಮಂಚದ ಬಳಿ ತಲೆ ಬಗ್ಗಿಸಿ ನಿಂತಿದ್ದಳು. ಕುಸುಮ ಸದ್ದಿಲ್ಲದೆ ಅಳುತ್ತ ಮಲಗಿದ್ದಳು. ಎದ್ದು, ಮಗಳ ಬಳಿಗೆ ಹೋಗಿ, ತಲೆ ಸವರುತ್ತ, ತಗ್ಗು ಧ್ವನಿಯಲ್ಲಿ ''ಕುಸುಮ, ಏನು ಮಾಡಿಬಿಟ್ಟೆಯಮ್ಮ! ಇಂಥ ದೊಡ್ಡ ಮರ್ಯಾದೆ ಮನೆತನದ ಮಗಳಾಗಿ ಹೀಗೆ ನಡೆದುಕೊಂಡೆಯಲ್ಲ. ಇನ್ನೇನು ದಾರಿ ಈ ಬಿಕ್ಕಟ್ಟಿಗೆ?" ಎಂದು ಮೃದುವಾಗಿ ಹೇಳಿದರು.

" ಅಪ್ಪ, ಮನೆತನಕ್ಕೆ ಯೋಗ್ಯಳಲ್ಲದ ಪಾಪಿ, ನಾನು. " ಕುಸುಮ ಮೆಲ್ಲನೆ ಇತ್ತ ತಲೆ ತಿರುಗಿಸಿ ದೈನ್ಯದಿಂದ ಹೇಳಿದಳು.

'' ಛಿ! ಹಾಗೆನ್ನಬೇಡ. ದಾರಿ ಹುಡುಕೋಣ " ಎಂದು ಸಾಹುಕಾರರು ಚಿಂತಿಸಿದರು.

'' ಅಣ್ಣ ಮಾತ್ರ ಕರೆದುಕೊಂಡು........"

'' ಏನು! ನಿನ್ನ ಆ ನೀಚನಿಗೆ ಮತ್ತೆ ಒಪ್ಪಿಸಲೆ? ಎಂದಿಗೂ ಇಲ್ಲ. "

" ಅಪ್ಪ! " ಕುಸುಮ ಛಳಕು ಹೊಡೆದವಳಂತೆ ಎದ್ದು ಕುಳಿತಳು. ಬೆರಗು ಭಯಗಳಿಂದ ತಂದೆಯ ಕಡೆಗೆ ದಿಟ್ಟಿಸಿದಳು.

'' ಅದೆಲ್ಲ ಶುದ್ಧ ಅವಿವೇಕ. ಅವಿವೇಕದ ಮೇಲೆ ಅವಿವೇಕ. ಅವನು ಮಹಲಿನ ಮೆಟ್ಟಿಲನ್ನು ಹತ್ತಕೂಡದು. ಈ ಹುಡುಗತನಕ್ಕೆ ನಾನು ಒಪ್ಪೋದಿಲ್ಲ. " ಸಾಹುಕಾರರು ಖಂಡಿತವಾಗಿ ಹೇಳಿದರು.

'' ಹಾಗೆಂದರೆ ನಂಗೇನು ಗತಿ? ನನ್ನ ಜೀವನ ಅವರಿಗೇ ಗಂಟು ಬಿದ್ದಿದೆ " ಕುಸುಮ ಹೇಳಿದಳು.

" ಉಹುಂ, ಈ ಮನೆತನದ ಮಗಳನ್ನು ಮನೆತನವಿಲ್ಲದ, ರಕ್ತವಿಲ್ಲದ, ಮರ್ಯಾದೆಯಿಲ್ಲದ, ಆ ಬಡ ಕೇಡಿಗನಿಗೆ ಕೊಟ್ಟು ಬಾಂಧವ್ಯ ಬೆಳೆಸಿದರೆ ನಮ್ಮ ಬೆಲೆ ಏನಾಯ್ತು ? ಅಲ್ಲದೆ ಗಿಣಿಯನ್ನು ಸಾಕಿ ಬೆಕ್ಕಿಗೆ ಕೊಡಲೆ ? ಆಗದು. "

" ಅದು ನಾನೇ ಆರಿಸಿಕೊಂಡದ್ದು. ಅನುಭವಿಸಬೇಕು-ಕಷ್ಟವಾದರೆ."

" ಆದರೆ ನನ್ನ ಕರ್ತವ್ಯವಿಲ್ಲವೆ, ನಿನ್ನ ಬಗ್ಗೆ? ಅದನ್ನು ಮಾಡದಿರಲೆ? ಕಣ್ಣುಮುಚ್ಚಿಕೊಂಡು, ಈ ಸಂಬಂಧಕ್ಕೆ ನನ್ನ ಒಬ್ಬಳೇ ಮುದ್ದು ಮಗಳನ್ನು ಬಲಿಕೊಟ್ಟು, ಎದೆ ಹಿಡಿದು ಬಾಳೋದು ಹೇಗೆ ? ಸಾಧ್ಯವಿಲ್ಲ. ಸಾಧ್ಯವಿಲ್ಲ ನಂಗೆ" ತಲೆಯಾಡಿಸಿದರು.

"ದೇವರ ಮುಂದೆ ಈ ಸಂಬಂಧವಾಗಿ ಹೋಗಿದೆಯಲ್ಲಪ್ಪ—ನಿನ್ನ ತಪ್ಪಿಲ್ಲದೆ, ಯತ್ನವಿಲ್ಲದೆ."

"ದೇವರ ಮುಂದೆ ಆಗುವ ಸಂಬಂಧ ಇದಲ್ಲ. ಅವನೂ, ನಾನೂ, ಯಾರೂ ಒಪ್ಪೋದಿಲ್ಲ. ರದ್ದಾಗಬೇಕು."

"ಹೇಗಪ್ಪ? ಈ ಅಪಮಾನ ನೀಗೋದಕ್ಕಾದರೂ ಮದುವೆಯ ಮುದ್ರೆ........"

"ಆಮೇಲೆ ಅವನು ನಿನ್ನ ಬೇಕಾದಂತೆ ಎಳೆದಾಡಿ ಬವಣೆಪಡಿಸಲಿ ಅಂತಲೆ? ನಿನ್ನ ಮಾರೋದಕ್ಕೂ ಹೇಸದ ಪಾಪಿ!"

"ಮುಂದೆ ಬೇರೆಯಾದರೂ........ಈಗ ತಪ್ಪು ಸರಿಪಡಿಸೋದಕ್ಕೆ...."

"ಹೀಗೆ ಸರಿಯಾಗೋದಿಲ್ಲ, ಕುಸುಮ. ನಿಂಗೆ ತಿಳಿಯದು. ಆಗಲೇ ಒಂದು ಬಾರಿ ಮುಗ್ಗರಿಸಿದೀಯೆ. ಸಿರಿಯೂರ ಮನೆತನದೊಡನೆ ಮದುವೆ ಮಾತಾಗಿ ನಿಶ್ಚಯವಾಗಿದ್ದು, ಈಗ ಈ ಕ್ಷುದ್ರನನ್ನು ಕೂಡಿದರೆ, ಜನರು ಊಹಿಸಲಾರರೆ? ಪಿಸಿಮಾತು ಆಡೇ ಆಡ್ತಾರೆ. ಅಪವಾದ ನಿನ್ನನ್ನು ಹಿಂಬಾಲಿಸದೆ ಬಿಡೋದಿಲ್ಲ. ಪ್ರಯೋಜನವಿಲ್ಲ."

"ಮತ್ತೆ, ಇದಕ್ಕಿಂತ ಉತ್ತಮ ದಾರಿ ಯಾವುದಪ್ಪ?"

ಸಾಹುಕಾರರು ಕೂಡಲೇ ಉತ್ತರ ಕೊಡಲಿಲ್ಲ. ಸ್ವಲ್ಪ ಹೊತ್ತು ಯೋಚಿಸಿದರು.

"ಹೇಗಾದರೂ, ಏನಾದರೂ, ನಿಶ್ಚಯವಾಗಿರೋ ಮದುವೆ ನಡೆದು ಹೋಗಬೇಕು." ಕಡೆಗೆ ಹೊರಟಿತು ನಿಶ್ಚಯ.

"ಈ ಮದುವೆ—ನಂಗೆ!"

"ಹುಂ, ಅದೇ ಸರಿಯಾದ ಮರ್ಯಾದೆಯ ಮಾರ್ಗ. ಮಾನವಂತರ, ಪುಣ್ಯವಂತರ, ಮನೆತನಸ್ಥರ ಮನೆ ಸೇರಿ, ಮುಂದೆ ನಿನ್ನ ಬಾಳೂ ಸುಖವಾಗಿ, ಮಾನವಾಗಿ, ನಡೆಯೋ ರೀತಿ ಅಲ್ಲದೆ ಬೇರೆ ವಿಧದಿಂದಲೂ ಅದು ಅತ್ಯಗತ್ಯ. ನಾನು ಮಾತು ಕೊಟ್ಟುಬಿಟ್ಟಿದೀನಿ– ನನ್ನ, ನಿಮ್ಮ, ಈ ಪುರಾತನ ಶ್ರೇಷ್ಠ ಮನೆತನದ ಪರವಾಗಿ. ಅದರಂತೆ ನಡೆಯದಿದ್ದರೆ ನಮ್ಮ ಬೆಲೆಯೇನಾಯ್ತು? ಲೋಕವೆ ಏನನ್ನುತ್ತೆ? ಮಾತು ಮುರಿದು, ಮರ್ಯಾದೆ ಹರಿದು, ನಾನು ಮುಖ

ಹೇಗೆ ತೋರಿಸಲಿ, ಜನಕ್ಕೆ? ಆಗದು ಹೇಗೆ ಹೇಗೇ ನೋಡಿದರೂ ಇದೇ ಹಿತ, ಗೌರವ."

"ಆದರೆ ಹೇಗೆ ಸಾಧ್ಯವಪ್ಪ—ಈ ವಿಪರೀತದ ಯೋಚನೆ?"

"ಅದನ್ನು ನಂಗೆ ಬಿಡು. ವಿಪರೀತದ ಜಾಡ್ಯಕ್ಕೆ ವಿಪರೀತದ ಔಷಧಿಯೇ ಬೇಕು."

"ಅಂದರೆ? ನಂಗೆ ಅರ್ಥವಾಗೋದೇ ಇಲ್ಲವಲ್ಲ!" ಕುಸುಮಳ ಮನಸ್ಸು ಒದ್ದಾಡಿತು.

ಕ್ಷಣಕಾಲ ಮೌನ ನೆಲಸಿತ್ತು.

"ಅದು........ಡಾಕ್ಟರಿಗೆ........" ಸಾಹುಕಾರರು ತಡೆತಡೆದು ಹೇಳುತ್ತಿದ್ದರು.

"ಆಂ! ಡಾಕ್ಟರು!" ಕುಸುಮ ಬೆಚ್ಚಿದಳು. "ಅಪ್ಪ! ಏನು ಹೇಳುತ್ತಿದೀಯೆ?" ಕುಸುಮ ಎದೆಗೆಟ್ಟು ಗಾಬರಿಯಾದಳು. ಮೈ ಜುಂ ಎಂದು ಬೆವೆತಿತು. ಮುಖ ಕೆಂಪೇರಿ ಕೆಂಡದಂತಾಯಿತು, ನೋವಿನಿಂದ ಹಿಂಡಿದಂತಾಯಿತು "ನೀನು! ತಂದೆಯಾಗಿ! ಇಲ್ಲ! ಇಲ್ಲ...." ಕುಸುಮ ತನ್ನ ಮುಖದ ಬಳಿ ಕೈಯಾಡಿಸುತ್ತ ಗಂಟಲಿನಲ್ಲೇ ಕೂಗಿಕೊಂಡಳು.

ಸಾಹುಕಾರರು ಕೂಡಲೇ ಮಾತಾಡಲಿಲ್ಲ. ಕುಸುಮ ಅವರ ಮುಖ ನೋಡಿದಳು, ನೋಡಿದಳು. ಅದರ ಮೌನ, ಮಾತಿಗಿಂತ ಕಠಿಣವಾಗಿತ್ತು. ಅದರ ನಿರ್ಧರ, ಮಾತು ತೋರಿಸದ ಭಯವನ್ನು ಸೂಚಿಸುತ್ತಿತ್ತು.

"ಅಪ್ಪ! ಇದೆಂಥ ದಾರಿ! ಅಮ್ಮ, ಹೇಳಮ್ಮ! ಅಯ್ಯೋ ನನ್ನಮ್ಮ....!" ಯಾರೋ ಕಿತ್ತುಕೊಳ್ಳುತ್ತಿರುವ ಮಗುವನ್ನು ಬಿಡಲಾರದ ತಾಯಿಯಂತೇ ಕೂಗಿಕೊಂಡಳು. ಸಾಹುಕಾರರು ಮುಂದೆ ಹೇಳದಂತೆ ಬಾಯಿನ ಮೇಲೆ ಬೆರಳಿಟ್ಟು 'ಶ್!' ಎಂದು ಕುಸುಮಳ ಮಾತನ್ನು ನಿಲ್ಲಿಸಿದರು. ಕುಸುಮ ಕುಸಿದು ಮುಖ ಮುಚ್ಚಿಕೊಂಡು ಕಣ್ಣೀರು ಸುರಿಸಿದಳು.

"ಪುಟ್ಟ, ತಪ್ಪು ತಿಳೀಬೇಡ. ಇದು ನಂಗೆ ಹಿತವೆ? ಸಂತೋಷವೆ? ಆದರೆ ವಿಧಿಯಿಲ್ಲ—ಎಲ್ಲ ತರಹದಿಂದ."

"ಇಲ್ಲ, ಇಲ್ಲ. ಇದು ನನ್ನದು! ನನ್ನ ಪ್ರಾಣ!"

"ಬರಿ ಭಾವಾವೇಶದಿಂದ ಏನು ಪ್ರಯೋಜನ? ಚೆನ್ನಾಗಿ ಸಮಾಧಾನ

ದಿಂದ ಯೋಚಿಸಿ ನೋಡು. ಇದೊಂದು ಸರಿಯಾದರೆ, ನೀನು ಸಹಿಸಿದರೆ ಮುಂದೆ ಮಕ್ಕಳಾಗೋದಿಲ್ಲವೆ ?—ಮಾನದ ಮಕ್ಕಳು ? ”

“ಬೇಡ. ಬೇಡ—ಅವೆಲ್ಲ ನಂಗೆ. ಇದೊಂದೇ ಇರಲಿ. ಹೇಗಾದರೂ ಸರಿ. ”

“ ಛಿ ! ಅದೇ ಆವೇಶ. ಕುಸುಮ ನೀನೇನು ಮಗುವಲ್ಲ. ತಿಳಿಯದವಳಲ್ಲ. ಪ್ರಪಂಚಕ್ಕೆ ನೀನೇ ಇಳಿದಿದೀಯೆ. ನಿಂಗೆ ಗೊತ್ತಿಲ್ಲವೆ ? ಮಾನಕ್ಕಾಗಿ ಏನನ್ನೆಲ್ಲ ಮಾಡಬೇಕಾಗುತ್ತೆ, ಸಹಿಸಬೇಕಾಗುತ್ತೆ. ನಾವು, ಮಕ್ಕಳು, ಐಶ್ವರ್ಯ....ಎಲ್ಲಕ್ಕಿಂತ ಮಾನವೇ ಹೆಚ್ಚು. ಅದಕ್ಕಾಗಿ ಎಲ್ಲವನ್ನೂ ಬೇಕಾದರೆ ಬಿಡಬೇಕು.”

“ ಇದೇನು ಮಾನದ ವಿಷಯವಪ್ಪ ? ಇದು ತಾನೆ ಗೊತ್ತಾಗೋದಿಲ್ಲವೆ ? ”

“ ಆ ಭಾರ ನಂಗಿರಲಿ. ಮುನಿಸಿಪಲ್ ಆಸ್ಪತ್ರೆ ಡಾಕ್ಟರು ನಮ್ಮೋರಾಗಿದಾರೆ. ನನ್ನ ದಾಕ್ಷಿಣ್ಯದಲ್ಲೇ ಇದಾರೆ; ಮುಂದೂ ಇರಬೇಕು. ನಾವು ಹುಟ್ಟೋದು, ಬೆಳೆಯೋದು, ಬಾಳೋದು, ಬೀಳೋದು ಎಲ್ಲ ಸಮಾಜದಲ್ಲಿ. ಅಲ್ಲಿ ಮರ್ಯಾದೆಯೆ—ಮುಖ್ಯ. ಹಟ ಹಿಡಿಯಬೇಡ.”

“ ಆಗದು, ಆಗದು. ಏನಾದರೂ ಇದೊಂದು ಆಗದಪ್ಪ. ನಾನು ಎಲ್ಲಾದರೂ ಹೋಗುತ್ತೇನೆ—ದೂರ, ದೂರ. ಯಾರ ಕಣ್ಣಿಗೂ ಬೀಳದಂತೆ ಇರುತ್ತೇನೆ, ಇದರೊಂದಿಗೆ. ಅದೇ ಸಾಕು.”

“ ಏನು ! ನೀನು, ಒಬ್ಬಳೇ ! ”-ಸಾಹುಕಾರರು ಅವಳ ದಿಟ್ಟತನವನ್ನು ಕಂಡು ಬೆರಗಾದರು, ಬೆದರಿದರು.

“ ಅಣ್ಣ ಇರ್‍ತಾನೆ. ಕೆಲಸ ಮಾಡಿಕೋತಾನೆ. ”

“ ಓ ಇದನ್ನೂ ಯೋಚಿಸಿದ್ದೀರೋ ಹುಡುಗರು ? ಹುಂ ! ಅದೇ ಹುಡುಗತನ ! ಇದರ ಪರಿಣಾಮ ಏನಾಗುತ್ತೆ ? ”

“ ........... ”

“ ಎಲ್ಲಿದ್ದರೆ ತಾನೆ ಯಾರು ಅಂತ ಹೇಳಿಕೋತೀರಿ ? ಬೇಡ, ಸುಳ್ಳೇ ಹೇಳಿದಿರಿ. ನಾಳೆ ಮಗುವಿನ ತಂದೆ ಯಾರು ಅಂತ ? ಅದಕ್ಕೂ ಮೋಸ ಮಾಡಿದಿರಿ, ಆಗಲಿ. ಒಂದು ಕಾಲದಲ್ಲಿ, ಒಂದು ಸ್ಥಳದಲ್ಲಿ, ಮೋಸ

ಮಾಡಬಹುದು ಅನ್ನೋಣ; ಜೀವನದಲ್ಲೆಲ್ಲ ಮಾಡೋದು ಸಾಧ್ಯವೆ? ಒಂದಲ್ಲ ಒಂದು ದಿನ ನಿಜ ತಿಳಿದೇ ತಿಳಿಯುತ್ತೆ. ಆಗ ಸುಳ್ಳಿನ ಮೇಲೆ ಬೆಳೆದ ಬಾಳು, ಸಿಡಿಲಿಗೆ ಬಿದ್ದು ಉರಿದ ಮರದಂತೆ ಆಗುತ್ತೆ. ಆಗ? ಮಗುವಿನ ಬಾಳು, ಬೆಳೆದು ನಿಂತ ಬಾಳು, ಸಮಾಜದಲ್ಲಿ ಏನಾಗುತ್ತೆ? ನೀವು ಧೈರ್ಯಮಾಡಿದರೂ ಅದರ ಪಾಡೇನು? ಅದು ಏಟನ್ನು ತಡೆದುಕೊಂಡೀತೆ? ನಿಮ್ಮನ್ನು ಏನಂದೀತು? ಇದು ಅದರ ಹಿತಸಾಧನವೆ? ಹಿತಶತ್ರುತ್ವ. ತುಂಬಿದ ಬಾಳು ಸಿಡಿಯೋದನ್ನು ನೋಡಿ ಎದೆಯೊಡೆಯೋದು ಸರಿಯೆ? ಬೇಕೆ? ಆ ಸಂದರ್ಭವೇ ಬರದಂತೆ ನೋಡಿಕೊಳ್ಳೋದು ಬೇಕೆ? ಆಗ ನಮ್ಮ ಮನೆತನ ಬಯಲಿಗೆ ಬರದೆ ಇರುತ್ತೇ? ಹುಟ್ಟಿದ ಮನೆತನದ ಹೆಸರನ್ನು ಕೆಸರಿಗೆ ಎಳೆಯೋದು ಹಿತವೆ–ನಿಂಗೆ? ಯೋಚಿಸು. ಸ್ವಾರ್ಥಾಭಿಮಾನ ನಿನ್ನನ್ನು ಬಿಟ್ಟು ದೊಡ್ಡ ಆವರಣಕ್ಕೆ ಹಬ್ಬಲಿ. ಆಗ ಗೊತ್ತಾಗುತ್ತೆ ತ್ಯಾಗ ಸರಿಯೆ, ಅಲ್ಲವೆ, ಅಂತ. ಕುಸುಮ, ಮಗು, ಇಗೊ ನಿನ್ನ ತಂದೆ ನಾನು, ನಿನಗಾಗಿ, ನಮಗಾಗಿ, ಮರ್ಯಾದೆ ಮನೆತನಕ್ಕಾಗಿ ಬೇಡಿಕೊಳ್ಳುತ್ತಿದೀನಿ ಅಂತ ತಿಳಿದುಕೊ...."

"ಅಪ್ಪಾ, ಆದರೆ ಮಗುವನ್ನು ಬಲಿಕೊಡಲಾರೆನಲ್ಲ. ಏನು ಮಾಡಲಿ?" ಯಾತನೆಯಿಂದ ನರಳಿದಳು.

"ಹಾಗಾದರೆ ನನ್ನ ಬಲಿ ಕೊಡು...." ನಿಷ್ಠುರದಿಂದ ಹೇಳಿಬಿಟ್ಟರು.

"ಅಪ್ಪ!"

"ಹುಂ, ಅಷ್ಟಕ್ಕೇ ಬರುತ್ತೆ. ನಾನು ಬೇರೆ ನಿನ್ನನ್ನು ಕುಲಹೀನ, ಮಾನಹೀನ, ಕೇಡಿಗನ ಕೈಗಿಟ್ಟು, ನಿನ್ನ ಅಪಮಾನ, ಕಷ್ಟ, ಹಿಂಸೆಗಳನ್ನು ನೋಡಿ ಸಹಿಸುತ್ತ, ನಾನು ಕೊಟ್ಟ ಮಾತನ್ನೂ ಮಾನಸ್ಥರಲ್ಲಿ ಕಳೆದು ಕೊಂಡು, ಸಮಾಜದಲ್ಲಿ ತಗ್ಗಿ ನಡೆಯುತ್ತ, ಮರ್ಯಾದೆ ಮನೆತನದ ಘನತೆಯನ್ನು ಕೆಡಿಸಿ, ಕೀಳಾಗಿಸಿ, ಅಳಿಸಿ, ಕುಲಕಳಂಕನಾಗಿ ಬಾಳಲಾರೆ. ಇದಂತೂ ಖಂಡಿತ."

"ಅಪ್ಪ! ಅಪ್ಪ! ಹಾಗೆನ್ನಬೇಡ. ನೀನು ಜನ್ಮಕೊಟ್ಟು ಪ್ರೇಮ ಸುರಿದು ಬೆಳೆಸಿದ್ದಕ್ಕೆ ನಿನ್ನನ್ನು ಬಲಿ ಕೊಡಲೆ?"

"ಹಾಗಾದರೆ ಆಯ್ದುಕೊ."

" ಅಯ್ಯೋ ಎಂಥ ಆಜ್ಞೆ! ಅಪ್ಪ, ಇಷ್ಟು ಕಠಿಣವಾಗಿರಬೇಡ. ದಯೆ ತೋರಿಸು. "

" ಅಮ್ಮ, ನನ್ನ ಎದೆ ನಿಂಗಾಗೇ ಬೇಯುತ್ತೆ. ಕಾಠಿಣ್ಯ ತೋರಿಸಿದರೂ ನಿಂಗಾಗಿ. ವಿಧಿಯಿಲ್ಲ. ನೋಯಬೇಡ. "

" ಏನು ಮಾಡಲಿ ದೇವರೆ! ಅಯ್ಯೋ, ನಾನಿಲ್ಲದಿರುಪ್ಪದೇ ಲೇಸು ನಂಗೆ ! "

" ಛಿ ! ಎಂಥ ಯೋಚನೆ ! ಅದರಿಂದ ಏನು ಪ್ರಯೋಜನ ? ಮಗು ಉಳಿಯುತ್ತೇ? ಬಾಳುತ್ತೇ? ಹೀಗೆ ನಿನ್ನ ಕಳೆದುಕೊಂಡು ನಾನು ಬದುಕೇನೆ?"

" ನನ್ನ ಗತಿಯೂ ಹಾಗೇ ಅಲ್ಲವೆ, ಅಪ್ಪ ? ಯೋಚಿಸು...."

" ಇದರಿಂದ ಚೇತರಿಸಿಕೊಳ್ಳೋದು ಸಾಧ್ಯ, ಅಗತ್ಯ. ಚೇತರಿಸಿ ಕೊಳ್ಳಬೇಕು. "

" ಅಮ್ಮ, ನೀನೂ ತಾಯಿ, ಹೇಳಮ್ಮ ಅಪ್ಪಂಗೆ. " ಸಣ್ಣಮ್ಮನಿಂದ ಉತ್ತರ ನಿದಾನವಾಗಿ ಬಂದಿತು. ಪ್ರತಿ ಮಾತನ್ನು ಆಡುವಾಗಲೂ ಅದು ಸಾಹುಕಾರರಿಗೆ ಒಪ್ಪಿಗೆಯಾಗುತ್ತಿದೆಯೋ ಇಲ್ಲವೋ ಎನ್ನುವಂತೆ ಅವರ ಕಡೆಗೆ ಆತಂಕದಿಂದ ನೋಡುತ್ತಿದ್ದಳು.

" ಮಗು, ನಾನೇನು ಹೇಳಲಿ ? ನಾನೂ ಎಷ್ಟೋ ಮಕ್ಕಳನ್ನು—ಒಂದಲ್ಲ ಎರಡಲ್ಲ ಹತ್ತರ ಮೇಲೆ—ಕಳೆದುಕೊಂಡು, ನೋವನ್ನು ಅನುಭವಿಸಿ ದೀನಿ, ಸಹಿಸಿದೀನಿ. ನಿನ್ನ ಮುಖ ನೋಡಿಕೊಂಡು ಸಂತೈಸಿಕೊಂಡಿದೀನಿ. ತಾಯಿಯಾದೋಳಿಗೆ ಇದೂ ಸಾಧ್ಯ. ನಿಮ್ಮ ತಂದೆ ಹೇಳೋದು, ಮನೆ ತನಕ್ಕೆ ಹೇಗೋ ಹಾಗೆ ನಿನ್ನ ಹಿತಕ್ಕಾಗಿಯೂ, ತಾಯಿ. ಈಗ ನಿಂಗೆ ಈ ದುಃಖವೇ ಹೆಚ್ಚು. ಆದರೆ ಮುಂದೆ ಇದಕ್ಕಿಂತ ಹೆಚ್ಚು ಬರಲಾರದೆ ? ಅದನ್ನೆಲ್ಲ ಯೋಚಿಸು. ಹುಟ್ಟಿದ ಮನೆಗೂ, ಸೇರಿದ ಮನೆಗೂ, ಹೆಸರು ತರಲು ಹೆಣ್ಣಾದೋಳು ಶ್ರಮಿಸಬೇಕು, ಬಹಳವಾಗಿ ಸಹಿಸಬೇಕಮ್ಮ. ನಮ್ಮ ಹುಟ್ಟೇ ಹಾಗೆ–ಮೊದಲಿನಿಂದಲೂ. ಹಿಂದಿನ ಹೆಂಗಸರನ್ನೆಲ್ಲ ಹಾಗೇ ನೆನೆಸಿಕೊ. ಎಷ್ಟು ಕಷ್ಟಪಟ್ಟರು....!"

" ಅಮ್ಮಾ ನೀನೂ...ಅಯ್ಯೋ ! ನಂಗೇನೂ ಗೊತ್ತಾಗೋದಿಲ್ಲ ವಲ್ಲಾ....ಅಪ್ಪಾ, ಅಮ್ಮಾ ನಿಮ್ಮ ಕೈಯಲ್ಲಿ ನಾನು...."

ಕುಸುಮ ಮುಂದೆ ಮಾತನಾಡಲಿಲ್ಲ. ಮುಂದೆ ನಿಂತಿದ್ದ ತಂದೆಯ ಕಡೆಗೆ ಬಾಗಿ ಅವರ ಕುತ್ತಿಗೆಗೆ ಕೈಕಟ್ಟಿ, ಎದೆಯ ಮೇಲೆ ತಲೆಯಿಟ್ಟು ಗೋಳಾಡಿದಳು. ತಂದೆಯ ಮುಖ ಪೆಚ್ಚಾಯಿತು. ಅವರ ಕೈಗಳು ಮಗಳನ್ನು ತಡವಿದುವು. ತಾಯಿಯ ಕಣ್ಣಿನಲ್ಲಿ ಧಾರಾಳವಾಗಿ ನೀರು ಹರಿಯಿತು. ಬಹಳ ಕಾಲ ಹೀಗೇ ಮೌನದಿಂದ ಕಳೆಯಿತು.

ಸಾಹುಕಾರರು ಕಡೆಗೆ ಮಗಳನ್ನು ಮೃದುವಾಗಿ ಹಾಸಿಗೆಯ ಮೇಲೆ ಮಲಗಿಸಿ "ಕುಸುಮ, ಅಳಬೇಡ. ಸೈರಿಸಿಕೊ. ನೋಡೋಣ. ಛೆ! ಎಂಥ ಬಿಕ್ಕಟ್ಟು! ನಿನ್ನ ನೋವು ನೋಡೋ ನಾವು ಎಂಥ ಹೀನ ಅದೃಷ್ಟದೋರು! ನಿಂಗೆ ಮಾತ್ರ ಈ ನೋವನ್ನು ಕೊಡದಿರೋದು ಸಾಧ್ಯವಾಗಿದ್ದರೆ! ಹಾ!" ಎಂದು ಹೇಳಿದರು.

ಬಾಗಿಲಿನ ಬಳಿ ಸಣ್ಣಮ್ಮ "ಪಾಪ, ಮಗು ಬಹಳ ವ್ಯಥೆಪಡ್ತಾಳೆ" ಎಂದು ಮೆಲ್ಲಗೆ ಹೇಳಿ ಮರುಗಿದಳು. ಸಾಹುಕಾರರು "ಹೌದು, ಮತ್ತೇನು ಮಾಡೋದು? ಬೇರೆ ದಾರಿಯೇ ಇಲ್ಲವಲ್ಲ—ಮರ್ಯಾದೆ ಉಳಿಯಬೇಕಾದರೆ. ಛೇ!" ಎಂದು ಪಿಸಿಗುಟ್ಟಿ, ಕೈಕೊಡಹಿ "ಎಲ್ಲ ದೈವೇಚ್ಛೆ. ಹೀಗೆ ನಡೆಯಬೇಕಾಗಿತ್ತು. ಯಾರೇನು ಮಾಡೋದು ಸಾಧ್ಯ?" ಎಂದು ಮುಗಿಸಿ ನಿಟ್ಟುಸಿರುಬಿಟ್ಟರು.

ಅವರು ಹೋದ ಮೇಲೆ ಕುಸುಮ "ದೇವರೇ! ಇನ್ನು ನಿನ್ನ ಕೈಯಲ್ಲಿ" ಎಂದು ಕೈ ನೀಡಿ ನಿರಾಸೆಯಿಂದ, ಅಸಹಾಯಳಾಗಿ ಹೇಳಿಕೊಂಡಳು.

ಮತ್ತಿಷ್ಟು ಯೋಚಿಸಿ, ಅಷ್ಟಿಷ್ಟು ಮಾತಾಗಿ, ಮತ್ತೆ ಮತ್ತೆ ಚರ್ಚೆಯಾದ ಮೇಲೆ ಸಾಹುಕಾರರು ದಾಸನನ್ನು ಕರೆದು "ಹೋಗು ಡಾಕ್ಟರನ್ನು ಈಗಲೇ ಕರೆದುಕೊಂಡು ಬಾ. ಕೇಳಿದರೆ ಅಮ್ಮಾವರಿಗೆ ಮೈಯಲ್ಲಿ ಚೆನ್ನಾಗಿಲ್ಲ ಅಂತ ಹೇಳು—ಅಮ್ಮಾವರಿಗೆ, ತಿಳಿತೆ?" ಎಂದು ಹೇಳಿದರು. ದಾಸ ತಲೆಯಾಡಿಸುತ್ತ ಹೋದ.

ಇತ್ತ ಅದೇ ಸಂಜೆ ಮೈಸೂರಿನಲ್ಲಿ ಗುರುವೂ ಕಾಮೇಶ್ವರಯ್ಯನವರೂ ಮರುಳೂರಿಗಾಗಿ ರೈಲು ಹತ್ತಿದರು.

ಗುರುವಿನ ಉತ್ಸಾಹ ಹೇಳತೀರದು. ಜೀವನದ ಒಂದೇ ಒಂದು ಅವಕಾಶ ಪೂರ್ಣ ಫಲಕೊಟ್ಟಂತಾಗಿತ್ತು. ಹಿಂದಿನ ಕೆಲವು ವರ್ಷಗಳಿಂದ,

ತನ್ನ ಜೀವನ ಗುರಿಯಿಲ್ಲದೆ ಕಲಸುಮೇಲೋಗರವಾಗಿ ನಡೆದು, ತನ್ನಲ್ಲೇ ಸಹಿಸಲಾರದ ಅತೃಪ್ತಿಯನ್ನುಂಟುಮಾಡಿದ್ದಿತು. ತನಗೆ ತೀರ ಬೇರೆಯಾದ, ವಿರೋಧವಾದ, ಬಾಳಿನ ಹೊಳೆಗೆ ಇದಿರಾಗಿ ಈಸುತ್ತ ಸೋತಿದ್ದ. ಕೆಲವು ತಿಂಗಳಿಂದಂತು ತನ್ನ ಬಾಳೇ ಬೇಸರವಾಗಿ, ಕಗ್ಗಂಟುಬಿದ್ದು, ಅಲಸಿಕೆ ನಿರಾಸೆಗಳ ಬೆಟ್ಟವಾಗಿ, ಕದಲದೆ ಬಿದ್ದಿತ್ತು. ಇದನ್ನು ಒಡೆಯುವ, ಉರುಳಿಸುವ, ಡೈನಮೈಟಾಗಿ, ಈ ಉಸಿರುಗಟ್ಟಿಸುತ್ತಿದ್ದ ಅಪ್ರಯೋಜಕ ಬಾಳಿಗೆ ಹೊಸ ಹವವಾಗಿ, ತಂಗಿಯ ಕೆಲಸ ಬಂದಿತ್ತು; ಕವಿದಿದ್ದ ಮುದಿತನವನ್ನು ಕಿತ್ತೆಸೆದು, ಕಳೆದು ಹೋಗಿದ್ದ ಯೌವನವನ್ನು ತಂದಂತಿತ್ತು, ಹೊಸ ಜೀವನಕ್ಕೆ ದಾರಿ ಹಾಕಿದಂತಿತ್ತು. ಇದರಲ್ಲಿ—ಈ ಹೊಸ ಚೇತನ ತೀರ್ಥದಲ್ಲಿ ತನ್ನನ್ನೇ ಮುಳುಗಿಸಿದ್ದ. ಈಗ ಅದರಲ್ಲಿ ಜಯವನ್ನೂ ಹೊಂದಿದ್ದ. ಅದೂ ಎಂಥ ಅಪೇಕ್ಷಿತವಾದ ಸಂಪೂರ್ಣ ರೀತಿಯಲ್ಲಿ! ತನ್ನ ಯತ್ನಪೂರ್ಣತೆಯಲ್ಲಿ ಇನ್ನೂ ಏನೇನೋ ಕಷ್ಟಗಳನ್ನು ಎಣಿಸಿಕೊಂಡು ಎದೆಗೆಟ್ಟಿದ್ದ, ಒದ್ದಾಡಿದ್ದ. ಆದರೆ ಈಗ ಆದ ಬದಲಾವಣೆ, ಸೌಲಭ್ಯಗಳನ್ನು ಕಂಡು, ಅನುಭವಿಸಿ, ಎಷ್ಟನೆಯ ಬಾರಿಗೊ ಅತ್ಯಾಶ್ಚರ್ಯಪಟ್ಟಿದ್ದ. ಇದರಿಂದ ತಂಗಿಗಾಗುವ ಸುಖ ಸಂತೋಷಗಳನ್ನು ನೆನೆನೆನೆದು ಹಿಗ್ಗಿದ. ತಂದೆ ತಾಯಿಗಳಿಗೂ ಹಿತವಾಗುವ ಒಂದು ಕೆಲಸವನ್ನಾದರೂ ಈಗ ಮಾಡಿದೆನೆಂದು ಅವನಿಗೆ ಬಹಳ ಸಮಾಧಾನ, ಹೆಮ್ಮೆ. ಅವರಿಂದ, ಮುಖ್ಯವಾಗಿ ತನ್ನ ಪ್ರೇಮದ ತಂಗಿಯಿಂದ, ಸಿಗಲಿದ್ದ ಸ್ವಾಗತವನ್ನು ಊಹಿಸಿ ಊಹಿಸಿ ಉತ್ಸಾಹದಿಂದ ಉಬ್ಬಿದ. ಊರು ಎಂದಿಗೆ ಸಿಕ್ಕೀತೋ ಎಂದು ಹಂಬಲಿಸಿದ. ರೈಲು ಓಡಿದಂತೆ, ಮುಂದೆ ಬರುವ ನಿಲ್ದಾಣಗಳನ್ನು ಆತುರದಿಂದ ನಿರೀಕ್ಷಿಸಿದ. ರೈಲು ನಿಂತಾಗ ಕಸಿವಿಸಿಪಟ್ಟ. ರಾತ್ರಿ ಕಳೆದ ಮೇಲೆ ಮೈಲಿಕಲ್ಲುಗಳನ್ನೂ ಎಣಿಸಿದ. ಊರು ಹತ್ತಿರ ಹತ್ತಿರವಾದಂತೆಲ್ಲ ರೈಲು ಹೆಚ್ಚು ಹೆಚ್ಚು ನಿದಾನವಾಗಿ ಹೋಗುತ್ತಿದ್ದಂತಿತ್ತು. ಮೈಸೂರಿಗೆ ಹೋಗುವಾಗ ಇದ್ದ ತವಕದ ನೂರರಷ್ಟು ಈಗ. ಆಗ ಇದ್ದ ಆತಂಕದ ಬೆಟ್ಟದಲ್ಲಿ ಸಾವಿರದ ಒಂದು ಕಾಳಿನಷ್ಟೂ ಈಗ ಉಳಿದಿರಲಿಲ್ಲ. ತಡವೆಲ್ಲ ಬರಿ ಪ್ರಕೃತಿಯದೇ. ಅದರ ಮೇಲೆಯೇ ಮುಸುಗುಟ್ಟಿದ

ಕಾಮೇಶ್ವರಯ್ಯನವರ ರೀತಿ ಬೇರೆ. ಗಂಭೀರ ಚಿಂತೆಯಲ್ಲಿ ಮಗ್ನ

ರಾಗಿದ್ದರು. ತಮ್ಮೊಳಗೆ ಒಮ್ಮೆಲೇ ಆಗಿದ್ದ ಮಾರ್ಪಾಟನ್ನು ಇನ್ನೂ ಚೆನ್ನಾಗಿ ತಿಳಿಯವೆ ಅದನ್ನು ಅಲ್ಲಲ್ಲಿ ಮುಟ್ಟಿ, ಮೂಸಿ, ಹಿಡಿದು, ಎತ್ತಿ ತಿರಿತಿರಿಗಿಸಿ ನೋಡಿ, ಅದೇನೆಂದು, ಅದರ ರೀತಿ ಯಾವುದೆಂದು, ಅದು ಹೇಗಾಯಿತೆಂದು, ಇನ್ನೂ ಅರಿಯುತ್ತಿದ್ದರು. ಒಳಗೆ ಆಳದಲ್ಲಿ ಅಲ್ಲೋಲ ಕಲ್ಲೋಲವಾಗಿ ತಮ್ಮ ಬಾಳೆಲ್ಲ ಸುಳಿಗೆ ಸಿಕ್ಕಿ ತಳ ಮೇಲಾದಂತೆ ಭಾಸ ವಾಗುತ್ತಿತ್ತು. ಅವರು ಬಾಳಿನ ಹಲವು ಬಗೆಗಳನ್ನು ಓದಿದ್ದರು, ಕೇಳಿದ್ದರು. ಬರೆದಿದ್ದೂ ಇದ್ದರು. ಆದರೆ ಒಂದನ್ನೇ ಆರಿಸಿಕೊಂಡಿದ್ದರು. ಇತರ ವಿಧ ಗಳನ್ನು ತಿರಸ್ಕರಿಸಿ ತಳ್ಳಿದ್ದರು. ಅದರಲ್ಲೇ ಮಿತಿಮೀರಿ ಆನಂದೋನ್ಮಾದವನ್ನೇ ಪಡೆದು ತಮ್ಮ ಲೋಕದಲ್ಲೇ ಮೆರವಣಿಗೆ ನಡೆದು ವೈಮರೆತಿದ್ದರು. ಈಗ ೨ೂ, ಕೆಲವು ಗಂಟೆಗಳ ಕೆಳಗೆ, ಅದೇ ಬೇರೆ ವಿಧದ ಬೋಧನೆಯ ಇದಿರಿನಲ್ಲಿ, ಅದರ ಮುಖದಲ್ಲಿ, ಅಪಹಾಸ್ಯ ಮಾಡಿದ್ದರು. ತಪ್ಪೆಂದು ಯೋಚಿಸಿರಲಿಲ್ಲ. ಆದರೆ ಈಗ ಇದ್ದಕ್ಕಿದ್ದಂತೆಯೇ ಒಂದು ದೈಹಿಕ ಛಳಕು—ಮನಸ್ಸಿನ ಸಿಡಿಲು, ಚುರುಕಿನ ಶಸ್ತ್ರಕ್ರಿಯೆ, ಆ ಹಿಂದಿನ ಬೋಧೆ, ಚರ್ಚೆ, ಬೇಡಿಕೆಗಳು, ಮಾಡಲಾಗದಿದ್ದ ಮಾರ್ಪಾಡಿನ ಮರೆವನ್ನು ತಂದೊಡ್ಡಿ ಹಿಂದಿನ ಬಾಳನ್ನು ಅಳಿಸಿಬಿಟ್ಟಿತು. ಈಗ ಒಳಗೆ ಅರಳುತ್ತಿದ್ದ, ಆವರಿಸುತ್ತಿದ್ದ ಮಾರ್ಪಾಡು, ತಮ್ಮ ಕಣ್ಣುಮುಂದೆಯೇ ಹರಡುತ್ತಿರುವಂತೆ ಭಾಸವಾಗುತ್ತಿತ್ತು. ಇದು ಬರಿಯ ಬುದ್ಧಿಜೀವಿ ಬಿಡಿಸಲಾರದ ತೊಡಕು. ಅಯ್ಯನವರೂ ಇದರಲ್ಲೇ ಬಿದ್ದು ಒದ್ದಾಡುತ್ತಿದ್ದರು. ಇದೇನು ಆ ಛಳುಕಿನ ಗಳಿಗೆಯಲ್ಲಿ ಕಂಡ ಜೀವನದ ಕ್ಷಣಿಕತೆ, ಅದರಲ್ಲಿ ಮೇಲುಸುಖಕ್ಕಾಗಿ ಹೊಯ್ದಾಡುವ ಹುಚ್ಚು ಹೀನಾಯ—ಇವುಗಳ ಅರಿವೇ ? ಅಥವ, ಮೇಲೆ ಕಾಣುತ್ತಿದ್ದ ಉಲ್ಲಾಸದ ಹಗುರ ಹೊದಿಕೆಯ ಕೆಳಗೆ, ಕಿಳು ತೃಪ್ತಿಯ ಉಸಿರು ಹೆಚ್ಚಿ ಹೆಚ್ಚಿ, ತಮ್ಮ ಆಟದ ಬಲೂನು ಬೆಳೆಬೆಳೆದು, ಈ ಪೆಟ್ಟಿಗೆ ಸಿದ್ಧವಾಗುತ್ತಿದ್ದು, ಏಟು ಸೋಕಿದೊಡನೆ ಒಡೆದುಹೋಯಿತೊ ? ಏನೋ ಎಂತೋ. ಇದು—ಈ ಬಾಳಿನ ದಾರಿಯ ತಿರುವು, ಇನ್ನೂ ತಿಳಿಯದಿದ್ದರೂ, ಇದರಿಂದ ಅವರಿಗೆ ವ್ಯಥೆಯಾಗುತ್ತಿರಲಿಲ್ಲ. ಹಳೆಯ ದೃಶ್ಯವನ್ನೇ ಕಂಡು ಮದ್ದಾಗಿದ್ದ ದೃಷ್ಟಿಯ ಮುಂದೆ, ತೆರೆ ಹರಿದು, ಹೊಸ ದೃಶ್ಯವೇ ಕಂಡರೆ ಆಗುವ ಅನುಭವ—ದಿವ್ಯ ಚೇತನದ, ಬಿಸಿ ಸ್ನೇಹದ ಹೊಸತನದ ಮುಟ್ಟು,

ತಟ್ಟಿ; ಬುದ್ಧಿದೀಪದ ಬೆಳಕಿಗೇ ಕಣ್ಣು ಕೊಟ್ಟಿದ್ದ ದೃಷ್ಟಿ ನೇಸರನ್ನು ಕಂಡಂತೆ, ಅದರ ಹೊಂಗಿರಣದ ಕಾವು ಅಪ್ಪಿಕೊಂಡಂತೆ. ಗಾಳಿಯನ್ನು ಹಿಡಿಯ ಹೋದವನು, ಮರವನ್ನು ತಬ್ಬಿದಂತೆ; ಕನಸಿನಿಂದ ಜೀವನಕ್ಕೆ ಎಚ್ಚೆತ್ತವನಂತೆ; ಏನೋ ಒಂದು ಛಾಯೆಯಿಂದ, ಸುಳ್ಳಿನಿಂದ, ಸತ್ವಕ್ಕೆ ನಡೆದವನಂತೆ, ಇದ್ದಿತು. ಇದು ತಂದ ಆನಂದದಲ್ಲಿ ಒಂದು ಅಪೂರ್ವತೆ ಯಿತ್ತು; ಆಲಂಗಿಸಿ ಅನುಭವಿಸುತ್ತಿದ್ದರು. ಯಾರೊಡನೆಯೂ, ಗುರುವಿ ನೊಡನೆಯೂ ಮಾತುಕತೆ ಬೇಕಾಗಿರಲಿಲ್ಲ. ಶಬ್ದಗಳು, ಮಾತುಗಳು, ಹಗುರವಾಗಿ, ಕ್ಷುಲ್ಲಕವಾಗಿ ಕಂಡವು. ಮೌನದಲ್ಲಿ ಅಡಗಿದ್ದರು, ತಪಸ್ಸು ಮಾಡುತ್ತಿದ್ದರು. ಇದರ ಮಧ್ಯದಲ್ಲಿ ಅವರಿಗೆ ತಿಳಿಯುತ್ತಿದ್ದಂತೆ, ಮರೆಯು ದಂತೆ ಬರುತ್ತಿದ್ದ ಭಾವವೆಂದರೆ ಒಂದೇ 'ನಾನು ಹುಚ್ಚು ಜೀವನದಲ್ಲಿ ನಿಜವಾಗಿಯೂ ಈಗ ಏನನ್ನೊ ಒಂದನ್ನು ಸಾಧಿಸುತ್ತಿದ್ದೇನೆ. ಕಾಡಿನ ಕಳೆಯನ್ನು ಕೀಳುತ್ತಿದ್ದೇನೆ, ತೋಟಮಾಡುತ್ತಿದ್ದೇನೆ. ನನ್ನ ಬಾಳು ತುಂಬೀತು, ತೃಪ್ತಿ–ಆತ್ಮತೃಪ್ತಿ ದೊರಕೀತು' ಎನ್ನುವುದು–ಮಹದಾಶಯ.

ಇವರಿಬ್ಬರು ಮಹಲನ್ನು ಮುಟ್ಟಿದಾಗ ಮಧ್ಯಾಹ್ನವಾಗಿತ್ತು. ಗುರು, ಗಾಡಿಯಿಂದ ನೆಗೆದು ಚಿಮ್ಮುತ್ತ ಮಹಲಿನ ಕಡೆಗೆ ಹಾರಿದ. ಅಯ್ಯನವರು ಸ್ವಲ್ಪ ನಿದಾನವಾಗಿ ಹಿಂಬಾಲಿಸಿದರು. ವರಾಂಡದಲ್ಲಿ ಸಾಹುಕಾರರು ಒಬ್ಬರೇ ಕಾದಿದ್ದರು. ರೈಲಿನಿಂದ ಬರುವ ಹೊತ್ತಿನಲ್ಲೆಲ್ಲ ಹೀಗೇ ಈಚೆಗೆ ಕಾದಿರುತ್ತಿದ್ದರು. ಗುರುವನ್ನು ಕಂಡ ಕೂಡಲೇ ಅವರ ಮುಖ ಅರಳಿತು. "ಬಂದೆಯೇನಪ್ಪ, ಸುಖವಾಗಿ? ದೇವರು ದೊಡ್ಡೋನು" ಅಂದರು. ಅವನ ಉತ್ಸಾಹದಲ್ಲಿ ಗುರು ಈ ಮಾತಿನ ಅರ್ಥವನ್ನು ಗ್ರಹಿಸಲಿಲ್ಲ. ಅಯ್ಯನವರನ್ನು ಕಂಡು ಸಾಹುಕಾರರ ಅರಳಿದ ಮುಖ ಮುಚ್ಚಿಕೊಂಡಿತು.

"ಅಪ್ಪ, ಕಾಮೇಶ್ವರಯ್ಯನೋರು ಬಂದಿದಾರೆ!" ಗುರು ಹೆಮ್ಮೆ ಸಂತೋಷಗಳಿಂದ ಹೇಳಿದ.

"ಯಾಕೆ ಬಂದರು? ನಂಜಪ್ಪ ಸಿಗಲಿಲ್ಲವೆ?"

"ಇಲ್ಲ. ಮಾವ ಬಂದಿದ್ದನೇ? ಯಾಕೆ?"

ಸಾಹುಕಾರರು ಉತ್ತರ ಕೊಡಲಿಲ್ಲ.

"ಬನ್ನಿ, ಅಯ್ಯನೋರೆ" ಗುರು ಕರೆದ. ಅಯ್ಯನವರು ಹತ್ತಿರ ಬಂದಿದ್ದು, ಈಗ ಮೆಟ್ಟಲಿಗೆ ಕಾಲಿಟ್ಟರು.

"ಅವರಿಗೆ ಇಲ್ಲಿ ಪ್ರವೇಶವಿಲ್ಲ!" ಸಾಹುಕಾರರು ಅವರಿಗೂ ಕೇಳುವಂತೆ ಹೇಳಿದರು. ಅಯ್ಯನವರು ಅಪ್ರತಿಭರಾಗಿ ಅಲ್ಲೇ ನೆಲದ ಮೇಲೆ ನಿಂತರು.

"ಅಪ್ಪ!-ಇದೇಕೆ?" ಗುರು ಚಕಿತನಾಗಿ ಆತಂಕದಿಂದ ಕೇಳಿದ.

"ಯಾಕೆ! ಕೇಳಬೇಕೆ? ಮರ್‍ಯಾದೆಮಹಲಿನ ಮೆಟ್ಟಲು ಹತ್ತಲು ಯೋಗ್ಯತೆಯಿಲ್ಲ."

ಗುರುವಿಗೆ ಛಳಕು ಹೊಡೆದಂತಾಯಿತು. ಕ್ಷಣದಲ್ಲಿ ಎಲ್ಲವೂ ತಂದೆಗೆ ಗೊತ್ತಿರುವುದಾಗಿ ತಿಳಿದುಕೊಂಡ. ಅಯ್ಯನವರು ತಲೆತಗ್ಗಿಸಿ ಮೌನದಿಂದ ನಿಂತಿದ್ದರು.

"ಅಪ್ಪ, ಆದರೆ ಅವರಿಲ್ಲದೆ...."

"ಬೇಕಿಲ್ಲ. ಎಲ್ಲ ಸರಿಯಾಗಿದೆ."

"ಸರಿಯಾಗಿದೆ! ಕುಸುಮಳ ಸ್ಥಿತಿ.."

"ಶ್! ಎಲ್ಲ ಬಲ್ಲೆ. ಗಟ್ಟಿಯಾಗಿ ಮಾತಾಡಬೇಡ. ಯಾರಾದರೂ ಕೇಳಿಯಾರು" ಸಾಹುಕಾರರು ಸುತ್ತ ನೋಡುತ್ತ ಪಿಸುಗುಟ್ಟಿದರು.

"ಮತ್ತೇನು ದಾರಿ—ಇದಲ್ಲದೆ?" ಗುರುವೂ ಪಿಸಿಗುಟ್ಟಿದ.

"ಆಗಿದೆ."

"ದಾರಿ ಆಗಿದೆ! ಇನ್ನು ಯಾವ ದಾರಿ ಇದೆ? ಆಶ್ಚರ್ಯ! ವಿಚಿತ್ರ! ಏನಾಗಿದೆ?"

"ಏನಾಗಿದೆಯೇ, ಹೇಳಬೇಕೇ?"

"ಏನು........?"

"ಹುಂ, ಕೊಳೆಯ ಹೊರೆ ಹೋಯ್ತು. ಮರ್‍ಯಾದೆ ಉಳೀತು."

"ಅಪ್ಪ! ಇದೇನು!"

"ಏನು? ಅದಕ್ಕೆ ಯಾರು ಹೊಣೆ? ತಾನಾಗಿ...."

"ನಂಬಲಾರೆ. ಅಯ್ಯೋ, ಏನಾಯ್ತು! ನಿರೀಕ್ಷಿಸಲಿಲ್ಲ, ಮೂರ್ಖ! ಛೀ, ಹುಚ್ಚ! ಮತ್ತೆ ಸೋತೆ! ಕನಸು ಚೂರಾಯ್ತು ಕುಸುಮಾ! ನಿರ್ಭಾಗ್ಯೆ!"

ಗುರು ತಲ್ಲಣಿಸಿ ಕಂಬವನ್ನು ಒರಗಿಕೊಂಡ. ಸಾಹುಕಾರರು ಕೆದಕಲಿಲ್ಲ, ವಿರೋಧಿಸಲಿಲ್ಲ; ಸಮಾಧಾನ ಹೇಳಲೂ ಇಲ್ಲ.

ಕ್ಷಣಕಾಲ ಮೌನ.

"ಆದರೂ ಕುಸುಮ ನನ್ನವಳೆ." ಅಯ್ಯನವರು ದಿಟ್ಟತನದಿಂದ ಹೇಳಿದರು.

"ಏನೂ!" ಸಾಹುಕಾರರ ಮಾತಿನಲ್ಲಿ ಸಿಟ್ಟು, ತಿರಸ್ಕಾರ ತುಂಬಿ ಸೂಸುತ್ತಿದ್ದುವು. "ನಿಮಗೆ ಹೇಳೋದಕ್ಕಾದರೂ ನಾಚಿಕೆ ಬೇಡವೆ— ಇಂಥ ನೀಚರಾಗಿ."

"ಸಾಹುಕಾರರೆ, ನಿಜ. ನಿಮ್ಮ ತಿರಸ್ಕಾರಕ್ಕೆಲ್ಲ ನಾನು ಯೋಗ್ಯನೇ. ನೀಚನೂ ಆಗಿದ್ದೆ. ಆದರೆ ಈಗ ಅಲ್ಲ. ನನ್ನ ಪಾಪವನ್ನು ತೊಳೆಯೋದಕ್ಕೆ ಬಂದಿದೀನಿ. ಕುಸುಮಳನ್ನು...."

"ನಿಮಗೆ ಕೊಡೋದಕ್ಕೆ ಮೊದಲು, ಕೊಂದು ಹಾಕ್ತೀನಿ."

"ಅಪ್ಪ! ಬೇಡ. ಹೀಗಾಡಬೇಡ. ಕಡೆಯ ಮಾತು ಕುಸುಮಳದ್ದಲ್ಲವೆ?"

"ಹುಂ! ತಂದೆಗೇನೂ ಅಧಿಕಾರವಿಲ್ಲ, ಅಲ್ಲವೆ?"

"ಇಲ್ಲ—ಈ ವಿಷಯದಲ್ಲಿ." ಅಯ್ಯನವರು ಧೈರ್ಯದಿಂದ ಹೇಳಿದರು.

"ಸಾಕು!" ಸಾಹುಕಾರರು ತಗ್ಗುದನಿಯಲ್ಲೇ ಕೂಗಿದರು.

"ಅವಳನ್ನೇ ಕೇಳುತ್ತೀನಿ" ಗುರು ಹೇಳುತ್ತ ಒಳಗೆ ಧಾವಿಸಿದ.

ಕುಸುಮಳ ಮುಖ ಸೋತು ಸೊರಗಿ ಬಿಳಿಚಿಕೊಂಡಿತ್ತು. ಗುರು ಧಾವಿಸುತ್ತ ಕೋಣೆಯನ್ನು ಸೇರಿದಾಗ ಅವಳು ಬೆರಗಾಗಿ, ನಿಸ್ತೇಜವಾದ ಕಣ್ಣುಗಳನ್ನು ಅಗಲವಾಗಿ ಬಿಟ್ಟು ದಿಟ್ಟಿಸಿದಳು.

"ಅಣ್ಣ! ಅಣ್ಣ!" ಕುಗ್ಗಿದ ಸ್ವರದಲ್ಲಿ ಹೇಳಿದಳು.

"ಕುಸುಮಾ! ಇದೇನಮ್ಮ! ನಿನ್ನ ನೋಡಲಾರೆ." ಗುರು ಅವಳ ಮಂಚದ ಬಳಿ ಮಂಡಿಯೂರಿ ಕುಳಿತು ನೋಡಿದ. ಕಣ್ಣು ಮಂಜಾಯಿತು.

ಕುಸುಮ ಕೂಡಲೇ ಮಾತಾಡಲಿಲ್ಲ. ಏನನ್ನೋ ಒಳಗೆ ನುಂಗುವಂತೆ, ಹೊರನುಗ್ಗುತ್ತಿದ್ದುದನ್ನು ಅದುಮಿ ಇಡುವಂತೆ ಒದ್ದಾಡಿದಳು.

"ಕುಸುಮ ಇದೇನು ಅನ್ಯಾಯ? ಹೇಗಾಯ್ತು?" ಮತ್ತೆ ಕೇಳಿದ.

"ಏನಣ್ಣ, ಎಲ್ಲ ಸರಿಯಾಗಿ...." ನಡುಗುವ ಧ್ವನಿಯನ್ನು ತಡೆಯುತ್ತ ಹೇಳಿದಳು.

"ಏನು ? ಸರಿಯೆ? ನೀನು ಒಪ್ಪಿದೆಯ ?"

"ತಾನಾಗಿ........"

"ಕುಸುಮಾ, ನಿನ್ನ ಅಣ್ಣಂಗೇ ಹೀಗೆ...."

"ಇನ್ನೇನು, ಹೇಗೆ ಹೇಳಲಿ ? ನಾನು ಒಪ್ಪದೆಯೆ ಆಗುತ್ತೇ?" ಮುಖ ಮರೆಸಿಕೊಂಡಳು.

"ಒಪ್ಪಿದೆ ! ನೀನೂ ಒಪ್ಪಿದೆ ! ನಾನು ನಂಬಲೆ ? ಬಲಾತ್ಕಾರ!...."

"ಅಣ್ಣ ಸಿಟ್ಟಾಗಿ..."

"ಇದು ಖೂನಿ ! ನಿರಪರಾಧಿಯ ಖೂನಿ !"

"ಬೇಡ, ಬೇಡ ! ಹಾಗೆನ್ನಬೇಡ" ಕುಸುಮ ಬೆದರಿದಳು.

"ನಾನು ಹೋರಾಡುತ್ತೇನಿ....ಬಿಡೋ...."

ತಂಗಿ ಅಣ್ಣನ ಕೈಹಿಡಿದುಕೊಂಡು, ದೈನ್ಯದೃಷ್ಟಿಯಿಂದ, ತಾಯಿ, ತಡೆಯಲಾರದೆ ತುಂಟ ಮಗುವನ್ನು ನೋಡುವಂತೆ ನೋಡಿದಳು. ಗುರು ನುಗ್ಗುತ್ತಿದ್ದ ಮಾತನ್ನು, ಸಿಡಿಯುತ್ತಿದ್ದ ಸಿಟ್ಟನ್ನು, ತಟ್ಟನೆ ತಡೆದುಕೊಂಡು ಸುಮ್ಮನಾದ.

"ಅಣ್ಣ, ಏನು ಪ್ರಯೋಜನ, ಇನ್ನು ? ಎಲ್ಲ ಆಗಿಹೋಯ್ತು."

"ಶುದ್ಧ ಪಾಪ ! ಬಯಲಿಗೆ...."

"ನಿನ್ನ ತಂಗಿಯನ್ನು ಗಾಸಿಪಡಿಸ್ತೀಯ? ಅವಳಿಗೆ ಅವಮಾನ...."

"ಓ ! ಓ !" ಗುರು ತಲೆಯನ್ನು ಚಚ್ಚಿಕೊಂಡ.

"ಬೇಡ."

"ಆ ಮದುವೆಗೂ ಒಪ್ಪಿಸಿದಾರೇ ?"

"ನಾನೇ ಒಪ್ಪಿದೀನಿ."

"ಹುಂ !"

"ಅದಕ್ಕಿಂತ ಮರ್ಯಾದೆ ರೀತಿ ಯಾವುದು ?"

"ವ್ಯಂಗ್ಯ ಆಡುತ್ತಿದ್ದೀಯ ?"

"ಇಲ್ಲ. ಇನ್ನೇನು— ಈಗ, ಉತ್ತಮ ದಾರಿ ?"

" ನೀನೂ ಹೀಗೆ ಅನ್ನುತ್ತೀಯ ? "

" ಯಾಕೆ ? "

" ಅವರು ಬಂದಿದಾರೆ. "

" ಕಾಲ ಮೀರಿತು. ಉಪಯೋಗವಿಲ್ಲ. "

" ಅವರು ಬದಲಾಯಿಸಿದಾರೆ—ಎಂಥ ಬದಲಾವಣೆ ! "

" ಆದರೇನು ? ಎಲ್ಲ ಒಂದೇ ನಂಗೆ, ಈಗ. ಇದೆಲ್ಲ ನಡೆದಿರೋದು ಅವರನ್ನ ಮದುವೆಯಾಗೋದಕ್ಕೇ ? ಅದರ ಅಗತ್ಯವೂ ತಾನೆ ಏನಿದೆ? "

" ಪ್ರೇಮವಿಲ್ಲವೆ ? "

" ಇದ್ದರೆ ಹೋಗಿ ಯಾವುದೋ ಕಾಲವಾಯ್ತು. ಅಷ್ಟು ಕಷ್ಟದ ಕೆಳಗೆ ಪ್ರೇಮ ಬದುಕಿದ್ದೀತೆ? ಇಷ್ಟಕ್ಕೂ ಅವರನ್ನು ಪ್ರೇಮಿಸಿದ್ದೆನೆ ? ನೀನು ಹೇಳಿದಂತೆ ಅದೊಂದು ದೈಹಿಕ ಆಕರ್ಷಣೆ, ಅಥವ ನಾನೇ ಕಲ್ಪಿಸಿಕೊಂಡ, ಬೆಳೆಸಿಕೊಂಡ ಹುಚ್ಚು. "

" ಹಾಗಾದರೆ ಅವರು ಹೋಗಲೆ ? "

" ನನ್ನನ್ನು ಯಾಕೆ ಕೇಳುತ್ತೀಯ ? ಅದರಿಂದ ನಂಗೇನು ಅಪ್ಪ...."

" ಕುಸುಮ, ಎಷ್ಟು ಬದಲಾಯಿಸಿದೀಯೆ ? "

" ಹೇಗೆ ? "

" ನಾನು ಬಿಟ್ಟು ಹೋದ ಕುಸುಮ ನೀನೇ, ಅನ್ನಿಸುತ್ತೆ. "

" ಹುಂ, ನಾನು ಈಗಾಗಲೇ ಬಾಳನ್ನು ಬಹಳ ನೋಡಿದೆ, ನೊಂದೆ. ಹುಡುಗತನ ತಾನಾಗಿ ಹೋಯ್ತು. ಪ್ರಾಪಂಚಿಕವಾಗಿರೋದರಲ್ಲಿ ಏನು ಆಶ್ಚರ್ಯ? ನೋವೇ ಗುರು, ಬಾಳಿನ ಪಾಠಕ್ಕೆ. "

" ಛಿ ! ನಾನು ಮಾಡೋದು ಒಂದೂ ಸರಿಹೋಗೋದಿಲ್ಲ. ಅದೃಷ್ಟ ಹೀನ " ಗುರು ಬೇಸರದಿಂದ ಕೈಕೊಡಹಿದ.

" ಅಣ್ಣ, ನಿಂಗೇಕೆ ವ್ಯಸನ, ನೋವು ? ನಿನ್ನ ಕೆಲಸ ಮಾಡಿದೆ; ಫಲಕ್ಕೆ ನೀನು ಹೊಣೆಯೆ? ಫಲಿಸದಿದ್ದರೆ ಯತ್ನ ಕಡಿಮೆಯಾಯ್ತೆ ? ಬಾಳನ್ನು ನಾವು ಒಂದು ಕಡೆ ತಿರುವಿದರೆ ಅದೊಂದು ಕಡೆ ತಿರುವಿಕೊಂಡು ಸೊಟ್ಟಗಾಗುತ್ತೆ. "

" ಸೊಟ್ಟಗಾಗಿಸೋರ ಕೈಗೆ........"

"ನಿಂದಿಸಿ ಫಲವೇನು? ಸಿಟ್ಟಾಗಬೇಡ. ಹುಬ್ಬುಗಂಟನ್ನೂ ಹಾಕಬೇಡ. ನಂಗಾಗಿ ಸೈರಿಸಿಕೊ."

"ಕುಸುಮ, ಏನೇನನ್ನು ಸೈರಿಸಿಕೊಳ್ಳಬೇಕು? ಈಗ ನಿನ್ನ ಪಾಡು ಹೀಗಾಯ್ತು. ಇನ್ನು ಇದರ ಮೇಲೂ ಮೋಸದ ಮದುವೆ ಬೇರೆ...."

"ನಿಜ, ಆದರೆ ನಾನು ಗರತಿಯಾಗಲಾರೆನೆ?" ತಪ್ಪಿತಸ್ಥಳಂತೆ ಕೇಳಿದಳು.

"ನನ್ನ ಕುಸುಮ! ಹಾಗೆಂದೇನೆ? ಅದಲ್ಲ. ಆದರೆ ಇದು ಕಂಡು ಕಂಡೇ ಆಗಬೇಕು ಅಂತ."

"ಅದು ಈ ಸಮಾಜದಲ್ಲಿ ಸಾಧ್ಯವೆ? ನಮ್ಮ ತಲೆವಾರಿಗಂತೂ ಇಲ್ಲ. ಈ ಮನೆಯನ್ನು ಒಡೆಯದೆ ನಂಗೆ ಬೇರೆಯ ದಾರಿಯೂ ಇಲ್ಲ. ಆದರೆ ಅದು ನನ್ನಿಂದ ಆಗದು. ಅದಕ್ಕೇ ಬಾಕಿಯಂತೆ ಹೇಗಿದ್ದರೂ, ಈ ಭಾಗದಲ್ಲಿ ಮೋಸದ ಜೀವನವನ್ನೇ ನಡೆಸಬೇಕು—ನಾನೇ ಹೊತ್ತು ಕೊಂಡಿರೋ ಹೊರೆ."

"ಇನ್ನು ನಾನು ಹೇಳೋದು ಏನಿದೆ? ನಾನೂ ಕಣ್ಣುಮುಚ್ಚಿಕೊಳ್ಳು ತ್ತೀನಿ—ನಿಂಗಾಗಿ. ದೇವರು ನೋಡಿಕೊಳ್ಳಲಿ!"

ಗುರು ಖಿನ್ನಮನಸ್ಸಿನಿಂದ ತಗ್ಗಿದ ತಲೆಯಿಂದ ನಡೆದು ಬಂದ.

"ನನ್ನ ತಂಗಿ ಪುಣ್ಯವಂತೆಯಲ್ಲ."

ಅಯ್ಯನವರು ಕ್ಷಣಕಾಲ ಯೋಚಿಸಿದರು.

"ಹಾಗೇ.........ನಾನು ಪುಣ್ಯವಂತನಲ್ಲ—ಮುಖ್ಯವಾಗಿ. ಯಾವಾಗಲೂ ನಾನು ಅವಳಿಗೆ ಯೋಗ್ಯನಾಗಲಿಲ್ಲ. ಅವಳು ಸುಖವಾಗಿರೋದೇ—ಇಲ್ಲ, ಅದಷ್ಟು ಸಮಾಧಾನದಿಂದ ಇರೋದೇ ಬೇಕು. ಮಾಡಿದ ತಪ್ಪನ್ನು ತಿದ್ದಲಾಗದಿದ್ದುದು ಒಂದು ಕೊರತೆ, ಮತ್ತೆ ನನ್ನ ಬಾಳಿನ ಒಂದೇ ಒಂದು ಸರಿಯಾದ ಹೆಜ್ಜೆ ಸಫಲವಾಗದಿರೋದು, ಇನ್ನೊಂದು. ಹಿಂದೆ ಉದ್ಧಟನಾಗಿ ಬಿಟ್ಟಿದ್ದನ್ನು ಈಗ ಬೇಡಿ ಕಳೆದುಕೊಂಡಿರೋದು ನಂಗೆ ಸ್ವಲ್ಪ ಶಿಕ್ಷೆಯೆ. ಸಾಹುಕಾರರೆ, ಒಂದು ಬಾರಿ ತಮ್ಮ ಮಗಳನ್ನು ನೋಡಿ ಕ್ಷಮೆ ಬೇಡಿ...." ದೈನ್ಯದಿಂದ ಬೇಡಿದರು.

"ಅಗತ್ಯವಿಲ್ಲ. ಕೊಡದು" ಸಾಹುಕಾರರು ಬಂಡೆಯ ಮುಖದಿಂದ ಹೇಳಿ ಮುಗಿಸಿಬಿಟ್ಟರು.

ಮುರಿದು ಹೋದ ಮನುಷ್ಯ ಗಾಡಿಗೆ ಹಿಂತಿರಿಗಿದ. ತಾನೇ ಬೇಯುತ್ತಿದ್ದ ಗುರು ನೋಯುತ್ತಿದ್ದ ಈತನಿಗೆ—ತನ್ನ ದುಃಖಭಾಗಿಗೆ ಸಮಾಧಾನದ ನಾಲ್ಕು ಮಾತುಗಳನ್ನು ಹೇಳಿ ಕಳುಹಿಸುವುದಕ್ಕಾಗಿ ಹಿಂಬಾಲಿಸಿದ. ತನ್ನ ಮಾತುಗಳು ಅಪ್ರಯೋಜಕ, ವ್ಯಂಗ್ಯ, ಟೊಳ್ಳು ಎಂದು ಅವನಿಗೆ ಚೆನ್ನಾಗಿ ಗೊತ್ತು. ಆದರೆ ಹಂಬಲು ಬಿಡಲಿಲ್ಲ.

೧೦

* * *

ಇದಾದ ಮೇಲಂತೂ ಗುರುವಿನ ಗತಿ ಇನ್ನೂ ಕೆಟ್ಟಿತು. ಹಿಂದಿನ ಸೋಮಾರಿತನವೇ ಸಾಕಾಗಿದ್ದರೆ ಈಗ ಅದೂ ಹೋಗಿ ಕಾಹಿಲೆಗೆ ದಾರಿ ಕೊಟ್ಟಿತು. ಗುರುವಿಗೆ ಹಿಂದೆ ಬೇಕಾದಷ್ಟು ನಿದ್ರೆಯಾದರೂ ಬರುತ್ತಿದ್ದುದು ದಿನದಿನಕ್ಕೆ ಕಡಿಮೆಯಾಯಿತು. ಈಚೀಚೆಗೆ ಮಲಗಿ ಎಷ್ಟು ಹೊತ್ತಾದರೂ ನಿದ್ದೆ ಹತ್ತುವುದು ಕಷ್ಟವಾಗುತ್ತಿತ್ತು. ಹನ್ನೆರಡು, ಹನ್ನೆರಡೂವರೆ, ಒಂದು—ಗಂಟೆ, ಅರ್ಧ ಗಂಟೆಗಳನ್ನು ಕೇಳುತ್ತ ಹೊರಳಾಡುತ್ತಿದ್ದ, ನರಳಾಡುತ್ತಿದ್ದ. ತಂದೆಯವರ ರಾತ್ರಿಯ ಕೆಮ್ಮು, ನಂಜಪ್ಪನ ಗೊರಕೆ—ಹಿಂದೆ ಯಾವಾಗಲೂ ತೊಂದರೆ ಕೊಡದಿದ್ದುವು, ಈಗ ಅವನಿಗೆ ತೊಂದರೆ ಕೊಡುತ್ತಿದ್ದಂತೆ ಕಂಡಿತು. ಎಚ್ಚರವಾದಾಗಲೆಲ್ಲ ಹತ್ತಾರು, ನೂರಾರು ಯೋಚನೆಗಳು ಒಂದಾದಮೇಲೊಂದು, ಒಂದೊಂದರೊಳಗೊಂದು, ನುಗ್ಗಿ ಬರತ್ತಿದ್ದುವು. ಬುದ್ಧಿ ಗಾಳಿಯಲ್ಲಿ ಹಾರಾಡುತ್ತಿತ್ತು, ತೂರಾಡುತ್ತಿತ್ತು. ಅದನ್ನು ಹಿಡಿದು ನೆಲಕ್ಕೆ ಕಟ್ಟಲು ಅವನು ಮಹಾಪ್ರಯತ್ನ ಮಾಡುತ್ತಿದ್ದ. ಯಾವುಯಾವುದೋ ಒಂದರ ಮೇಲೆ ಗಮನ ನಿಲ್ಲಿಸಿ ಬುದ್ಧಿಯನ್ನು ಹಿಡಿದಿಡಲು, ಪೆಟ್ಟಿಗೆಗೆ ಹಾಕಲು, ಅದಕ್ಕೆ ಆರಾಮ ಕೊಡಲು, ಹವಣಿಸುತ್ತಿದ್ದ. ವ್ಯರ್ಥ. 'ಶಿವ ಶಿವ ಶಿವ' ಎಂದು ಒಂದೇ ಸಮನೆ ಶಿವಮಂತ್ರವನ್ನು ಜಪಿಸುತ್ತಿದ್ದ; ಒಂದು, ಎರಡು, ಮೂರು, ನಾಲ್ಕು ಎಂದು ಸಂಖ್ಯೆಗಳನ್ನು,

ಹೇಳಿಕೊಳ್ಳುತ್ತಿದ್ದ. ಪ್ರಯೋಜನವಿಲ್ಲ. ಬುದ್ಧಿ ಆ ರೀತಿ ಬಳಲಿ ಮಲಗು-ತ್ತಿರಲಿಲ್ಲ. ಎಡಮಗ್ಗಲು ಬಲಮಗ್ಗಲು, ಮುಖ ಮೇಲು, ಬೋರಲು ಕಾಲು ಕೈ ತಲೆಗಳ ಸ್ಥಳ ಬದಲಾವಣೆ, ಯಾವುದೂ ಕೆಲವು ನಿಮಿಷಗಳ ಮೇಲೆ ನಿಲ್ಲುತ್ತಿರಲಿಲ್ಲ-ಉಪಯೋಗವಾಗುತ್ತಲೂ ಇರಲಿಲ್ಲ. ನಿದ್ದೆ ಬಂದಂತೆ, ಮರೆವು ಹಾದಂತೆ ಒಂದೊಂದು ವೇಳೆ ಆಗುತ್ತಿತ್ತು. ಆದರೆ ಅದು ದೀಪದ ಹುಳು ಮಿಣಿಕಿದಂತೆ ಕ್ಷಣಕಾಲ. ಮತ್ತೆ ಅದೇ ನಿದ್ದೆಯಿಲ್ಲದ ಬವಣೆ. ಯಾವಾಗಲೋ ಹೇಗೋ ನಿದ್ದೆ ಹತ್ತಿದರೆ ಕೇವಲ ಸ್ವಲ್ಪ ಸಣ್ಣ ಗದ್ದಲದಿಂದ—ಹೆಜ್ಜೆಯ ಶಬ್ದ, ಕಾಗದದ ಮುದುರು, ಪಿಸಿ ಮಾತು, ಪಕ್ಕದ ಕೋಣೆಯ ಕುಸುಮಳ ಮಧ್ಯರಾತ್ರಿಯ ನರಳು, ನಿಟ್ಟುಸಿರು—ಇವೂ ಕೂಡ ನಿದ್ದೆಯನ್ನು ತೆಗೆದುಬಿಡುತ್ತಿದ್ದುವು. ಮತ್ತೆ ನಿದ್ದೆ ಬರಲು ಅದೇ ಹಿಂದಿನ ಹೋರಾಟ, ಬಹುವಾಗಿ ನಿಷ್ಫಲದ ಹೋರಾಟ. ಸದಾಶಿವನ ನಾಲ್ಕು ಗಂಟೆಯ ಸ್ನಾನ, ಬಟ್ಟೆಯೊಗೆತ, ಬಾಗಿಲ ಸೆಳೆತಗಳು, ಆ ದಿನದ ನಿದ್ದೆಯನ್ನೇ ಅಲ್ಲಿಗೆ ಕೊನೆ ಮಾಡುತ್ತಿದ್ದುವು. 'ಹಿಂದೆ ಮದುವೆ ಮನೆಗಳಲ್ಲಿ ಬರುತ್ತಿದ್ದ ನಿದ್ದೆ—ಸಂತೆ ನಿದ್ದೆ—ಏನಾಯ್ತು? ಯಾಕೆ ಹೀಗೆ? ಅಂಥ ಚಿಂತೆಯೇನು? ಲೋಕವೇ ಹೀಗಿದೆ. ನಾನೇನು ಮಾಡಬಲ್ಲೆ? ಮಾಡದಿದ್ದರೆ ತಾನೆ ಏನು? ಯಾವ ಯಾವ ದಿವ್ಯಶಕ್ತಿಗಳೆಲ್ಲ ಅವತರಿಸಿ, ಜಗತ್ತನ್ನು ಉದ್ಧರಿಸಲು ಬಾಳಿ ಬಳಲಿ ಅಳಿದರಲ್ಲ. ಅದಕ್ಕಾಗಿ ಜಗ ಎಷ್ಟು ಉತ್ತಮವಾಗಿದೆ? ದಿನೇ ದಿನೇ ಕೆಡುತ್ತಲೇ ಇದೆ. ಜಗದ ಜನರೆಲ್ಲ ಮಹಾತ್ಮರಾದ ಹೊರತು ಈ ಪ್ರಶ್ನೆ ಕಳೆಯುವುದಿಲ್ಲ, ಲೋಕ ಉದ್ಧಾರವಾಗುವುದಿಲ್ಲ. ಅಲ್ಲಿಯ ವರೆಗೂ ಯಾರು ಏನು ಮಾಡಿದರೂ ಈ ನಾಯಿಯ ಬಾಲ ಡೊಂಕೇ. ನಾನು ಬರಿ ಬಿಸಿಸುಯ್ದು ಮಾಡುವುದೇನಿದೆ? ನನ್ನ ಶಕ್ತಿ ಸಾಸುವೆಯಷ್ಟು, ಜಗತ್ತು ಜಗತ್ತೇ ಇದರಲ್ಲಿ ನಾನೇನು ಬದಲಾವಣೆ ಮಾಡಬಲ್ಲೆ? ನನ್ನ ಉತ್ಸಾಹವೂ ಅಷ್ಟಕಷ್ಟೆ—ಯಾಕೊ. ಕಷ್ಟ ಕಂಡರೇ ಹಿಂಜರಿಯುವ ಜೀವ ನನ್ನದು. ಕಂಡು ಕೊರಗುವುದೊಂದೆ ನನಗೆ ಸಾಧ್ಯ, ನನ್ನ ವೈಶಿಷ್ಟ್ಯ. ಛಿ! ನಂಗೆಂಥ ಹುಚ್ಚು. ಲೋಕವನ್ನು ನಾನು ತಿರಿಗಿಸಬಲ್ಲೆನೆ? ಅದೇ ನನ್ನನ್ನು ತಿರಿಗಿಸುತ್ತಿದೆ, ಹೊಸೆಯುತ್ತಿದೆ ತನ್ನ ಹಗ್ಗವಾಗಿ. ಅದಕ್ಕೆ ಸುಮ್ಮನೆ ಇದಿರಾಗಿ ಹೆಣಗುವುದರಿಂದ ಆಗುವುದೇನು? ಬರಿಯ ಹಿಂಸೆ. ಗೆಲುವು ಅದಕ್ಕೇ. ಥೂ, ನಾನು ಈ

ಜಾಡ್ಯವನ್ನು ಬಿಡಬೇಕು. ಜಗದ ಜತೆಗೆ ಹೆಜ್ಜೆಯಿಡಬೇಕು. ಇಲ್ಲದಿದ್ದರೆ ಈ ನಿಷ್ಪ್ರಯೋಜಕ ಯಾತನೆ ನನ್ನನ್ನು ವೃಥಾ ಕೊಂದೀತು, ಅಷ್ಟೆ.' ಎಂದು ನಿರಾಶಾವಾದವನ್ನು, ಲೌಕಿಕವನ್ನು, ತನಗೆ ತಾನೇ ಹೇಳಿಕೊಳ್ಳುತ್ತಿದ್ದ. ಆದರೆ ಆ ಆತ್ಮಹತ್ಯದ ಸಮಾಧಾನ ಬೇರೆ ಅವನಿಗೆ ಬರಲಿಲ್ಲ—ಬರುವಂತೆಯೂ ಕಾಣಲಿಲ್ಲ. ಬೆಳಿಗ್ಗೆ ಎದ್ದಾಗ—ಅಂದರೆ ಹಾಸಿಗೆಯನ್ನು ಬಿಟ್ಟಾಗ, ಅವನ ಕಣ್ಣುಗಳು ಉರಿಯುತ್ತಿದ್ದುವು. ಮೈ ಕೈ ನೋಯುತ್ತಿದ್ದುವು. ತಲೆ ಬಿಗಿತ, ನಿರಂತರವಾದಂತೆ ಅರಿವಾಗುವ ಸಣ್ಣ ನೋವು. ಕನ್ನಡಿಯಲ್ಲಿ ನೋಡಿಕೊಂಡರೆ ಕಣ್ಣಿನ ಸುತ್ತ ಕಪ್ಪು ಉಂಗುರ, ಹಳ್ಳಬಿದ್ದ ಕೆನ್ನೆ, ಕಾಂತಿಯಿಲ್ಲದ ಕಣ್ಣು, ಕೆದರಿದ ತಲೆ—ತನ್ನನ್ನು ಕಂಡು ತನಗೇ ಭಯವಾಗುತ್ತಿತ್ತು. 'ಹೀಗೆ ಎಷ್ಟು ದಿನ ಇದ್ದೇನು—ಹುಚ್ಚಿಲ್ಲದೆ?' ಎಂದು ಪ್ರಶ್ನಿಸಿಕೊಳ್ಳುತ್ತಿದ್ದ.

ಸಹಜವಾಗಿಯೇ ತಿಂದದ್ದು ಅರಗುತ್ತಿರಲಿಲ್ಲ. ಹಸಿವೂ ಆಗುತ್ತಿರಲಿಲ್ಲ. ಹಸಿದಾಗಲೂ ಎಷ್ಟೋ ವೇಳೆ ಊಟವೇ ಬೇಕಿಲ್ಲ—ಇಲ್ಲಿ. ಕುಳಿತಾಗಲೂ ಶಾಸ್ತ್ರ. 'ಈ ಮನೆಯ ಅನ್ನವೇ ನಂಗೆ ಹಿಡಿಸೋದಿಲ್ಲವೊ? ಆಶ್ಚರ್ಯವಿಲ್ಲ. ಇದರಿಂದ ಆರೋಗ್ಯ ಹೇಗೆ ಬಂದೀತು, ಬೆಳೆದೀತು? ಹುಚ್ಚು! ಬೇರೆ ಏನಾದರೂ ಏರ್ಪಾಡನ್ನು ಮಾಡಿಕೊಂಡು ನೋಡಲೆ?' ಗುರು ತನ್ನಲ್ಲೇ ಚರ್ಚಿಸಿಕೊಂಡ. ಇದನ್ನು ಪರೀಕ್ಷಿಸಬೇಕೆನ್ನಿಸಿತು. ಸುಮ್ಮನೆ ಸದಾಶಿವನೊಡನೆ ಮಾತೆತ್ತಿದ. ಸದಾಶಿವ "ಗುರು, ಇದೇನು ಭ್ರಾಂತಿ. ಮಹಲಿನ ಆಹಾರ ಇನ್ನೆಲ್ಲಿ ದೊರಕುತ್ತೆ—ಈ ಮರುಳೂರಿನಲ್ಲಿ? ಗೊತ್ತಿಲ್ಲವೆ, ನಮ್ಮ ಗದ್ದೆ ಬತ್ತ ದಪ್ಪ ಅಂತ ಎಲ್ಲಾನೂ ಸರಕಾರಿ ಡಿಪೋಗೆ ಹಾಕಿ, ಆ ಶಿವಪ್ಪನ ಗದ್ದೆ ಸಣ್ಣ ಬತ್ತ—ಅವನು ಡಿಪೋಗೆ ಹಾಕಿದ್ದನ್ನೇ, ತರಿಸಿದಾರೆ ಸಾಹುಕಾರರು. ನಾಲ್ಕು ಎಮ್ಮೆ ಕರೆದು ಹಾಲು ಕೋಡಿ ಹರಿಯುತ್ತೆ. ಆಗ ಕಾಸಿದ ಬೆಣ್ಣೆಯ ತುಪ್ಪ, ಮಹಲಿನ ತೋಟದಲ್ಲಿ ಬೆಳೆದ ಸ್ವಂತ ತರಕಾರಿ, ಎಲ್ಲರೂ ಬೆಲ್ಲಕ್ಕೇ ಅತ್ತರೆ, ಇಲ್ಲಿ ಸಕ್ಕರೆ ಸಮೃದ್ಧಿ—ಮೇಲಾಗಿ ನನ್ನ ಅಡಿಗೆ. ಹೊಗಳಿಕೊಳ್ತಾನೆ ಅನ್ನಬೇಡ—ಇವಕ್ಕಿಂತ ಬೇರೆಯ ಕಡೆ ಅಡಿಗೆ ಆರೋಗ್ಯವೆ, ಚೆನ್ನವೆ? ಚೆನ್ನಾಯ್ತು. ಹೋಟಲ ಒರಟಕ್ಕಿ ಅನ್ನ, ಬಿಸಿನೀರ ಸಾರು, ಬೆಲ್ಲದ ಕಾಫಿ, ಇದರಿಂದ ನೀನು ಮೂರು ದಿನ ಬಾಳಬಲ್ಲೆಯಾ, ಅಪ್ಪ? ಭೇದಿಗೀದಿ ಹತ್ತಿಕೊಂಡು ಹೆಣವಾದೀಯೆ. ಇದೇನು, ಈ ತರಹದ್ದೆಲ್ಲ

ವಿಚಿತ್ರ ಹುಚ್ಚು ? ಮಹಲಿಗಿಂತ ಸುಖವಾದ ಸ್ಥಳ ಉಂಟೆ ? ಇಲ್ಲಿ ಹುಟ್ಟಿ, ಬೆಳೆದು, ಈ ಸೌಖ್ಯ ಅಭ್ಯಾಸವಾಗಿದ್ದು, ಹೊರಗೆ ಒಗ್ಗೀತೆ ?....ಅಲ್ಲದೆ, ನೀನು ಹೀಗೆಲ್ಲ ಹೊರಗಾಗಿ ನಡೆದುಕೊಂಡರೆ ಜನ ಏನನ್ನುತ್ತಾರೆ ? ತಂದೆ ಒಪ್ಪುತ್ತಾರೇ? ನೀನು ಅಂದರೆ, ಜೀವ ಒಪ್ಪಿಸ್ತಾರೆ. ನಾವು ಯಾರಾದರೂ ಒಪ್ಪೇವೆ? ಇದು ಲೌಕಿಕವೆ ? ಆಗದ ಮಾತು. ನಿಂಗೇನು ಬೇಕು ಹೇಳು, ಹೇಗೆ ಬೇಕು ಹೇಳು, ಹಾಗೆ ಮಾಡಿಕೊಡ್ತೀನಿ " ಎಂದು ಮುಂಕಾಗಿ ಸದಾಶಿವ ತನ್ನ ಸ್ವಭಾವದಂತೆ ಉದ್ದವಾಗಿ ಹೇಳಿದ. ಕಡೆಯಲ್ಲಿ ಗುರು " ಸದಾಶಿವ, ಆರೋಗ್ಯಕ್ಕೆ, ತಿನ್ನೋ ಪದಾರ್ಥದ ರೀತಿ ಮುಖ್ಯವಲ್ಲ; ಅದರೊಡನೆ ಬಂದ ಭಾವನೆ. ಅದರ ಗುಣ ಮುಖ್ಯವಲ್ಲ; ಅದನ್ನು ತಿನ್ನೋ ವಾತಾವರಣ—ಮಲಗೋದಕ್ಕೆ, ಹಾಸಿಗೆಯ ರೀತಿಗಿಂತ, ದೇಹದ ರೀತಿ, ಮನಸ್ಸಿನ ರೀತಿ, ಇದ್ದ ಹಾಗೆ. ಹುಂ! ಏನಾದರೂ, ನೀನು ಅನ್ನೋ ಹಾಗೆ, ಕಂಡಂತೆ ಹೊರಗಿರೋದು ಲೌಕಿಕವಲ್ಲ. ಮರ್ಯಾದೆಯಲ್ಲ—ಅಲ್ಲವೆ ? ನೋಡೋಣ " ಎಂದುಬಿಟ್ಟು ಸುಮ್ಮನಾದ. ಸದಾಶಿವ " ನೀನೇನು ಮಾತಾಡಿದರೂ ಹೀಗೇ. ಅರ್ಥವಿಲ್ಲ. ಆಗೋದೇ ಇಲ್ಲವೋ, ನಂಗೆ. ಏನಾದರೂ ಆ ಯೋಚನೇನೇ ಬಿಟ್ಟುಬಿಡು '' ಎಂದ.

ವಿಷಯ ಇಲ್ಲಿಗೇ ಮುಗಿಯಲಿಲ್ಲ; ಗುರುವಿನ ಮನಸ್ಸಿನಲ್ಲಿ ಬೇರೂರಿ ಬಿಟ್ಟಿತ್ತು. ಬಲವಂತಪಡಿಸುತ್ತಿತ್ತು. ಆದುದರಿಂದ ತಂದೆಯ ದುಡ್ಡಾದರೆ ಎಲ್ಲಿದ್ದರೂ ಅದೇ ಅನ್ನವೆಂದುಕೊಂಡು ಊರಿನ ' ವಿದ್ಯಾಶ್ರಮ ' ಗುರುಕುಲದಲ್ಲಿ ಮಕ್ಕಳ ಸೇವೆಗೆ ಸೇರಿದ. ಅಲ್ಲೇ ಅವನ ಊಟ ಉಪಚಾರವೆಲ್ಲ ನಡೆಯುತ್ತಿತ್ತು. ಲೌಕಿಕವನ್ನು ಮುರಿಯದೆ, ಆದಷ್ಟನ್ನು ಹೀಗೆ ಹೊರ ಹೊರಗೇ ಮಾಡಿಕೊಳ್ಳುತ್ತಿದ್ದ. ಇದರಿಂದ ಅವನಿಗೆ ತನ್ನ ಸ್ಥಿತಿ ಅಲ್ಪ ಸ್ವಲ್ಪ ಉತ್ತಮಗೊಳ್ಳುತ್ತಿದ್ದಂತೆ ಭಾವನೆ ಬಂದಿತು. ಸದಾಶಿವನಿಗೆ ಇದು ಸರಿಹೋಗಲಿಲ್ಲ. ಗುರುವಿನ ತೋರ್ಪಡೆಯಿಂದ ಸಮಾಧಾನವಾಗಲಿಲ್ಲ. ಸಾಹುಕಾರರವರೆಗೂ ವಿಷಯ ಹೋಯಿತು. ಅವರು " ಅಪ್ಪ, ನೀನು ಮನೇಲಿ ಊಟ ತಿಂಡಿ ಮಾಡೋದೆ ಕಡಿಮೆಯಾಗಿದೆಯಂತೆ. ಹೊರಗೆ ತಿಂದರೆ ಒಳ್ಳೇದಲ್ಲ" ಎಂದು ತಿಳಿಸಿದರು. " ಹಾಗೇ ಆಗಲಿ. ಏನೋ ಸ್ನೇಹಿತರು, ಮಕ್ಕಳು ಬಲವಂತ ಮಾಡಿದರೆ ' ಇಲ್ಲ ' ಅನ್ನೋದಕ್ಕಾಗೋ

ದಿಲ್ಲ - ಅಷ್ಟೆ" ಎಂದು ತೇಲಿಸಿ ತನ್ನ ದಾರಿಯಂತೆಯೇ ನಡೆದುಕೊಳ್ಳುತ್ತಿದ್ದ. ಸಾಹುಕಾರರು "ಹುಂ, ಏನು ಹುಡುಗ ಅಂತ ಹೇಳೋಣ. ನನ್ನ ಗ್ರಹಚಾರ. ರಾಜನಂಥ ಸಿವಿಲ್ ಸರ್ವಿಸಿಗೆ ಸೇರು ಅಂತ ಅಂಗಲಾಚಿದರೆ ಕೇಳದೆ ಇದಾನೆ. ಈ ಗತಿಗೆಟ್ಟ ಕೂಲಿಮಠದಲ್ಲಿ ಕೆಲಸಮಾಡುತ್ತಿದಾನೆ. ನಮ್ಮ ಮರ್ಯಾದೇನ ಧೂಳಿಗೆಳೆಯೋದರಲ್ಲಿ ಅವನಿಗೆ ಏನು ಇಷ್ಟವೋ. ಈ ಕೆಲಸ ಇಲ್ಲ ಅಂತ ಅನ್ನಿಸೋದು ಹೆಚ್ಚಲ್ಲ. ಆದರೆ ಅದು ಮತ್ತಷ್ಟು ವಿರೋಧಕ್ಕೆ ಕಾರಣ; ಈಗಲೇ ಬೇಕಾದಷ್ಟಿದೆ, ಸಾಕು. ಅವನಿಗೆ ಎಂದಿಗೆ ಒಳ್ಳೇಕಾಲ ಬಂದು, ಬುದ್ಧಿ ಬರುತ್ತೊ, ದೇವರಿಗೆ ಎಂದು ಕರುಣ ಬರುತ್ತೋ, ನನ್ನ ಮೇಲೆ, ಅವನ ಮೇಲೆ ಕಣ್ಣುಬಿಟ್ಟು ನೋಡುತ್ತಾನೋ. ಮುಖ್ಯವಾಗಿ ಯಾರಿಗೂ ಸಂಪೂರ್ಣ ಸುಖವಿರಬಾರದು ಅನ್ನೋದು ದೈವನಿಯಮ ಅಂತ ಕಾಣುತ್ತೆ. ಗುರುಗಳು ಹೇಳಿದ ಹಾಗೆ, ಸುಖ ಕೊಟ್ಟ ಕಡೆ ಬೆಲೆ ತೆಗೆದುಕೊಳ್ಳದೆ ಇರೋದೇ ಇಲ್ಲ ಕಠಿಣ! ಬಹಳ ಕಠಿಣ!" ಎಂದು ನಂಜಪ್ಪನೊಡನೆ ಹೇಳಿಕೊಂಡರು. ಅವನು "ನೀನು ನನ್ನ ಮಾತನ್ನೇ ಕೇಳೋದಿಲ್ಲ ಭಾವ. ಅದೆಲ್ಲ ಪ್ರಾಯದ ಹುಚ್ಚು. ಅದಕ್ಕೆ ಹೆಣ್ಣಿನ ಸಂಗವೇ ಮದ್ದು. ಯುವಕ ಹಾರಾಡದೆ ಇರಬೇಕಾದರೆ ಹೆಣ್ಣಿನ ದಾರದಿಂದ ಕಟ್ಟಿಹಾಕಬೇಕು. ನೀನು ಬಲವಂತ ಮಾಡದೆ, ಅವನು ಹಿಡಿತದಿಂದಲೇ ಜಾರಿಕೊಳ್ಳೋದಕ್ಕೆ ಬಿಟ್ಟುಬಿಡುತ್ತಿದೀಯೆ." ಎಂದು ಆಕ್ಷೇಪಿಸಿ ತನ್ನ ಸಿದ್ಧೌಷಧಿಯನ್ನು ಒತ್ತಿದ. ಆದಕ್ಕೆ ಸಾಹುಕಾರರು "ಏನು ಮಾಡಲೋ ನಂಜಪ್ಪ, ನಮನಮಗೆ ಷಷ್ಟಾಷ್ಟಕವಾದಹಾಗಿದೆ. ನಾನು ಹೇಳಿದ್ದು ಅಂತ ಅವನಿಗೆ ಒಂದೂ ಆಗದು. ಎಷ್ಟು ಸಂಬಂಧ—ಎಂಥೆಂಥ ಸಂಬಂಧ ಸೂಚಿಸಿದೆ, ಒತ್ತಿದೆ. ಆ ಡೆಪ್ಯುಟಿ ಕಮಿಷನರ ಮೊಮ್ಮಗಳೋ, ಜಹಗೀರುದಾರರ ಒಬ್ಬಳೇ ಮಗಳೋ ಒಂದೊಂದೆ? ಈ ಸಂಬಂಧ ಯಾವುದೊಂದರಿಂದಲೂ ಏನೇನನ್ನು ನಡೆಸಬಹುದಾಗಿತ್ತು. ಎಲ್ಲವನ್ನೂ ಒಲ್ಲೆ ಅಂದುಬಿಟ್ಟ—ನಿರ್ಧರವಾಗಿ. 'ನೋಡೋಣ' ಅಂತ ಕೂಡ ಅನುಮಾನಿಸಲಿಲ್ಲ. ನಾನು ಬಲವಂತ ಮಾಡಿದಾಗ ಅವನು ಸಿಟ್ಟಾದರೆ ನಾಲ್ಕು ಮಾತಾದರೂ ಆಗುತ್ತೋ ಏನೋ. ಆದರೆ ಆ ನಗು ಇದೆಯಲ್ಲ ನೋಡು, ಅವಂದು—ಅದರ ಮುಂದೆ ನಂಗೆ ಮಾತೇ ಹೊರಡೋದಿಲ್ಲ. ಆಡಿದರೂ ಮತ್ತಷ್ಟು

ನಗುವೇ, ಉತ್ತರ. ಏನು ಮಾಡೋದು ಹೇಳು ? ನಿಸ್ಸಹಾಯನಾಗಿ ಬಿಟ್ಟಿದೀನಿ. ಇನ್ನೂ ನಮ್ಮ ಕುಸುಮಳಾದರೆ ಹೇಳು—ಯಾವುದಕ್ಕಾದರೂ ಅವಳನ್ನು ಒಪ್ಪಿಸಬಹುದು. ನೋಡು ಎಂಥಗಕ್ಕೇ ಒಪ್ಪಿಸಿದೆ, ಹೇಗೆ. ಆದರೆ ಇವನು ವಿಚಿತ್ರ. ಪ್ರೋತ್ಸಾಹ, ಬೇಡಿಕೆ, ಬಲವಂತ ಯಾವುದಕ್ಕೂ ಸಿಕ್ಕೋದೇ ಇಲ್ಲ. ನಿಂಗೇ ಗೊತ್ತಿದೆಯಲ್ಲ. ನಿನ್ನ ಯತ್ನವೆಲ್ಲ ನೀರಿಗೆ ಹಾಕಿದ ಹಾಗೆ ಆಗಲಿಲ್ಲವೆ ? ಅಷ್ಟರ ಮೇಲೆ ಅಷ್ಟೊಂದು ಸಲಿಗೆ ಬೇರೆ. ಇನ್ನು ನಾನು ಹೇಗೆ ದಾರಿಗೆ ತರಬಲ್ಲೆ ? ಹೀಗೇ ಮಾಡು ಅಂತ ಆಜ್ಞೆ ಮಾಡೋದಕ್ಕೆ ಭಯವೇ ಆಗುತ್ತೆ. ' ಇಲ್ಲ ' ಅಂತ ಖಂಡಿತವಾಗೇ ಹೇಳಿಬಿಟ್ಟರೂ ಹೇಳಿಬಿಟ್ಟಾನು. ಆಗ ತಂದೆಯ ಸ್ಥಿತಿ, ಅಧಿಕಾರ, ಸಂಬಂಧ, ಎಲ್ಲ ಏನಾಗುತ್ತೆ ಹೇಳು? ಅದಕ್ಕೇ ಹೆದರುತ್ತೀನಿ. ಬಿಡಿಸಲಾರದ ತೊಡಕಾಗಿಬಿಟ್ಟಿದಾನೆ. ದೇವರೇ ಸಹಾಯಮಾಡಬೇಕು ನಂಗೆ " ಎಂದು ದೂರಿ, ಗೊಣಗಿ, ಗೋಳಾಡಿದರು. ನಂಜಪ್ಪನಿಗೆ ಬುದ್ಧಿ ಮಿಂಚಿತು. ಅವನು "ಭಾವ, ನಾಳೆ ಹೇಗಾದರೂ ಕುಸುಮಳ ಮದುವೆಯಂತೂ ಆಗೇ ಆಗುತ್ತೆ—ಬೇಕಾದಷ್ಟು ಸಂಭ್ರಮದಿಂದ. ನಿಂಗೆ ಯಾವ ಯಾವ ಹೆಣ್ಣಿನ ಮೇಲೆ ಕಣ್ಣಿದೆಯೋ ಅವರ ಮನೆಯೋರಿಗೆಲ್ಲ ಬಲವಂತದಿಂದ ಪತ್ರ ಬರೆದು ಆ ಸಂದರ್ಭಕ್ಕೆ ಕರೆಸಿಕೊ. ಅವರ ಬೆಡಗಿಯರುಗಳೆಲ್ಲ ಸ್ವಲ್ಪ ಈ ಋಷ್ಯಶೃಂಗನ ಸುತ್ತ ಕುಣಿಯಲಿ ಆಗಲಾದರೂ ಮದುವೆಯ ಅಯೋಧ್ಯೆಗೆ ಬಂದಾನು. ಮೀನು ಅಷ್ಟು ಗಾಳಗಳಲ್ಲಿ ಒಂದನ್ನಾದರೂ ಕಚ್ಚೀತು " ಎಂದು ಸಲಹೆ ಕೊಟ್ಟ. ಸಾಹುಕಾರರಿಗೇನು ಹೆಚ್ಚು ಉತ್ಸಾಹ ಹುಟ್ಟಲಿಲ್ಲ. ಇದು ಅವರ ಮನಸ್ಸಿನಲ್ಲಿಯೂ ಸುಳಿದಿದ್ದಿತು. " ಆಗಲಿ ಅದನ್ನೂ ಮಾಡೋಣ. ಚೆನ್ನಾಗೇ ನಾಟಕ ನಡೀಲಿ. ಅವನೊಬ್ಬ ನಮ್ಮ ಜಗತ್ತಿಗೆ ಇಳಿದರೆ ನಂಗೆ ಹಾಯಾಗಿ ನಿದ್ದೆ ಬರುತ್ತೆ. ಈ ಕೆಮ್ಮು ಕಾಹಿಲೆ ಎಲ್ಲ ಅರ್ಧ ಮುಕ್ಕಾಲು ವಾಸಿಯಾಗುತ್ತೆ. ಅಯ್ಯೋ, ಅವನು ಸರಿಯಾಗಿಲ್ಲದಿದ್ದರೆ ನನ್ನದು ಎಂಥ ಜಗತ್ತು, ಬಿಡು, ಹಾಳು ! " ಎಂದು ನಿಟ್ಟುಸಿರುಬಿಟ್ಟರು.

ಕುಸುಮಳ ಮದುವೆ ಅತಿ ವೈಭವದಿಂದ ಜರುಗಿತು. ಇದರ ವಿಜೃಂಭಣೆಯನ್ನು ಮರುಳೂರು ಇಂದಿಗೂ ಜ್ಞಾಪಿಸಿಕೊಂಡು ಚಪ್ಪರಿಸುತ್ತಲೇ ಇದೆ. ಆ ಮಹಾಸಂಭ್ರಮದ ಏರ್ಪಾಡೆಂದರೆ ಒಂದೊಂದೇ ? ಮಹಲಿನ ಸುತ್ತ

ತೋಟವೆಲ್ಲ ಹೋಗಿ ಚಪ್ಪರ ಆವರಿಸಿಕೊಂಡಿತ್ತು. ಹಸಿರು, ಹೂ, ತೋರಣ ಗಳು ಚಪ್ಪರ, ಮಹಲನ್ನೆಲ್ಲ ಸುತ್ತಿದ್ದುವು. ಮದುವೆ ನಡೆದಷ್ಟು ದಿನವೂ ಮಹಲು ಮೈಸೂರಿನ ಅರಮನೆಯ ಹಾಗೆ ದೀಪದಿಂದ ಅಲಂಕೃತವಾಗಿತ್ತು. ಲೆಕ್ಕವಿಲ್ಲದಷ್ಟು ಆಳು ಕಾಳುಗಳು, ಎಲ್ಲೆಲ್ಲೂ ಓಡಾಡುತ್ತಿದ್ದರು. ನಂಟರು, ಇಷ್ಟರು, ಸ್ನೇಹಿತರು, ಕಂಡವರ ಕಂಡವರು, ತಮ್ಮ ಅನೇಕಾನೇಕ ಬಂಧು ಮಿತ್ರ ಪುತ್ರಿ ಪುತ್ರ ಕಳತ್ರ ಸಕಲ ಪರಿವಾರ ಸಮೇತರಾಗಿ ವಾರ ಎರಡು ವಾರ ಮುಂಚಿತವಾಗಿಯೇ ದಯಮಾಡಿಸಿ ಮಂಟಪ ಶೋಭಾಯಮಾನ ಮಾಡಿ ಗಿಜಿಗಿಜಿ ಎನ್ನುತ್ತಿದ್ದರು. ಮಕ್ಕಳು ಬಣ್ಣದ ಚಿಟ್ಟೆಗಳಂತೆ ಹಾರಾಡುತ್ತಿದ್ದುವು. ಎಲ್ಲೆಲ್ಲೂ ರೇಷ್ಮೆ ಜರಾತಾರಿಗಳ ಜರಜರ, ಸರಸರ, ವಜ್ರ ಕೆಂಪುಗಳ ಥಳ ಥಳ, ಚಿನ್ನ ಬೆಳ್ಳಿಗಳ ಕಣಕಣ, ತಿಳಿಹಾಸ್ಯ, ಕಟುಹಾಸ್ಯ, ಹೊಸ ಹಳೆ ಹಾಸ್ಯ ಗಳ ತಿಳಿಮೋಡ ಕಾರ್ಮೋಡ, ಗಹಗಹದ, ಕಿಸಿಕಿಸಿಯ, ಕಿಲಕಿಲಗಳ, ಬಗೆ ಬಗೆಯ ನಗೆಯ ಗುಡುಗು; ವಾರೆನೋಟ, ಕೋರೆನೋಟ, ನೇರ ನೋಟಗಳ, ವಿಧವಿಧದ ಮಿಂಚು; ಸಂತತವಾಗಿ ಮಾತಿನ ಮಳೆ; ವಿವಾಹದ ವರ್ಷಕಾಲ ಕೋಲಾಹಲದಲ್ಲಿ.

ಸಾಹುಕಾರರಿಗೆ ಊರಿಗೆ ಊರೇ ಸಹಾಯವಾಗಿ–ಮಾಡುವುದಕ್ಕೂ, ಮುಗಿಸುವುದಕ್ಕೂ–ನಿಂತಿತ್ತು. ನಂಜಪ್ಪನೂ ಓಡಾಟಕ್ಕೆ ಮೊದಲು ಮಾಡಿದ್ದ. ಅತಿಥಿಗಳಿಗೆ ಏರ್ಪಾಡುಗಳು ಸಾಹುಕಾರರ ಕಣ್ಣಿನ ಕೆಳಗೇ, ಮೂಗಿನ ಕೆಳಗೇ, ನಡೆದು, ಚಾಚೂ ಬಿಡದೆ ಸಮರ್ಪಕವಾಗಿದ್ದುವು. ನೋಟವೇ, ಊಟವೇ ಉಡುಗೊರೆಯೇ, ಸಂಗೀತವೇ, ವಾದ್ಯವೇ ಮೆರೆವಣಿಗೆಯೇ, ಒಂದೊಂದರ ವಿಚಕ್ಷಣೆಯೇ, ಹೇಳುವುದಕ್ಕೆ—ಈ ಮಹೋತ್ಸವದಲ್ಲಿ!

ಇದ್ದ ಸಣ್ಣಕ್ಕಿ ಸಕ್ಕರೆಗಳ ಜತೆಗೆ ಸುತ್ತುಮುತ್ತಿನ ಹಸನು ಪದಾರ್ಥಗಳು ಹೆಗ್ಗಡೆ ಹೇರಿನಲ್ಲಿ ಬಂದು ಬಿದ್ದಿದ್ದುವು. ಸದಾಶಿವನ ಹಿಮ್ಮೇಳದಲ್ಲಿ ಬೆಂಗ-ಳೂರಿನ ಪ್ರಸಿದ್ಧ ಪರಿಚಾರಕರು ಮುಮ್ಮೇಳ ನಡೆಸಿದರು. ಟಿನ್ನುಗಟ್ಟಲೆ ತುಪ್ಪ ಒಲೆಯನ್ನು ಉರಿಸುವುದಕ್ಕೇ ಹೋಯಿತು. ರೇಷನ್ ವಿಚಾರ, ಅತಿಥಿ ಕಾನೂನಿನ ವಿಚಾರ, ಮೊಟ್ಟಮೊದಲಿಗೆ ಸಾಹುಕಾರರಿಗೂ ಸ್ವಲ್ಪ ತಲೆನೋ ವನ್ನೇ ಕೊಟ್ಟಿತು ವಿಶೇಷ 'ಕೋಟ'ದಿಂದ ಯಾವ ಮೂಲೆಯೂ ತುಂಬು ವಂತಿರಲಿಲ್ಲ, ಗಂಟಲೂ ತಣಿಯುವಂತಿರಲಿಲ್ಲ,—ಹೊಟ್ಟೆಯಿರಲಿ – ಹೀಗಿದ್ದು

ಅಧಿಕಾರಿಗಳಲ್ಲಿ ವಿಷಯ ಚರ್ಚೆಯಾಯಿತು. ಅದರಲ್ಲಿ ಬುದ್ಧಿವಂತರಾದ ಅನುಭವಸ್ಥರು "ಇಲ್ಲಿ ನೋಡಿ, ಸಾಹುಕಾರರೆ, ಕರೆಯೋಲೆಯಲ್ಲಿ 'ನಿಮ್ಮ ರೇಷನ್ ನೀವು ತರೋದು' ಅಂತ ನೆಪಮಾತ್ರಕ್ಕೆ ಛಾಪಿಸಿಬಿಡಿ. ಕಾನೂನನ್ನು ಕಳೆದಹಾಗಾಯ್ತು. ಮೇಲಿನವರು ಕೇಳಿದರೆ ಹಾಗೇ ಬರೆಯುತ್ತೀವಿ. ನಾವಂತು ಸುಮ್ಮನಿದ್ದುಬಿಡುತ್ತೀವಿ. ನೀವು ಏನಾದರೂ ಮಾಡಿಕೊಳ್ಳಿ" ಎಂದರು. ಸಾಹುಕಾರರು "ಬಹಳ ಧನ್ಯವಾದಗಳು. ದೊಡ್ಡ ಗಂಡಾಂತರವೇ ಕಳೆಯಿತು. ತಮ್ಮಂಥ ದಕ್ಷರು, ಬುದ್ಧಿಶಾಲಿಗಳು ಇಲ್ಲದಿದ್ದರೆ, ಈ ಹೆಜ್ಜೆ ಹೆಜ್ಜೆಗೂ ಕಾಲಿಗೆ ಸುತ್ತುಕೊಳ್ಳೋ ಕಾನೂನು ಕಟ್ಟಳೆಗಳಿಂದ ನಮ್ಮ ಪಾಡು ನಾಯಿಪಾಡಾಗುತ್ತಿತ್ತು" ಎಂದು ಮೆಚ್ಚಿ ಹೇಳಿ, ವಂದಿಸಿದರು. ಅಲ್ಲಿಂದ ಆಹಾರದ ಕೆಲಸ ಸುಲಭವಾಗಿತ್ತು. 'ಅವರವರೇ ಆಹಾರ ತಂದ ಮೇಲೆ' ಮ್ಯಾಜಿಸ್ಟ್ರೇಟರು ಹೆಚ್ಚು ಸಂಖ್ಯೆಯ ಅತಿಥಿಗಳಿಗಾಗಿ ವಿಶೇಷ ಅಪ್ಪಣೆ ಕೊಡುವುದು ಕಷ್ಟವಾಗಲಿಲ್ಲ. ದಿನದಿನಕ್ಕೆ, ಹೊತ್ತು ಹೊತ್ತಿಗೆ, ಆಗುತ್ತಿದ್ದ ತಿಂಡಿ, ಊಟ, ಭಕ್ಷ್ಯಭೋಜ್ಯಗಳ ವೈವಿಧ್ಯವನ್ನು ನಂಜಪ್ಪನೂ ಕೂಡ ಮೆಚ್ಚಿ ತಲೆದೂಗಿದ. ಊರಿನ ಹೊರಗಿನ ಅಧಿಕಾರ, ವ್ಯಾಪಾರ, ನೌಕರಿಗಳ ಗಣ್ಯರೂ, ಅವರ ಪರಿವಾರದವರೂ ತಿಂದ ಮೇಲೆ, ಚೆಲ್ಲಿದ ಎಂಜಲೇ ಊರಿನ ಭಿಕಾರಿಗಳಿಗೆಲ್ಲ ಎರಡು ವಾರದ ಆಹಾರವಾಯಿತು. ಇದೇನು ರೇಷನ್ ಕಾಲವೇ ನಿಜವಾಗಿ? ಎಂದು ಜನರಿಗೆ ಭ್ರಾಂತಿಯುಂಟಾಯಿತು. ಉಡುಗೊರೆಗಳಿಗೇನು ಕೊರತೆಯಿರಲಿಲ್ಲ. ತಿಂಗಳುಗಳಿಂದ ಸಾಹುಕಾರರ ಅಂಗಡಿಗೆ ಸರಕಾರ ಕೊಟ್ಟ 'ಸೂಪರ್ ಫೈನ್' ಬಟ್ಟೆಯೆಲ್ಲ ಶೇಖರವಾಗಿದ್ದು ಬಹಳ ಅನುಕೂಲವಾಯಿತು. ಊರಿನವರು ಅಂಗಡಿಯ ಒರಟು ಬಟ್ಟೆಗಳನ್ನು ತಿರಿತಿರಿವಿ ಹಾಕಿ ನೋಡಿ, ಸರಕಾರವನ್ನು ಬೈದುಕೊಂಡು ಹೋದರು, ಅಷ್ಟೆ. ಇತರ ಜವಳಿ, ರೇಷ್ಮೆ ಜರತಾರಿಗಳ ಸೀರೆ ಖಣ, ಬೆಳ್ಳಿಯ ಪಾತ್ರೆ—ಎಲ್ಲ ಬೆಂಗಳೂರಿನಿಂದಲೇ ಬಂದಿದ್ದುವು. ಬಂದ ನಂಟರಲ್ಲಿ, ಪಂಚೆಯೋ ಶಲ್ಯವೋ ಸಿಕ್ಕದ ಗಂಡು, ಸೀರೆಯೋ ಖಣವೋ ಸಿಕ್ಕದ ಹೆಣ್ಣು—ಮಕ್ಕಳೂ ಕೂಡಿ—ಇದ್ದರೆ ಅವರು ತೀರ ಹೆಡ್ಡಾಗಿರಬೇಕು.

ತಂಜಾವೂರಿನಿಂದ ಚಿನ್ನದ ಜೋಡಿ ವಾಲಗದವರು ಬಂದು ಏಳು ದಿನಗಳೂ ಹಗಲಿರುಳು ಬಾರಿಸಿದರು. ಊರಿಗೆ ಊರೇ ಸುತ್ತುಗಟ್ಟಿ ಕೇಳಿತು.

ಸಂಗೀತರತ್ನ. ಕೋಕಿಲವಾಣಿ, ಕುಂಭಕೋಣಂ ಮಹಾಲಕ್ಷ್ಮಿಯ ಸಂಗೀತ ಮೂರು ದಿನ ಏರ್ಪಾಡಾಗಿತ್ತು. ಇಂಥ ಘನ ಸಂಗೀತವನ್ನು ಸಭಾಮಂಟಪ ದಲ್ಲಿ ಐದು ನಿಮಿಷವೇ ಕುಳಿತು ಕೇಳುವುದು ಸಾಧ್ಯವಾದವರೂ ಅದನ್ನು ತಿಂಗಳುಗಟ್ಟಲೆ ತಮ್ಮತಮ್ಮಲ್ಲೇ ಚರ್ಚಿಸಿದರು. ಈಗಲೂ ಸಂಗೀತದ ಮಾತು ಬಂದರೆ "ಆಹಾ! ಕೇಳಬೇಕು ಅಂದರೆ ಮಹಾಲಕ್ಷ್ಮಿ ಸಂಗೀತ! ಆಗಿ ಹೋಯ್ತು" ಎಂದು ಸೀನಪ್ಪ ಹೇಳುತ್ತಲೇ ಇರುತ್ತಾನೆ. ಇದಿಲ್ಲದ ನಾಲ್ಕು ದಿನ, ಊರಿನಲ್ಲಿ ಹೆಸರಾದ ನೀಲಾಸಾನಿಯ ಮಗಳು ಕಮಲಾಸಾನಿಯು 'ತಾಫೆ' ಕಟ್ಟಿದಳು. ಊರಿಗೆ ಊರೇ ಕಿಕ್ಕಿರಿದು ತುಂಬಿದ್ದು ಬಾಯಿಬಿಟ್ಟು ಕೊಂಡು ನೋಡಿತು. ಮೆರವಣಿಗೆಯೆಂದರೆ ಅಂತಹದನ್ನು ಕಾಣುವವರೆಗೂ, ಊರು ಊಹಿಸಿಯೂ ಕೂಡ ಇರಲಿಲ್ಲ. ಗುರುಗಳು, ಮಠದಿಂದ ಶಿಷ್ಯ ಶ್ರೇಷ್ಠರಿಗೆ ಮರ್ಯಾದೆ ಕಳುಹಿಸಿದ್ದ ಆನೆ ಒಂಟೆಗಳು ಭಾಗವಹಿಸಿದ್ದುವು. ಮೋಟಾರಿನ ಮೇಲೆ ಹೂ ಮಂಟಪವೇ ರಚಿಸಲ್ಪಟ್ಟಿತ್ತು. ಎರಡು ಕಡೆಯೂ ಬ್ಯಾಟರಿಗಾಡಿಯಿಂದ ಹತ್ತಿಸಿದ ವಿದ್ಯುದ್ದೀಪ ಸಾಲು; ಮುಂದೆ ಅಲಂಕೃತ ವಾಗಿದ್ದ ಲಾರಿಯಲ್ಲಿ ತಂಜಾವೂರು ಜೋಡಿ ವಾಲಗ, ಬ್ಯಾಂಡು, ಪಂಚವಾದ್ಯ ಗಳ, ತಾಳ ಮೇಳ. ನಿಂತು ನಿಂತು ಹಾರಿಸುವ ಬಾಣ ಬಿರುಸು. ಮುಂದೆ ಜರತಾರಿಯ ಗಂಡುಗಡಲು, ಹಿಂದೆ ಜರತಾರಿಯ ಸ್ತ್ರೀಸಾಗರ. ವಾಲಗದ ಸುತ್ತವೇ ಅರ್ಧ ಊರು. ದಾರಿಯ ಅಕ್ಕಪಕ್ಕಗಳಲ್ಲಿ ಕಿಕ್ಕಿರಿದು ನಿಂತು ಇನ್ನರ್ಧ. ಈ ವೈಭವದ ಕೇಂದ್ರವಾಗಿ, ರತ್ನರಂಜಿತರಾಗಿ ವಧೂವರರು. ಕೇವಲ ಮೋಟಾರು ಡ್ರೈವರೇ ಬೇರೆಯ ಕಡೆ ವರನಾಗಿ ಕಾಣಬಹು ದಾಗಿತ್ತು.

ಒಂದಲ್ಲ, ಮೂರು ದಿನಗಳು, 'ಪ್ರಜಾತಂತ್ರ'ದಲ್ಲಿ ಈ 'ಮಹಾ ವಿವಾಹೋತ್ಸವ'ದ ವರದಿ ಎರಡು ಮೂರು ಕಾಲಂಗಳಷ್ಟು ಬಂದಿತು. ನಡೆದ ವಿಶೇಷವೆಲ್ಲ, ಬಂದ ಗಣ್ಯರ ಹೆಸರೆಲ್ಲ, ಕಂಡ ವೈಭವವೆಲ್ಲ ನಮೂದಿಸಲ್ಪಟ್ಟಿ ದ್ದುವು. 'ಮೂವರು ಮಂತ್ರಿಗಳ ಆಗಮನ' ಅನ್ನುವ ಶಿರೋನಾಮೆಯಲ್ಲೂ ಇದ್ದು ಬೇಕಾದಷ್ಟು. ವಧೂವರರ ದೊಡ್ಡ ಚಿತ್ರ ನಂತರ ಇಷ್ಟರ ಗುಂಪು ಚಿತ್ರ, ಎಲ್ಲವೂ ಕಾಣಿಸಿಕೊಂಡವು. ಚಂದ್ರಶೇಖರ ಚೆನ್ನಾಗಿ ಕೆಲಸ ಮಾಡಿದ್ದ.

ಮೂರು ಮಂತ್ರಿಗಳೂ ಕೂಡ ಮಾನ್ಯ ಅತಿಥಿಗಳಾಗಿ ಬಂದು, ಅಲ್ಲಿ ನೆರೆದಿದ್ದ ಮರ್ಯಾದಸ್ತರ ಗುಂಪಿಗೇ ಮೂರು ನಾಮಗಳಂತೆ ಶೋಭಿಸಿ, ಹಾರ ತುರಾಯಿ ವೀಳ್ಯ ತಾಂಬೂಲ ಊಟ ಉಪಚಾರಗಳನ್ನು ಸ್ವೀಕರಿಸಿ, ವಧೂವರರನ್ನು ಮನಃಪೂರ್ವಕವಾಗಿ ಆಶೀವಾರ್ವದಿಸಿ, ಸಮಾರಂಭದ ಕಳೆಯನ್ನೇರಿಸಿದರು. ಅಂದ ಮೇಲೆ ಸ್ಥಳೀಯ ಅಧಿಕಾರಿಗಳ ಮಾತೇಕೆ ? ಟೆಲಿಗ್ರಾಂ, ಕಾಗದಗಳಲ್ಲಿ, ಸಂದೇಶಗಳು ಸಾವಿರದಲ್ಲಿ ಬಂದುವು. ಅಂಚೆಕಚೇರಿಗೂ, ಆಸ್ಪತ್ರೆಗೂ, ಮುನಸಿಪಲ್ ಕಸಗುಡಿಸುವವರಿಗೂ ಪುರುಸೊತ್ತೇ ಇರಲಿಲ್ಲ— ಒಂದು ವಾರ. ಊರಿಗೆ ಊರೇ ಈ ಕಾಲದಲ್ಲಿ ನಲಿಯಿತು. ಮೈಸೂರಿನ ನವರಾತ್ರಿ ಉತ್ಸವಕ್ಕೆ ಹೋಗಿದ್ದ ಜನರು, ಮರುಳೂರಿನ ನೋಟವನ್ನು ಮೈಸೂರಿನದಕ್ಕೇ ಹೋಲಿಸಿದರು.

ಈ ಪ್ರದರ್ಶನದ ಸೂತ್ರಧಾರರೆಂದರೆ ಅದರ ಜೀವಾಳವೆಂದರೆ ಸಾಹುಕಾರರು. ಎಲ್ಲರೂ ಅವರ ಬಳಿಗೆ ಬರುವವರೇ, ಅವರೊಡನೆ ಮಾತಾನಾಡುವರೇ. ಅವರಂತೂ ಹಿಗ್ಗಿದ ಬಾಯನ್ನು ಮುಚ್ಚದೆ ಎಲ್ಲ ಅತಿಥಿಗಳೊಡನೆಯೂ ನಸುನಗುತ್ತ ಅವರಿವರ ಬೆನ್ನು ತಟ್ಟುತ್ತ, ಬೇಕಾದಲ್ಲಿ ಹಿಂದೆ ಮುಂದೆ ಸುತ್ತುತ್ತ, ಬಹಳ ಸೌಜನ್ಯ, ಸೌಹಾರ್ದ, ಸರಳತೆಗಳಿಂದ ನಡೆದುಕೊಂಡರು. ಅವರ ಪ್ರೇಮಾದರಗಳಲ್ಲಿ ಸ್ಪರ್ಧಿಗಳೆಂದರೆ ಮಂತ್ರಿಗಳು, ಮುಖ್ಯ ಬೀಗರು. ಇವರನ್ನು ಎಲ್ಲಿರಿಸಿದರೂ ಸಾಲದು; ಅವರನ್ನು ಎಷ್ಟು ಸುತ್ತಿದರೂ ಶ್ರಮವಿಲ್ಲ. ಅವರ ಉಪಚಾರಗಳನ್ನು ತಾವೇ ಸ್ವಂತವಾಗಿ ನೋಡಿಕೊಂಡರು. ವರನನ್ನು ಪಿ. ಡಬ್ಲ್ಯು. ಡಿ. ಮಂತ್ರಿಗಳಿಗೆ ಪರಿಚಯ ಮಾಡಿಕೊಡುತ್ತ "ಇವರು ಎಂಜಿನಿಯರ್ ಆಗಬೇಕೆಂದಿದಾರೆ. ತಮ್ಮ ಶಾಖೆಗೇ, ತಮ್ಮ ಹತ್ತಿರಕ್ಕೇ ಬರಬೇಕಾಗುತ್ತೆ. ನೆನಪಿರಬೇಕು. ಅನಂತರ ಸಕಾಲದಲ್ಲಿ ತಮ್ಮಲ್ಲಿ ದೀರ್ಘವಾಗಿ ಮಾತಾಡುತ್ತೀನಿ." ಎಂದು ಪೀಠಿಕೆ ಹಾಕಿದರು. ಮಂತ್ರಿವರ್ಯರು "ಅಗತ್ಯವಾಗಿ ಸಾಹುಕಾರರೆ. ತಮ್ಮ ಸೇವೆಗೆ ಯಾವಾಗಲೂ ಸಿದ್ಧವಾಗಿಯೇ ಇದೀನಲ್ಲ. ಅಪ್ಪಣೆಯಾಗಲಿ" ಎಂದು ಹೇಳಿ ನಕ್ಕು "ನಾಲೆಯ ಕೆಲಸ ಸರಿಯಾಗಿ ನಡೆಯುತ್ತಿದೆಯೆ ? ಹೊಸದಾಗಿ, ನಮ್ಮ ಆಫೀಸರುಗಳಲ್ಲಿ ಅತಿ ಸಮರ್ಥರಾದೋರನ್ನೇ ನೇಮಿಸಿದೀನಿ. ಹಾಗೂ ಏನಾದರೂ ಇದ್ದರೆ ಹೇಳಿ" ಎಂದರು. ಸಾಹುಕಾರರು "ಹೌದು, ದೊಡ್ಡ

ಉಪಕಾರ. ಇನ್ನು ಆರು ತಿಂಗಳಲ್ಲಿ, ಆಣೆಕಟ್ಟು ಕಾಲುವೆ ಎಲ್ಲ ಮುಗಿದು, ನೀರು ಹಾಯಿಸಬಹುದು ಅಂತ ಕಾಣುತ್ತೆ. ತಮ್ಮ ಎಂಜಿನೀಯರು ನನ್ನಲ್ಲಿಗೆ ಆಗಾಗ ಬರ್‍ತಾಲೇ ಇರ್‍ತಾರೆ. ಕೆಲಸದ ವಿಷಯ ಹೇಳ್ತಾಲೇ ಇರ್‍ತಾರೆ. ಬಹಳ ಒಳ್ಳೆಯೋರು. ಹಿಂದಿನೋರ ಹಾಗಲ್ಲ. ಆತ ತಾನು ಜನರ ಸೇವಕ ಅಂತ ತಿಳಿದುಕೊಂಡೇ ಇರಲಿಲ್ಲ. ಡೆಮೊಕ್ರಸಿ ಕಾಲಕ್ಕೆ ಸರಿಹೋಗಿಸಿಕೊಳ್ಳೋನಲ್ಲ. ಆದಕ್ಕೇ ತಮ್ಮಲ್ಲಿಗೆ ಬಂದು ಹೇಳಬೇಕಾಯ್ತು. ವರ್ಗ ಮಾಡಿ ಈ ಜನಕ್ಕೇ ತುಂಬ ಉಪಕಾರ ಮಾಡಿದಿರಿ" ಎಂದು ಬಹುವಾಗಿ ವಂದಿಸಿದರು. ಮಂತ್ರಿಗಳು "ಈ ಟೆಕ್ನಿಕಲ್ ಮೆನ್ ಅಂದರೇ ಹಾಗೆ, ಸ್ವಲ್ಪ ತಲೆಹರಟೆ. ಹೇಳಿದಂತೆ ಕೇಳೋದು ಕಷ್ಟ. ನಮಗೇನೂ ಗೊತ್ತಿಲ್ಲ ಅಂತ ಅವರ ಭಾವನೆ. ನಾವು ಅವರ ದಣಿ ಅನ್ನೋದನ್ನ ಮರೆತುಬಿಡುತ್ತಾರೆ. ನಾವು ಮಂತ್ರಿಯಾದ ಮೇಲೆ ಬೇಕಾದಷ್ಟು ಜನಕ್ಕೆ ಬುದ್ಧಿ ಕಲಿಸಬೇಕಾಯ್ತು. ಹ್ಞ!" ಎಂದು ನಕ್ಕರು. ಸಾಹುಕಾರರು "ನಾವೇನೋ ಸ್ವತಂತ್ರ ಗೆದ್ದೆವು. ಪ್ರಜಾತಂತ್ರದ ಆಡಳಿತವನ್ನೂ ಸ್ಥಾಪಿಸಿದೆವು. ಆದರೆ ಇನ್ನೂ ಅನೇಕರಿಗೆ ಪ್ರಜಾತಂತ್ರ ಅಂದರೇನು, ಹೇಗೆ ನಡೆದುಕೋಬೇಕು, ಅನ್ನೋದೇ ಗೊತ್ತಿಲ್ಲ ಅದೇ ನಮ್ಮ ಕಷ್ಟ" ಎಂದು ತಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳಿದರು. ಮಂತ್ರಿಗಳು "ಇನ್ನಷ್ಟು ಕಾಲ ನಮ್ಮ ಅಧಿಕಾರ ನಡೀಲಿ. ಆಗ ನೋಡುತ್ತೀರಿ" ಎಂದು ಪೂರ್ತಿ ಮಾಡಿದರು.

ಸಣ್ಣಮ್ಮ ಸಾಹುಕಾರರಿಗೇನು ಸೋತಿರಲಿಲ್ಲ. ಅವಳ ಆರೋಗ್ಯವೇ ಯಾವಾಗಲೂ ಅಷ್ಟಕ್ಕಷ್ಟೆ. ಕುಳಿತರೆ ಎದ್ದರೆ ಉಸ್ಸೆನ್ನುವ ಸ್ಥಿತಿ. ಡಾಕ್ಟರು 'ಶಕ್ತಿ ಏನೇನೂ ಉಳಿದಿಲ್ಲ; ಶ್ರಮ ಕೂಡಲೇ ಕೂಡದು; ಹೆಚ್ಚಿನ ಸಿತ್ರಾಣಕ್ಕೆ ದಾರಿ ಕೊಟ್ಟರೆ ಪ್ರಾಣಕ್ಕೇ ಅಪಾಯ ಬಂದೀತು' ಎಂದು ಎಚ್ಚರಿಕೆ ಕೊಟ್ಟಿದ್ದರು. ಈಚೆಗೆ ಅವಳ ಸ್ಥಿತಿ ಇನ್ನೂ ಕೆಳಗಿಳಿಯುತ್ತಿತ್ತು. ಆದರೂ ಹನ್ನೆರಡನೆಯ ಬಾರಿಗೆ ಮತ್ತೆ ಗರ್ಭಿಣಿಯಾಗಿದ್ದಳು. ಇದೇ ಸಾಕಾಗಿತ್ತು. ಕುಸುಮ ಹುಟ್ಟಿದ ಬಾರಿ ಬಿಟ್ಟು ಇನ್ನೆಲ್ಲ ಸಲವೂ ಗರ್ಭಪಾತವಾಗಿ ಗಂಡಾಂತರವೇ ಆಗಿತ್ತು. ಇವರ ಮೇಲೆ, ಕಳೆದ ಸಲ ಡಾಕ್ಟರ ಎಚ್ಚರಿಕೆ ಅವಳಿಗೆ ಬಹಳ ಆತಂಕವನ್ನುಂಟುಮಾಡುತ್ತಿದ್ದು, ಆರೋಗ್ಯವನ್ನು ಈ ರೀತಿಯಿಂದಲೂ ಬಗೆಯುತ್ತಿತ್ತು. ಇಷ್ಟಾದರೂ ತನ್ನ ಸ್ಪರ್ಧೆಯನ್ನು ನಿರ್ಲಕ್ಷ್ಯದಿಂದ ನಡೆಸಿ

ದ್ದಳು. ಮಗಳ—ಒಬ್ಬಳೇ ಮಗಳ ಮದುವೆಯೆಂದರೆ ಸಾಮಾನ್ಯದ ಸಂದರ್ಭವೆ? ಹೆಣ್ಣಿನ ಪಕ್ಷದಲ್ಲಿ ಸಾಹುಕಾರರ ಜವಾಬಾಗಿ ಬಹಳ ತೃಪ್ತಿಕರವಾಗಿ ನಡೆದುಕೊಂಡಳು. ಆ ಓಡಾಟ, ನಿರಂತರವಾದ ಮಾತುಕತೆ, ಶಾಸ್ತ್ರಿಗಳಿಗೆ ಸಲಕರಣೆ ಸಂವರಣೆ, ಅತಿಥಿಗಳ ಉಪಚಾರ ಪ್ರತಿಯೊಬ್ಬರ ವಿಚಾರ, ಬೀಗರ ಸುತ್ತು ಸೇವೆ, ಮೇಲಾಗಿ ಸೀರೆ ಒಡವೆಗಳ ಮಾತು—ಇವಕ್ಕೆಲ್ಲ ತನಗೆ ಅಷ್ಟೊಂದು ಶಕ್ತಿ ಎಲ್ಲಿಂದ ಬಂದಿತೋ ಎಂದು ಅವಳಿಗೇ ಆಶ್ಚರ್ಯ. ಕೆಲವು ರಾತ್ರಿಗಳು ಒಟ್ಟಿಗೇ ಕಣ್ಣನ್ನೇ ಮುಚ್ಚದಿದ್ದರೂ ಇನ್ನೂ ಮುರಿದು ಬಿದ್ದಿರಲಿಲ್ಲ. ನಿಜ, ಎದೆನೋವು, ಸೊಂಟನೋವು, ಕಣ್ಣುರಿ, ತಲೆನೋವು ಯಾವಾಗಲೂ ಬಾಧಿಸುತ್ತಿದ್ದಂತೆಯೇ ಇದ್ದುವು. ಆದರೇನು, ಆರೇಳು ದಿನಗಳ ವಿಷಯ ತಾನೆ. ಆಮೇಲೆ ಇದ್ದೇ ಇತ್ತು ವಿಶ್ರಾಂತಿ. ಸಣ್ಣಮ್ಮ ಲೆಕ್ಕವಿಲ್ಲದೆ ದುಡಿದು ನಡೆದುಕೊಂಡು ಹೆಸರು ಗಳಿಸಿದಳು.

ನಂಜಪ್ಪ ಭಾವನ ಜರತಾರಿಯಲ್ಲಿ ಬೇಕಾದುದನ್ನು ಹಾಕಿಕೊಂಡು, ಭಾವನ ಪ್ರತೀಕದಂತೆ ದರ್ಪದಿಂದ ನಡೆಯುತ್ತ, ತಿಳಿಯದವರಿಗೆ ಸಾಹುಕಾರರು ಇವನೇ ಎನ್ನುವ ಭ್ರಮೆಯನ್ನುಂಟುಮಾಡುತ್ತಿದ್ದ. ಅದನ್ನು ಸರಿಪಡಿಸಲು ಯತ್ನಿಸುತ್ತಲೂ ಇರಲಿಲ್ಲ. ಆದರೆ ಭಾವನ ಹಿಂದೆ ದಕ್ಷಿಣೆಯ ಚೀಲ ಹಿಡಿದಾಗ, ಮೊದಲನೆಯ ಪಂಗ್ತಿಯಲ್ಲಿ ದೊಡ್ಡ ಎಲೆಯ ಮುಂದೆ ಕುಳಿತು ಬಾರಿಸುತ್ತಿದ್ದಾಗ, ಅಡಿಗೆಯ ಮನೆಯ ಸುತ್ತುಮುತ್ತ ಸುಳಿಯುತ್ತಿದ್ದಾಗ, ನೆರೆದ ಮಕ್ಕಳೊಡನೆ ಕುಚೋದ್ಯ ಮಾಡಿ ಮಾಡಿಸಿಕೊಳ್ಳುತ್ತಿದ್ದಾಗ, ಆರತಿ ಅಕ್ಷತೆಯ ಕಾಲದಲ್ಲಿ ಹೆಣ್ಣುನಾಡಿನಲ್ಲೇ ನೋಟ ನೆಟ್ಟಿದ್ದಾಗ, ಇವನ ಬಣ್ಣ ಕಾಣಿಸುತ್ತಿತ್ತು. ಆದರೂ ತನ್ನ ಬಣ್ಣದಿಂದಲೇ ಶೋಭಿಸುತ್ತ, ಹೆಣ್ಣು ಗಂಡುಗಳಿಗೆಲ್ಲ ಸಲಿಗೆಯ ಮಾವನಾಗಿ, ನಾಚುವ ಹುಡುಗಿಯರಿಗೆಲ್ಲ 'ಗಂಡ' ಪೀಡೆಯಾಗಿ, ಅಡಿಗೆಯವರಿಗೆ ಶನಿಗ್ರಹವಾಗಿ, ಸೇವಕರಿಗೆಲ್ಲ ಸಿಂಹವಾಗಿ, ಒಟ್ಟಿನಲ್ಲಿ ಅತಿಥಿಗಳಿಗೆಲ್ಲ ವಿದೂಷಕನಾಗಿ ನಡೆದುಕೊಂಡು, ಎಲ್ಲೆಲ್ಲೂ ಜಗಳ ವಿನೋದಗಳ ಕೋಲಾಹಲವನ್ನೆಬ್ಬಿಸುತ್ತ ಮೆರೆದ. ನಾಲ್ಕು ಜನ ನಗುತ್ತಿದ್ದ ಕಡೆ, ಇಬ್ಬರು ಜಗಳವಾಡಿದ ಕಡೆ, ಹತ್ತು ಹುಡುಗರು ಕೂಗಾಡಿದ ಕಡೆ, ನಂಜಪ್ಪನೂ ಒಬ್ಬನೆಂದು ಸಿದ್ಧಾಂತ ಮಾಡಬಹುದಾಗಿತ್ತು.

ಸದಾಶಿವ ನೋಟು ಪಂಚೆ ಉಟ್ಟು, ಒತ್ತು ಕೂದಲಿನ ಎದೆ ಭಾಚಿ,

ಹೊಸ ಮೇಸ್ತ್ರಿಯಂತೆ ಗುಡುಗಾಡುತ್ತಿದ್ದ—ಆದಷ್ಟು ಚಿತ್ರವನ್ನು ಆಕ್ರಮಿಸು ತ್ತಿದ್ದ. ಊಟದ ಹೊತ್ತಿನಲ್ಲಿ ಅವನೇ ಸೂತ್ರಧಾರ. 'ಚಿರೋಟಿ ತನ್ನಿ', 'ಜಿಲೇಬಿ ಇನ್ನೊಂದು ಸಾರಿ ಕೇಳಿ', 'ಲಾಡೂ ಇನ್ನೂ ಒಂದೊಂದು ಬಡಿಸಿ' 'ಖೀರಿಗೆ ದೊನ್ನೆ ತನ್ನಿ' 'ಇಲ್ಲಿ, ಕೇಸರಿಭಾತು' ಮೊದಲಾಗಿ ಮುಖ್ಯ ಅಡಿಗೆಗಳ ಬಗ್ಗೆ ಮಂಟಪದಲ್ಲಿ ಎಲ್ಲಿಂದ ಕೂಗಿದರೂ ಅಡಿಗೆಯ ಮನೆಗೆ ಕೇಳಿಸುತ್ತಿತ್ತು. ವಧೂವರರ ವಿಚಾರಣೆಯನ್ನು ಅವನ ವಿಶೇಷ ಹೊಣೆಯನ್ನಾಗಿಸಿಕೊಂಡು, ಚಿತ್ರದ ಮಧ್ಯದಲ್ಲೇ ಸೇರಿಕೊಳ್ಳಲು ಯತ್ನ ನಡೆಸಿದ. ಇಷ್ಟಾದರೂ ಉಗ್ರಾಣದ ಮೇಲೆ ಸರ್ಪಕಾವಲು ಇಟ್ಟುಕೊಂಡು, ಬೀಗದ ಕೈಯನ್ನು ಸೊಂಟಕ್ಕೇ ಕಟ್ಟಿಕೊಂಡು, ಗಳಿಗೆ ಗಳಿಗೆಗೂ ಮಂಟಪಕ್ಕೂ ಉಗ್ರಾಣಕ್ಕೂ ಅಡಿಗೆಯ ಮನೆಗೂ ಅಲೆದು, ತನ್ನ ತ್ರಿಕೋಣ ಚಟುವಟಿಕೆ ಯನ್ನು ನಡೆಸುತ್ತಿದ್ದ. ಒಟ್ಟಿನಲ್ಲಿ ಮದುವೆಯ ಅರ್ಧ ಪಾಲು ಹೊಣೆ, ಕಾರ್ಯ ಭಾರ– ಅದೂ ಭಾರವಾದ ಭಾರ—ಅವನ ಪಾಲಾಗಿತ್ತು.

ದಾಸ ಒಬ್ಬನೇ ಎಲ್ಲಿ ಕಂಡರೂ ಕಾಣಿಸದಿದ್ದವನು, ಎಲ್ಲೆಲ್ಲೋ ಮೂಲೆಯಲ್ಲಿ ನಿಂತು ಸಾಹುಕಾರರ, ಸಣ್ಣಮ್ಮನ, ನಂಜಪ್ಪ, ಗುರು, ಸದಾ ಶಿವ—ಇನ್ನೂ ಯಾರು ಯಾರದೋ ಕೈಬೀಸಿಗೆ, ಕುತ್ತಿಗೆಯ ಬಾಗಿಗೆ, 'ದಾಸ!' 'ಲೋ!' 'ಏ!' ಕರೆಗಳಿಗೆ ಕಾಯುತ್ತ, ಯಾವಾಗಲೋ ಏನನ್ನೋ ಉಂಡು, ಯಾವಾಗಲೋ ನಾಲ್ಕು ಗಳಿಗೆ ಕಣ್ಣು ಮುಚ್ಚಿ, ಹಗ ಲಿರುಳೆನ್ನದೆ ದುಡಿಯುತ್ತ 'ಹತ್ತರ ಕೂಡೆ ಹನ್ನೊಂದಾಗಿ' ತನ್ನ ಹಿಂದಿನ ಸಾಲಿನಲ್ಲೇ ತೃಪ್ತನಾಗಿದ್ದ.

ಕುಸುಮ ವೇಷಭೂಷಣಗಳಿಲ್ಲದಿದ್ದರೆ ಕಾಣುತ್ತಿದ್ದಳೋ ಇಲ್ಲವೋ ಅನ್ನುವಷ್ಟು ಸೊರಗಿಹೋಗಿದ್ದಳು. ಆದರೆ ಈ ಬಡತನದಲ್ಲಿಯೂ ಚಲು ವಿನ ಸಿರಿ ಮರೆಯಾಗಿರಲಿಲ್ಲ. ಆದರೆ ಅದನ್ನು ಹೆಚ್ಚಿಸುವ ನಗೆಯಾಗಲೀ ಹಾವಭಾವಗಳಾಗಲೀ ಅವಳಿಗೆ ಮರೆತುಹೋಗಿದ್ದುವು. ಆ ಗದ್ದಲದ ಮಧ್ಯೆ, ಸಮಾಧಿಸ್ಥಿತಿಯ ಸನ್ಯಾಸಿಯಂತೆ, ಅರ್ಥವಿಲ್ಲದ ಚಿತ್ರದಂತೆ, ಅತ್ತಿತ್ತ ನೋಡದೆ, ಅಲುಗದೆ, ದೂರದ ಗುರಿಯಿಲ್ಲದ ದೃಷ್ಟಿಯಿಂದ ಕುಳಿತಿರುತಿದ್ದಳು. ಮೈ ಕೈ ಆಡಿಸಬೇಕಾದಾಗ ಶಾಸ್ತ್ರಿಗಳ ಸೂತ್ರದ ಗೊಂಬೆಯಾಗಿದ್ದಳು. ನಂಜ ಪ್ಪನ ಬಿಸಿ ವಿನೋದ, ಕುಚೋದ್ಯ, ಅವಳ ಹತ್ತಿರ ಸುಳಿದೇ ತಣ್ಣಗಾಗು

ತ್ತಿತ್ತು. ತಂದೆ ತಾಯಿಗಳು, ಮಾವ ಅತ್ತೆಯರು, ಸ್ನೇಹಿತರು, ಅವರು ಇವರು, ಅವಳಿಗೆ ಏನನ್ನು ತೊಡಿಸಿದರೂ, ಉಡಿಸಿದರೂ, ಹೊದಿಸಿದರೂ, ಮಾತಾಡಿಸಿದರೂ, ಎಲ್ಲ ಒಂದೇ ಅವಳಿಗೆ. ನಿರ್ಬಂಧವಾದಾಗ ಒಂದೆರಡು ಮಾಮೂಲು ಉತ್ತರ. ವರನಿಗೆ ಕೊಂಚ ನಿರಾಶೆಯೇ ಆಯಿತು. ಅಂತೂ ಮುಂದನ್ನು ನೆನೆಸಿಕೊಂಡು ಅದನ್ನು ಮುಚ್ಚಿಕೊಂಡ, ನುಂಗಿಕೊಂಡ. ತಂದೆ-ತಾಯಿಗಳು "ಇಷ್ಟರ ಮಟ್ಟಿಗಿದ್ದಾಳಲ್ಲ, ಸದ್ಯ" ಎಂದು ಸಂತೋಷಪಟ್ಟರು. ಇತರರು "ಹುಡುಗಿ, ಎಷ್ಟು ಗಂಭೀರ ಏನು ಕತೆ! ಒಂದು ಚೆಲ್ಲುಮಾತೆ, ನೋಟವೆ, ಹಾವಭಾವನೆ—ಗೌರಮ್ಮನ ಹಾಗೆ ಇದಾಳೆ. ಇನ್ನೊಬ್ಬಳಾಗಿದ್ದರೆ ಹುಟ್ಟಿದ ಕಡೆ, ಸೇರಿದ ಕಡೆಗಳನ್ನು ನೆನೆಸಿಕೊಂಡು, ಎಷ್ಟು ಹಾರಾಡಬೇಕೋ ಏನೋ. ಭೂಮಿ ತೂಕದ ಹುಡುಗಿ. ಗಂಡ ಪುಣ್ಯ ಮಾಡಿದ್ದ." ಎಂದು ತಮ್ಮತಮ್ಮಲ್ಲೇ ಕೊಂಡಾಡಿದರು. ಹಾಗೂ 'ಇನ್ನು ಕೊಂಚ ಲವಲವಿಕೆ ಇದ್ದರೆ ಖಂಡಿತವಾಗಿಯೂ ತಪ್ಪಾಗುತ್ತಿರಲಿಲ್ಲ' ಎಂದುಕೊಂಡರು.

ಈ ಸುಖದ, ಸಂತೋಷದ, ಸಮಾರಂಭದಲ್ಲಿ, ಕುಸುಮಳಿಗೆ ಸರಿಸಾಟಿಯಾದ ಉದಾಸೀನತೆಯಿಂದ ಇದ್ದ ವ್ಯಕ್ತಿ ಇನ್ನೊಂದೆಂದರೆ, ಅವಳ ಅಣ್ಣನೇ. ಗುರು ತನ್ನ ಮನಸ್ಸನ್ನು ಈವರೆಗೆ ಈ ವಿಷಯದಲ್ಲಿ ಸ್ವಲ್ಪ ಹತೋಟಿಗೆ ತಂದುಕೊಂಡು, ಎದೆಯನ್ನು ಅದುಮಿಟ್ಟುಕೊಂಡು ಸಮಯಕ್ಕೆ ತಕ್ಕ 'ಲೌಕಿಕ' ವನ್ನು ಸಾಧಿಸುತ್ತಿದ್ದ. ತಂದೆ ತಾಯಿಗಳು ಏನಾದರೂ ಕರೆದಾಗ ಗುರು ಸಿದ್ಧ; ಏನಾದರೂ ಹೇಳಿದಾಗ ಮಾಡಲೂ ಸಿದ್ಧ. ಬೀಗರು, ಅತಿಥಿಗಳು, ಮಾತಾಡಿಸಿದಾಗ ಸದುತ್ತರ. ಆದರೆ ಯಾವುದರಲ್ಲೂ ಉತ್ಸಾಹವಿಲ್ಲವೆಂದು ಅವನ ಮುಖ ಯಾವಾಗಲೂ ಹೇಳುತ್ತಿತ್ತು. ಅನೇಕರು ಕೆಲವು ಸಂದರ್ಭಗಳಲ್ಲಿ ಅವನನ್ನು ಆಕ್ಷೇಪಣೆ ಮಾಡುವ ಮನಸ್ಸನ್ನೇ ಹೊಂದಿದ್ದರು. ಆದರೆ ಅದಕ್ಕೆ ಅವಕಾಶ, ವಾದಗಳು ಮಾತ್ರ ಅವರಿಗೆ ಹುಡುಕಿದರೆ ಸಿಕ್ಕಲಿಲ್ಲ. "ಏನೋ ಮಂಕು ರೀತಿ ಹುಡುಗ. ಅಯೋಗ್ಯನಲ್ಲ, ಗರ್ವಿಷ್ಠನಲ್ಲ" ಎಂದು ಸಮಾಧಾನ ಹೊಂದಿದರು. ಎಲ್ಲಕ್ಕೂ ಇತರರಂತೆಯೇ ಸಾಮಾನ್ಯವಾಗಿ ಬೆರೆನಂತೆ ಇರುತ್ತಿದ್ದ. ಆದರೆ ಮೈಲು ಮೈಲಿಗಳ ದೂರವಾಗಿಯೇ ಇರುತ್ತಿದ್ದ. ಗುರುವಿಗೆ ಸುತ್ತುಮುತ್ತಿನ ನೋಟ ಕಾಣುತ್ತಲೇ ಇರಲಿಲ್ಲ. ವಿನೋದ ಸಂತೋಷಗಳು ಮನಸ್ಸನ್ನು ಮುಟ್ಟುತ್ತಲೂ ಇರಲಿಲ್ಲ. ಎದೆಯೂ

ಮುದ್ದಾಗಿಯೇ ಇತ್ತು. ಆದರೆ ಒಂದು ವಿಷಯದಲ್ಲಿ ಮಾತ್ರ ಅವನ ಚೇತನ ಬದುಕಿತ್ತು, ಎದ್ದಿತ್ತು, ಅನುಭವಿಸುತ್ತಿತ್ತು. ಅದು ಕುಸುಮ. ಅವಳನ್ನು ನೋಡಿದಾಗಲೆಲ್ಲ ಕಣ್ಣು ಅಲ್ಲಿಯೇ ನೆಡುತ್ತಿತ್ತು, ಮನಸ್ಸು ಮಿಲಿಮಿಲಿಗುಟ್ಟು ತ್ತಿತ್ತು, ಎದೆ ನೋವಿನಿಂದ ನುಲಿಯುತ್ತಿತ್ತು. ಆದಷ್ಟೂ ಅವಳ ಕಡೆಗೆ ನೋಡ ದೆಯೇ ಇರಬೇಕೆಂದು ಯತ್ನಿಸಿದರೂ, ಇತರ ಅಟ್ಟಹಾಸದ ಮೇಲೆಲ್ಲ ಕ್ಷಣಕ್ಕೆ ಹಾರಿ ಮುಗಿಸಿ ಕಣ್ಣು ತಾನಾಗಿ ಅವಳ ಬಾಡಿದ, ಮುಚ್ಚಿದ ವ್ಯಥೆಯ, ಮುಖದ ಕಡೆಗೇ ಸೆಳೆದುಕೊಳ್ಳುತ್ತಿತ್ತು. ಅವಳಾದರೂ ಅರ್ಥದ ದೃಷ್ಟಿ ಬೀರಿದ ಕಾಲವೆಂದರೆ ಅಣ್ಣನನ್ನು ಕನಿಕರದಿಂದ, ಪ್ರೇಮದ ಉದ್ವೇಗದಿಂದ, ನೋಡಿ ದಾಗಲೇ.

ಹೀಗಾದರೂ ಗುರುವಿನ ಆಕರ್ಷಣೆ ಬಹಳ ಬಂಧುಗಳಿಗಿತ್ತು. ಮದು ವೆಯ ವಯಸ್ಸಿನ ಹೆಣ್ಣುಮಕ್ಕಳ ತಂದೆ ತಾಯಿಯರೆಲ್ಲರಿಗೂ ಇವನ ಮೇಲೇ ಕಣ್ಣು. ವಧೂವರರು ಇವರಿಗೆ ಎರಡನೆಯ ಸ್ಥಳದಲ್ಲಿ. ಹೆಣ್ಣುಗಳಂತೂ ವಾರೆಗಣ್ಣನ್ನು ಇವನಿಗಾಗಿಯೇ ಕಾದಿರಿಸಿದ್ದರು. ಅವರವರ ಹಿರಿಯರ ಸೂಚ ನೆಗಳನ್ನು ಗ್ರಹಿಸಿ, ಅವನ ಬಳಿ ಆದಷ್ಟು ನೆಪಗಳಲ್ಲಿ ಸುಳಿದಾಡುತ್ತಿದ್ದರು, ಮಾತನಾಡುತ್ತಿದ್ದರು; ನಕ್ಕು ನಗುತ್ತಿದ್ದರು; ಸಮಯ ದೊರೆತಾಗ ಅವನ ಕೈಗಳನ್ನು ಮುಟ್ಟುತ್ತಿದ್ದರು; ಭುಜವನ್ನು ಸೋಕುತ್ತಿದ್ದರು; ಸೀರೆಯ ಸೆರಗು, ಜಡೆಗಳನ್ನು ಸೋಕಿಸುತ್ತಿದ್ದರು; ದೂರದಿಂದಲೂ ನಗೆ, ವಿನೋದ, ಗಟ್ಟಿ ಯಾದ ಮಾತು, ಹಾವಭಾವಗಳಿಂದ ಆಕರ್ಷಿಸುತ್ತಿದ್ದರು ಆದರೇನು, ಅವರು ಅವನು ಬೆಟ್ಟವೆಂದು ಅವನ ಮೇಲೇ ಹತ್ತಬಹುದಾಗಿತ್ತು, ಅಷ್ಟೊಂದು ಅವನು ಅಚಲನಾಗಿದ್ದ: ವಾರೆನೋಟವನ್ನು ಬಿಟ್ಟು ದುರುಗುಟ್ಟಿಕೊಂಡೇ ನೋಡಬಹುದಾಗಿತ್ತು, ಹಾಗೆ ಅವರಿಂದ ಅವನ ದೃಷ್ಟಿ ದೂರವಾಗಿತ್ತು. ಹುಡುಗಿಯರು ಸೋತರು, ನಾಚಿದರು. ಅವರ ಹಿರಿಯರು ಅವನು ಶುದ್ಧ ಮಡ್ಡಿಯಿರಬೇಕೆಂದು ಬೈದುಕೊಂಡರು; ಹಾಗೇ, ಈ ಜೆಕ್ಕಿನ ಮುಖದ ಹಿಂದೆ ಏನಾದರೂ ಇದ್ದೀತೋ ಏನೋ ಎಂದು ಆಸೆಯನ್ನು ಪೂರ್ತಿಯಾಗಿ ಬಿಡಲಿಲ್ಲ. ನಿಜವಾಗಿ ಸಂಪೂರ್ಣವಾಗಿ ನಿರಾಸೆಯಾದವರೆಂದರೆ ಸಾಹುಕಾರರು. ನಂಜಪ್ಪನೂ ಸಪ್ಪೆಯಾದರೂ ಇನ್ನೂ ತನ್ನ ಕೆಲವು ತಂತ್ರಗಳು ನಡೆದಾವೆಂದು ಯೋಚಿಸುತ್ತಿದ್ದ.

ಹಾಗೇ ಅವನೊಡನೆ ಹರಟಲು ಮೊದಲು ಮಾಡಿದ. ಅವನಿಗೆ ಹತ್ತು ಮಾತಿಗೆ ಒಂದು ಉತ್ತರವು ಸಿಕ್ಕಿದ್ದರೂ, ಕಡೆಗೆ ಒಂದು ದೃಷ್ಟಿ ಸೂಚನೆಯು ದೊರೆತರೂ ಸಾಕಾಗಿತ್ತು. ಪೀಠಿಕೆಯಾಗಿ ಈ ಮದುವೆಯ ಸಮಾರಂಭ, ಮದವೆಯ ಅಗತ್ಯ, ಹೆಣ್ಣುಗಳ ವರ್ಣನೆ, ಬಗೆ, ಮತ್ತು ಹೆಣ್ಣಿನ ಸ್ವಾರಸ್ಯ ಗಳನ್ನು ವಿಸ್ತರಿಸಿದ. ಗುರು ಒಂದೇ ಒಂದು ಮಾತೂ ಇಲ್ಲದೆ ಎತ್ತಕಡೆಯೋ ಗಮನವಿತ್ತು ಕೇಳಿದ. ನಂಜಪ್ಪನಿಗೆ, ಕಲ್ಲಿಗೆ ಕತೆ ಹೇಳಿದಂತಾಯ್ತು. ಕಡೆಗೆ ಹುಚ್ಚು ಸಾಹಸವನ್ನೇ ಮಾಡಿ, ಬಂದಿದ್ದ ಹುಡುಗಿಯರಲ್ಲಿ ಒಬ್ಬೊಬ್ಬಳ ವಿಷ ಯಕ್ಕೂ ಇಳಿದ. "ಗುರು, ಆ ಉದ್ದನೆ ಕೆಂಪನೆ ಹುಡುಗಿ, ಗೆಲವಾಗಿದಾಳಲ್ಲ - ಬಿನ್ನಾಣಿ, ಕಲ್ಯಾಣಿ, ಅವಳು ಅಸಿಸ್ಟೆಂಟ್ ಕಮಿಷನರ್, ಅವರು ಯಾರಪ್ಪಾ ಅವರು, ಅವರ ಮಗಳು. ಹೇಗಿದಾಳೆ ನೋಡು? ಏನಂತೀ ಅವಳ ವಿಷಯ?"

" ನೀನೇ ಎಲ್ಲ ಹೇಳಿದೆಯಲ್ಲ. "

" ಅಲ್ಲ, ನಿನ್ನ ಅಭಿಪ್ರಾಯ ಕೇಳಿದೆ ಹ್ಹ ! ಹ್ಹಾ ! ಸುಮ್ಮನೆ. "

" ನಾನೇನು ಹೆಣ್ಣುಗಳ ವಿಷಯದಲ್ಲಿ ನಿಸ್ಸೀಮನಲ್ಲ, ನಿನ್ನ ಹಾಗೆ. ಅಭಿಪ್ರಾಯ ಕಟ್ಟಿಕೊಂಡೇನು ? "

ನಂಜಪ್ಪ 'ಓಹೋ, ಇದು ಸರಿಯಿಲ್ಲ' ಎಂದುಕೊಂಡು ಸ್ವಲ್ಪ ಹೊತ್ತು ಬಿಟ್ಟು, " ಅಲ್ಲ, ಅವಳನ್ನು ನೋಡಯ್ಯ, ಹಸೆಮುಂದೆ ನಿಂತಿರೋ ಹುಡುಗೀನ. ಏನು ಚೇಷ್ಟೆ ಹೆಣ್ಣು, ಅಬ್ಬಬ್ಬ ! ಆದರೆ ಅವಳ ಚೆಲುವಿಗೆ ತಡೆಯುತ್ತೆ ಅನ್ನು. ಹಾಗೇ ಇರಬೇಕು ಚಾಲೂಕಾಗಿ ಹುಡುಗೀರು, ಈ ಕಾಲದಲ್ಲಿ. ಅವಳ ಒಡವೆ, ವಸ್ತು, ಒನಪು, ವಯ್ಯಾರ, ಎಲ್ಲ ಚೆನ್ನಾಗಿ ಒಪ್ಪುತ್ತೆ. ನಮ್ಮ ಕುಸುಮಳ ಹಾಗೇ. ಅವಳು ಯಾರು ಅಂತೀ........?"

" ............ "

" ಆ ವಿದ್ಯಾಮಂತ್ರಿಗಳಿಲ್ಲವೇ—ನಿನ್ನ ತಂದೆಯ ಬಾಲ್ಯಸ್ನೇಹಿತರು ? ಅವರ ತಮ್ಮನ ಅಳಿಯನ ಸೋದರತ್ತೆ ಮಗಳು........ಹುಂ ಹುಂ ಅದೇ ಸಂಬಂಧ ಅಂತ ಕಾಣುತ್ತೆ. ಅವಳನ್ನ ನೋಡೋಕೆ ಒಂದು ಸಂತೋಷ ವಾಗುತ್ತೆ. ಕಣ್ಣಿಗೆ ಹಬ್ಬ. ಗೊತ್ತಾಯ್ತಲ್ಲ ? ಅವಳು....ಅಲ್ಲಿ ಹೋದಳಲ್ಲ ಅವಳು ಅಗೊ ಅಲ್ಲಿ ನಿಂತಿದಾಳಲ್ಲ ತಾಯಿ ಹತ್ತಿರ, ಅವಳು....ಚೆನ್ನಾಗಿದಾಳೆ ಅಲ್ಲವೇ ? ನೋಡಿದೆ ತಾನೆ ? "

“ ಇಲ್ಲ. ”

“ ಅಲ್ಲಿ ನೋಡಯ್ಯ, ಈಗ ಆ ಕಂಬ ಒರಗಿ ನಿಂತಿದಾಳೆ, ಕಂಡಿತೆ ? ”

“ ಇಲ್ಲ. ”

“ ಇಲ್ಲವೆ ? ಚೆನ್ನಾಯ್ತು ” ಸಂಜಪ್ಪ ಗುರುವಿನ ಭುಜದ ಮೇಲಿನಿಂದಲೇ ನೋಡಿದ. “ ಅಯ್ಯೊ, ಅಲ್ಲೇ ಕಾಣ್ತಾ ಇದಾಳಲ್ಲಯ್ಯ, ದೆವ್ವದ ಹಾಗೆ. ”

“ ಸರಿ ಮತ್ತೆ, ಏನು ನೋಡೋದು ಬಿಡು. ”

“ ಹಾಗಲ್ಲ ಹಾಗಲ್ಲ, ಚೆನ್ನಾಗಿ ಕಾಣ್ತಾ ಇದೆಯಲ್ಲ ಅಂದೆ. ಸರಿ ತಾನೆ ? ”

“ ಉಹುಂ, ಯಾರೋ ಮರೆ. ”

“ ಸರಿಯಾಯ್ತು ಬಿಡು. ಎಲ್ಲೆಲ್ಲೋ ನೋಡ್ತೀಯೆ ಪೆಂಗಿಯಾಗಿ. ಹೋಗಲಿ ಇಲ್ಲಿ ಬಾ. ”

“ ಅಂಥಾ ಕಷ್ಟವೇನು ಬಿಡ್ತು ಮಾವ. ”

“ ನಿಂಗೆ ವರಸಾಮ್ಯ ಸರಿಯಾಗಿದೆ, ನೋಡು. ”

“ ಹುಂ ”

“ ಏನು, ಅಲ್ಲವೆ ? ”

“ ನಂಗೇನು ಗೊತ್ತಾಗುತ್ತೆ. ನೀನು ತೀರ್ಮಾನಿಸಿದೀಯಲ್ಲ. ”

“ ಸ್ವಲ್ಪ ಮಾತಾಡಿಸಿ ನೋಡೋಣವೆ ? ”

“ ನನ್ನೇನು ಕೇಳೋದು ಅದಕ್ಕೆ ? ಅವಳುಂಟು ನೀನುಂಟು. ”

“ ಅಲ್ಲವೋ ಗುರು—ನಿಂಗೇನೂ ತಿಳಿಯೋದೇ ಇಲ್ಲವಲ್ಲ. ”

“ ಹೆಚ್ಚು ತಿಳೀದೇ ಇರೋದೇ ಸರ್ವ ಸೌಖ್ಯ. ತಿಳಿವಳಿಕೇಲೇ ಎಲ್ಲ ದುಃಖ ನೋಡು. ”

ನಂಜಪ್ಪ ಮಾತು ಬಿಟ್ಟ, ಇನ್ನಷ್ಟು ಹೊತ್ತು. ಮತ್ತೆ ಮೊದಲು ಮಾಡಿದ:

“ ಅವಳು ಎಲ್ಲರಿಗಿಂತಲೂ ಝೋಕಾಗಿದಾಳೆ ಕಣಯ್ಯ. ಒಳ್ಳೆ ರತಿ ಹಾಗೆ. ನಿಜವಾಗಿ, ಹಿಂದೆ ಹೇಳಿದೆನಲ್ಲ, ಅವರು ಬರಿ ಚಿತ್ರಗಳು, ಗೊಂಬೆಗಳು, ಇವಳ ಜತೆ ಹೋಲಿಸಿದರೆ. ಇವಳೀಗ ರಸಬಾಳೆ ಕಬ್ಬು ಇದ್ದ ಹಾಗೆ, ರಸಪುರಿಮಾವಿನಹಣ್ಣಿನ ಹಾಗೆ, ರಸದ ಗುಂಡಿನ ಹಾಗೆ, ರಸವಾಂಗಿ—

ಎಂಥ ರಸರಸವಾಗಿದಾಳೆ! ನೋಡಯ್ಯ, ನೋಡು ಚೆನ್ನಾಗಿ. ವಂಶವೇನು ಕಡಿಮೆ ಇಲ್ಲಾಪ್ಪ-ಪಾಳೆಯಗಾರರ ವಂಶ. ಸಿರಿಯಂತೂ ಸುರಿದು ಹೋಗುತ್ತಂತೆ. ಒಬ್ಬಳೇ ಮಗಳು ಗೊತ್ತಾಯ್ತೆ? ಗೋತ್ರ ಸೂತ್ರ ಎಲ್ಲ ಸರಿಯಾಗಿದೆ. ಇನ್ನೂ ಒಂದು ವಿಶೇಷ ಏನು ಅಂತೀಯೋ ?" ಎಂದು ಗುರುವಿನ ಕಿವಿಯಲ್ಲಿ "ಮನೆಗೆ ಬರೋದಕ್ಕೆ ತಯಾರಾಗಿದಾಳಂತೆ" ಎಂದು ಪಿಸಿಗುಟ್ಟಿ "ಹ್ಹ! ಹಾ!" ಎಂದು ನಕ್ಕು "ಕೈ ತೊಳೆದುಕೊಂಡು ಮುಟ್ಟಬೇಕು, ಹಾಗಿದಾಳೆ ನೋಡು ಆಹಾ!....ಯಾರು ಬೇಕಾದರೂ ಕಣ್ಣು ಮುಚ್ಚಿಕೊಂಡು ಮಾಡಿಕೋಬಹುದು, ಅಲ್ಲವೆ ? ಏನಂತೀಯ ?" ಎಂದು ಒತ್ತಿ ಕೇಳಿದ.

"ಮಾಡಿಕೊ." ಗುರು ಇನ್ನು ಅಲ್ಲಿ ನಿಲ್ಲಲೇ ಇಲ್ಲ.

ನಂಜಪ್ಪ ಈಗ ಗುರುವಿನ ಮದುವೆಯ ಆಸೆಯನ್ನು ಬಿಟ್ಟ "ಇವನಿಗೇನು ಬೇಕು ಮತ್ತೆ ?" ಎಂದು ಯೋಚಿಸಿದ—ಕಷ್ಟಪಟ್ಟು. ಇನ್ನೊಂದು ದಿನ, ಏಳನೆಯ ದಿನ, ಕಮಲಾಸಾನಿ ತಾಫೆ ಕಟ್ಟುತ್ತಿದ್ದಾಗ, ನಂಜಪ್ಪ ಮೆಲ್ಲ ಮೆಲ್ಲಗೆ ಸರಿದುಕೊಂಡು ಗುರುವಿನ ಪಕ್ಕಕ್ಕೇ ಬಂದ. ಕಮಲಾಸಾನಿಯೂ ಯುವಕಿಯೆ, ಸುಂದರಿಯಾಗಿಯೂ ಇದ್ದಳು. ಅವಳ ನಾಟ್ಯವೂ ಅತಿ ರಮ್ಯವಾಗಿತ್ತು. ನಂಜಪ್ಪ ಗುರುವಿಗೆ ಒತ್ತಿ ನಿಂತುಕೊಂಡು, ಅವಳ ಹಾವ ಭಾವಗಳನ್ನೆಲ್ಲ ಕಣ್ಣರಳಿಸಿ ಬಾಯಿಬಿಟ್ಟು ನೋಡುತ್ತ, ಗುರುವಿಗೆ ಕೇಳುವಂತೆಯೇ ಪ್ರತಿ ಚಲನೆಯನ್ನೂ "ಭಲೆ! ಬೇಷ್! ಶಾಬಾಸ್! ಅಹಹ! ಏನು ನರ್ತನ ಏನು ನರ್ತನ! ಅಬ್ಬಬ್ಬ! ಏನು ಬಳುಕು! ಥಳಕು! ಛೆ! ಎಂಥ ಸುಂದರ ಅಂಗವಿನ್ಯಾಸ! ಅವಳ ಚೆಲುವಿಗೆ ಎಷ್ಟು ಚೆನ್ನಾಗಿ ಒಪ್ಪುತ್ತೆ!" ಎಂದು ಹೇಳಿಕೊಂಡು ಭುಜದಿಂದ ತಿವಿಯುತ್ತ, "ಹೇಗಿದೆ ಗುರು, ನಾಟ್ಯ ?" ಎಂದು ಕೇಳಿದ.

"ಚೆನ್ನಾಗಿದೆ" ಅದೇನೋ ಗುರುವೂ ಸ್ವಲ್ಪ ಆಸಕ್ತಿಯಿಂದಲೇ ನೋಡುತ್ತಿದ್ದ.

ನಂಜಪ್ಪ ಒಳಗೇ "ಭಲೆ! ಇವತ್ತೇನೋ ಒಂದು ಮಾತು ಅಂದ." ಎಂದುಕೊಂಡು "ಅವಳೂ ಹಾಗೇ ಇದಾಳೆ." ಎಂದು ಮೊದಲು ಮಾಡಿದ.

“ ಈ ಊರಿನಲ್ಲಿ ಹೆಸರಾಗಿದಾಳೆ—ಈ ಚಿಕ್ಕ ವಯಸ್ಸಿಗೇ. ಎಷ್ಟು ಅಂತೀಯೆ ? ಇನ್ನೂ ಹದಿನೆಂಟು. ಅವಳ ತಾಯಿಗೆ ನಲವತ್ತರ ಹತ್ತಿರ ಹತ್ತಿರ ಆದರೂ ಈ ಪ್ರತಿಭೆಯಿಲ್ಲ. ಇವರ ವಂಶವೇ ಇಂಥ ಒಳ್ಳೇ ನರ್ತಕಿಯರದ್ದು. ಇವಳ ಅವ್ವ—ಅಗೋ ಅಲ್ಲೇ ಕುಳಿತಿದಾಳಲ್ಲ ತಾಳ ಹಾಕುತ್ತ—ನಮಗೆಲ್ಲ ಚೆನ್ನಾಗಿ ಗೊತ್ತು. ಈ ಹುಡುಗೀನಂತು ಅವಳು ಮಗುವಾದಾಗಿನಿಂದ ಕಂಡಿದ್ದೆ. ಇವಳು ಒಳ್ಳೆ ಕಲಾವಿದೆ....ಚೆನ್ನಾಗೂ ಇದಾಳೆ ಅಲ್ಲವೆ ?”

“ ಹುಂ. ”

ನಂಜಪ್ಪ ಬೆರಗಾದ. ಇಷ್ಟಾದರೂ ಸ್ವರ ಅಳಿಯನಿಂದ ಬಂದೀತೆಂದು ಯೋಚಿಸಿರಲಿಲ್ಲ. ಅವನ ತೃಪ್ತಿ ಸಂತೋಷಗಳು ಉಕ್ಕಿದುವು. ಹೀಗೆ ಉತ್ತೇಜನ ಸಿಕ್ಕಿದ ಮೇಲೆ ಬಿಡುವವನೇ ನಂಜಪ್ಪ? ಮುಂದುವರಿಸಿದ:

“ಇವಳ ನಾಟ್ಯ, ಸಂಗೀತ, ಎಲ್ಲ, ಇಲ್ಲಿ ಕೇಳಬಾರದು. ಇದೊಂದು ದೊಡ್ಡ ಸಂತೆ. ನಾಲ್ಕಾರು ಜನ ಹತ್ತಿರ ಕುಳಿತು ನೋಡಬೇಕು, ಕೇಳಬೇಕು, ಆಹಾ ! ನಾನು ಅನುಭವಿಸಿ ಆನಂದಿಸಿದೀನಿ. ಬಲು ಸೊಗಸು ಕಣಯ್ಯ. ಬೇರೆ ಯಾವಾಗಲಾದರೂ ಬಿಡುವಾಗಿದ್ದಾಗ ಏರ್ಪಾಡು ಮಾಡಬೇಕು, ನೋಡು. ಅಲ್ಲವೆ ? ”

“ ಹುಂ. ”

ಇನ್ನೂ ಉಬ್ಬಿದ ನಂಜಪ್ಪ.

“ ಅದಕ್ಕೇನು, ಎಲ್ಲಿ ಬೇಕಾದರೂ ಯಾವಾಗ ಬೇಕಾದರೂ, ಸಾಧ್ಯ. ಇಲ್ಲೋ ಅಥವ ಅವಳ ಮನೆಯಲ್ಲಿಯೋ...” ಕಡೆಯ ಮಾತನ್ನು ನಿದಾನವಾಗಿ ಒತ್ತಿ ಅಗಿದಗಿದು ಹೇಳಿದ. ಕಡೆಗೆ ಮೆಲ್ಲಗೆ “ ಅಲ್ಲವೆ ? ” ಅಂದ ಮತ್ತೆ.

“ ನೋಡೋಣ.”

ಇದನ್ನು ಕೇಳಿಯಂತೂ ನಂಜಪ್ಪ ಆನಂದದಿಂದ ಬಿರಿದೇಹೋದ. “ಓಹೋ ವಿಚಾರ ಹೀಗೋ ? ಇವನಿಗೂ ಮದುವೆ, ಸಂಸಾರ ಈ ಗೋಳೇ ಬೇಡ ಅಂತ ಕಾಣುತ್ತೆ—ನನ್ನ ಹಾಗೆ. ಹಾಗಾದರೆ ಸರಿ. ಒಳ್ಳೇದೇ ಆಯ್ತು. ಹೂವಿನ ಜತೆ ನಾರಾಗಿ ನಾನೂ ಸ್ವರ್ಗ ಸೇರಬಹುದು” ಎಂದು ಆನಂದಿಸಿದ. ‘ ಅಯ್ಯೋ ಮಂಕೆ, ಇಲ್ಲಿಯ ವರೆಗೂ ಯಾಕೆ ಹೊಳೆಯಲಿಲ್ಲ ನಂಗೆ, ಇಷ್ಟು! ಎಷ್ಟು

ದಳ್ಳಾಳಿ ಆಗಲೇ ಕಳೆದುಹೋಯ್ತು. ಹುಂ, ಈಗಲೂ ಹೆಚ್ಚು ಹೊತ್ತಾಗಿಲ್ಲ." ಎಂದುಕೊಂಡು ಸಮಾಧಾನ ತಂದುಕೊಂಡ. ಆಗಲೇ ತಾನು ಮರ್ಯಾದೆ-ಮಹಲಿನ ಮುಂದಿನ ಒಡೆಯನ ಸೂತ್ರಧಾರನಾಗಿ, ಒಡೆಯನೇ ಆಗಿ ತನಗೆ ಕಂಡ. 'ಮುಂದೆಲ್ಲ ಸುಖದ ಸುಗ್ಗಿ' ಎಂದು ಹಿಗ್ಗಿದ. ತನ್ನ ಯೋಚನೆಯನ್ನು ಕ್ಷಣಕಾಲ ಮೆಲುಕು ಹಾಕಿ ತಿರಿಗಿದಾಗ ಗುರು ಅಲ್ಲಿರಲಿಲ್ಲ. ನಂಜಪ್ಪನಿಗೆ ಇದೇನು ಆಶಾಭಂಗವನ್ನು ತರಲಿಲ್ಲ. ಆ ರಾತ್ರಿ ಅವನು ಕಂಡ ಕನಸುಗಳು ಊಟ ತಿಂಡಿಯವು ಮಾತ್ರವೇ ಅಲ್ಲ.

## ೧೧

* * *

ನಂಜಪ್ಪ, ಮದುವೆಯಾದ ನಂತರ ಹೆಚ್ಚು ಕಾಲವನ್ನು ದಂಡ ಮಾಡಲಿಲ್ಲ. ಒಂದು ದಿನ ಇಬ್ಬರೇ ಇದ್ದಾಗ "ಗುರು, ಅವತ್ತುಮಾತಾಡಿಕೊಂಡೆವಲ್ಲ—ನೃತ್ಯ ನೋಡಬೇಕು, ಸಂಗೀತ ಕೇಳಬೇಕು ಅಂತ ?" ಎಂದು ಮೊದಲು ಮಾಡಿದ.

"ಆಂ!" ಗುರು.

"ಅದೇ ಕಮಲಾಸಾನಿ ನೃತ್ಯ ಕಣೋ. ಆಗಲೇ ಮರೆತುಬಿಟ್ಟೆಯಾ ? ಹ್ಹ ! ಹ್ಹ !"

"ಓ"

"ಅದಕ್ಕೆ ನಾಳೆ ಸಂಜೆ ಏರ್ಪಾಡು ಮಾಡಿದೀನಿ." ನಂಜಪ್ಪ ಸುಳ್ಳು ಹೇಳಿದ.

"ಹುಂ."

'ಹುಂ, ಹುಂ, ಹುಂ' ನಂಜಪ್ಪನಿಗೆ ಪರಮಾನಂದವಾಯಿತು. ಆ ದಿನ ಸಂಜೆ ಸಡಗರದಿಂದ ನೀಲಾಸಾನಿಯ ಮನೆಗೆ ಹೋದ. ಅವರಿಬ್ಬರದ್ದೂ ಹಳೆಯ ಪರಿಚಯ. ಈಗಲೂ ಭಾವ, ಕಾಗೆಯನ್ನು ಹೇಗೋ ಅಷ್ಟಿಷ್ಟು ಬಡಿದು ಈ ಹದ್ದಿಗೆ ಹಾಕತ್ತಿದ್ದ.

“ಏ, ನೀಲಿ, ನಾಳೆ ಭರ್ಜರಿ ಏರ್ಪಾಡಾಗಬೇಕು. ಭರ್ಜರಿ ಬೇಟಿ.” ನಂಜಪ್ಪ ಹೆಮ್ಮೆ ಸಂತೋಷಗಳಿಂದ ಹೇಳಿದ.

“ಆಂ! ಯಾರು ?”

“ಊಹಿಸು, ನೋಡೋಣ.”

“ಯಾರಪ್ಪ....ಭೋಗಪ್ಪ” ಅವಳು ಅವನೊಡನೆ ಸರಸವಾಡುತ್ತಿದ್ದಳು.

“ಥೂ, ಅವನೇಕೆ. ಮೂರು ಕಾಸಿಲ್ಲ. ಬಂಡವಾಳವಿಲ್ಲದ ಬಡಾಯಿ. ಕೊಳೆತ ಕುಂಬಳಕಾಯಿ.”

“ಇನ್ನು ಯಾರು ಇದಾರೆ ನಿಮ್ಮ ಸ್ನೇಹಿತರ ಪೈಕಿ, ಭರ್ಜರಿ ಅಂದರೆ?”

“ಅರೇ ಊರಿಗೇ ದೊಡ್ಡ ಕುಳ.”

“ಏನು!”

“ಮರ್ಯಾದೆ ಮಹಲು!”

“ಆ! ಸಾಹುಕಾ....”

“ಛಿ, ಪೆಚ್ಚಿ ಆ ಮುದಿಗೂಬೆ ಮಾತೇಕೆ? ಅವ ಮೂರು ಕಾಸು ಬಿಚ್ಚುತ್ತಾನೇ, ಆರು ಕಾಸು ಬರದ ಕಡೆ? ನೀನೇನು ಬಡ್ಡಿ ಬಾಚಿ ಕೊಡ್ತೀಯ? ನಿನ್ನ ಹತ್ತಿರ ಏನು ಕೆಲಸ ಅವಂಗೆ—ಆ ಮುದಿ ಹಂಕಿಗೆ? ಎಳೇ ಕುದುರೇನೇ ಹಿಡಿದಿದ್ದೀನಿ.”

“ನಿಜವಾಗಿ!”

“ನನ್ನ ಸೋದರಳಿಯ, ಮುಂದಿನ ಸಾಹುಕಾರ ಬರ್ತಾನೆ—ಇನ್ನು ಯಾರು ಅಲ್ಲ, ತಿಳಿತೆ?”

“ನಂಬಲೇ ಆರೆ—ಅಂಥ ವಿಚಿತ್ರ ಮನುಷ್ಯ ಅಂತ ನೀವೇ ಹೇಳಿದಿರಿ.”

“ಆದರೇನು ನಂಜಪ್ಪನ ಕೈಗೆ ಸಿಕ್ಕಿದ ಮೇಲೆ ಹದಕ್ಕೆ ಬರದೇ ಇರ್ತಾನೇ—ಯಾವನಾದರೂ? ನಂಜಪ್ಪನ ಕೈಗೆ? ಹುಂ.”

ನೀಲಾಸಾನಿಗೆ ಬಹಳ ಸೋಜಿಗವೇ ಆಯಿತು. ಹಾಗೂ ಸಂತೋಷ.

“ನೋಡು ಮತ್ತೆ. ನಾಳೆ ನೃತ್ಯ ನಟನೆ ಹೇಗಿರಬೇಕು ಅಂತ! ಕಮಲಿಗೆ ಹೇಳು ಕನ್ನಡೀನ ಚೆನ್ನಾಗಿ ಉಪಯೋಗಿಸು ಅಂತ. ಅವಳ ಅಭಿನಯವೆಲ್ಲ, ಬತ್ತಳಿಕೆ ಬಾಣವೆಲ್ಲ ಹೊರಗೆ ಬರಬೇಕು. ಅವನದ್ದು

ಕೊಂಚ ನಾಚಿಕೆಯ ಪ್ರಕೃತಿ. ಹುಚ್ಚ ಗುಗ್ಗು ಅಂದುಕೊಂಡಾಳು. ಬೇಕಾದಷ್ಟೆಲ್ಲ ಮುಂಮುವರಿಯಲಿ, ಆಂ ? "

" ನೋಡಿಕೋತಾಳೆ. ನಾನು ಕಲಿಸೋದು ಏನೂ ಇಲ್ಲ, ನನ್ನ ಮಗಳಿಗೆ. '' ಅವಳು ನಸುನಕ್ಕಳು.

" ಅವನು ಬಿದ್ದರೆ ಬುಟ್ಟಿಗೆ, ನಂಗು ನಿಂಗು ಸುಗ್ಗಿ, ಮುಂದೆಲ್ಲ ಹ್ಹ ! ಹ್ಹಾ ! " ನಂಜಪ್ಪ ಅವಳ ಕೆನ್ನೆಯನ್ನು ತಿವಿದ.

ಮಾರನೆಯ ಸಂಜೆ ನಂಜಪ್ಪ ತನ್ನ 'ದಿವ್ಯಾಂಬರ'ವನ್ನು ಧರಿಸಿ ಅಳಿಯನನ್ನು ನೋಡಲು ಹೋದ.

" ಹೋಗೋಣೆ ಮತ್ತೆ? ಹೇಳಿದ್ದೆನಲ್ಲ. "

" ಹುಂ " ಗುರು ಹೊರಟ.

" ಹೀಗೆಯೆ ? ಬಟ್ಟೆ ಬರೆ ಹಾಕಿಕೊಳ್ಳೋದಿಲ್ಲವೆ ? "

''ಹಾಕಿಲ್ಲವೆ? ಬೆತ್ತಲೆ ಆಗಿದೀನೆ ? ನಟನೆ ನಂದಲ್ಲವಲ್ಲ.'' ಗುರು ನಕ್ಕ.

ನಂಜಪ್ಪನಿಗೆ ಅವನು ಒಪ್ಪಿದುದು ಎಷ್ಟು ಆಶ್ಚರ್ಯವೋ ಅವನ ಸರಳ ವೇಷ, ತಿದ್ದಿದ ತಲೆ ಮುಖಗಳನ್ನು ಕಂಡು ಅಷ್ಟೇ ಆಶ್ಚರ್ಯವಾಯಿತು. ಆದರೂ ' ಹಣ ಹಾಕಿದ್ದೇ ಮೇಲ್ಪಂಗ್ತಿ' ಎಂದುಕೊಂಡು ಅಳಿಯನೊಡನೆ ಹೊರಟ.

ನೀಲಾಸಾನಿಯ ಮನೆಯಲ್ಲಿ ಏರ್ಪಾಡು ಉತ್ಕೃಷ್ಟವಾಗಿತ್ತು. ಅವಳ ಹೆಸರು, ಮಗಳ ಹೆಸರೂ ಮರುಳೂರಿನಲ್ಲಿ ಪ್ರಸಿದ್ಧವಾಗಿದ್ದರೂ ಸೂಳೆಯ ಆದಾಯ ಕರ್ಚು, ಬಂದಂತೆಯೇ ದುಡ್ಡು ಕರಗಿ ಹೋಗುತ್ತಿತ್ತು. ಸ್ಥಿತಿಗತಿಯೇನು ಅಸಾಧಾರಣವೆಂದು ಹೇಳುವಂತಿರಲಿಲ್ಲ. ಯಾಕೆ ಮೇಲಿನ ಪ್ರದರ್ಶ್ಯ-ನದಒಳಗೆ ಭೂತವೇ ಬಾಯಿ ತೆರೆದುಕೊಂಡಿತ್ತು. ಈಗ ಒದಗಿದ್ದಂತಹ ದೋಣಿಯಿಂದಲೇ ಹೊಳೆ ದಾಟಬೇಕಾಗಿತ್ತು. ಹೀಗಿದ್ದು ಇದ್ದ ಅನುಕೂಲದಲ್ಲೇ ಅವಳು ಸೌಖ್ಯದ, ಆಕರ್ಷಣೆಯ ಅಂಶಗಳಲ್ಲಿ ಯಾವುದನ್ನೂ ಮರೆತಿರಲಿಲ್ಲ ಆಕರ್ಷಣೆಯುವಾದ ಸಣ್ಣ ಹಜಾರದಲ್ಲಿ ಎಲ್ಲವೂ ಸಿದ್ಧವಾಗಿತ್ತು. ಹಜಾರಕ್ಕೆಲ್ಲ ಹಳೆಯ ರತ್ನಕಂಬಳಿ ಹಾಸಿತ್ತು. ಕುದುರೆಯ ಲಾಳದ ಆಕಾರದಲ್ಲಿ ಒರಗು ದಿಂಬುಗಳು. ಇದರ ಮಧ್ಯಭಾಗದಲ್ಲಿ ವೀಣೆ, ತಂಬೂರಿ, ತಬಲ,

ಪಿಟೀಲು, ತಾಳ—ವಾದ್ಯಮೇಳ-ಮೌನವಾಗಿ ಕಾಯುತ್ತಿದ್ದುವು. ನಂಜಪ್ಪ ಬಾಗಿಲು ತಟ್ಟಿದ ಕೂಡಲೇ ವಾದ್ಯದವರು ಹಜಾರಕ್ಕೆ ಬಂದರು.

ನಂಜಪ್ಪನ ಹಿಂದೆ ಗುರು ಮನೆ ಹೊಕ್ಕಾಗ ನೀಲಾಸಾನಿ ತನ್ನ ಮುದಿ ವಯ್ಯಾರವನ್ನೆಲ್ಲ ಕರ್ಚುಮಾಡಿ ನಸುನಗೆಯ ಸುಸ್ವಾಗತವಿತ್ತಳು. ರಾಜನಿಗೆ ದಾರಿ ತೋರಿಸುವಂತೆ ಹಜಾರಕ್ಕೆ ಕರೆದೊಯ್ದಳು. ಇವನು ಹಜಾರವನ್ನು ಪ್ರವೇಶಿಸಿದಾಗ ವಾದ್ಯಗಾರರು ಎದ್ದು ನಮಸ್ಕರಿಸಿದರು. ನೀಲಾಸಾನಿ "ಇಲ್ಲಿ, ಇಲ್ಲಿ ಮೇಲೆ ದಯಮಾಡಿಸಬೇಕು.'' ಎಂದು ಮಾವ ಅಳಿಯಂದಿರನ್ನು ಮಧ್ಯ ಭಾಗಕ್ಕೇ ಕರೆದು ಕುಳ್ಳಿರಿಸಿದಳು. ವಾದ್ಯದವರೂ ಕುಳಿತರು. ಶ್ರುತಿ ಮಾಡಿ ಕೊಂಡರು. ನೀಲಾಸಾನಿ ಒಳಗೆ ಹೋದಳು. ಹಜಾರಕ್ಕೆ ಕಾಲಿಟ್ಟಾಗಲೇ ಗುರು ಗೋಡೆಯ ಸುತ್ತ ನೋಡಿ ತಲೆ ತಗ್ಗಿಸಿದ್ದ. ಈಗ ಎತ್ತಕಡೆಯೂ ನೋಡಲಿಲ್ಲ. ಕೆಲವೇ ನಿಮಿಷಗಳಾದ ಮೇಲೆ ರೇಷ್ಮೆಯ 'ಸರಸರ' ಕೇಳಿ ಬಂತು. ಅದರೊಡನೆಯೇ ಕಮಲಾಸಾನಿ ಪ್ರವೇಶಿಸಿದಳು. ಗುರು ಕಮಲಾ ಸಾನಿಯನ್ನೇನೋ ನೋಡಿದ್ದ. ಆದರೆ ಈ ವೇಷಭೂಷಣಗಳನ್ನು ನೋಡಿರ ಲಿಲ್ಲ. ಅವಳು ಉಟ್ಟಿದ್ದ ಜಾಳು ರೇಷ್ಮೆಯ ನೀಲಿ ಅರಿವೆಯ ಕೆಳಗೆ ಜರ-ತಾರಿ ಅಂಚಿನ ತಿಳಿಹಳದಿಯ ಮೋಟು ಲಂಗ ಸೊಂಟದಿಂದಲೂ ಕಾಣು ತ್ತಿತ್ತು. ಮೈಬಣ್ಣದ ತೆಳು-ರವಿಕೆ, ಎಲ್ಲಿ ಮೊದಲಾಗಿ ಎಲ್ಲಿ ಕೊನೆಗಂಡಿತ್ತೆಂದು ಹೇಳುವುದೇ ಆಗುತ್ತಿರಲಿಲ್ಲ. ಸೆರಗು ನೆಪಮಾತ್ರಕ್ಕೆ ಎಲ್ಲೆಲ್ಲೋ ಹಾರಾಡು ತ್ತಿತ್ತು. ಕೈಗಳಲ್ಲಿ ಕಣಕಣದ ಬಳೆ, ಥಳಥಳದ ಉಂಗುರಗಳು. ಉಗುರು ಬಣ್ಣ. ಮಂಡಿಯಿಂದ ಕೆಳಗೆ ಬರಿದಾದ ಕಾಲುಗಳು, ಕೆಣಕುವುದಕ್ಕಾಗಿಯೆ. ಕತ್ತಿನಲ್ಲಿ ಚಿನ್ನದ ಎರಡೆಳೆಯ ಜೋಮಾಲೆ, ಎದೆಯ ಮಧ್ಯದ ಹಳ್ಳದಲ್ಲಿ ಒಂದಾಗಿ ಸೇರಿತ್ತು. ಸೂಳೆಯರ ಸುಣ್ಣ ಬಣ್ಣ, ದೃಷ್ಟಿಯ ಬಟ್ಟು, ಗುರು ಆಗಲೇ ಕಂಡಿದ್ದ ಚೆಲುವನ್ನು ಮುಟ್ಟಲು ಯತ್ನಿಸಿದ್ದುವು. ಸಫಲವಾದಂತಿ-ರಲಿಲ್ಲ. ಥಳಗುಟ್ಟುವ ಬೆಂಡೋಲೆಗಳಿಂದ ಲೋಲಾಕು ತೂಗಾಡುತ್ತಿದ್ದುವು. ಬಿಗಿದರಳ ಕರಿಗುರುಳ ಜಡೆಮಾಲೆ ಎಡ ಎದೆಯ ಮೇಲೆ ಸರಿದಾಡುತ್ತಿತ್ತು. ಮುಂಗುರುಳು ಅಲೆಯುತ್ತಿತ್ತು. ಒಟ್ಟಿನಲ್ಲಿ, ಗುರು ಸಿನೇಮಾಗಳಲ್ಲಿ ಕಂಡಿದ್ದ ವೇಶ್ಯೆಯ ರೂಪೇ; ವೇಷಭೂಷಣ, ಹಾವಭಾವಗಳೇ. ಅವನು "ಚೆಲುವೆ ಯರಾದ ಹೆಂಗಸರೂ ಹೀಗೇಕೆ ಅಲಂಕಾರ ಮಾಡಿಕೊಳ್ಳುತ್ತಾರೆ ? ವಯ್ಯಾರ

ತೋರಿಸುತ್ತಾರೆ?' ಎಂದುಕೊಂಡ. ಕಮಲೆ ನಸುನಗೆಯನ್ನು ಬೀರುತ್ತ ಬಂದವಳೆ ಗುರುವಿಗೆ ಕೈಮುಗಿದು, ಆವನ ಬಳಿಯಲ್ಲೇ ಕುಳಿತುಕೊಂಡು, ಒಂದಾದ ಮೇಲೊಂದು ಕಾಲುಗಳನ್ನು ನಟನಾಚಾತುರ್ಯದಿಂದ ನೀಡಿ ಅಲ್ಲೇ ಇದ್ದ ಬೆಳ್ಳಿಗೆಜ್ಜೆಗಳ ಗೊಂಚಲನ್ನು ಬಿಗಿದುಕೊಂಡಳು. ಅನಂತರ ಕೈಗೆಜ್ಜೆ ಯನ್ನು ತೆಗೆದುಕೊಂಡು ಬಲದ ಕೈಯನ್ನು ನಂಜಪ್ಪನ ಕಡೆಗೆ ನೀಡಿದಳು. ಆವನು ಹಲ್ಲು ಕಿರಿಯುತ್ತ ಮಣಿಕಟ್ಟಿಗೆ ಕಟ್ಟಿದ. ಗೆಜ್ಜೆ ಹಿಡಿದ ಎಡಗೈ ಯನ್ನು ವಿನ್ಯಾಸ ರೀತಿಯಲ್ಲಿ ಗುರುವಿನ ಕಡೆಗೆ ತಿರುಗಿಸಿದಳು. ಅವನು ಗಂಭೀರವಾಗಿ ಕಟ್ಟಿದ.

ಇಷ್ಟು ಹೊತ್ತಿಗೆ ನೀಲಾಸಾನಿ ತಾಂಬೂಲ ಮದ್ಯಗಳನ್ನು ತಂದಿಟ್ಟು ನಂಜಪ್ಪನ ಬಳಿ ಕುಳಿತಳು. ಮಧುರ ಗಾನ ಮೊದಲಾಯಿತು. ಮದ್ಯವಿನಿ ಯೋಗವೇ ಮೊದಲನೆಯ ನರ್ತನವಾಯ್ತು. ಈ ಮೂಲಕವೇ ಎಲ್ಲರಿಗೂ ಆತಿಥ್ಯವಾಯಿತು. ಗುರುವಿನ ಬಟ್ಟಲು ಹಾಗೇ ಉಳಿಯಿತು. ನಂಜಪ್ಪ ಮೂರು ನಾಲ್ಕು ಸಲ ಮದ್ಯವನ್ನು ಸೀಸೆಯಿಂದ ಬಗ್ಗಿಸಿಕೊಂಡ. ಇವನ ಕಡೆಗೂ ಕಣ್ಣು ಹೊಡೆದ. ಪ್ರಯೋಜನವಾಗಲಿಲ್ಲ. ಗುರು ಈ ನರ್ತನ ಕಲಾಕೌಶಲ್ಯವನ್ನು ಕಂಡು ಸಂತೋಷಿಸಿದ. ಆವನ ಮುಖದಲ್ಲಿ ಗೆಲುವೂ ಕಂಡಿತು. ನಂಜಪ್ಪ ಮತ್ತು ಇತರರು ಕೈತಟ್ಟಿಯೇ ಪ್ರಶಂಸಿಸಿದರು. ಮುಂದೆ ಆರತಿಯ ನರ್ತನ, ನವಿಲು ನರ್ತನ, ಹಂಸನರ್ತನ, ನಾಗನರ್ತನ, ಹೀಗೆ ಎಷ್ಟೋ ಆದುವು. ಕಡೆಕಡೆಗಂತೂ ಗುರು ಇದರಲ್ಲೇ ಮುಳುಗಿಹೋದ. ಇಷ್ಟು ಕಾಲಕ್ಕೆ ಈಗ—ಈ ಗಳಿಗೆಗಳಲ್ಲಿ ಆವನ ಮನಸ್ಸು ಶಾಂತಿ ಉಲ್ಲಾಸ ಗಳಿಂದ ನಲಿಯಿತು. ಕಮಲಾಸಾನಿ ಗಾಯನರೂಪದಲ್ಲಿ ಪ್ರೇಮಗೀತಗಳನ್ನು ಗುರುವಿಗೇ ಅರ್ಪಿಸಿದಳು, ನರ್ತನರೂಪವಾಗಿ ಆವನ ಬಳಿ ಸುಳಿದು ಮೈ- ಸೋಂಕಿದಳು, ಕೈ ಸೆಳೆದಳು. ಗುರುವಿಗೆ ತಾನು ವೈ ಮನಗಳಲ್ಲಿಯೂ ಅವ- ಳನ್ನು ಸಮೀಪಿಸುತ್ತಿದ್ದಂತೆ ಭಾಸವಾಯಿತು, ಭ್ರಾಂತಿಯಾಯಿತು.

ಗಾಯನ, ನರ್ತನ ಮುಗಿಯಿತು ವಾದ್ಯ ಮೇಳದವರು ಗುರುವಿಗೆ ನಮಸ್ಕರಿಸಿ ಮುಂಬಾಗಿಲಿನಿಂದಲೇ ಹೊರಟುಹೋದರು. ನೀಲಾಸಾನಿ ಗುರು ವಿಗೆ ತನ್ನ ಸಂತೋಷ ಕೃತಜ್ಞತೆಗಳನ್ನು ಸಮರ್ಪಿಸಿ, ಹೀಗೆ ಬಂದು ಭೇಟಿ ಕೊಟ್ಟು ವಿಶ್ವಾಸ ಮನ್ನಣೆಗಳನ್ನು ತೋರಿಸಿದುದಕ್ಕಾಗಿ ವಂದಿಸಿ “ನಾವು

ತಮ್ಮ ಗುಲಾಮರು; ನಮ್ಮ ಸೇವೆಯನ್ನು ಸ್ವೀಕರಿಸುತ್ತಿರಬೇಕು" ಎಂದು ಹೇಳಿ, ಪಕ್ಕದಲ್ಲಿದ್ದ ಮಲಗುವ ಕೋಣೆಯ ಬಾಗಿಲನ್ನು ತೆಗೆದು ಹಾಗೇ ಬಿಟ್ಟು, ಆ ಮೂಲಕವೇ ಹಾಯ್ದು ಹೋಗಿ, ಬೇರೆ ಕಡೆಯ ಬಾಗಿಲನ್ನು ಹಾಕಿಕೊಂಡಳು. ನಂಜಪ್ಪ ಎದ್ದು "ಸ್ವಲ್ಪ ವಿಚಾರಿಸಿಕೊಂಡು ಬರ್ತೀನಿ—ಸ್ವಲ್ಪ ಹೊತ್ತಿನ ಮೇಲೆ" ಎನ್ನುತ್ತ, ಮುಂಬಾಗಿಲಿಂದಲೇ ಹೋದ. ಇದು ತಮ್ಮಿಬ್ಬರನ್ನೇ ಬಿಟ್ಟು ಹೋಗುವುದಕ್ಕೆ ಎಂಬುದು ಗುರುವಿಗೆ ಗೊತ್ತಾಯಿತು. ಕೊಂಚ ಸಂಕೋಚವೂ ಆಯಿತು. ಕಮಲಾಸಾನಿ ಕ್ಷಣಕಾಲ ಮೌನದಿಂದಿದ್ದಳು, ಎರಡು ಅಡಿ ದೂರದಲ್ಲಿದ್ದಳು. ಗಂಡಸರೇ ಮುಂದೆ ಬಂದು ಮಾತನಾಡಿಸಿ ಮುದ್ದಿಸಿದ ರೂಢಿ ಅವಳಿಗೆ. ಗುರು ದೂರದಲ್ಲೇ ಇದ್ದುದು ಅವಳಿಗೆ ಸೋಜಿಗವೆನ್ನಿಸಿತು. "ಹೊಸ ಅನುಭವವಿರಬೇಕು" ಎಂದುಕೊಂಡು ನಸುನಕ್ಕು ತಾನೇ ಮುಂದುವರಿದು ಹತ್ತಿರ ಸರಿದು, ಗೆಜ್ಜೆಯ ಕೈಯನ್ನು ನೀಡಿ "ಸ್ವಲ್ಪ ಬಿಚ್ಚುತ್ತೀರಾ?" ಎಂದು ಬಿನ್ನಾಣದಿಂದ ಕೇಳಿದಳು. ಗುರು ಬಿಚ್ಚಿದ. ಅವಳು ಕೈಯನ್ನು ಇನ್ನೂ ಕ್ಷಣಕಾಲ ಹಾಗೇ ನೀಡಿದ್ದು, ಹಿಂದಕ್ಕೆ ತೆಗೆದುಕೊಂಡಳು. ಅವಳ ಹುಬ್ಬುಗಳು ಸ್ವಲ್ಪವೇ ಹತ್ತಿರವಾಗಿ ಮತ್ತೆ ಸರಿದುಕೊಂಡವು. ಅವಳಿಗೆ ಕೊಂಚ ಕಿರಿಕಿರಿಯಾಯಿತು. "ಥೂ, ಹಾಳು ಬಿಗಿ" ಎಂದು ರವಿಕೆಯ ಒಂದು ಗುಂಡಿಯನ್ನು ಕಿತ್ತಂತೆ ಬಿಚ್ಚಿದಳು "ಹುಂ, ಈ ಜಡೆಯೊಂದು" ಎಂದು ಅದನ್ನು ಹಿಂದಕ್ಕೆ ಹಾಕುತ್ತ ಅದರ ತುದಿಯನ್ನು ಅವನ ಕೆನ್ನೆಗೆ ಸೋಕಿಸಿದಳು. ಜಡೆ ಹಿಡಿದು ಸೆಳೆದುಕೊಂಡು ತನ್ನನ್ನು ಆಲಂಗಿಸಿ ಮುತ್ತಿಡಬೇಕೆಂದು ಅವಳು ನಿರೀಕ್ಷಿಸಿದ್ದರೆ ಅವಳಿಗೆ ಆಶಾಭಂಗ ಕಾದಿತ್ತು. ಗುರು ಇನ್ನೂ ಕದಲಲಿಲ್ಲ. ತುಟಿ ಎರಡು ಮಾಡಲಿಲ್ಲ. ಅವಳು ಇನ್ನೂ ತೀರ ಹತ್ತಿರಕ್ಕೆ ಸರಿದು, ಮದ್ಯದ ಬಿಸಿಯುಸಿರನ್ನು ಅವನ ಕೆನ್ನೆಯ ಮೇಲೆ ಆಡಿಸುತ್ತ, ಆಸೆಯ ಕಣ್ಣಿನಿಂದ ಅವನ ದೃಷ್ಟಿಯನ್ನು ಹಿಡಿದು "ಏನು ಇಷ್ಟೊಂದು ಚಿಂತೆ?" ಎಂದು ಮಾತನ್ನೇ ಮೊದಲು ಮಾಡಿದಳು.

"ಏನೂ ಇಲ್ಲ" ಅಂದ ಗುರು.

"ಮತ್ತೆ ಪ್ರಸನ್ನರಾಗಿಲ್ಲವಲ್ಲ?"

"ಇಲ್ಲವಲ್ಲ."

ಅವಳು ಆಕರ್ಷಣೀಯವಾಗಿ ನಕ್ಕಳು. ಆದರೆ ಅದೂ ಜವಾಬನ್ನು ತರಲಿಲ್ಲ. ಕಮಲಾಸಾನಿ ತೀಕ್ಷ್ಣವಾಗಿ ಒಂದು ಕ್ಷಣ ಯೋಚಿಸಿದಳು.

"ಮದ್ಯ ಯಾಕೆ ಹಾಗೇ ಬಿಟ್ಟಿರಿ? ನಾನೇ ಕುಡಿಸಬೇಕೆ?" ಎಂದು ನಕ್ಕು ತುಂಬಿದ ಬಟ್ಟಲನ್ನು ಅವನ ತುಟಿಯ ಹತ್ತಿರಕ್ಕೆ ತಂದಳು.

"ಬೇಡ. ಅಗತ್ಯವಿಲ್ಲ" ಅವನು ಅವಳ ಕೈಯನ್ನು ಹಿಡಿದು ಬಟ್ಟಲನ್ನು ದೂರ ಮಾಡಿದನು. ಆಗ ಅಷ್ಟು ಮದ್ಯ ಅವನ ಮೇಲೆ ನಾಲ್ಕು ತೊಟ್ಟು ಬಿದ್ದಿತು.

"ಅಗತ್ಯ! ಏನು ಅಗತ್ಯ? ಎಲ್ಲ ಸುಖಕ್ಕಾಗಿ-ಇಲ್ಲಿ! ಹ್ಹ!"

"ಅಭ್ಯಾಸವಿಲ್ಲ."

"ಅಭ್ಯಾಸ ಮಾಡಿಕೊಂಡರೆ ತಾನೆ ಎಲ್ಲ ಆಗೋದು. ಕೊಳ್ಳಿ ಸ್ವಲ್ಪ." ಒತ್ತಾಯಪಡಿಸಿದಳು. ಅವನು ತಲೆಯಾಡಿಸಿದ. "ತಮ್ಮ ಪ್ರಸಾದ!" ಎಂದು ಕಡೆಗೆ ಅವಳೇ ಅದನ್ನು ಕುಡಿದಳು.

ಇಂಥ ಮಂಕನ ಮುಂದೆ ಏನು ಮಾಡುವುದೆಂಬುದು ಅವಳಿಗೆ ಪ್ರಶ್ನೆಯಾಯಿತು. ಹೊಸ ಸನ್ನಿವೇಶ!

"ನರ್ತನ ಚೆನ್ನಾಗಿತ್ತೆ?" ಎಂದು ಇನ್ನೊಂದು ವಿಧದ ಧಾಳಿಯನ್ನು ಮೊದಲು ಮಾಡಿದಳು.

"ಹುಂ" ಗುರು ಒಂದೇ ಮಾತಿನಲ್ಲಿ ಮೃದುವಾದ ಮುಖಮುದ್ರೆಯಿಂದಲೇ ಉತ್ತರ ಕೊಟ್ಟ.

ಇದು ಅವಳಿಗೆ ತಣ್ಣೀರನ್ನು ಎರಚಿದಂತಾಯಿತು. ಒಳಗೆ ಸಿಟ್ಟೆದ್ದಿತು. ತಿರಸ್ಕಾರವುಂಟಾಯಿತು. "ಇವನಿಗೇನು ಸಾಹುಕಾರನೆಂದು ಜಂಭವೋ? ನಾನೇನು ಕಾಣೆನೆ? ಅಥವ ಶುದ್ಧ ಷಂಢನೋ—ಈ ಸಿರಿಸುಖದಲ್ಲಿ ಮುಳುಗಿದವರ ಹಾಗೆ, ಛಿ!" ಎಂದುಕೊಂಡಳು. ಆದರೆ ಅವನ ದೃಷ್ಟಿಯ ಊರಿಯನ್ನು ನೋಡಿದಾಗ ಅದು ಸುಳ್ಳೆಂದೆನಿಸಿತು. ಅವನ ಗಾಂಭೀರ್ಯವೇ ಶಕ್ತಿಯ ಬೆಟ್ಟದಂತೆ ಕಂಡಿತು. ಇನ್ನೊಂದು ಕ್ಷಣದಲ್ಲಿ "ಇಲ್ಲವೇ, ನನ್ನನ್ನು ಪರೀಕ್ಷೆ ಮಾಡೋದಕ್ಕೆ, ತನ್ನನ್ನೇ ಪರೀಕ್ಷೆ ಮಾಡಿಕೊಳ್ಳೋದಕ್ಕೆ ಬಂದ ತಪಸ್ವಿಯೊ, ಸನ್ಯಾಸಿಯೋ" ಎಂದು ಭ್ರಾಂತಳಾದಳು, ಸ್ವಲ್ಪ ಭಯವನ್ನೂ ಹೊಂದಿದಳು. ಆದರೆ ಈ ಯೋಚನೆ ಕೂಡಲೇ ಮಾಯವಾಯಿತು. "ಇಲ್ಲ,

ಕ್ರಮೇಣ ದಾರಿಗೆ ತರಬೇಕು. ಬರುತ್ತಾರೆ—ನನ್ನ ಮುಂದೆ ಎಷ್ಟು ಕಾಲ ಹೀಗಿದ್ದಾರು ?" ಎಂದು ತನಗೇ ಉತ್ತೇಜನ ಕೊಟ್ಟುಕೊಂಳು.

"ಯಾವ ನರ್ತನ ತುಂಬ ಚೆನ್ನಾಗಿತ್ತು ?"

"ಎಲ್ಲವೂ."

"ನಾಗನರ್ತನ ?" ಈಗ ಅವಳ ಕೆನ್ನೆ ಅವನ ಭುಜದ ಮೇಲೆ ಒರಗಿತ್ತು.

"ಬಹಳ ಚೆನ್ನಾಗಿತ್ತು."

"ಅದು ಪೂರ್ತಿಯಾಗಲಿಲ್ಲ—ಶೋಭಿಸಲಿಲ್ಲ."

"ಯಾಕೆ ?"

"ಹೊಸ ಪರಿಚಯ ಅಂತ ಹೆದರಿದೆ. ಇಲ್ಲದಿದ್ದರೆ ಹೀಗೆ ತೋಳುಗಳನ್ನು ಕತ್ತಿನ ಸುತ್ತ ಬಳಸಬೇಕಾಗಿತ್ತು—ಹಾವು ಸುತ್ತಿದಂತೆ, ಹೀಗೆ ಹತ್ತಿರ ಬರುವ ವಿನ್ಯಾಸ ತೋರಿಸಬೇಕಾಗಿತ್ತು– ಹೆಡೆ ಬಿಟ್ಟು ಆಡಿದ ಹಾಗೆ, ಹೀಗೆ ನೋಟವನ್ನು ಬೆರೆಸಬೇಕಾಗಿತ್ತು—ಹಾವಿನ ನೋಟದಂತೆ" ಎಂದು ಹೇಳುತ್ತ ಹೇಳುತ್ತ ಮಾತಿಗೆ ಅನುಗುಣವಾಗಿ ತನ್ನೆರಡು ತೋಳುಗಳಿಂದಲೂ ಅವನ ಕೊರಳನ್ನು ಬಂಧಿಸಿದಳು, ಮುಖವನ್ನು ತೀರ ಹತ್ತಿರಕ್ಕೆ ತಂದು ಇನ್ನೇನು ತುಟಿ ತಟಿಗೆ ಸೋಂಕುವಂತೆ ನಿಲ್ಲಿಸಿದಳು, ಅತಿ ಆಕರ್ಷಣೆಯ ನಸುನಗೆಯ ನೋಟವನ್ನು ಬೀರಿದಳು. ಅವಳ ಎದೆಬಡಿತ ಇವನಿಗೆ ಕೇಳಿಸುತ್ತಿತ್ತು, ಆದರ ಪರಿಳಿತ ಇವನನ್ನು ಮುಟ್ಟಿ ಮುಟ್ಟಿ ಹೋಗುತ್ತಿತ್ತು. ಹೆಂಗಸಾದವಳು ಸೂಳೆಯಾದರೂ, ಇನ್ನೆಷ್ಟು ಮುಂದೆ ಹೋದಾಳು ? ಕಮಾಲಾಸಾನಿ ಈ 'ವಿನ್ಯಾಸ'ದಲ್ಲಿ ಕ್ಷಣಕಾಲವಿದ್ದಳು. ಅವನ ವ್ಯಥೆಯ, ಕನಿಕರದ, ದೃಷ್ಟಿಯನ್ನು ಕಂಡಳು. ಮರುಕ್ಷಣದಲ್ಲಿ ಗಾಳಿ ಹೋದ ಬಲೂನಿನಂತೆ, ಉರಿದು ಹೋದ ಕಾಮನಂತೆ ಕುಸಿದುಬಿದ್ದಳು. ಭಂಗವಾದ ಮುಖವನ್ನು—ಲಜ್ಜೆಯಿಂದ, ಹೀನಾಯದಿಂದ, ಕೆಂಪೇರಿದ ಮುಖವನ್ನು—ಅವನ ತೊಡೆಯ ಮೇಲೆ ಮೊಗುಚಿ ಮುಚ್ಚಿಕೊಂಡಳು, ಅವಳ ಎಡದ ಕೈ ಅವನ ಬಲಭುಜದ ಮೇಲೂ, ಬಲದ ಕೈ ಎಡದ ತೊಡೆಯ ಮೇಲೂ ಸತ್ತಂತೆ ಬಿದ್ದುಕೊಂಡವು. ಅವಳ ಕಂಠದಿಂದ ಅಳು ಬಿಕ್ಕಿತು. ಕಣ್ಣೀರು ತೊಡೆಯನ್ನು ತೋಯಿಸಿತು. ಆ ಗಳಿಗೆಯ ಪೂರ್ಣ ಸೋಲಿನಲ್ಲಿ ಅವಳಲ್ಲಿದ್ದ ಅಗ್ಗತನವೆಲ್ಲ ಉರಿದುಹೋಯಿತು.

"ಅಯ್ಯೋ..ಇದಕ್ಕೆ..ಇಷ್ಟಕ್ಕೆ..ಯಾಕೆ ಬಂದಿರಿ..ಇಲ್ಲಿ? ಅವಮಾನ ಮಾಡೋದಕ್ಕೆ, ನೋಯಿಸೋದಕ್ಕೆ........" ಸ್ವಲ್ಪ ಕಾಲದ ಮೇಲೆ ತಡೆ ತಡೆದು ಹೇಳಿದಳು.

ಮೆಲ್ಲಗೆ ಸದ್ದಿಲ್ಲದೆ ಮೃದುವಾಗಿ ಅವಳ ಎರಡು ತೋಳುಗಳನ್ನೂ ಹಿಡಿದು ಅವಳನ್ನು ಗುರು ಮೇಲಕ್ಕೆತ್ತಿದ ಅವಳು ಇನ್ನೂ ಮುಖವನ್ನು ತೋರಿಸಲಾರದೆ ಅವನ ಕಡೆ ನೋಡಲಾರದೆ ತನ್ನ ತೋಳಿನಲ್ಲೇ ಮುಖ ವನ್ನು ಮರೆಸಿಕೊಂಡಳು.

"ಕಮಲಾ!"

ಈ ಸವಿಸ್ವರದ ಕೂಗು ಅವಳನ್ನು ತಟ್ಟನೆ ಅವನ ಕಡೆಗೆ ತಿರಿಗಿಸಿತು. ಆಶ್ಚರ್ಯದಿಂದ ಅವನ ಕಡೆ ನೋಡಿದಳು. ವಿಟವರ್ಗದಲ್ಲಿ ಒಬ್ಬಿಬ್ಬರನ್ನು ಬಿಟ್ಟು ಯಾರೂ ಅವಳನ್ನು ಹೆಸರು ಹಿಡಿದೆ ಕೂಗಿರಲಿಲ್ಲ. ಅವರಿಗೆ ಈ ಕೂಗು ಯಾಕೆ, ಯಾವ ಮಾತು ಕತೆಗಳ ಆವಶ್ಯಕವೂ ಅಷ್ಟಾಗಿ ತೋರು ತ್ತಲೇ ಇರಲಿಲ್ಲ. ಕೆಲವರು 'ಲೇ' 'ಹೇ' ಎಂದದ್ದುಂಟು. ಹೆಸರಿನಿಂದ ಒಬ್ಬಿಬ್ಬರು ಕರೆದಾಗಲೂ ಅದರಲ್ಲಿ ಯಾವ ಭಾವನೆಯೂ ಕೂಡಿರಲಿಲ್ಲ. ಕೇವಲ ಅನುಕೂಲದ ಕರೆ. ಹುಡುಗತನದಲ್ಲಿ ಆಗಾಗ, ಈಚೆಗೆ ಯಾವಾ ಗಲೋ ಒಂದೊಂದು ಬಾರಿ ತನ್ನ ತಾಯಿಯ ಕರೆ ಮಾತ್ರ ಈ ರೀತಿ ಕೇಳಿ ಸಿತ್ತು. ಅವಳಿಗೆ ಗಂಡಾದವನು, ಅದೂ ವಿಟನಾಗಿ ಬಂದವನು ಈ ರೀತಿಯ ಮಧುರ ಸ್ವರದಿಂದ ಕರೆಯಬಲ್ಲನೆ? ಸಾಧ್ಯವೆ? ಎನ್ನಿಸಿತು. ಏನೊಂದೂ ಉತ್ತರ ಕೊಡದೆ ಬೆರಗಾಗಿಯೇ ನೋಡುತ್ತಿದ್ದಳು.

"ಏನು, ಎಲ್ಲರಲ್ಲೂ ಹೀಗೆ ನಡೆದುಕೊಳ್ಳಬೇಕೆ?" ಅವನ ಮಾತಿನಲ್ಲಿ ವ್ಯಥೆ ತುಂಬಿ ಹರಿಯುತ್ತಿತ್ತು. ಆದರೆ ಈ ಪ್ರಶ್ನೆ ಅವಳ ಹಿಂದಿನ ದುಃಖ ಲಜ್ಜೆಗಳನ್ನು ಎಚ್ಚರಿಸಿತು. ಅವಳು ಧ್ವನಿಯನ್ನು, ದೃಷ್ಟಿಯನ್ನು ಮರೆತಳು. ಇದರಿಂದಲೇ ತನ್ನ ಅಭಿಮಾನವನ್ನು ಕೆರಳಿಸಿಕೊಂಡಳು.

"ಅವರು ಯಾರೂ ಕಠಿಣರಲ್ಲ; ನಾನು ಅವರಿಗೆ ತೃಣವಲ್ಲ. ಅವರೇ ಮುಂಬರಿದು ನಡೆದುಕೊಳ್ಳುತ್ತಾರೆ. ನಿಮ್ಮ ಹಾಗಲ್ಲ. ವಿಚಿತ್ರ............" ನಿಷ್ಠುರದಿಂದ ಹೇಳಿದವಳೆ ನಾಲಿಗೆ ಕಚ್ಚಿಕೊಂಡಳು. ಈತನಿಗೆ ಪ್ರೇಮವಿಲ್ಲವೆ? ಎಂಬ ಪ್ರಶ್ನೆ ಕೆನ್ನೆಗೆ ಹೊಡೆದಂತೆ ಅವಳನ್ನು ತಡೆದಿದ್ದಿತು.

" ನಂಗಾದರೂ ಹೀಗೆ ತಡೆದು ನಡೆಯೋದು ಎಷ್ಟು ಕಷ್ಟದಿಂದ ಸಾಧ್ಯವಾಗಿದೆ ಬಲ್ಲೆಯಾ? ನಂಗೇ ಗೊತ್ತು. ಮುರಿದು ಬೀಳುವ ಗಳಿಗೆಯೂ ಹತ್ತಿರ ಬಂದಿತ್ತು."

" ಆಂ! " ಅವಳು ಆಶ್ಚರ್ಯದಿಂದ ಅವನನ್ನು ದಿಟ್ಟಿಸಿದಳು.

" ಹುಂ, ನಿಜ. ಆದರೆ ಉದ್ದೇಶ, ಹಿಂದಿನ ನಿರ್ಧರ, ಇವು ಸಹಾಯ ಮಾಡಿದುವು" ಅವಳಿಗೆ ಈ ಮಾತುಗಳು ಅರ್ಥವಾಗಲಿಲ್ಲ. ಸುಮ್ಮನಿದ್ದಳು.

" ಈ ಜೀವನ ನಿಂಗೆ ಹಿತವಾಗಿದೆಯೆ? "

" ಯಾಕೆ? ಏನಾಗಿದೆ? " ಅವಳಿಗೆ ಪ್ರಶ್ನೆಯೇ ಅರ್ಥವಾಗಲಿಲ್ಲ.

" ಬೇಸರ, ಲಜ್ಜೆ, ಆಗೋದಿಲ್ಲವೆ? "

" ಇದರಲ್ಲೇನು ಬೇಸರ? ಜನ ಹಣ ಕೊಡ್ತಾರೆ, ನಾನು ಸುಖ ಕೊಡ್ತೀನಿ—ಎಲ್ಲ ವ್ಯಾಪಾರದಂತೇ. ಲಜ್ಜೆ ಬರೋದಕ್ಕೆ ನಿಮ್ಮ ಹಾಗೆ ಯಾರು ನಡೆದುಕೋತಾರೆ? ಇತರರ ಹತ್ತಿರ ರಾಣಿಯ ಹಾಗೆ ನಡೆದು ಕೋತೀನಿ - ರಾಣಿಯ ಹಾಗೆ. ನನ್ನ ಗುಲಾಮರ ಹಾಗೆ ಅವರು ನಡೆದು ಕೋತಾರೆ ಗೊತ್ತೆ? ಅವರೆಲ್ಲ ರಸಿಕರು. ಸೌಂದರ್ಯವನ್ನು ಪ್ರೀತಿಸಬಲ್ಲರು" ಮುಗ್ಧೆಯ ಹೆಮ್ಮೆಯಿಂದ ತನ್ನ ಅಭಿಮಾನದ ಮೇಲೆಯೇ ಇನ್ನೂ ಕಣ್ಣಿಟ್ಟು ಕೊಂಡು ಸೂಕ್ಷ್ಮವಾಗಿ ಅವನನ್ನು ಮೂದಲಿಸಿದಳು. ಸೇಡಿನ ಆಸೆ.

" ನಿಜ, ಮನುಷ್ಯಸಂಬಂಧ ಮುಖ್ಯವಾಗಿ ಎಲ್ಲ ಕಡೆಯಲ್ಲೂ ವ್ಯಾಪಾರವೇ. ಹಾಗಿದ್ದ ಕಡೆಯೂ ಅದರ ಅರಿವಿರುವುದೇ ಇಲ್ಲ. ದೊಡ್ಡ ಮಾತು, ಇಲ್ಲದ ಭಾವನೆಗಳಿಂದ ಆ ಕ್ರಯ ಮನೋಧರ್ಮವನ್ನು ಮುಚ್ಚುತ್ತೀವಿ. ದೊಡ್ಡವರಲ್ಲೇ, ಸಂಸ್ಕೃತರಲ್ಲೇ ಹೀಗಿರುವಾಗ ನಿನಗೆ ಮನುಷ್ಯಸಂಬಂಧಕ್ಕೂ ವ್ಯಾಪಾರಕ್ಕೂ ವ್ಯತ್ಯಾಸ ಹೇಗೆ ಕಾಣಬೇಕು, ಪಾಪ! ನಾನು ಹೇಳಿದ ಲಜ್ಜೆ ಈ ಸಂಬಂಧಕ್ಕೆ ಸೇರಿದ್ದು. ನಾನೂ ಸೌಂದರ್ಯವನ್ನು ಪ್ರೀತಿಸಬಲ್ಲೆ. ಸೌಂದರ್ಯೋಪಾಸಕನೇ. ಆದರೆ ಲಜ್ಜೆಯಿರದ ಕಡೆ ಸೌಂದರ್ಯವಿರುತ್ತೇ?"

" ನಾನು ಸುಂದರಿ ಅಲ್ಲವೆ?'' ಅವಳಿಗೆ ಬಾಕಿಯದೇನೂ ತಿಳಿಯಲಿಲ್ಲ.

" ಈಗ ಸುಂದರಿಯಾಗಿ ಕಾಣುತ್ತೀಯೆ" ಈಗ ಎನ್ನುವುದನ್ನು ಒತ್ತಿದ. ಆದರೆ ಅವಳ ಗಮನಕ್ಕೆ ಬರಲಿಲ್ಲ.

" ಹಾಗಾದರೆ ನನ್ನ ಮುಟ್ಟಬಾರದೆ? "

" ಈಗ ಮುಟ್ಟಿಲ್ಲವೆ ? ''

" ಹಾಗಲ್ಲ. ಪ್ರೇಮಿಯ ಹಾಗೆ, ತೋಳುಗಳಲ್ಲಿ............" ಇನ್ನೂ ಅಭಿಮಾನದ ಕಿಚ್ಚು ಆರಿರಲಿಲ್ಲ. ಸೋಲನ್ನು ತನಗೆ ತಾನೇ ಒಪ್ಪಿಕೊಳ್ಳಲು ಮನಸ್ಸಿಲ್ಲ. ಜಯಕ್ಕೆ ತಿರಿಗಿಸಬೇಕೆಂಬ ಮಹದಾಸೆ; ಹಾಗೂ ಏನೋ ವಿಶೇಷ ಆಕರ್ಷಣೆ, ಈ ಶಕ್ತಿಯ ಗಂಡಿನಲ್ಲಿ.

" ಇಲ್ಲ. ಈಗಲೇ ಇಲ್ಲ. "

" ಈಗಲೇ ಇಲ್ಲ ! "

" ಬೆಲೆ ಕೊಡದ ಸುಖಕ್ಕೆ ಏನು ಬೆಲೆ? ಅಧಿಕಾರ ಎಲ್ಲಿಯದು ? "

" ಅದಕ್ಕೇನು-ಬೆಲೆಗೆ; ಆಮೇಲೆ ಆಯ್ತು. ಎಲ್ಲರ ವಿಧವೂ ಹಾಗೇ-"

" ನಂದು ವಿಶೇಷ—ಆಗಬೇಕು. ಆ ರೀತಿಯ ಮಾತಲ್ಲ, ನಾನು ಹೇಳಿದ್ದು. "

" ಮತ್ತೆ ? ಇನ್ನು ಯಾವ ರೀತಿ ? ಯಾವಾಗ........"

" ಮದುವೆಯಾದ ಮೇಲೆ........"

" ಆಂ ! "

" ಹುಂ ಮದುವೆಯ ಸಂಬಂಧ........"

" ಮದುವೆ! ನಂಗೆ ಮದುವೆ! ಹುಚ್ಚೂ ಇದೆಯೆ, ನಿಮಗೆ? ಯಾರೋ ಅಂದಿದ್ದರು. ''

" ಯಾಕೆ ? "

" ಸೂಳೆಗೆ ಮದುವೆ ! ಯಾರು ಕಂಡಿದಾರೆ ? ''

" ಏನು ತಪ್ಪು ? "

" ಸೂಳೆಯಾದದ್ದು. "

" ಬೇಕಾಗಿ ಆದೆಯಾ ? ''

" ನಮ್ಮ ಕುಲವೇ ಅದು, ಕಸಬೇ ಅದು. "

" ಅದು ನಿನ್ನ ತಪ್ಪಲ್ಲ ಅಪರಾಧವಲ್ಲ, ತನ್ನ ಸುಖಕ್ಕೆ ಬಲಿ ಮಾಡಿ ಕೊಂಡ ಸಮಾಜದ್ದು. "

" ಅಯ್ಯೋ, ವಿಚಿತ್ರ ! ಹೀಗೆ ಕೇಳೇ ಇರಲಿಲ್ಲ.''

" ಹೌದು, ಜನರು ಹೀಗೆ ಯೋಚಿಸೋದೂ ಇಲ್ಲ. ಸ್ವಂತ ತಪ್ಪನ್ನು ಕಂಡುಕೊಂಡರೆ ಸ್ವರ್ಗವಾಗುತ್ತೆ—ಈ ಭೂಮಿ. "

ಕಮಲೆ ಮಾತಾಡಲಿಲ್ಲ. ತೀಕ್ಷ್ಣವಾಗಿ ಯೋಚಿಸುತ್ತಿದ್ದಳು. ಬಾಳಿನಲ್ಲಿ ಮೊದಲನೆಯ ಬಾರಿಗೆ ಈ ಗಳಿಗೆಯಲ್ಲಿ ಬೆಳಕಿನ ಕಿರಣವೊಂದು ಅವಳ ಕತ್ತಲು ತುಂಬಿದ ಮೆದುಳನ್ನು ಹಾದಿತ್ತು; ನಿಜವಾದ ಜಗತ್ತನ್ನು ತೋರಿತ್ತು.

"ಹಾಗಾದರೆ ನನ್ನದಲ್ಲವೆ ದೋಷ? ಇಷ್ಟು ಕೆಟ್ಟ...." ಕಡೆಗೆ ಅನುಮಾನಿಸುತ್ತ ಕೇಳಿದಳು.

"ಇಲ್ಲ. ನೀನು ಶುದ್ಧಳು."

"ಶುದ್ಧಳು!....ನಾನು ಶುದ್ಧಳು!" ಕಮಲೆ ಕೂಗಿಕೊಂಡುಬಿಟ್ಟಳು. ಅವಳ ಕಣ್ಣು ಕುಣಿದಾಡಿತು. ಎದೆಯುಬ್ಬಿತು. ಎಂದೂ ಅನುಭವಿಸದಿದ್ದ ಹೊಸ ವಿಧದ ಹೆಮ್ಮೆಯಿಂದ ಎದೆಯುಬ್ಬಿತು. ಈವರೆಗೆ ಈ ಪ್ರಶ್ನೆಯೂ ಅವಳಿಗೆ ಹೊಳೆದಿರಲಿಲ್ಲ. ಸಮಾಜದ ಕೀಳು ಅಂತಸ್ತಿನಲ್ಲಿ ಅನಿವಾರ್ಯವಾಗಿ ಹುಟ್ಟಿ ಅದರಲ್ಲೇ ಸಹಜವಾಗಿ ಬಾಳುತ್ತಿರುವುದು ಅವಳ ಭಾವನೆಯಾಗಿತ್ತು. "ಈಗ ಈತ ಈ ವಿಚಿತ್ರ ಮನುಷ್ಯ, ಈ ತೇಜಸ್ವಿ, ಈ ಮಹಾನುಭಾವ, ಈ ದಯಾಮಯ ನನ್ನನ್ನು 'ಶುದ್ಧಳು ಅನ್ನುತ್ತಿದ್ದಾನೆ. ಇವನಾದರೂ ಒಬ್ಬ! ಇಂತಹವರು ಇನ್ನೂ ಇರಬಹುದೆ? ನನ್ನ ಅಂತಸ್ತಿನಲ್ಲಿ, ನನ್ನ ಕಸಬಿನಲ್ಲಿ ನನ್ನ ಅಪರಾಧ ಏನೂ ಇಲ್ಲವೆ?" ಎಂದುಕೊಂಡು ಹುಟ್ಟಿದ ಮಗು ಕಣ್ಣು ಬಿಡುವಂತೆ ಅನುಮಾನದಿಂದ ಆನಂದದಿಂದ ಕಣ್ಣು ಬಿಟ್ಟಳು, ನೋಡಿದಳು. "ವಿಶಾಲವಾದ ಜಗತ್ತಿನಲ್ಲಿ ನನಗೂ ಒಂದು ಗೌರವಸ್ಥಾನವಿರಬೇಕು ಹಾಗಾದರೆ. ವಿಧಿ ಹೀಗೆ ಬರೆಯಲಿಲ್ಲ. ಇರಬಹುದೆ ಹೀಗೆ?" ಎಂದು ಮಿಂಚಿನ ವೇಗದಿಂದ ಚಿಂತಿಸಿದಳು. "ಇದು ನಿಜವೇ ನಾನು ನಿಜವಾಗಿಯೂ ಶುದ್ಧಳೆ?" ಎಂದು ಮತ್ತೆ ಮತ್ತೆ ಒತ್ತಿ ಕೇಳಿದಳು.

"ಹೌದು ನಿಜವಾಗಿ. ದೇವರ ದೃಷ್ಟಿಯಲ್ಲಿ ಶುದ್ಧಳು."

"ಆದರೆ ಈ ಜನರೆಲ್ಲ........"

"ಅಶುದ್ಧ! ನಿನ್ನ ಹೀನ ಸ್ಥಿತಿಯನ್ನು ಒಪ್ಪಿಕೊಂಡು ಈ ಹೊಲಸನ್ನು ನಿನ್ನ ಮೇಲೆ ಹೇರಿರೋ ಈ ಕೆಟ್ಟ ಸಮಾಜವೇ ಅಶುದ್ಧ" ಅವನು ತೀರ್ಮಾನ ಹೇಳಿದ. ಅವನ ಮಾತಿನಲ್ಲಿ ಆತ್ಮವಿಶ್ವಾಸವಿತ್ತು, ದಿವ್ಯ ಅಧಿಕಾರವಿತ್ತು. ಕಮಲೆ ನಂಬದಿರಲು ಸಾಧ್ಯವೇ ಇರಲಿಲ್ಲ. ಅವಳ ಸರಳತೆ ಒಂದು ತುದಿಯಿಂದ ಇನ್ನೊಂದಕ್ಕೆ ನಿಮಿಷಾರ್ಧದಲ್ಲಿ ಹಾರಿತು. ಅವಳಿಗೆ ಹಿಂದೆ ಅನುಭವ

ವಿಲ್ಲದ ರೂಢಿಯಾಗದ ಗಾಂಭೀರ್ಯ, ಹೆಮ್ಮೆಗಳು ಅವಳಲ್ಲಿ ಹುಟ್ಟಿ ಮುಚ್ಚಿದುವು. ಬಟ್ಟೆಯೇನು, ಬಗೆಯೇನು, ದೇಹವೇನು, ಅಲ್ಲೇ ಆಗಲೇ ಕೊಳಕು ಸೂಳೆ, ಗೌರವದ ಗರತಿಯಾದಳು. ಅವಳಿಗೆ ಅವನಲ್ಲಿ ಮೊದಲಿದ್ದ ತಿರಸ್ಕಾರ ಭಕ್ತಿಯಾಯಿತು; ಕಾಮ ಪ್ರೇಮವಾಯಿತು; ಸಲಿಗೆ ಅಂಜಿಕೆಯಾಯಿತು.

"ದೇವರೇ!" ಎಂದು ಅವನ ಕಾಲನ್ನು ಎರಡು ಕೈಗಳಿಂದಲೂ ಹಿಡಿದುಕೊಂಡಳು, ಮೇಲೆ ತಲೆಯನ್ನಿಟ್ಟು ಒತ್ತಿದಳು.

"ಇದು ಸರಿಯಲ್ಲ. ಅನಾವಶ್ಯಕ. ನಮ್ಮಲ್ಲಿ ಭೇದವೇನು? ನನ್ನ ಸಂಗಾತಿಯಾಗೋಳು." ಎನ್ನುತ್ತ ಅವಳನ್ನು ಎತ್ತಿದ.

ಸ್ವಲ್ಪಹೊತ್ತು ಇಬ್ಬರ ಮಧ್ಯೆ ಮೌನವಿತ್ತು.

"ನಿಮ್ಮ ಕೈಹಿಡಿಯುವಷ್ಟು ಪುಣ್ಯವಂತೆಯೇ ನಾನು? ಅಲ್ಲ." ಹಿಂದಿನ ದುರಭಿಮಾನವೆಲ್ಲಿ? ಈ ಮಾತಿನ ನಮ್ರತೆಯಲ್ಲಿ?

"ಪುಣ್ಯವೇನು ಅದರಲ್ಲಿ? ನಿಂಗೂ ಆಯ್ಕೆ ಇದೆ – ಇದರಲ್ಲಿ."

"ಛಿ! ಏನು ಮಾತು."

"ನಿಜವಾದ ಸ್ಥಿತಿ. ನಿನ್ನ ಹೀನಾಯ ಇನ್ನು ಮಾಯವಾಗಬೇಕು."

"ಸ್ವಾಮಿ, ಹೀನಾಯ ಹಿಂದಿನ ಮಾತಾಯಿತು. ಒಟ್ಟು ಜಗತ್ತಿನಲ್ಲೇ ತಲೆಯೆತ್ತಿ ನಡೀತೀನಿ, ನಿಮ್ಮ ಶಕ್ತಿ ಬೆಳಕು ಕೊಟ್ಟ ಕಾಲದಿಂದ. ಆದರೆ ನಿಮ್ಮೊಡನೆ ನಿಲ್ಲೋದಕ್ಕೆ ನಂಗೆ ಎಲ್ಲಿಯ ಅರ್ಹತೆ ಎಂದು ಭಯ."

"ಬಿಡು ಭಯ. ನಾವು ಒಂದಾಗೋಣ" ಅವನು ಅಭಯವನ್ನು ಕೊಡುವಂತೆ ಕೈ ನೀಡಿದ. ಅವಳು ಅದನ್ನು ಆಸೆಯಿಂದ ಕೈಜೋಡಿಸುವಂತೆ ಎರಡೂ ಕೈಗಳಲ್ಲೂ ತೆಗೆದುಕೊಂಡು, ಮೃದುವಾಗಿ ಸವರಿದಳು.

ಕೆಲವು ನಿಮಿಷ ಹಾಗೇ ಇದ್ದರು. ಕಮಲ ತಟ್ಟನೆ ಅವನ ಕೈ ಬಿಟ್ಟಳು.

"ಇದೆಲ್ಲ ನನ್ನ ಭ್ರಾಂತಿಯಲ್ಲವೆ?"

"ಏನು, ನಂಬಿಕೆಯಿಲ್ಲವೆ ನಿಂಗೆ?"

"ನಿಮ್ಮಲ್ಲಿ ನಂಬಿಕೆ ಇಡದೆ........"

"ಮತ್ತೆ?"

"ಸಮಾಜ ಒಪ್ಪಬೇಕಲ್ಲ? ನಿಮ್ಮ ತಂದೆ........"

"ಯಾರು ಒಪ್ಪಿದರೇನು ಬಿಟ್ಟರೇನು?"

" ಅದು ಹೇಗೆ ಹಾಗೆ........"

" ಏನು ಹಣ-ಕಾಸು, ಮನೆ ಮಠದ ಯೋಚನೆಯೆ ? "

" ಸ್ವಾಮಿ, ಹೀಗೆ ಕೇಳೋದುಂಟೆ ? ನಂಗೆ ಹೊಸ ಬಾಳನ್ನೇ ಕೊಟ್ಟ ದೀರಿ. ಇನ್ನೇನು ಹೆಚ್ಚಾಗಿ ನಿರೀಕ್ಷಿಸಲಿ? ಇದೇ ಹತ್ತು ಜನ್ಮಕ್ಕೆ ಸಾಲದೆ?"

" ತಪ್ಪಾಯ್ತು. ತಪ್ಪಾಯ್ತು. ಹಾಗಾದರೆ ನನ್ನೊಡನೆ ಜಗತ್ತನ್ನು ಇದಿರಿಸಬಲ್ಲೆಯ ? "

" ಕೇಳಬೇಕೆ ? ಜಗತ್ತಿನ ಯಾವ ಮೂಲೆಗೆ ಬೇಕಾದರೂ ಹೋಗು ತ್ತೀನಿ—ಸಾಯುತ್ತೀನಿ ಬೇಕಾದರೆ—ಸಂತೋಷದಿಂದ."

" ಭಲೆ! ಮತ್ತೇನು ಯೋಚನೆ ? ಹೀಗೇ ಹಿಂದೊಂದು ಬಾರಿ ನನ್ನ ತಂಗಿಯನ್ನು ಕೇಳಿದ್ದೆ. ಆದರೆ ಆ ಸಂದರ್ಭ ಮುಳುಗಿಹೋಯ್ತು. ನಿನ್ನೊಡನೆ ಹೆಚ್ಚಿನ ಅದೃಷ್ಟವನ್ನು ದೇವರು ಕರುಣಿಸಬೇಕು. ನನ್ನ ಪಕ್ಷದಿಂದ ನಾನು ಇದಕ್ಕಾಗಿ—ಈ ಧರ್ಮಕಾರ್ಯಕ್ಕಾಗಿ, ನಿಂಗಾಗಿ ಲೋಕದೊಡನೇ ಹೋರಾಡು ತ್ತೀನಿ. "

ಈ ಮಾತು ಅಮೃತ ಕರೆದಂತಿತ್ತು ಅವಳಿಗೆ. ಮುಖ ಅರಳಿತು. ಬೆರಗುಕಣ್ಣುಗಳಿಂದ ನೋಡುತ್ತ ಮಾತಿನ ಶಾಂತ ಧೈರ್ಯವನ್ನೂ, ಖಂಡಿತ ವನ್ನೂ, ಭರವಸೆಯನ್ನೂ ತಬ್ಬಿಕೊಂಡಳು ಮೆಚ್ಚಿಕೊಂಡಳು. ಇನ್ನಷ್ಟು ಕಾಲ ಇಬ್ಬರೂ ಸುಮ್ಮನಿದ್ದರು.

" ಅಯ್ಯೋ, ಗೊತ್ತಿಲ್ಲದೆ ನಾನು ಹೇಗೆ ನಡೆದುಕೊಂಡೆ ! ಥೂ ! " ಕೈಗಳಿಂದ ಮುಖವನ್ನು ಮುಚ್ಚಿಕೊಂಡಳು.

" ವ್ಯಸನ ಬೇಡ, ನಾಚಿಕೆ ಬೇಡ. ಯಾಕೆ ? "

" ಇಲ್ಲದೆ ಹೇಗೆ. ನೆನೆಸಿಕೊಂಡರೆ ಆ ನಡತೆಗಾಗಿ ಎಂದೆಂದೂ...."

" ಕಮಲಾ ! ಆಗಿನವಳೇ ನೀನು ಈಗ ? ಬೇರೆಯಲ್ಲವೆ ? ಕಮಲಾ ಸಾನಿ ಸತ್ತಳು, ಕಮಲ ಹುಟ್ಟಿದಳು–ಕಮಲಾಸಾನಿಯ ಕೆಸರಿನಲ್ಲಿ, ಅಲ್ಲವೆ ? ಅವಳ ನಡತೆಗೂ ಇವಳ ನಡತೆಗೂ ಏನು ಸಂಬಂಧ ? "

" ನಿಮ್ಮ ಧಾರಾಳತನ ಎಷ್ಟು, ಸ್ವಾಮಿ ! "

" ಇಲ್ಲ, ನಿಜವನ್ನು ಹೇಳುತ್ತಿದೀನಿ ಅಲ್ಲವೆ ? "

" ನಿಜ, ನಂಬಲಾಗದ ನಿಜ. ಈ ಯಕ್ಷಿಣಿ ನಿಮ್ಮದು. "

"ವೇಷ ಹೋಗಿ, ಎದೆ ಮಾತಾಡಿದರೆ ಯಕ್ಷಣಿಯೇನು ಲೆಕ್ಕವಿಲ್ಲ."

ಮನೆಗೆ ಹಿಂತಿರುಗುವಾಗ ನಂಜಪ್ಪ "ಏನಯ್ಯ, ಹೊಸ ಜೀವನವನ್ನು ಕಂಡೆಯಾ ?" ಎಂದು ಕೇಳಿದ.

"ಹೌದು." ಗುರು ತೃಪ್ತಿಯಿಂದ ಹೇಳಿದ.

"ಹೇಗೆ, ಸೊಗಸೋ ?"

"ದಿವ್ಯ." ಗುರು ನಸುನಕ್ಕ. ಎದೆಯಲ್ಲಿ ಸಂತೋಷ ಸುಳಿದಾಡುತ್ತಿತ್ತು.

"ಹೂಂ ! 'ಲಕಿ ಡಾಗ್.' ನನ್ನ ಕಡೆಯೂ ನೋಡೋದಿಲ್ಲ, ಆ ಹೆಣ್ಣು ! ' ನಿಟ್ಟುಸಿರು ಬಿಟ್ಟ.

ಕಮಲೆ ತಾಯಿಯ ಬಳಿ ಹೆಮ್ಮೆ ಆನಂದಗಳಿಂದ ಹೇಳಿಕೊಂಡಾಗ ನೀಲಾಸಾನಿ ಬಹಳ ಹೊತ್ತು ನಂಬದೆಯೇ ಮಗಳನ್ನು ಹುಚ್ಚಿಳೆನ್ನುವಂತೆ ದಿಟ್ಟಿಸಿ ನೋಡಿದಳು. ಕಡೆಗೆ "ನಿಜವಾದರೆ ಒಳ್ಳೇದು ಮಗು. ಅದೃಷ್ಟ ವಂತೆಯೇ ಸರಿ ನೀನು. ಆದರೆ ಹೆಚ್ಚು ಭರವಸೆಯಿಟ್ಟುಕೊಳ್ಳಬೇಡ. ಸಿರಿ-ವಂತರ ಸಹವಾಸ" ಎಂದಳು. ಕಮಲೆ "ಅಮ್ಮ ನೀನು ತಪ್ಪು ತಿಳಿದಿದೀಯೆ. ಅವರಿಗೆ ಅನ್ಯಾಯ ಮಾಡುತ್ತಿದೀಯೆ. ಅವರ ದಿವ್ಯದೃಷ್ಟಿ ನೋಡಿದ್ದರೆ, ಅಮೃತವಾಣಿ ಕೇಳಿದ್ದರೆ ನೀನು ಹೀಗೆನ್ನುತ್ತಿರಲಿಲ್ಲ." ಎಂದು ವಹಿಸಿಕೊಂಡು ಮಾತಾಡಿದಳು. "ಆಗಲಿ, ನನ್ನ ನಲವತ್ತು ವಯಸ್ಸಿನಲ್ಲಿ ಎಂಥೆಂಥವರನ್ನೆಲ್ಲ ಕಂಡಿದೀನಿ. ನಂಬಿ ಮೋಸ ಹೋಗಿದೀನಿ." ಎಂದು ನಿಲಾಸಾನಿ ಎಚ್ಚರಿಸಿ-ದಳು. ಕಮಲೆ "ಅಮ್ಮಾ, ಇವರು ಸಾಮಾನ್ಯ ಮನುಷ್ಯರೇ ಅಲ್ಲ. ದೇವತಾ-ಮನುಷ್ಯ." ಎಂದು ಹೊಗಳಿದಳು. ಕಡೆಗೆ ತಾಯಿ "ಮಗು, ಇವರು ಹೇಗಿದ್ದ ರೇನು? ಜನ ಒಪ್ಪುತ್ತೇ? ಎಂದಿಗೂ ಇಲ್ಲ. ಈ ಮರ್ಯಾದಸ್ಥರು ನಮ್ಮಂಥೋರ ಹಾಳಿಗೆ ಏನಾದರೂ ಇಟ್ಟೇ ಇರ್ತಾರೆ. ದೇವರೇ ಕಾಪಾಡಬೇಕು." ಎಂದು ಅನುಮಾನದಿಂದ ಪೂರ್ತಿ ಮಾಡಿದಳು.

ಇದಾದ ಮೇಲೆ ಗುರು ಕಮಲೆಯ ಮನೆಗೆ ಆಗಾಗ ಬರುತ್ತಿದ್ದ. ಇತರ ಗಿರಾಕಿಗಳ ಹಾಗೆ ರಾತ್ರಿಯ ಕತ್ತಲಲ್ಲಿ, ಮುಖ ಮುಚ್ಚಿಕೊಂಡು ಬರುತ್ತಿರ ಲಿಲ್ಲ. ದಿನದ ಬೆಳಕಿನಲ್ಲಿ ಗೃಹಸ್ಥರ ಮನೆಗೆ ಹೋಗುವಂತೆ ಹೋಗಿ ಕಮಲೆ ಯೊಡನೆ ಮಾತುಕತೆಯಾಡಿ ಬರುತ್ತಿದ್ದ. ಅವರು ತಮ್ಮ ಭವಿಷ್ಯವನ್ನು ಕುರಿತು ಚರ್ಚಿಸುತ್ತ ಕನಸು ಕಾಣುತ್ತಿದ್ದರು. ಈಗ ಕಮಲೆಯ ಉಡೆ ನಡೆ

ಯೆಲ್ಲ ಅವಳ ದೇಹ ಮನಸ್ಸುಗಳಂತೆ ಬದಲಾಯಿಸಿದ್ದುವು. ಇವಳನ್ನು ಹುಡುಕಿಕೊಂಡು ಬಂದ ಹಳೆಯ ಗಿರಾಕಿಗಳು ಹಾಗೆಯೇ ಹಿಂದಿರುಗುತ್ತಿದ್ದರು. ಕ್ರಮೇಣ ಬರುವುದನ್ನೇ ನಿಲ್ಲಿಸಿದರು. ಸಂಸಾರದ ವೆಚ್ಚ ಕಡಿಮೆಯಾಗದಿದ್ದರೂ ಸಂಪಾದನೆ ಹೆಚ್ಚು ಕಡಿಮೆ ನಿಂತೇ ಹೋಗಿತ್ತು. ಮುದಿ ನೀಲಾಸಾನಿಯನ್ನು ಹುಡುಕಿಕೊಂಡು ಬರುತ್ತಿದ್ದವರನ್ನೂ ಕಮಲೆ ನಿಲ್ಲಿಸಿಬಿಟ್ಟಳು. ಇನ್ನು ಮನೆ ಹೇಗೆ ಸಾಗಬೇಕು ? ನೀಲಾಸಾನಿ ಮಗಳಿಗೆ " ಏನು ಮಗು, ನಮ್ಮ ಸಂಪಾದನೆ ಸೊನ್ನೆಯಾಯ್ತು, ನಿಮ್ಮೋರು ಬರ್ತಾರೆ ಹೋಗ್ತಾರೆ ಅಷ್ಟೆ. ನೀನೂ ಕೇಳೋದಿಲ್ಲ, ಅವರೂ ಕೊಡೋದಿಲ್ಲ, ಏನನ್ನೂ. ಹೊಟ್ಟೆಗೇನು ? ಮಾತು-ಕತೆಗಳಿಂದ ತುಂಬಿಕೊಳ್ಳೋದಕ್ಕೆ ಆಗುತ್ತೆ ? ಕೇಳಲೇಬೇಕು." ಎಂದು ಒತ್ತಾಯಪಡಿಸಿದಳು. ಮಗಳು " ಅಮ್ಮಾ, ಅವರು ತಮ್ಮನ್ನೇ ಕೊಟ್ಟುಬಿಟ್ಟಿದಾರೆ. ಇನ್ನೇನು ಬೇಕು ನಮಗೆ? ಹಣ ಕೊಡಿ ಅಂತ ಕೇಳೋದೆ ? ಬೇಕಾದಾಗ ನಮ್ಮನ್ನು ನೋಡಿಕೋತಾರೆ. ನಾನಂತು ಅವರು ಇದ್ದರೆ ಉಪವಾಸದಿಂದ ಇರಬಲ್ಲೆ." ಎಂದಳು. ತಾಯಿ "ಇದೆಲ್ಲ ಹುಡುಗತನ. ಎಷ್ಟು ದಿನ ಸಾಗುತ್ತೆ ? ಹಣ ಕೇಳದಿದ್ದರೆ ನಮಗೆ ಗತಿಯೇನು—ಸೂಳೆಯರಿಗೆ ? " ಎಂದು ಕೇಳಿದಳು. ಕಮಲೆ ತಟ್ಟನೆ " ನಾವು ಸೂಳೆಯರಲ್ಲ " ಎಂದುಬಿಟ್ಟಳು. ತಾಯಿ " ಹಾಗೇ ಆಗಲಿ, ಸಮಯ ನೋಡಿ ಮದುವೆಯ ಮಾತೆತ್ತು. ಮುಂದೆಲ್ಲ ಸರಿಹೋಗುತ್ತೆ. "ಎಂದು ತನ್ನ ಸಲಹೆ ಕೊಟ್ಟಳು. ಕಮಲೆ ಸುಮ್ಮನಿದ್ದಳು.

ನಂಜಪ್ಪನಿಗೆ ಈ ಮದುವೆಯ ವಿಷಯ ನೀಲಾಸಾನಿಯಿಂದ ತಿಳಿದಾಗ ದಿಗ್ಭ್ರಮೆಯಾಯಿತು. ಅದಲ್ಲದೆ ನೀಲಾಸಾನಿ ಅವನಿಗೆ ನೋಟೀಸನ್ನೂ ಕೊಟ್ಟುಬಿಟ್ಟಾಗ '' ಅಯ್ಯೋ, ಕೆಟ್ಟೆ ! ಕೆಟ್ಟೆ ! " ಎಂದು ಅವನು ಕೈ ಒದರಿಕೊಂಡನು. ' ಛೀ, ನಾನೇನು ಮಾಡಿಕೊಂಡೆ. ಗಣಪತಿ ಮಾಡಲು ಹೋಗಿ ಅವನ ಅಪ್ಪನನ್ನು ಮಾಡಿದ ಹಾಗಾಯ್ತು ಅವನ ವಿಷಯ. ಕತ್ತಿ ವರಸೆ ತೋರಿಸೋದಕ್ಕೆ ಹೋಗಿ ನನ್ನ ಕತ್ತೇ ಕುಯ್ದುಕೊಂಡ ಹಾಗಾಯ್ತು ನನ್ನ ಗತಿ. ಎಲ್ಲೋ ಹಾಳು ಸಹವಾಸ. ಅವನಿಗೆ ಏನು ಮಾಡೋದಕ್ಕೆ, ಅವನೊಡನೆ ಏನು ಮಾತಾಡೋದಕ್ಕೆ ಹೋದರೂ ನನ್ನ ಮೇಲೇ ತಿರುಗಿಸ್ತಾನೆ. ಒಳ್ಳೇ ಅಳಿಯ ಸಿಕ್ಕ, ಹೇಗಾದರೂ ಆಗಲಿ' ಎಂದು ಒದರಾಡಿದ. ಗುರು

ವನ್ನು ಕಂಡು "ಇದೇನು ಮಾಡಿದೆಯಯ್ಯ ಮೂರ್ಖ!" ಎಂದು ಸಿಟ್ಟಿನಿಂದಲೇ ಸರಸವಾಡಿದ. ಗುರು "ಇನ್ನೇನು, ಮೂರ್ಖನ ಕೆಲಸ—ಬುದ್ಧಿವಂತರ ಮಧ್ಯೆ" ಎಂದುಬಿಟ್ಟ. ತಿಳಿಸುವ ಧೈರ್ಯ ನಂಜಪ್ಪನಿಗೆ ಇರಲಿಲ್ಲ. ಗುರು ಸೂಳೆಯ ಮನೆಗೆ ಬಹಿರಂಗವಾಗಿ ಹೋಗುತ್ತಿದ್ದುದು ಊರಿನಲ್ಲೆಲ್ಲ ಪುಕಾರು ಎದ್ದಿತು. ಚೇಷ್ಟೆಯ ನಾಲಿಗೆಗಳೇಕೆ, ಎಲ್ಲ ಮರ್ಯಾದೆಯ ನಾಲಿಗೆಗಳೂ ಆಡಿ ಆಡಿ ಸೋತವು. ಸಮಾಚಾರ ಮರ್ಯಾದೆ ಮಹಲನ್ನು ಮುಟ್ಟುವುದಕ್ಕೆ ಬಹಳ ಹೊತ್ತು ಹಿಡಿಯಲಿಲ್ಲ. ಮುಟ್ಟಿದಾಗ ಮಹಲಿನಲ್ಲಿ ಕೋಲಾಹಲವಾಯಿತು. ಸಾಹುಕಾರರು ಸಿಟ್ಟಿಗೆದ್ದರು. ಈ ಬಾರಿ ತಡಮಾಡದೆ, ಅನುಮಾನಿಸದೆ ಮಗನೊಡನೆ ಚರ್ಚಿಸಿದರು.

"ಮಗು, ಇದೇನಪ್ಪ! ತೀರ ಹುಡುಗಾಟಕ್ಕೆ ಅಲ್ಲ, ದೊಡ್ಡಾಟಕ್ಕೇ ಇಟ್ಟುಕೊಂಡಿತು? ಮನೆಯಲ್ಲಿ ವಿರೋಧ ಏನೋ ಆಗಲಿ, ಕೆಲಸ ಎಲ್ಲೋ ಹೋಗಲಿ—ಹಾಳಾಗಿ ಅಂತ ಸುಮ್ಮನಿದ್ದದ್ದಾಯ್ತು. ಮದುವೆಗೆ ಅಂದರೆ, ಬಂದದ್ದು ಕಂಡದ್ದು ನೋಡಿದ್ದು, ಎಲ್ಲ ಹೆಣ್ಣುಗಳನ್ನೂ ಕಡೆಗಣ್ಣಿನಲ್ಲೂ ನೋಡದೆ ನಿರಾಕರಿಸಿದೆ. ಅದೂ ಹಾಳಾಗಲಿ ಅಂದರೆ ಈಗ ತೀರ ತಲೆ ತಗ್ಗಿಸೋ ಹಾಗೆ ಮಾಡ್ತಾ ಇದೀಯಲ್ಲ. ಊರೆಲ್ಲ ಗುಲ್ಲು. ನಮ್ಮ ಮರ್ಯಾದೆ ಮನೆತನದ ಮರ್ಯಾದೇನೆಲ್ಲ ಮಟ್ಟ ಹಾಕಿದ ಹಾಗೆ ಆಗಿಬಿಡುತ್ತಲ್ಲ, ಯೋಚಿಸಬೇಡವೆ? ಯಾವ ಮನೆಗೂ ಇದು ಸಲ್ಲದು. ಇನ್ನು ಈ ಮನೆಗೆ........"

ಸಾಹುಕಾರರು ಇನ್ನೂ ಹೇಳುತ್ತಿದ್ದರು.

"ಏನು ತಪ್ಪು? ಮರ್ಯಾದೆ ಯಾಕೆ ಹೋಗುತ್ತೆ?"

"ಯಾಕೆ ಹೋಗುತ್ತೆ! ಎಂಥ ಪ್ರಶ್ನೆ ಇದು! ಹೇಗೆ ಕೇಳ್ತಾ ಇದೀಯೋ ಕಾಣೆ? ಮರ್ಯಾದೆ, ಸೂಳೆ ಮನೆಗೆ ಹೋಗ್ತಾ ಇದೆಯಲ್ಲ ಅದಕ್ಕೆ ಕಣಪ್ಪ? ಅದೂ ಇಷ್ಟು ರಾಜಾರೋಷವಾಗಿ...."

"ಅಪ್ಪ, ಅವಮಾನಕ್ಕೆ ಕಾರಣವಿಲ್ಲ."

"ಅದು ಹೇಗೆ ಗುರು?"

"ಮದುವೆ ಆಗ್ತೀ...."

"ಏನು!!" ಸಾಹುಕಾರರು ಕುರ್ಚಿ ಛಳಕು ಹೊಡೆದಂತೆ ತಟ್ಟನೆ ಎದ್ದರು. ಆದಷ್ಟೂ ನೆಟ್ಟಗೆ ತಮ್ಮ ಉದ್ದಕ್ಕೂ ಸೆಟೆದು ನಿಂತರು. "ಏನಂದೆ,

ಮದುವೆಯೆ? ಆ ಸೂಳೆಯ ಕೂಡೆ? ನಿಂಗೆ ವಿವೇಕವಿಲ್ಲ, ಲೌಕಿಕ ತಿಳೀದು ಅಂತ ಮಾತ್ರ ಇದ್ದೆ. ನಿಜವಾಗಿಯೂ ಹುಚ್ಚೇ ಹಿಡಿದಿದೆ ಅಂತ ಕಾಣುತ್ತೆ. ಇಂಥಾದ್ದು ಎಲ್ಲಾದರೂ ಉಂಟೇನಯ್ಯ, ಪ್ರಪಂಚದಲ್ಲಿ? ಶಿವ! ಶಿವ! ಇದೇನು ಬುದ್ಧಿ ಕೊಟ್ಟನಪ್ಪ ದೇವರು ನಿಂಗೆ. ಈ ಮನೆತನದ ಮರ್‍ಯಾದೇನ ಮನೆತನದ ಮಗನಾಗಿ ಹೆಚ್ಚಿಸೋದು ಹಾಗಿರಲಿ, ಹೊಲಸಿನಲ್ಲಿ ಎಳೆದಾಡಬೇಕು ಅಂತ ಹಟ ತೊಟ್ಟದ್ದೀಯೇನು? ಹಾಗಾದ ಹೊರತು ತೃಪ್ತಿಯಿಲ್ಲವೆ?" ಮನೆ ಕಿತ್ತುಹೋಗುವ ಹಾಗೇ ಕೂಗಿಕೊಂಡುಬಿಟ್ಟರು—ಮೈಮರೆತು.

"ಕಳೆದು ಹೋದ ಆತ್ಮವನ್ನು ಉದ್ಧರಿಸಿದ ಮನೆತನ ಅಂತ ಇದ್ದ ಮರ್‍ಯಾದೆ ಹೆಚ್ಚಬೇಕು—ಯೋಗ್ಯ ಕಣ್ಣುಗಳಲ್ಲಿ. ಬಾಕಿಯವರ ಲೆಕ್ಕವೇನು?" ನಿರ್ಲಕ್ಷ್ಯದಿಂದ ಹೇಳಿದ.

"ಸಾಕಪ್ಪ ನಿನ್ನ ಹುಚ್ಚು ಯೋಚನೆ! ಎಲ್ಲಕ್ಕೂ ಒಂದು ಮೇರೆಯಿದೆ. ಈ ಆತ್ಮ ಉದ್ಧರಿಸೋದರಲ್ಲಿ ತಲತಲಾಂತರದ ಹಿರಿಯರೆಲ್ಲ ಈ ಎಂಜಲು ಸೋಕಿದ ಕೂಡಲೇ ಸ್ವರ್ಗದ ಸುಖದಿಂದ ನರಕದ ಯಾತನೆಗೆ ದೊಪ್ಪನೆ ಬೀಳ್ತಾರೆ, ಗೊತ್ತೆ?"

"ಅಪ್ಪ, ಅವರವರ ಸ್ವರ್ಗ ಅವರವರು ಗಳಿಸಿಕೋಬೇಕು, ಉಳಿಸಿಕೋಬೇಕು. ಇನ್ನೊಬ್ಬರು ಯಾರೂ ಅವೆರಡನ್ನೂ ಮಾಡಲಾರರು. ಅದೆಲ್ಲ ಬರಿ ಭ್ರಾಂತಿ"

"ಈ ಹೊಸ ಸಿದ್ಧಾಂತಗಳು, ತತ್ವಗಳಿಂದ, ತಲೆಬೇಸರವಾಗಿದೆಯಪ್ಪ. ಸದ್ಯ, ಸಾಮಾನ್ಯ ಮನುಷ್ಯನಂತೆ ಮರ್‍ಯಾದೆಯಿಂದ ನಡೆದುಕೊಂಡು ನಮ್ಮ ಮಾನ ಪ್ರಾಣಗಳನ್ನೆಲ್ಲ ಕಾಪಾಡು. ಹೊಸ ಹೊಸ ಪ್ರಯೋಗಗಳನ್ನೆಲ್ಲ ಬಿಡು. ಇಗೋ ಸಿಟ್ಟಾದೆ ಅಂತ ನೊಂದುಕೋಬೇಡ. ಮೊಂಡಾಗಬೇಡ. ಬೇಡಿಕೋತೀನಿ ಬೇಕಾದರೆ. ಅಂಥ ಒಳ್ಳೇ ಮಾನವಾದ ಸಿರಿವಂತರ ಸಂಬಂಧಗಳನ್ನು ಬಿಟ್ಟು...."

"ಅದರಲ್ಲಿ ಏನು ಒಳ್ಳೇತನ? ಒಳ್ಳೆಯೋರೊಡನೆ ನಡೆದುಕೊಳ್ಳೋದರಲ್ಲಿ? ಅವರಿಗೆ ಏನು ಮಾಡಿದ ಹಾಗಾಯ್ತು? ನಮ್ಮ ಅಗತ್ಯ ಏನಿದೆ ಅವರಿಗೆ? ಸಿರಿವಂತರ ಸಂಬಂಧ ನಮಗೇಕೆ? ಸಾಕಾದಷ್ಟು ಸಿರಿ ನಮಗೇ ಇಲ್ಲವೆ? ಈ ಕೀಳು ಜನ ಬಡಜನರಿಗೆ ನಮ್ಮ ಅಗತ್ಯ ನಿಜವಾಗಿದೆ, ನಮ್ಮ ಸೇವೆ ಅಗತ್ಯ...."

" ಅಯ್ಯೋ, ನಿಂಗೆ ಹೇಗೆ ತಿಳಿಸಲಪ್ಪ ? ಅದೇನು ಬುದ್ಧಿ ತಿರಿಗಿದೆಯೋ ಸೊಟ್ಟವಾಗಿದೆಯೋ ನಂಗಂತೂ ತಿಳಿಯೋದಿಲ್ಲ. ನಮ್ಮನ್ನೇ ಹಾಳು ಮಾಡಿ ಕೊಂಡಾದರೂ ಈ ಹಾಳು ಸೇವೆ ಮಾಡಬೇಕೆ ?"

" ಹುಂ. "

" ಛಿ ! ಹೀನ ಕುಲವೂ ಇರಲಿ, ಮಾನದ ಮಾತೂ ಇರಲಿ. ಕಾಹಿಲೆಯ ರೂಪವಾಗಿದ್ದರೋ ? "

" ನೋಡಿಸೋಣ, ಗುಣಪಡಿಸೋಣ. ತಕ್ಕ ರೀತಿಯಿಂದ, ಎಚ್ಚರಿಕೆ ಯಿಂದ, ನಡೆದುಕೊಳ್ಳೋಣ. ಅಸಾಧ್ಯವಿಷಯವಾದರೆ ಬಿಟ್ಟೊಬಿಡೋಣ. ಹಾಗೆ ನೋಡುತ್ತ ಹೋದರೆ ಮರ್ಯಾದಸ್ಥರಲ್ಲಿ ಮುಚ್ಚಿ ಆಗೋ ಮದುವೆ ಗಳೆಷ್ಟಿಲ್ಲ ? "

" ಅದೆಲ್ಲ ಕಾಣದೆ ಬಂದದ್ದು; ಯತ್ನ ಮೀರಿ ಆದದ್ದು. ಹೀಗೆ ಕಂಡು ಕಂಡೂ ಗುಂಡಿಗೆ ಬೀಳ್ತಾರೇ ? "

" ಆ ವಿಷಯವೇ ಇಲ್ಲವಲ್ಲ, ಹೇಳಿದೀನಿ. ಇಷ್ಟಕ್ಕೂ ಎಲ್ಲ ವಿಧ ದಿಂದಲೂ ಜೀವನವೇ ಒಂದು ಆಟ. ನಮ್ಮ ಪಣವೂ ನಮ್ಮ ಸಣ್ಣ ಬಾಳಷ್ಟೆ. ಯೋಗ್ಯವಾಗಿ ತೃಪ್ತಿಕರವಾಗಿ ಆಡಿಬಿಡಬೇಕು; ಲಾಭದ ದೃಷ್ಟಿಯಿಂದಲೇ ಅಲ್ಲ. ಮುಖ್ಯವಾಗಿ ನಿರ್ಭಾಗ್ಯಳೊಬ್ಬಳಿಗೆ ಸೌಭಾಗ್ಯ ಕೋಡೋ ವಿಷಯ. ಆಗಬೇಕಾದದ್ದು, ಮಾಡಿಬಿಡಬೇಕು. ಈ ಕಾಹಿಲೆ—ಇದೊಂದು ಅಡಚಣೆ ಯಿಲ್ಲದಿದ್ದರೆ...."

" ಅದು ಒಂದಲ್ಲ. ಹೇಳಲಿಲ್ಲವೆ ? ಇನ್ನೂ ಹತ್ತು ಇವೆ. ನೀನು ಈ ಯೋಚನೆ ಬಿಟ್ಟುಬಿಡು. ಎಂದಿಗೂ ಸಾಧ್ಯವಿಲ್ಲ. ಬರಿಯ ಹುಚ್ಚು"

" ........... "

" ಹಳೇ ಪಟ್ಟನ್ನೇ ಹಿಡೀತೀಯ ? ಇದನ್ನೆಲ್ಲ ನೋಡಿ ಬದುಕಿರೋದ ಕ್ಕಿಂತ ಸಾಯೋದು ಮೇಲು. "

" ಇದು ಸತ್ತುಬಿಡೋ ವಿಷಯವಲ್ಲ, ಬದುಕಿ ನಡೆಸೋದು. ಸಾವಿಗೆ ಪ್ರೇರಣೆ ಮಾಡೋವು ಬೇರೆ ರೀತಿಯವು, ನೀತಿಯವು ಬೇರೆ ಇವೆ. "

" ಇನ್ನೂ ಇದೆಯೆ, ಇದಕ್ಕಿಂತ ? ಬೇಡ ಮಗು, ಬಿಟ್ಟುಬಿಡಪ್ಪ. "

" ನಾನು ಹೆಚ್ಚು ಹೊಂದಿಸಿಕೊಳ್ಳಲಾರೆ. "

"ಈವರೆಗೆ ಹೊಂದಿಕೊಂಡಿರೋದೇನು? ಹೇಳು ಸ್ವಲ್ಪ. ಎಲ್ಲ ನಿನ್ನಂತೇ ಸಾಧಿಸಿಕೊಂಡಿದೀಯೆ. ಇದರಲ್ಲಾದರೂ ನಮ್ಮಂತೆ ನಡೆದುಕೊ."

"........"

"ಏನು?"

"ಇದರಲ್ಲಿ ನನ್ನ ಬಾಳೊಂದೇ ಅಲ್ಲ, ಹೇಗಾದರೂ ಆಗಲಿ ಅನ್ನೊದಕ್ಕೆ. ಇನ್ನೊಂದೂ ಹೆಣೆದುಕೊಂಡಿದೆ."

"ಹೆಣೆಸಿಕೊಂಡದ್ದು. ಕಿತ್ತೊಗೆದರೆ ಏನೂ ನಷ್ಟವಿಲ್ಲ."

"........"

"ಏನು?"

"..........."

"ಇದೆಲ್ಲ ನಿಂಗೆ ಆಟವೇಯೆ ನಿಜವಾಗಿ? ಇದರಿಂದ ಅಸಹ್ಯವಾಗೋದಿಲ್ಲವೆ? ನಿಂಗೆ ಮನೆತನದ ಮೇಲೆ, ನಮ್ಮ ಮೇಲೆ ಪ್ರೇಮವೇ ಹೋಗಿದೆಯೆ? ಮನುಷ್ಯತ್ವವೇ ಮರೆತುಹೋಗಿದೆಯೆ?"

"ಕೆಟ್ಟತನವೇನಿದೆ ಅಸಹ್ಯಪಡೋದಕ್ಕೆ? ನನ್ನ ಕಷ್ಟವೆಂದರೆ ಪ್ರೇಮ ಇಲ್ಲದ್ದಲ್ಲ, ಅತಿಯಾಗಿರೋದು, ಈ ಮಹಲಿನ ಹೊರಗೂ ಹರಿಯೋದು. ಸ್ವಲ್ಪವೇ ಇದ್ದರೆ ಇದರೊಳಗೇ ಕಟ್ಟಿಹಾಕಬಹುದಾಗಿತ್ತು. ಮನುಷ್ಯತ್ವ ನನ್ನ ಮುಖ್ಯ ದೌರ್ಬಲ್ಯ. ಅದೇ ನನ್ನ ದುಃಖಕ್ಕೆಲ್ಲ, ಸುಖಕ್ಕೆಲ್ಲ ಕಾರಣ. ನಂಗೆ ಇಲ್ಲದಿರೋದು ಈ ಮರ್ಯಾದೆಯ ಮೇಲು-ಚರ್ಮ. ಅದು ಸಾಕಾದಷ್ಟು ದಪ್ಪವಾಗಿಲ್ಲ, ಆಗೋ ಹಾಗೂ ಇಲ್ಲ."

"ಇದೇನು, ಯಾರನ್ನ ದೂರೋ ವಿಷಯ? ತಂದೆಗೆ ಮರ್ಯಾದೆ...."

"ತಪ್ಪಾಯ್ತು, ಬೇಕಾಗಿ ಅನ್ನಲಿಲ್ಲ. ನುಗ್ಗಿ ಬಂತು. ಕ್ಷಮಿಸಿಬಿಡಿ."

"ಇದೆಲ್ಲ ಹೊಸ ಸೋಗು."

"........"

"ಅಯ್ಯೋ, ಗುರು. ನೀನು ಏನಾದರೂ ಹೇಳಿಕೊಳ್ಳಪ್ಪ. ಚಿಂತೆಯಿಲ್ಲ. ಇದೊಂದನ್ನ ಬಿಡು."

"........"

" ಇನ್ನೂ ಒಂದು ಹೇಳಿಬಿಡ್ತೀನಿ. ಇವನು ನಿಂಗೆ ಅಷ್ಟೊಂದು ಹುಚ್ಚು ಹಿಡಿಸಿದ್ದರೆ ಒಳ್ಳೇ ಸಂಬಂಧದ ಜತೆಗೆ ಇವಳೂ ಇರಲಿ. ಮದುವೆ ಸಂಬಂಧ ಅವಳಿಗೇಕೆ ? ದುಡ್ಡು ಎಸೆದರೆ ಬಿದ್ದಿರ್ತಾಳೆ...."

" ........ " ಗುರು ಬೇಸರದಿಂದ ಹೋಗಲು ತಿರಿಗಿದ.

" ಏನು, ಇದೂ ಆಗೋದಿಲ್ಲವೆ ? "

" ........ "

" ನಿಂತು ಮಾತೂ ಆಡದೆ ಹೋಗ್ತೀಯ ? ಅಷ್ಟೂ ಮರ್ಯಾದೆ ಬೇಡವೆ ? "

" ........ " ಗುರು ಸುಮ್ಮನೆ ನಿಂತ.

" ಮೌನ, ಮೌನ, ಮೌನ....ಕೊಲ್ಲೋ ಮೌನ. ತಿರಸ್ಕಾರದ ಮೌನ. ನಿನ್ನ ಕೆಟ್ಟ ಮಾತೂ ಇದಕ್ಕಿಂತ ವಾಸಿ. ನಾನು ಇದನ್ನು ಸಹಿಸಲಾರೆ. ಹುಚ್ಚೇ ಹಿಡಿಯುತ್ತೆ. ಇದರ ಬದಲು ನೇರವಾಗೇ ಕೊಂದುಬಿಡು. "

" ಆ ಮಾತಿಗೆ ಏನು ಉತ್ತರ ಹೇಳಲಿ ? ಕಿವಿಯಿಂದ ಕೇಳೋದೂ ಸಾಧ್ಯವಿಲ್ಲ. ಸುಮ್ಮನೆ ಆಡಿ ಅವಮರ್ಯಾದೆ ಯಾಕೆ ಮಾಡಲಿ ? "

" ಹಾಗಾದರೆ ಬಿಡೋದಿಲ್ಲ ಅವಳನ್ನ; ಕಟ್ಟಿಕೊಳ್ಳಲೇಬೇಕು ? "

" ........ "

" ಈ ಮನೇನ ನನ್ನ ಕಣ್ಣೆದುರಿನಲ್ಲೆ ಹಾಳು ಮಾಡೇ ಮಾಡ್ತೀಯ?— ಮನೆ ಮಗನಾಗಿಯೂ ? "

" ಅದನ್ನ ಅದೇ ಹಾಳುಮಾಡಿಕೊಳ್ಳುತ್ತೆ—ಯೋಗ್ಯತೆಯಿಲ್ಲದಿದ್ದರೆ."

" ಶುದ್ಧ ಮೊಂಡತನ ! ಸುಧಾರಣೆ, ಆದರ್ಶ ಅಂತ ಅಂದುಕೊಂಡಿರ ಬಹುದು. ಆದರೇನು. ನಾನು ಬೇರೆ ಇದನ್ನ ಎಂದಿಗೂ ಒಪ್ಪೋದಿಲ್ಲ. "

ಗುರು ಹೊರಟುಹೋದ. ಸಾಹುಕಾರರು ಈಗಂತೂ ಹುಚ್ಚು ಹಿಡಿದವರಂತೇ ಕೂಗಾಡಿಕೊಂಡರು. ' ಇದನ್ನು ತಡೀದೆ ಇದ್ದರೆ, ನಾನು ಮರುಳೂರ ಸಾಹುಕಾರನೇ ? ಈ ಮರ್ಯಾದೆ ಮನೆತನದೋನೆ ? ಇರಲಿ. ಇವನೇನೋ ತಪ್ಪಿ ಹುಟ್ಟಿದಾನೆ. ಬುದ್ಧಿ ಕಲಿಸದೆ ಬಿಟ್ಟೇನೆ ? ನನ್ನ ಸಿರಿಯೆಲ್ಲ ಬೇಕಾದರೆ ಉರಿದುಹೋಗಲಿ—ಇದಕ್ಕಾಗಿ. ಸಾಧಿಸುತ್ತೀನಿ ' ಎಂದು ಶಪಥಮಾಡಿಕೊಂಡರು. " ಅಯ್ಯೋ, ಇವನಿಲ್ಲದೆ ನಮ್ಮದೇನು

ಮನೆತನ? ಹುಂ, ಮ... ದ ಮಾತೂ ಇರಲಿ ಅನ್ನು. ತಂದೆಯಾಗೋನು ಯಾವನು ಇಂಥಾದ್ದಕ್ಕೆ ಒಪ್ಪುತ್ತಾನೆ? ಜಗತ್ತನ್ನೇ ಕೇಳ್ತೀನಿ, ಹೇಳಲಿ.... ನಾನೇ ತಪ್ಪು ಅನ್ನೋಹಾಗೆ ಮಾತಾಡ್ತಾನಲ್ಲ—ಇವನು! ಇವನ್ನ ಹೇಗೆ ದಾರಿಗೆ ತರೋದು, ದೇವರೆ?" ಎಂದು ಕೊರಗಿದರು. "ಮೊದಲು ಹುಡುಗತನದ ಹುಚ್ಚಿಗೆ ಅಡ್ಡಿಹಾಕಬೇಕು. ಬೇಕಾದ್ದಾಗಲಿ. ಆಮೇಲೆ ಸಮಾಧಾನ ಮಾಡಿ ಸರಿಪಡಿಸಿದರಾಯ್ತು. ಇಷ್ಟಕ್ಕೂ ಏನು ವಯಸ್ಸು ಅವನಿಗೆ. ಹುಂ, ನಾನೂ ನನ್ನ ವಯಸ್ಸಿನಲ್ಲಿ ಆಷ್ಟು ಆಟವಾಡಿದೆನಲ್ಲ.... ಆದರೆ ಹೀಗಲ್ಲ. ಮರ್ಯಾದೆ ಮೀರಲಿಲ್ಲ—ಹೇಗಾದರೂ' ಎಂದು ನಿರ್ಧರಕ್ಕೆ ಬಂದು ಆದಷ್ಟು ಸಮಾಧಾನವನ್ನು ತಂದುಕೊಂಡರು.

ಸಾಹುಕಾರರಂತೆ ಮಹಲಿನ ಇತರರೂ ಇಂತಹ ವಿಷಮ ಸಂದರ್ಭದಲ್ಲಿ ಸುಮ್ಮನಿರಲಿಲ್ಲ. ಆಕ್ಷೇಪಿಸಿದರು. ಬುದ್ಧಿವಾದವನ್ನು ಹೇಳಿದರು. ಸಣ್ಣಮ್ಮ "ಇದೇನಪ್ಪ, ನಾಚಿಕೆಗೇಡು, ಸೂಳೇನ ಗೃಹಸ್ಥರ ಮನೆಗೆ ತಂದು ಕೋತಾರೇ?" ಎಂದು ಕೇಳಿದಾಗ ಗುರು "ಸರಿಯಾಗಿ ಯೋಚನೆ ಮಾಡಿ ನೋಡು ಚಿಕ್ಕಮ್ಮ. ಗರತಿ ಸೂಳೆಯಾಗಬಹುದು, ಸೂಳೆ ಗರತಿಯಾಗಬಾರದೇ? ಇದರಲ್ಲಿ ದೇಹಸಂಬಂಧಕ್ಕಿಂತ ಮನೋಭಾವನೆಯೇ ಮುಖ್ಯ. ಹೆಂಗಸು ಬರಿ ಅನುಕೂಲಕ್ಕೇ ಮಾಡಿಕೊಳ್ಳೋದೆಲ್ಲ ಸೂಳೆಗಾರಿಕೆಯೆ ಕೆಲಸ ಕಷ್ಟಗಳಿಗೆ ಹೇಸಿ ಹೆದರಿ, ಆಟದ ಬೊಂಬೆಗಳ ಹಾಗೆ ನಲಿಯೋದಕ್ಕೋಸ್ಕರ, ಆ ಸುಖದ ಬೆಲೆಗೆ ತನ್ನನ್ನು ಗಂಡನಿಗೆ ಮದುವೆಯ ಮೂಲಕ ಮಾಡಿಕೊಳ್ಳೋದೂ ಸೂಳೆಗಾರಿಕೆಯೆ; ಬೇರೆಯೇನು? ಹೀಗೆ ನೋಡಿದರೆ ಈಗ ಎಷ್ಟು ಮರ್ಯಾದೆಯ ಮನೆಗಳಲ್ಲಿ ವ್ಯಭಿಚಾರ ನಡೀತಿಲ್ಲ?" ಎಂದ. ಗಾಬರಿಯಾದ ಸಣ್ಣಮ್ಮನಿಗೆ ಮಾತೇ ಹೊರಡಲಿಲ್ಲ. ಏನು ತನ್ನ ವಿಷಯವನ್ನೇ ಸೂಚಿಸುತ್ತಿದಾನೋ ಎಂದು ಅವಳಿಗೆ ಅನುಮಾನವೂ ಬಂದಿತು. ಕುಸುಮ ತಪ್ಪು ಎಣಿಸಲಿಲ್ಲ. "ಅಣ್ಣ, ನಿನ್ನಲ್ಲಿ ನಂಗೆ ಸಂಪೂರ್ಣ ಸಹಾನುಭೂತಿ ಇದೆ. ಆದರೆ ಪ್ರಾಪಂಚಿಕ-ಪ್ರಪಂಚದಲ್ಲಿ ಧ್ಯೇಯಸಾಧನೆಗೆ ಸ್ಥಳವಿಲ್ಲ. ಅದು ಸಾಧ್ಯವಲ್ಲ. ರೂಢಿ ಅಭಿಪ್ರಾಯದ ವಿರೋಧ ಅಷ್ಟು ಗಟ್ಟಿ" ಎಂದು ಹೇಳಿದಳು ಗುರು "ಕುಸುಮಾ, ನಿನ್ನ ಸಹಾನುಭೂತಿ ನಂಗೆ ಎಷ್ಟೋ ಶಕ್ತಿ ಕೊಡುತ್ತೆ—ನಾನು ಒಬ್ಬನೇ ಅಲ್ಲ ಈ ಅಭಿಪ್ರಾಯದಲ್ಲಿ ಅಂತ. ಆದರೆ

ರೂಢಿಗೆ ಸೋತು ಕೂಡೋದಿಲ್ಲ, ಹೋರಾಡ್ತೀನಿ" ಅಂದ. "ಆದರೇನಣ್ಣ, ಸೋಲು ಸಿದ್ಧ, ಹಿಂದೆ ನಮಗೆ ಆದ ಹಾಗೆ" ಎಂದು ನಿರುತ್ಸಾಹ ತೋರಿಸಿದಳು. ಅವನು "ಘನವಾದ ಸೋಲು, ಕೀಳಾದ ಜಯಕ್ಕಿಂತ ಶ್ರೇಷ್ಠ. ಸೋಲಿನಲ್ಲೂ ಮಹತ್ವ ಇರೋದು ಸಾಧ್ಯ. ಸೋಲಿಗೆ ಹೆದರಿ ಹಿಂದೆಗೆಯಬೇಕೇಕೆ?" ಎಂದು ಪೂರಯಿಸಿದ. ಸದಾಶಿವ "ಇದೇನು ಮಗು ಈ ವಿಪರೀತ? ಅವಳು ಕಾಲಿಟ್ಟರೆ ನಾನು ಬೇರೆ ಇಲ್ಲಿರೋದಿಲ್ಲ, ಅವಳ ಸೇವೆ ಮಾಡೋದಿಲ್ಲ. ಖಂಡಿತ. ಅದು ಚೀಪಿ ಎಸೆಯೋ ಪದಾರ್ಥ. ತಂದು ಪೂಜಿಸೋದಲ್ಲ. ನಮ್ಮಂಥೋರಿಗೂ ನಿಲುಕೋದು ನಿಂಗೆ ಹೇಗೆ ಮೇಲು ಅನ್ನಿಸೀತು?...." ಎಂದು ಉದ್ದವಾಗಿ ಉಪದೇಶಿಸಿದ. ಗುರು "ಅವಳ ಸೇವೆ ಮಾಡೋ ಗತಿ ನಿಂಗೆ ಬರೋದಿಲ್ಲ. ಧೈರ್ಯವಾಗಿರು" ಎಂದು ಮಾತ್ರ ಹೇಳಿದ. ದಾಸ ಏನೂ ಹೇಳದಿದ್ದುದನ್ನು ಕಂಡು ಗುರುವೇ ರೂಢಿಯಂತೆ "ನೀನು ದಾಸ, ಕೇಳಿದೆಯಾ ನನ್ನ ಹುಚ್ಚುತನ?" ಎಂದು ಕೇಳಿದ. ದಾಸ "ಅಪ್ಪ, ಯಾರಿಗೆ ಹುಚ್ಚೋ ಯಾರಿಗಿಲ್ಲವೋ ನಂಗೇನು ಗೊತ್ತು?" ಎಂದ. ಗುರು "ನಿಂಗೂ ಒಪ್ಪಿಗೆ ಇಲ್ಲ ತಾನೆ?" ಎಂದ. ದಾಸ "ನೀನು ಒಪ್ಪಿ ತಂದ ಹೆಣ್ಣು ಮನೆಗೆ ಲಕ್ಷ್ಮಿ. ದೇವಿ ಅಂತ ಪೂಜೆ ಮಾಡೋದು, ಸೇವೆ ಮಾಡೋದು ನನ್ನ ಕೆಲಸ. ಇನ್ನು ಯಾತರಗೊಡವೆ ಯಾಕೆ ನಂಗೆ?" ಎಂದ. ಗುರು ಮಲಗಿದ್ದ ಮಂಚದಿಂದ ತಟ್ಟನೆದ್ದು "ಎಲ್ಲಿ ದಾಸ, ನಿನ್ನ ಕೈ ಕೊಡು" ಎಂದು ತನ್ನ ಕೈ ನೀಡಿದ. ದಾಸ "ಯಾಕಪ್ಪ ಅದು? ಕಸಬರಿಗೆ ಕೈ ನೀನು ಮುಟ್ಟಬಾರದು" ಅಂದ. ಗುರು ಕಸಬರಿಗೆಯ ಸಮೇತ ಅವನ ಕೈಯನ್ನು ತನ್ನ ಎರಡು ಕೈಗಳಲ್ಲಿಯೂ ತೆಗೆದುಕೊಂಡು "ದಾಸ, ನೀನೊಬ್ಬ ಸಾಧು" ಎಂದ. ದಾಸ ಪೆಚ್ಚಾಗಿ ನೋಡಿದ. ಆದರೆ ಅವನ ಕಣ್ಣುಗಳು ಥಳಥಳ ಹೊಳೆಯುತ್ತಿದ್ದುವು. ಇಬ್ಬರ ಕಣ್ಣುಗಳೂ ಒದ್ದೆಯಾಗಿದ್ದುವು. ನಂಜಪ್ಪ "ಆಡಿದರೆ ತನಗೇ ಏನು ಪೇಚಾಟ ಬರುತ್ತೋ" ಎಂದುಕೊಂಡು ತುಟಿ ಎರಡು ಮಾಡಲಿಲ್ಲ. ಅವನಿಗೆ ಬೇರೆ ಹೊಣೆಗಾರಿಕೆ ಒದಗಿತು.

೧೨

* * *

ಸಾಹುಕಾರರು ಕಾಲ ಕಳೆಯಲಿಲ್ಲ. ನಂಜಪ್ಪನೊಡನೆ ಚರ್ಚಿಸಿದರು. ಅವರು "ಕೇಳಿದೆಯಾ ?" ಅಂದಾಗ "ಕೇಳಿದೆ-ನಪ್ಪ. ಹೊಟ್ಟೆಗೆ ಹಾಲು ಹುಯ್ದುಕೊಂಡ ಹಾಗಾಯ್ತು" ಎಂದು "ಹುಂ, ಏನು ಹೇಳೋಣ. ಇವನಿಗೆ ಈ ಸಂಬಂಧ ಸಿಕ್ಕಿ ಹೀಗೆ ಹಾಳಾಗ್ತಾನೇ ಅಂತ ಯಾರು ತಿಳಿದಿದ್ದರು?" ಎಂದು ಪರಿತಾಪ ತೋರಿಸಿದ. ಕಡೆಗೆ ಸಾಹುಕಾರರು "ಇವನೇನೋ ಮಂಕು, ತಿಳಿಯಲಾರ; ಆದರೆ ಅವಳು ಎಷ್ಟು ಲುಚ್ಚ ಅಂತ. ಇವನು ಹಣ ಕೊಟ್ಟರೆ ಒಳಗೆ ಕರೀತಾಳೆ, ಇನ್ನೊಬ್ಬ ಕೊಟ್ಟರೆ ಇವನನ್ನು ಹೊರಗೆ ಹಾಕ್ತಾಳೆ. ನೀನು ಸ್ವಲ್ಪ ಉಪಕಾರ ಮಾಡು ಮತ್ತೆ. ಹಣ ತಗೊಂಡು ಹೋಗಿ ಇವನನ್ನು ಹೊರಗೆ ಅಟ್ಟೋದಕ್ಕೆ ಎಷ್ಟು ಬೇಕು ಅಂತ ಚೌಕಶಿ ಮಾಡಿ ಬಿಸಾಕಿ ಬಾ. ಈಗಲೇ ಮುಗಿದುಹೋಗಲಿ, ಈ ಕತೆ. ಅವನಿಗೂ ಬುದ್ಧಿ ಬರೋದಕ್ಕೆ ಒಳ್ಳೇ ದಾರಿಯಾಯ್ತು. ನಮ್ಮ ಮಾತಿನ ಸತ್ಯ ಗೊತ್ತಾಗುತ್ತೆ" ಅಂದರು. ನಂಜಪ್ಪನಿಗೆ ಕಮಲೆಯನ್ನು ನೋಡೋ ಧೈರ್ಯ ಯಾವಾಗಲೂ ಇರಲಿಲ್ಲ. ಹಿಂದೊಂದು ಸಾರಿ ಕೈಯೆಳೆದು ಕಪಾಳಕ್ಕೆ ಹೊಡೆಯಿಸಿಕೊಂಡಿದ್ದ. ಇನ್ನು ಈಗ ಉಂಟೆ ? ನೀಲಾಸಾನಿಯನ್ನೇ ಹಿಡಿದ. ಸಂದರ್ಭವನ್ನು ತಿಳಿಸಿ "ಸಾಹುಕಾರರ ಇಷ್ಟ" ಅಂದ. ನೀಲಾಸಾನಿ "ಅದೇನೋ ಸರಿ. ಸಾಹುಕಾರರ ವಿರೋಧ ಕಟ್ಟಿಕೊಂಡು ಊರಿನಲ್ಲಿ ಯಾರಾದರೂ ಬಾಳಬಹುದೆ? ನಂಗೂ ಏನೂ ನಷ್ಟವಿಲ್ಲ. ಇಷ್ಟವೇ. ಈಗಾಗಲೇ ಮನೆಯ ತಾಪತ್ರಯ ಹೇಳೋ ಹಾಗಿಲ್ಲ. ಈ ವಿಷಯವೆಲ್ಲ ಹೇಗೆ ಹೇಗೆ ತಿರಿಗಿ ಎಲ್ಲೆಲ್ಲಿಗೆ ನಿಲ್ಲುತ್ತೋ. ಅಲ್ಲಿಯ ವರೆಗೂ ನಾವೇನು ಮಾಡಬೇಕು ? ಇವರ ನಿದಾನ ನಂಗೇ ಬೇಸರವಾಗಿದೆ. ಆದರೆ ಈ ಕೆಲಸ ಮಾತ್ರ ನಡೆಯೊದಿಲ್ಲ. ಅವಳ ವಿಚಾರ ನಿಮಗೆ ಗೊತ್ತಿಲ್ಲವೆ ? ಶುದ್ಧ ಹಟಮಾರಿ. ಹಣದ ವಿಚಾರ ಯಾವಾಗಲೂ ಅವಳಿಗೆ ಅಷ್ಟಕ್ಕಷ್ಟೆ. ಅವಳ ಇಷ್ಟವೇ ಇಷ್ಟ. ಇಷ್ಟವಿಲ್ಲದೋರು ಬೆಟ್ಟದಷ್ಟು ಕೊಡ್ತೀನಿ ಅಂದರೂ ಅವರನ್ನ ಹತ್ತಿರವೇ ಸೇರಿಸೋ ಹೆಣ್ಣಲ್ಲ. ಹಿಂದೆಲ್ಲ ನಾನು

ಎಷ್ಟೆಲ್ಲ ಹೊಡೆದಾಡಿದೀನಿ, ಸಿಟ್ಟಾಗಿದೀನಿ, ಅತ್ತಿದೀನಿ. ಆದರೆ ಅವಳು ಬೇರೆ ಜುಂ ಅನ್ನಬೇಕಲ್ಲ. ಇಲ್ಲದೇ ಇದ್ದರೆ ನಮ್ಮ ಮನೆ ಕುಬೇರಂದು ಇದ್ದ ಹಾಗೆ ಇರಬೇಕು. ಈ ಗತಿ ಯಾತಕ್ಕೆ? ಸದ್ಯ ಅಷ್ಟಿಷ್ಟಾದರೂ ಕಸಬು ನಡೆಸಿಕೊಂಡು ಹೋಗ್ತಿದಾಳೆ ಅಂದರೆ ಈಗ ಇದು ಬೇರೆ ಬಂದಿದೆ. ಏನಾಗುತ್ತೋ? ಅವರು ಅಂದರೆ ಅವಳಿಗೆ ದೇವರ ಹಾಗೆ, ಕಡಿಮೆಯಿಲ್ಲ. ಇವತ್ತು ಅಂದರೆ ಇವತ್ತು ಬಾವಿಗೆ ಬೀಳೋದಕ್ಕೂ ಸಿದ್ಧವಾಗಿದಾಳೆ, ಅವರಿಗಾಗಿ ನಾನೇನು ಒಂದೊಂದು ತರಹ ಪರೀಕ್ಷೆ ಮಾಡಿದೀನಿ ಅಂತ ತಿಳಿದು ಕೊಂಡಿದೀರ? ಇನ್ನು ಇದಕ್ಕೆ ಒಪ್ಪುತ್ತಾಳೇ? ಹುಚ್ಚು. ಅವಳಿಗೂ ಹುಚ್ಚು. ನಿಮ್ಮ ನೋಟಿನ ಕಟ್ಟನ್ನು ಮುಖದ ಮೇಲೇ ಎಸೆದಾಳು. ನೀವೇ ಕೇಳಿ ಬೇಕಾದರೆ" ಎಂದಳು ನಂಜಪ್ಪ ಕೇಳಬಲ್ಲನೆ?

"ಮತ್ತೆ, ಏನು ಮಾಡೋದು ಇದಕ್ಕೆ?" ಎಂದು ನೀಲಾಸಾನಿಯನ್ನೇ ಕೇಳಿದ.

"ಗೊತ್ತಿಲ್ಲ. ಇಷ್ಟರ ಮೇಲೆ ಇವತ್ತು ಮಧ್ಯಾಹ್ನ ಆಗಲೇ ಬಂದಿದ್ದರು. ತಂದೆ ಮಕ್ಕಳಿಗೆ ಒಡೆದುಹೋದ್ದೆಲ್ಲ ಹೇಳಿದರಂತೆ.ಕೇಳಿದಾಗ ನಂಗೆ ಎದೆಯೇ ಒಡೆದು ಹೋಗೋ ಹಾಗಾಯ್ತು. ಆದರೆ ನಾನಾದರೂ ಏನು ಮಾಡಲಿ? ಈಗ ಬೊಂಬಾಯಿಗೇ ಹೊರಟುಹೋಗೋದು ಅಂತ ತೀರ್ಮಾನ ಹೇಳಿದರಂತೆ........"

"ಊಹೂಂ!"

"ಹೂಂ, ಮತ್ತೆ? ಇಲ್ಲಿ ಆಗದೇ ಇದ್ದರೆ ಅವರೇನಾದರೂ ಹೆದರ್ತಾರೆ ಅಂತೀರ? ಬರಿ ನಿಮ್ದು ಭ್ರಾಂತಿ. ಇಬ್ಬರೂ ಹಾಗೇ ಇದಾರೆ. ಅಲ್ಲೇನು ಮಾಡ್ತಾರೋ ಬಿಡ್ತಾರೋ ಗೊತ್ತಿಲ್ಲ. ಅವಳಂತೂ ಸಂತೋಷದಿಂದ ಸುಮ್ಮನೆ ಕುಣೀತಿದಾಳೆ. ಈ ಕತೆ—ಸಾಹುಕಾರದ್ದು—ಕೇಳೋದುಂಟೆ ಅವಳು ಈಗ? ಸಾಧ್ಯವಿಲ್ಲದ ವಿಚಾರ."

"ಹಾಗೇ?" ನಂಜಪ್ಪನ ಬುದ್ಧಿ ತೀಕ್ಷ್ಣವಾಗಿ ಕೆಲಸ ಮಾಡುತ್ತಿತ್ತು "ನೌಕರಿ, ಮನೆ ಏನೂ ಇಲ್ಲದೆ ಹೋಗ್ತಾರೇ?" ಎಂದು ಅಡ್ಡಿಗಳನ್ನು ಸೂಚಿಸಿ ಕೇಳಿದ.

"ಅವೆಲ್ಲ ನಿಶ್ಚಯಮಾಡಿ ಬರೀತಾರಂತೆ, ಇಲ್ಲ, ಬಂದೇ ಕರೆದುಕೊಂಡು ಹೋಗ್ತಾರಂತೆ."

"ಓ, ಅದೇ ಅವನು ಸಿದ್ಧಮಾಡಿಕೋತಾ ಇದ್ದದ್ದು ಹಾಗಾದರೆ!.... ಇದು ನಿಂಗೆ ಇಷ್ಟವೆ?"

"ಇಷ್ಟದ ಮಾತೇನು. ಅಂತೂ ಮಗಳಿಗಾಗಿ ಮಾಡದೇ ಇದ್ದರೆ ಆಗುತ್ತೇ? ಇಲ್ಲೇ ಸಾಹುಕಾರರ ಮನೇಲಿ ರಾಣಿ ಹಾಗೆ ಇರೋ ಹಾಗಿದ್ದರೆ ಬೇರೆ ಮಾತಾಗಿತ್ತು."

"ನಿಜ, ಈಗೇನಿದೆ, ಹೈಸ್ಕೂಲು ಮೇಷ್ಟರು ಅವಳನ್ನು ಇಟ್ಟುಕೊಂಡ ಹಾಗಾಗುತ್ತೆ. ಅದೇನು ಸುಖ ಉಣ್ಣುತ್ತೀರೋ ಏನೋ."

"ಅದೇ ನಂಗೂ ಯೋಚನೆ. ಸದ್ಯ ಸಾಲ ಸೋಲ ಬೇರೆ ಆಗಿದೆ. ಒಡವೆ ವಸ್ತು ಮಾರಿ, ಮನೆಯ ಬಾಡಿಗೆ ಸಾಲ ಎಲ್ಲ ಕೊಟ್ಟುಹೋಗಬೇಕು."

"ಆಮೇಲೆ ನಿರಾಧಾರ ಪರಂಜ್ಯೋತಿಗಳು. ನಿಂಗೆ ದುಡಿಯೋ ಮಗಳೂ ಇಲ್ಲ ಅನ್ನೋ ಹಾಗೇ ಆಗುತ್ತೆ. ಮತ್ತೆ ಇದು ಎಷ್ಟು ದಿನವೋ. ಆಮೇಲೆ ಗರತಿ ಅಂತ ಹೆಸರು; ಕಸಬೂ ಮಾಡೋ ಹಾಗಿಲ್ಲ. ವಯಸ್ಸೂ ಕಳೆದಿರುತ್ತೆ. ಏನು ಮಾಡ್ತೀರಿ? ಬೀದೀಲಿ ಭಿಕಾರಿಗಳ ಹಾಗೆ ಅಲೀತೀರೇನು? ಏನು ವಿದ್ಯೆ ಇದೆಯೆ? ಬುದ್ಧಿ ಇದೆಯೆ? ಓದು ಸಹ ಬರೋದಿಲ್ಲ. ಎಷ್ಟಾದರೂ ಹಣವಂತರ ಹುಡುಗನ ಸಹವಾಸ. ಚಕ್ಕರೆ ಕೊಟ್ಟರೂ ಕೊಟ್ಟನೆ."

"ನಿಜ."

"ಅದೂ ಅಲ್ಲದೆ ಅವನಿಗೆ ಸ್ವಲ್ಪ ಹುಚ್ಚು. ಇಲ್ಲದೇ ಇದ್ದರೆ ಹೀಗೆ ಸೂಳೆಯೋಳನ್ನ ಮದುವೆ ಆಗ್ತೀಸಿ ಅಂತಿದ್ದನೆ? ಎಲ್ಲಾದರೂ ಕೇಳಿದೀಯ? ಈ ಹುಚ್ಚನ್ನ ನೆಚ್ಚಿಕೊಂಡರೆ ಏನೇನಾಗುತ್ತೋ ನಿಮ್ಮ ಪಾಡು."

"ಅದೇ ಭಯ ನಂಗೆ—ಮೊದಲಿಂದಲೂ. ಕುಲ ಬಿಟ್ಟು ಕುಲ ಅಂದರೆ ಇಬ್ಬರಿಗೂ ಕೆಟ್ಟದ್ದೆ. ಹಿರಿಯರು ಹೇಳಿದ ಮಾತು. ಗೌರವಿಸಬೇಕು, ಯಾವಾಗಲೂ. ಅವಳಿಗೆ ಹೇಳೇ ಹೇಳ್ತೀನಿ. ಕಿವಿಗೆ ಬಿದ್ದರೆ! ಕೇಳಿಕೋ ಬೇಡಿ. ಏನು ಅವಿವೇಕ ಮಾಡಿಕೊಂಡು ತನ್ನೂ ಮುಳುಗಿಸಿಕೊಂಡು ನನ್ನೂ ಮುಳುಗಿಸ್ತಾಳೋ. ಈಗಾದರೂ ನಮ್ಮ ಕಸಬು ನಮ್ಮ ಕುಲ, ಮಾನವಾಗೇ ಇದೀವಿ. ಇನ್ನೂ ನವಿಲಿನ ಹಾಗೇ ಕುಣಿಯೋದಕ್ಕೆ ಹೋಗಿ ಕೆಂಬೂತಿ ಪುಕ್ಕ

ತರೆದುಕೊಂಡ ಹಾಗೇ ಆಗಿ—ಮೇಲಿನ ಕುಲಕ್ಕೆ, ಅಂತಸ್ತಿಗೆ ಹೋಗೋದಕ್ಕೆ ಒದ್ದಾಡಿ ಪಪಾತಕ್ಕೆ ಬೀಳೋದೇ ಆಗುತ್ತೋ? ಸಾಹುಕಾರರು ಒಪ್ಪಿದ್ದರೆ ಅದು ಬೇರೆ ಮಾತು.''

'' ಅದೇ ನಾನೂ ಅನ್ನೋದು. ನೀನಾದರೆ ವಿಷಯ ಚೆನ್ನಾಗಿ ತಿಳಿದು ಕೊಂಡಿದೀಯೆ. ಸಾಹುಕಾರರು ಹಟ ಹಿಡಿದರೆ ಏನೇನು ಮಾಡಿ ಎಷ್ಟೆಷ್ಟು ಕಷ್ಟ ಬೇಕಾದರೂ ಕಲ್ಪಿಸಬಲ್ಲರು. ಹಾಗೆ ಮಾಡೋ; ಅಷ್ಟು ಸಿಟ್ಟು ಹತ್ತಿದೆ ಅವರಿಗೆ. ಅವಳು ಇನ್ನೂ ಹುಡುಗಿ, ಗೊತ್ತಿಲ್ಲ........ಹೋಗಲಿ, ಇದೆಲ್ಲ ತಪ್ಪೋ ಹಾಗೆ, ನಿನ್ನ ಮಗಳೂ ಆಸ್ತಿಯಾಗಿ ಉಳಿದು, ಕೈತುಂಬ ಹಣವೂ ಸಿಕ್ಕಿ ನೀವು ಸುಖವಾಗಿರೋ ಹಾಗೆ ಒಂದು ಉಪಾಯ ಹೇಳಲೇನು?''

'' ಏನು, ಅಂಥಾದ್ದು ? '' ನಂಜಪ್ಪ ಹೊಳೆದಿದ್ದ ಹಂಚಿಕೆಯನ್ನು ಸರಿಪಡಿಸಿಕೊಂಡು ಹೇಳಿದ.

'' ಹೇಗಿದ್ದರೂ ಅವನು ಕೆಲಸ ಹುಡುಕಿ ಬರೆಯೋದಕ್ಕೆ ಇನ್ನೂ ಅಷ್ಟು ದಿನ ಹಿಡಿದೇ ಹಿಡಿಯುತ್ತೆ. ಅಷ್ಟರೊಳಗೇ ಬೊಂಬಾಯಿಂದ ಅವನೇ ಬರೆದ ಹಾಗೆ ಕಾಗದ ಬರುತ್ತೆ, 'ಎಲ್ಲ ಸರಿಯಾಗಿದೆ ಇಂಥ ದಿನ ಬನ್ನಿ' ಅಂತ. ಹೊರಟುಬಿಡು ಮಗಳ ಜತೇಲಿ. ''

'' ಆಂ!... ....ಆಮೇಲೆ ? ''

'' ಅಲ್ಲೆಲ್ಲ ನಾನು ಅಚ್ಚುಕಟ್ಟಾದ ಏರ್ಪಾಟು ಮಾಡಿರ್ತೀನಿ. ನಂಗೆ ಗೊತ್ತಾದೋರು ಇದಾರೆ—ನಾನು ಕುದುರೆ-ಜೂಜಿಗೆ ಹೋಗಿಬರ್ತಿದ್ದೆನಲ್ಲ ಬಹಳ ಸಂಬಂಧ ಸಲಿಕ ಇವೆ. ಗುರೂನ ಪರವಾಗಿ ಅಂತ ಬಂದು ಕರೆದು ಕೊಂಡು ಹೋಗ್ತಾರೆ. ''

'' ಅಯ್ಯೋ, ಅವಳು ಅಲ್ಲಿ ಇರ್ತಾಳೇ? ಒಗ್ಗಿಸಿಕೋತಾಳೇ? ಓಡಿ ಬಂದುಬಿಡ್ತಾಳೆ. ಏನಂದುಕೊಂಡಿರಿ? ''

'' ಹುಚ್ಚಿ, ಅಲ್ಲಿ ವಿಚಾರ ನಿಂಗೆ ಗೊತ್ತಿಲ್ಲ. ಅಂಥ ಶಹರಿನ ಎರಡು ದಿನದ ಜೀವನಕ್ಕೇ ಅವಳು ಮನಸ್ಸು ಸೋತುಬಿಡ್ತಾಳೆ. ಇಲ್ಲ ಅನ್ನು. ಅಲ್ಲಿ ಬಂದು ಕರೆದುಕೊಂಡು ಹೋಗೋರು ಏನು ಸಾಮಾನ್ಯ ಅಂತ ತಿಳಿದು ಕೊಂಡಿದೀಯ? ಪೋಲೀಸು-ಗೀಲೀಸು ಎಲ್ಲ ಅವರ ಕೈಲಿ. ಒಂದು ಸಲ ಸಿಕ್ಕಿಬಿಟ್ಟರೆ ತಪ್ಪಿಸಿಕೊಳ್ಳೋ ಮಾತೇ ಇಲ್ಲ.

" ಪಾಪ, ಹುಡುಗಿಗೆ ಅದೆಲ್ಲ ಭಂಗ........"

" ಹಾಗಲ್ಲವೇ ಹುಚ್ಚಿ, ಅವರು ಸರಿಯಾಗೇ ಉಪಾಯವಾಗಿ ನೋಡಿಕೋತಾರೆ. ಕಟ್ಟೆಕಡೇದು ಹೇಳಿದೆ ಅಷ್ಟೆ. ಇಂಥ ಅವಕಾಶ ನಿಂಗೆ ಸಿಕ್ಕಬೇಕಲ್ಲ. ಈ ಮರುಳೂರಿನಲ್ಲಿ ಏನಿದೆ, ಮಣ್ಣು? ಅಲ್ಲಿ ಜೀವನ ನೋಡಬೇಕು. ಎಲ್ಲ ಲಕ್ಷಾಧೀಶ್ವರ ಕೋಟ್ಯಾಧೀಶ್ವರ ಸಂಬಂಧ. ದೊಡ್ಡ ಅರಮನೆ ಅಂಥ ಕಡೆ ಇರಬಹುದು. ದುಡ್ಡಂತೂ ಸುರಿದುಹೋಗುತ್ತೆ—ಅದೂ ನಿನ್ನ ಮಗಳಂಥೋಳಿಗೆ. ಅದೆಲ್ಲ ಇನ್ನು ಯಾರ ಕೈಲಿ, ನಿನ್ನ ಕೈಯಲ್ಲೇ. ಹೇಗಿರಬಹುದು ನೋಡು. ನಿನ್ನ ಮಗಳೂ ನಾಲ್ಕು ದಿನ ನೋಡಿ ಇದನ್ನೆಲ್ಲ ಮರೆತು ಶೋಕಾಗಿರ್ತಾಳೆ. ಅಂಥ ಕಡೆಗೆ ಹೋಗೋದು ಅಂದರೆ ಸಾಮಾನ್ಯವೆ? ಈಗೇನೋ ಕೈತುಂಬ ಹಣ ಸಿಕ್ಕೋಹಾಗಿದ್ದು, ಕಾಲ ಒದಗಿಬಂದು ನಿಮಗೂ ಕಷ್ಟ ಕಳೆಯೋ ಹಾಗಾಗಿ ಒಳ್ಳೇದಾಗೋದರಿಂದ ತಾನೆ ಹೇಳಿದೆ? ಬೇಕಾದರೆ ಮಾಡು, ಇಲ್ಲದೆ ಇದ್ದರೆ ಬಿಡು. ನಿಂಗೇ ಇಲ್ಲ, ಸಿಕ್ಕೋ ಹಣ ಸುಖವಿಲ್ಲ. ಇದನ್ನು ಬಿಟ್ಟು ಆಗಲೇ ಅಂದ ಹಾಗೆ ಪಡಬಾರದ ಪಾಡು ಪಡಬೇಕು ಅಂತ ನಿಮ್ಮ ಹಣೇಲಿ ಬರೆದಿದ್ದರೆ ಯಾರು ತಪ್ಪಿಸ್ತಾರೆ?"

ಸ್ವಲ್ಪ ಕಾಲ ನೀಲಾಸಾನಿ ಯೋಚಿಸುತ್ತಿದ್ದಳು. ನಂಜಪ್ಪ 'ಕಬ್ಬಿಣ ಬಿಸಿಯಾಗಿದೆ ಬಡಿಯಬೇಕು' ಅಂದುಕೊಂಡ.

" ಒಪ್ಪಿದೆಯಾ, ಇಗೋ ಐದು ಸಾವಿರ ನೀವು ಗಾಡೀಲಿ ಕೂತ ದಿನ. ಅಷ್ಟರಲ್ಲೇ ಸುಖವಾಗಿರಬಹುದು. ಏನು ಸ್ವಲ್ಪವೆ? ಇಲ್ಲಿ ನೂರು ಇನ್ನೂರಕ್ಕಿಂತ ಒಟ್ಟಿಗೆ ಎಲ್ಲಿ ಕಂಡಿದೀರಿ?"

ಅವಳು ಯೋಚಿಸಿದಳು ನಂಜಪ್ಪ ನೋಟುಗಳನ್ನು ಬಿಚ್ಚಿ ತೋರಿಸಿದ. ಸೂಳೆಯ ಕಣ್ಣು ಹೊಳೆಯಿತು. ಆದರೆ ಇನ್ನೂ ಸುಮ್ಮನಿದ್ದಳು.

" ಏನು?" ಅವನು ಆತುರದಿಂದ ಕೇಳಿದ. ಅವಳು ಇನ್ನೂ ಮೌನವಾಗಿಯೇ ಇದ್ದಳು

" ಬೇಕಾದರೆ ಇನ್ನೂ ಕೊಡೋದಕ್ಕೂ ಸಾಹುಕಾರರು ಒಪ್ಪೆ ಒಪ್ಪುತ್ತಾರೆ - ಇಬ್ಬರಿಗೂ ಅನುಕೂಲವಾದರೆ." ನಂಜಪ್ಪ ಸಿಕ್ಕುವಂತಿದ್ದ ಅವಕಾಶವನ್ನು ಕೈಬಿಡಲು ಹೆದರಿದ. ಇಷ್ಟಕ್ಕೂ ಅವನ ಹಣವೇನಲ್ಲವಲ್ಲ.

" ಅಂ!" ಆಸೆ ಕಂಡಿತು.

"ಹುಂ. ಇನ್ನಷ್ಟು."

"ಎಷ್ಟು?" ಆಕರ್ಷಣೆಗೆ ಸೋತಳು. ದುರಾಸೆಯ ಸೆಳೆತಕ್ಕೆ ಸಿಕ್ಕಿದಳು.

"ನೀನೇ ಕೇಳು."

"ದೇವರು ಅವರಿಗೇನು ಕಡಿಮೆ ಮಾಡಿದಾನೆ? ಎಷ್ಟು ಕೊಟ್ಟರೂ ಕಡಿಮೆ ಆಗೋದಿಲ್ಲ."

"ಎಷ್ಟು ಸರಿಯಾಗಿ ಹೇಳು ಮತ್ತೆ."

"ಇನ್ನೂ ಐದು........"

"ಹತ್ತು ಸಾವಿರವೆ!"

"ಹುಂ, ಹೆಚ್ಚೇನು? ಅವರ ಮನೆ ಉಳಿಯೋ ವಿಷಯ ಇದು. ಕೊಡಲಾರರೆ?"

"ಏನೋ ಕೇಳ್ತೀನಿ. ಜುಗ್ಗ ಮನುಷ್ಯ—ಇಂಥಾದ್ದರಲ್ಲಿ. ಆದರೂ...."

"ಇದಕ್ಕಾಗಿ ನಾನು ಅವಳ ಕೈಲಿ ಎಷ್ಟೆಷ್ಟು ಭಂಗ ಪಡಬೇಕೋ ಏನೇನೋ ಮುಂದೆ. ಒಳ್ಳೇದೇ ಆಗುತ್ತೊ ಕೆಟ್ಟದೇ........'

"ಒಳ್ಳೇದೇ ಆಗುತ್ತೆ."

"ಹಾಗೇ ಅಂತಲೇ ಒಪ್ಪಿಕೋತಾ ಇದೀನಿ. ಅವಳಿಗೂ ಸುಖ ಹೆಚ್ಚುತ್ತೆ ಅಂತಲೇ."

"ನಿಜವಾದ ಮಾತು."

"ಆದರೂ ಕಷ್ಟ ಇದ್ದೇ ಇರುತ್ತೆ. ಕಡಿಮೆ ತಗೊಂಡು ಆಮೇಲೆ ಅವಳೂ ಸಂಪಾದಿಸದೆ—ಹುಂ, ಹಾಗೂ ಮಾಡೋಳೆ. ಅವಳಿಗೇನೋ ಹೊಸ ಬುದ್ಧಿ ಬಂದಿದೆ. ಹಿಂಸೆ ಮಾಡೋದು ನಂಗೆ ಒಪ್ಪಿಗೆಯಿಲ್ಲ. ಎಷ್ಟಾದರೂ ಇದು ಕೆಟ್ಟ ಕಸಬು—ಆಮೇಲೆ ಕಣ್ಣು ಕಣ್ಣು ಬಿಡೋ ಹಾಗೆ ಆದರೆ?.... ಆಗೋದಿಲ್ಲ ಕಡಿಮೆ."

"ಆಗಲಿ, ನಮ್ಮ ಭಾವನ್ನ ಕೇಳಿ ಹೇಳ್ತೀನಿ."

"ಅಷ್ಟಾದರೆ, ನನ್ನ ಕೈಲಾದದ್ದೆಲ್ಲ ಮಾಡ್ತೀನಿ—ಬೆಲೆ ತಗೊಂಡ ಮೇಲೆ. ಅಷ್ಟೆ. ಆದರೆ ಇನ್ನೂ ಯಾವ ಭರವಸೆಯೂ ಇಲ್ಲ. ನನ್ನ ಶಕ್ತಿ ಮೀರಿ........"

"ಅಯ್ಯೋ, ಅದರ ಯೋಚನೆ ಯಾಕೆ? ನಂಗೆ ಬಿಡು ಅದರ ಬಂದೋಬಸ್ತು."

ನಂಜಪ್ಪನಿಗೆ ಒಂದು ಸೋಲಾದರೂ ಇನ್ನೊಂದು ಗೆಲುವು ಆಯಿತೆಂದು ಹಿಡಿಸಲಾರದ ಸಂತೋಷ. ತನ್ನ ಬುದ್ಧಿವಂತಿಕೆಯನ್ನು ತಾನೇ ಮೆಚ್ಚಿಕೊಂಡ. ಭಾವನಿಂದ ಇನ್ನೂ ಹೆಚ್ಚು ಕಿತ್ತುಕೊಂಡು ಇತ್ತಕಡೆ ದಳ್ಳಾಳಿ, ಕಮಲೆಯನ್ನು ಬೊಂಬಾಯಿ ವ್ಯಾಪಾರಸ್ಥರಿಗೆ ಒಪ್ಪಿಸಿ ಅತ್ತ ಕಡೆ ಕ್ರಯ ಎರಡೂ ಸಿಕ್ಕುವುವೆಂದು ಒಳಗೇ ಹಿಗ್ಗಿದ. ನೀಲಾಸಾನಿ 'ನಂದೇನು ಹೋಗುತ್ತೆ. ನಮಗೆ ಬರೋ ಹಣ ಬಂತು. ಮಗಳನ್ನು ಸಾಗಿಸಿಕೊಂಡೂ ಹೋಗೋದು. ಅಲ್ಲಿ ಮುಂದೆ ಆಗೋದಕ್ಕೆಲ್ಲ ನನ್ನ ಜವಾಬ್ದಾರಿಯಿಲ್ಲ" ಎಂದುಕೊಂಡಳು. ಈ ಪಗಡೆಯಾಟದಲ್ಲಿ ಪಣ ನಿರ್ಭಾಗ್ಯ ಕಮಲೆ.

ನಂಜಪ್ಪ ಹಿಂತಿರುಗುವ ಹೊತ್ತಿಗಾಗಲೇ ಗುರು ಬೊಂಬಾಯಿಗೆ ಹೊರಟು ಹೋಗಿದ್ದ. ನಾಕುಕಾರರು ನಂಜಪ್ಪನ ಬರವನ್ನು ಆತುರದಿಂದ ಕಾಯುತ್ತಿದ್ದರು. ಅವನ ಮುಖದ ಗೆಲುವನ್ನು ಕಂಡು "ಸಾಧ್ಯವಾಯ್ತು ತಾನೇ! ಹ್ಹ! ಹ್ಹ!" ಎಂದು ನಕ್ಕರು. ನಂಜಪ್ಪ "ನೀನು ಹೇಳಿದ ರೀತಿಯಲ್ಲ" ಅಂದ.

"ಅಂದರೆ?"

"ಅವಳೇನು ಹಣಗಿಣಕ್ಕೆಲ್ಲ ಸೋಲೋಳಲ್ಲ. ಮುಖದ ಮೇಲೇ ಬೀಸಾ...."

"ಆಂ! ಈ ಸೂಳಿಗೆ ಎಷ್ಟು ಗರ್ವ! ಹುಂ! ನನ್ನ ಆಸ್ತೀನೆಲ್ಲ ಹೊಡಕೋಬೇಕು ಅಂತಿದಾಳೇನೋ ಹಾಗಾದರೆ."

"ಅದೇನೋ ನಾ ಕಾಣೆ. ಅಂತೂ ನಿನ್ನ ಮಗನ್ನ ಬಿಡೋದಕ್ಕೆ ಅವರು ಸಿದ್ಧವಾಗಿಲ್ಲ."

"ಹೂಂ!"

"ಆದರೆ ಭಾವ, ಬಿಡಿಸೋ ಹಾಗೆ ನಾನು ಒಂದು ದೊಡ್ಡ ಬುದ್ಧಿವಂತಿಕೆ ಮಾಡಿ ಬಂದಿದೀನಿ. ಏನು ಅಂದುಕೊಂಡಿದೀಯ? ಫಸ್ಟ್‌ಕ್ಲಾಸ್ ಉಪಾಯ! ಹ್ಹ! ಹ್ಹ! ಹಾ!" ನಂಜಪ್ಪ ತನ್ನ ಉಪಾಯವನ್ನು ತನ್ನ ಮೆಚ್ಚಿಕೆಯ ಮಧ್ಯದಲ್ಲಿ ಉದ್ದವಾಗಿ ಬಣ್ಣಿಸಿದ. ಈ ಹಂಚಿಕೆಯ ಬೆಲೆ

ಹದಿನೈದು ಸಾವಿರಕ್ಕೆ ಚಿಕ್ಕ ಕಾಸೂ ಕಡಿಮೆಯಿಲ್ಲವೆಂದು ಮುಗಿಸಿದ. ಸಾಹುಕಾರರು ಅಲ್ಲಲ್ಲಿ ಹುಬ್ಬುಗಂಟಿಕ್ಕುತ್ತ, ತಲೆದೂಗುತ್ತ ಎಲ್ಲವನ್ನೂ ಕೇಳಿದರು. ಅವರ ಸಿಟ್ಟು ಶಾಂತವಾಯಿತು. ಮುಖದಲ್ಲಿ ತೃಪ್ತಿ ಸಂತೋಷವೂ ಕಂಡಿತು.

"ಭಲೆ! ಒಳ್ಳೇದು ಮಾಡಿದೆ. ನೀನೂ ಇಷ್ಟು ಉಪಾಯಗಾರ ಅಂತ ಗೊತ್ತಿರಲಿಲ್ಲ. ಬೇಷ್!" ಎಂದು ನಂಜಪ್ಪನ ಬೆನ್ನು ತಟ್ಟಿದರು.

"ಇದೊಂದು ಸಾಕು, ನನಗೆ ಇಷ್ಟು ದಿನ ನೀನು ಅನ್ನ ಹಾಕಿದ್ದಕ್ಕೆ. ಹ್ಹಹ್ಹಹಾ!" ನಂಜಪ್ಪ ಉಬ್ಬಿಹೋದ. ಸಾಹುಕಾರರ ಮುಖ ನಗೆಯಿಂದ ಗಂಭೀರಕ್ಕೆ ತಿರುಗಿಕೊಂಡಿತು.

"ಏನ ಯ್ತು?" ನಂಜಪ್ಪ ಸಪ್ಪೆಯಾಗಿ ಕೇಳಿದ.

"ಏನಿಲ್ಲ. ಹಾಗೇ ಇನ್ನೂ ಏನಾದರೂ ಯೋಚಿಸುತ್ತಿದ್ದೆ.'

ಸ್ವಲ್ಪ ಕಾಲ ಮೌನ.

"ನಂಜಪ್ಪ!"

"ಏನು ಭಾವ?"

"ನೀನು ಮಾಡಿರೋದು ಸರಿಯೆ. ಆದರೆ ಅದರಲ್ಲಿ ಕೊಂಚ ಆತಂಕದ ಅಂಶಗಳು ಇವೆ. ಕಷ್ಟಕ್ಕೆ...."

"ಏನಿಲ್ಲ ಭಾವ ಎಲ್ಲ ಸರಿಯಾಗುತ್ತೆ."

"ಆಗಲಿ ಅದನ್ನು ಕಡೆಗೆ ಮಾಡೋಣ. ಅಗತ್ಯವಾದರೆ. ಆದರೆ ನಮ್ಮ ಇಷ್ಟವೂ ನೆರವೇರಬೇಕು, ಅವನ ವಿರೋಧವೂ ಇರಬಾರದು ಆದಷ್ಟು. ಇಲ್ಲದಿದ್ದರೆ ಅವನು ಏನೇನಾದರೂ ಮಾಡಿಯಾನು. ಅವನು ನಮ್ಮ ದಾರಿಗೆ ಬರದೇ ಇದ್ದರೆ ಮಾಡಿದ್ದೆಲ್ಲ ವ್ಯರ್ಥ, ನೋಡು. ಸಾಧ್ಯವಾದರೆ ಅವಳೇ ಅವನನ್ನು ಬಿಡೋಹಾಗೆ ಇರಬೇಕು. ನಾವು ಬಲವಂತ ಪಡಿಸಿದೆವು ಅಂತ ಆಗಬಾರದು. ಏನೇನಾದರೂ ಫಜೀತಿಗೆ ಇಟ್ಟುಕೋಬಹುದು. ಯಾವ ದಾರಿಯೂ ಇಲ್ಲದಿದ್ದರೆ ಇದನ್ನೇ ಮಾಡೋದೆ. ಬೇಕಾದ್ದು ಬರಲಿ. ಎದುರಿಸೋದೆ, ಸರಿಪಡಿಸೋದೆ."

"ಹಾಗಾದರೆ ಇನ್ನೇನು ಸಾಧ್ಯ?" ನಂಜಪ್ಪನ ಮುಖ ಬಿದ್ದಿತು. ಎಷ್ಟೋ ಸಾವಿರ ಅವನ ಬೆರಳುಗಳಿಂದ ಬಿದ್ದುಹೋದಹಾಗಾಯಿತು.

"ಅವಳನ್ನು ಕಂಡು ಮಾತಾಡಲೇ ಅಂತ?"

"ಸರಿ, ದುಡ್ಡಿಗೇ ಒಪ್ಪದೆ ಇರೋಳು ಇನ್ನು ಮಾತಿಗೆ...."

"ಅವಳ ರೀತಿ ನೋಡಿದರೆ ಸ್ವಲ್ಪ ಮೇಲುತರಹದವಳೇ ಅಂತ ಕಾಣುತ್ತೆ."

"ಏನು ಸೊಸೇನೇ ಮಾಡಿ...."

"ಛಿ! ಹುಚ್ಚ."

"ಮತ್ತೆ? ಅವಳೇನೋ ಮೇಲಿನೋಳೇ. ಏನು ಗರ್ವ ಅಂತಿ? ಬೇಡದೆ ಇದ್ದೋರನ್ನ ಮುಟ್ಟಗೊಡಿಸೋದಿಲ್ಲ."

"ಹೂಂ!....ನಾನು ಹೇಳಿದರೆ ಅಂಥವಳು ನನ್ನ ಯೋಚನೆ ಭಾವನೆ ಗಳನ್ನು ಸ್ವಲ್ಪ ತಿಳಿದುಕೊಂಡಾಳು, ವಿವೇಕದಿಂದ ನಡೆದುಕೊಂಡಾಳು ಅನ್ನಿಸುತ್ತೆ."

"ಅದೇನೋ. ನಿನ್ನ ಯೋಚನೆ ಭಾವನೆ...."

"ಹೀಗೆ ಎಷ್ಟೋ ಸಲ ಗೆದ್ದಿದೀನಿ. ಹೋಗಿ ಕಂಡರೋ ಅವಳನ್ನು?"

"ನೀನು!"

"ಹುಂ. ಅವಳನ್ನು ನಾನೇನು ಮಾಡೋದು ಅಂತಿದ್ದೆ; ಆದರೆ ಈಗ ಈ ಮನೆಗಾಗಿ, ಈ ಆಳುದ್ದ ಶರೀರಾನ ಗೇಣುದ್ದ ಮಾಡಿಕೊಂಡು, ಮೂಲೆ-ಗೊತ್ತರಿಸಿ, ಈ ಕುಲಹೀನಳ ಮನೆಗೂ ಹೋಗಿಬಿಡಬೇಕು ಅಂತ ಕಾಣುತ್ತೆ."

"ಅವಳನ್ನೇ ಕರೆಸಿದರೆ?"

"ಇಲ್ಲ, ನಾವೇ ಹೋದರೆ—ಈ ಹೊತ್ತಿನಲ್ಲಿ ಕಡಿಮೆ ಪುಕಾರು. ಅಲ್ಲದೆ ನಾನೇ ಹೋಗಿ ಕೇಳಿದೆ ಅಂದರೆ ಇನ್ನೂ ಅವಳ ಮೇಲೆ ಭಾರ ಹೆಚ್ಚಾಗುತ್ತೆ—ಒಳ್ಳೇ ತರಹಳಾದ್ದರಿಂದ. ಅಲ್ಲದೆ ನಾಳೆಯ ವರೆಗೆ ಹೇಗೆ ತಡೆಯುತ್ತೆ ಮನಸ್ಸು? ಈಗಲೇ ಎಲ್ಲಾ ತೀರ್ಮಾನವಾಗಿಬಿಡಲಿ, ಹೇಗಾದರೂ. ನಡಿ ಮತ್ತೆ."

ಭಾವ, ಭಾವಮೈದುನ ಹೊರಟರು.

ಬಾಗಿಲು ತಟ್ಟಿದ ಶಬ್ದ ಕೇಳಿ ನೀಲಾಸಾನಿಗೆ ಆಶ್ಚರ್ಯವಾಯಿತು. ಈಚೆಗೆ ಗಿರಾಕಿಗಳು ಬರುವುದೇ ನಿಂತುಹೋಗಿತ್ತು. ಈಗ ಇಷ್ಟು ಹೊತ್ತಿನಲ್ಲಿ ಯಾರಿರಬಹುದು? ಯಾರೋ ಗೊತ್ತಿಲ್ಲದವರಿರಬೇಕು. ಹುಂ,

ಏನು ಪ್ರಯೋಜನ? 'ಹೋಗಿ' ಎಂದು ಹೇಳಿಕಳಿಸುವದು ತಾನೆ. ಬೇಸರ ದಿಂದ ಒಂದು ಬಾಗಿಲನ್ನು ತೆಗೆದಳು. ಸಾಹುಕಾರರು! ಇದಿರಿನಲ್ಲಿ! ನೀಲಾಸಾನಿಗೆ ದಿಗ್ಭ್ರಮೆಯಾಯಿತು. ಕ್ಷಣಕಾಲದ ಮೇಲೆ ಚೇತರಿಸಿ ಕೊಂಡಳು. "ನಿನ್ನ ಮಗಳ ಹತ್ತಿರ ನಾಲ್ಕು ಮಾತಾಡೋದಿತ್ತು, ಬಂದೆ." ಸಾಹುಕಾರರು ವಿವರಿಸಿದರು. "ಅಗತ್ಯವಾಗಿ. ಒಳಗೆ ದಯಮಾಡಿಸಬೇಕು. ಹೀಗೆ, ಹೀಗೆ" ನೀಲಾಸಾನಿ ಅವರನ್ನು ಒಳಗೆ ಹಜಾರಕ್ಕೆ ಕರೆದುಕೊಂಡು ಹೋದಳು.

ಕಮಲೆಗೆ ಇನ್ನೂ ನಿದ್ದೆ ಹತ್ತಿರಲಿಲ್ಲ. ಹೇಗೆ ಹತ್ತೀತು? ಅದೇ ಮಧ್ಯಾಹ್ನ ಗುರು ಹೇಳಿ ಹೋದ ತೀರ್ಮಾನವನ್ನು ತಿರಿತಿರಿಗಿ ಸವಿಸವಿದು ಸವಿ-ಕನಸುಗಳನ್ನು ಕಾಣುತ್ತಿದ್ದಳು. ತನ್ನ ಮನೆ—ಸಣ್ಣದಾದರೇನು? ಎಷ್ಟೇ ಕಷ್ಟವಾದರೂ ಚಿಂತೆಯಿಲ್ಲ ದುಃಖವಿಲ್ಲ. ತನ್ನದೇ ಸಂಸಾರ, ಗರತಿಯ ಸಂಸಾರ. ಮನೆಯ ಅಚ್ಚುಕಟ್ಟು, ಗಂಡನ ಸೇವೆ, ಅವನೊಡನೆ ಸರಸ, ಪ್ರೇಮೋಲ್ಲಾಸ, ತನ್ನವನೇ ಪ್ರಿಯ, ತನ್ನವೇ ಮಕ್ಕಳು. ಈ ಗರತಿಯರೆಲ್ಲ ಏನು ಭಾಗ್ಯವಂತೆಯರೋ! ಇಷ್ಟು ದಿನ ಎಂಥ ಜೀವನವನ್ನು ನಡೆಸಿದ್ದಳು. ಹೇಯ, ನಿಸ್ಸಾರ, ವ್ಯಾಪಾರ. ಹುಂ ಇದರ ಉಚ್ಚತನ, ಬರಡುತನ ಎಲ್ಲಿ; ಅದರ ರಸ, ತೂಕ, ಭಾವನೆ ಎಲ್ಲಿ? ಎಲ್ಲಿಂದ ಎಲ್ಲಿಗೆ. ಸದ್ಯ ಈಗಲಾದರೂ ಬದಲಾವಣೆ ಬಂದಿತಲ್ಲ-ಅವರು ದೇವರೇ ಬಂದ ಹಾಗೆ ಬಂದು. ದೇವರೇ! ಅವರನ್ನು ತಣ್ಣಗಿಟ್ಟಿರಪ್ಪ, ಬಡವಳನ್ನೂ ಕಾಪಾಡಪ್ಪ! ತಾನೂ ಇನ್ನು ಭಾಗ್ಯವಂತೆಯೆ—ಗರತಿಯರಿಗಿಂತ ಹೆಚ್ಚು. ಅವರಿಗೆಂದರೆ ಒಂದೇ ಸ್ಥಿತಿಯ ಅನಾದರವಿರಬಹುದು ಪಾಪ! ತನಗೆ, ಈ ಸ್ಥಿತಿಯಿಂದ ಮೇಲೆ ಹತ್ತಿದವಳಿಗೆ, ಅದರ ಸವಿ ಹೆಚ್ಚು ಗೊತ್ತು. ಬರುವುದಕ್ಕೆ ಇರುವ ಬೆಲೆ ಇರುವುದಕ್ಕೆ ಇಲ್ಲ....

ಬಾಗಿಲ ಶಬ್ದ ಇವಳನ್ನು ಎಚ್ಚರಿಸಿತು. 'ಯಾರೋ ನೀಚರು. ಅಮ್ಮ ಹೊರಗೆ ಕಳಿಸ್ತಾಳೆ' ಅಂದುಕೊಂಡಳು. ಇಲ್ಲ, ಒಳಗೇ ಬಂದರು. ತಟ್ಟನೆ ಎದ್ದು ಕುಳಿತಳು. ಅವಳಿಗೆ ಆಶ್ಚರ್ಯ, ಅನುಮಾನ, ಸ್ವಲ್ಪ ಭಯ. ಯಾರಿರ-ಬಹುದು? ಅಥವ ಅವರೇಯೋ? ಇರಬಹುದೊ? ಏನಾಯಿತೋ ಏನೋ.

ತಕ್ಷಣ ಸೀರೆಯನ್ನು ಸರಿಮಾಡಿಕೊಂಡು ತಲೆಗೂದಲನ್ನು ಕೈಗಳಿಂದ ಹಿಂದೆ ಮಾಡಿಕೊಂಡು ಸಿದ್ಧವಾದಳು.

"ಕಮಲ, ಸಾಹುಕಾರರು ಬಂದಿದಾರೆ." ತಾಯಿ ಆತುರದಿಂದ ಒಳಗೆ ಬಂದು ಹೇಳಿದಳು.

"ಏನು!" ಕಮಲೆ ಬೆರಗಾದಳು.

"ಹುಂ, ನಿನ್ನ ಹತ್ತಿರ ಏನೋ ಮಾತಾಡಬೇಕಂತೆ."

"ನನ್ನೊಡನೆ-ಮಾತು! ಏನು ಮಾತು? ಯಾಕೆ?" ಕಮಲೆಗೆ ಒಂದೂ ತೋಚಲಿಲ್ಲ. ಬುದ್ಧಿಯೇ ನಿಂತುಹೋಯಿತು. ಅವಳು ಹಾಗೇ ಕುಳಿತುಬಿಟ್ಟಳು; ತಾಯಿ ಮತ್ತೊಮ್ಮೆ ಎಚ್ಚರಿಸಿದ ಮೇಲೇ ಅವಳು ದಿಗ್ಗನೆದ್ದು, ತನ್ನೊಳಗೆ ಕೋಲಾಹಲವಾಗುತ್ತಿದ್ದರೂ ಆದಷ್ಟು ಶಾಂತಮುದ್ರೆಯನ್ನು ತಂದುಕೊಂಡು, ಹಜಾರಕ್ಕೆ ಬಂದು, ಕಂಬವನ್ನು ಒರಗಿಕೊಂಡು ತಲೆತಗ್ಗಿಸಿ ನಿಂತುಕೊಂಡಳು. ಮೆತ್ತೆಯ ಮೇಲೆ ಕುಳಿತಿದ್ದ ಸಾಹುಕಾರರಿಗೆ ಅವಳನ್ನು ನೋಡಿ ಆಶ್ಚರ್ಯವಾಯಿತು. ಅವರಿಗಿದ್ದ ಅವಳ ಚಿತ್ರ ಮದುವೆಯ ಮನೆಯಲ್ಲಿ ಕಂಡಿದ್ದು. ಇವಳು ಅವಳೆಯೆ? ಆ ಸುಣ್ಣ ಬಣ್ಣ ವೇಷಭೂಷಣವೆಲ್ಲಿ? ಈ ಸರಳತೆ, ಗಾಂಭೀರ್ಯಗಳೆಲ್ಲಿ! ಕಮಲೆ ಕಾಲು ತುಂಬ ಬಿಳಿಯ ಸೀರೆಯನ್ನುಟ್ಟು ಸೆರಗನ್ನು ಪೂರ್ತಿ ಹೊದ್ದಿದ್ದಳು. ಅದರ ಕೆಳಗೆ ಮುಸಕುಮುಸಕಾಗಿ ಕೆಂಪು ಬಣ್ಣದ ರವಿಕೆ. ಕಿವಿಯಲ್ಲಿ ಸಣ್ಣ ಮುತ್ತಿನ ಬೆಂಡೋಲೆ, ಕೈಗಳಲ್ಲಿ ನಾಲ್ಕು ಗಾಜಿನ ಬಳೆಗಳು. ಆಕರ್ಷಕವಾಗಿ ಸ್ವಲ್ಪವೇ ಕದಲಿದ್ದ ಕುರುಳಿಗೆ ಯಾವ ಅಲಂಕಾರವೂ ಇಲ್ಲ. ಮಂಕು ದೀಪದಲ್ಲಿಯೂ ಮುಖ ನಸುಕೆಂಪಾಗಿತ್ತು—ಲಜ್ಜೆಯೇರಿಸಿದ ಕೆಂಪು. ತುಟಿಗಳು ಒತ್ತಿಕೊಂಡಿದ್ದುವು. ಸ್ವಲ್ಪವೇ ಎದ್ದ ಗಾಬರಿಯ ಹುಬ್ಬು. ದೃಷ್ಟಿ ನೆಲದ ಮೇಲೆ. ಕಾಲಿನ ಬೆರಳು ನೆಲವನ್ನು ಸ್ವಲ್ಪ ಕೆರೆಯುತ್ತಿತ್ತು. ಕೈಬೆರಳು ಸೆರಗನ್ನು ಸುತ್ತಿಕೊಳ್ಳುತ್ತಿತ್ತು. ಸಾಹುಕಾರರು ಕ್ಷಣಕಾಲ ಬಂದ ಕೆಲಸವನ್ನು ಮರೆತು ಅವಳನ್ನೇ ದಿಟ್ಟಿಸಿದರು. ಅವರ ಮುಖ ಮೃದುವಾಯಿತು. "ಇವಳ ಕುಲ, ಮನೆ ಚೆನ್ನಾಗಿದ್ದರೆ!" ಅಂದುಕೊಂಡು ನಿಟ್ಟುಸಿರು ಬಿಟ್ಟರು. ಆದರೆ ಅವರು ಎಚ್ಚೆತ್ತಾಗ ಮುಖ ಮತ್ತೆ ಬಿಗಿದುಕೊಂಡಿತು. ಈ ತಡಕ್ಕಾಗಿ ತಮ್ಮ ಮೃದುತನಕ್ಕಾಗಿ, ಅವರಿಗೇ ಅಸಮಾಧಾನವಾಯಿತು. ಎಷ್ಟಾದರೂ, ಏನು ಪ್ರಯೋಜನ? ಇವಳೆಲ್ಲಿ, ತಾವೆಲ್ಲಿ, ತಮ್ಮ

ಮಗನೆಲ್ಲಿ. ಹುಂ! "ಈ ವಿಷಯ—ನಿಂಗೆ ಗೊತ್ತಿಲ್ಲ—ಇತ್ಯರ್ಥ ಮಾಡಿ ಬಿಡೋಣ ಅಂತ ನಾನೇ ಬಂದೆ." ಸಾಹುಕಾರರು ಪೀಠಿಕೆ ಹಾಕಿದರು. ಕಮಲೆಯ ಎದೆಯ ಬಡಿತ ಇನ್ನೂ ಜೋರಾಯಿತು. ಸ್ವಲ್ಪವೇ ಅದುರಿದಳು. ಹಣೆಯ ಮೇಲೆ ಹನಿಗೂಡಿದುವು.

"............"

"ಇದೇಕೆ, ಈ ವಿಷಯದಲ್ಲಿ ಇಷ್ಟೊಂದು ಹಟ ನಿಂಗೆ?"

ಕಮಲೆಯ ಬೆರಗು-ದೃಷ್ಟಿ ಸಾಹುಕಾರರ ಕಡೆಗೆ ಸರಿದು ಮತ್ತೆ ವಾಪಸು ಬಂದಿತು. ಹಿಂದೆ ಎಷ್ಟೋ ಅಪರಿಚಿತ ಗಂಡಸರ ಹತ್ತಿರವೆಲ್ಲ ಚಕ್ಕಂದವಾಡಿ ದವಳಿಗೆ ಈಗ ಮಾತು ಕೂಡ ಹೊರಡಲಿಲ್ಲ. ಆ ದಿಟ್ಟತನ ಅಡಗಿಹೋಗಿತ್ತು.

"ಏನು, ನಮ್ಮ ಮನೆ ಆಸ್ತಿ ಎಲ್ಲಕ್ಕೂ ಒಡತಿ ಆಗ್ತೀನಿ ಅಂತ ತಿಳಿದು ಕೊಂಡು, ಹಣ ಪದವಿ ಇವಕ್ಕೆ ಆಸೆ ಬಿದ್ದು........"

ಕಮಲೆ ತಟ್ಟನೆ ಕತ್ತೆತ್ತಿ ತನ್ನ ನೋಟದಿಂದಲೇ ಅವರ ಮಾತನ್ನು ನಿಲ್ಲಿಸಿ ಕತ್ತನ್ನು ಅತ್ತಿತ್ತ ಆಡಿಸಿದಳು.

"ಹಾಗಿದ್ದರೆ ತಿಳಿದುಕೊ. ಈ ಮದುವೆ ಆದರೆ ಅವನಿಗೆ ನನ್ನ ಆಸ್ತಿ ಯಲ್ಲಿ ಮೂರು ಕಾಸೂ ಸಿಕ್ಕೋದಿಲ್ಲ. ಎಲ್ಲ ಸ್ವಯಾರ್ಜಿತ. ತಿಳಿ! ನಂಗೆ ಬೇಕಾದ ಹಾಗೆ ಮಾಡಬಲ್ಲೆ."

"ಹಣದಾಸೆ ಇಲ್ಲ." ಈ ಬೆದರಿಕೆ ಅವಳನ್ನು ಚುಚ್ಚಿ ಬಾಯಿ ತೆಗಿಸಿ ಹೇಳಿಸಿತು.

"ಮತ್ತೆ? ಇನ್ನೇನು ನಿಂಗೆ? ಪ್ರೇಮವೆ? ಅದನ್ನೂ ಕಂಡಿದೀಯ ನೀನು?"

"ಯಾಕೆ?" ಅಭಿಮಾನ ಗಡುಸಾಗಿಯೇ ನುಡಿಸಿತು.

"ಅಲ್ಲಾ...." ಸಾಹುಕಾರರು ನಾಲಿಗೆ ಕಚ್ಚಿಕೊಂಡರು. ಅಲೌಕಿಕ ವಾಯಿತೆಂದುಕೊಂಡು "ಈ ಪ್ರೇಮ ಅನ್ನೋದು ಹುಡುಗರಲ್ಲಿ ಒಂದು ಹುಚ್ಚು. ಅಂಥಾ ಮಾಯಕ್ಕೆ ನೀನೂ ಸಿಕ್ಕಿದೀಯೆ ಅಂತ ತಿಳಿದುಕೊಂಡಿದೀಯ ಅಂತ. ಹ್ಹ! ಹ್ಹ!"

ಸಾಹುಕಾರರು ' ಓ, ಗುರು ಈ ಒಪ್ಪದ ಮೌನ ಇವಳಿಗೂ ಚೆನ್ನಾಗಿ ಕಲಿಸಿದಾನೆ ಆಗಲೀ! ಅಥವ ಈಗಿನ ಹುಡುಗರೇ ಹೀಗೋ' ಎಂದು ಸಿಡಿಮಿಡಿ ಯಾಗಿ ಮತ್ತೆ ಸಮಾಧಾನವನ್ನು ತಂದುಕೊಂಡು, " ಹಾಗೇ ಆಗಲಿ. ನಿಂಗೇನೋ ಆ ಭಾವನೆ ಇದೆ ಅನ್ನೋಣ. ಕಾರಣ ಬೇಕಾದಷ್ಟಿದೆಯಲ್ಲ. ಅವನೂ ನಿನ್ನಲ್ಲಿ ಪ್ರೇಮ ಇಟ್ಟುಕೊಂಡಿದಾನೆ, ಅದಕ್ಕೋಸ್ಕರ ಇದನ್ನು ಮಾಡ್ತಾ ಇದಾನೆ ಅಂತ ತಿಳಿದುಕೊಂಡಿದೀಯಾ ? "

" ಗೊತ್ತಿಲ್ಲ. " ಕಮಲೆಗೆ ಇದು ನಿಜವಾಗಿಯೂ ಗೊತ್ತಿರಲಿಲ್ಲ. ಈ ಪ್ರಶ್ನೆ ಅವರಿಬ್ಬರ ಮಧ್ಯೆ ಬಂದೇ ಇರಲಿಲ್ಲ. ಪ್ರೇಮವು ಇರಬೇಕೆಂದೇ ಭಾವಿಸಿಕೊಂಡುಬಿಟ್ಟಿದ್ದಳು. ಅದು ಹೇಗೋ ಏನೋ. ಅನುಮಾನವಾಗಿಯೇ ಉತ್ತರ ಕೊಟ್ಟಳು.

" ನಾನು ಹೇಳ್ತೀನಿ ಕೇಳು. ಭರವಸೆ ಬೇಕಾದರೂ ಕೊಡ್ತೀನಿ. ನಿನ್ನ ಅವನು ಇಷ್ಟು ಅಂದರೆ ಇಷ್ಟು ಪ್ರೀತಿಸೋದಿಲ್ಲ. ಅವನಲ್ಲಿ ಆ ಗುಣವೇ ಇಲ್ಲ. ಇಲ್ಲದಿದ್ದರೆ ನಮ್ಮನ್ನು, ನಮ್ಮ ಮನೆತನವನ್ನು ಪ್ರೀತಿಸ್ತಾ ಇರಲಿಲ್ಲವೆ ? ಅವನಿಗೆ ತಾನು ಒಬ್ಬ ದೊಡ್ಡ ಸುಧಾರಕ ಅನ್ನೋ ಭಾವನೆ. ಆ ಸೋಗಿ-ಗೋಸ್ಕರ ಏನೇನನ್ನೋ ಹೇಳ್ತಾನೆ ಮಾಡ್ತಾನೆ— ಮನಸ್ಸಿಗೆ ಬಂದಾಗ ಬಂದ ಹಾಗೆ. ಯಾವುದೂ ಸ್ಥಿರವಲ್ಲ. ಈಗಾಗಲೇ ಹತ್ತು ತರಹ ಯಾವ ಯಾವ ಯತ್ನವನ್ನೋ ಮಾಡಿ, ಮೂರು ಮೂರು ದಿನಗಳಾದ ಮೇಲೆ ಬಿಟ್ಟುಬಿಟ್ಟಿ-ದಾನೆ. ಇದೊಂದು ಹೊಸ ಸೋಗು ಶುರುವಾಗಿದೆ. ಇದು ಇನ್ನೆಷ್ಟು ದಿನವೋ ಏನೋ. ಕೇಳು, ಅವನಿಗೆ ಈ ಅಭಿಪ್ರಾಯ ತಲೆಗೆ ಬಂತೋ ಇಲ್ಲವೋ ಗೊತ್ತಿದ್ದೋಳು ನೀನು; ನಿನ್ನ ಹತ್ತಿರಕ್ಕೆ ಬಂದ. ನೀನಿಲ್ಲದಿದ್ದರೆ ಇನ್ನೊಬ್ಬಳು ಅಷ್ಟೆ. ಅಂತೂ ಇದೇನೋ ಗಲಾಟೆಯಂತೂ ಮಾಡಬೇಕು ಅಂತ. ನೀನು ಅವನಿಗೆ, ಅವನ ಜಂಭದ ಹೆಚ್ಚಿಗೆ, ಒಂದು ನಿಮಿತ್ತ, ಉಪ ಕರಣ. ತಿಳೀತೆ ? "

ಕಮಲೆ ಕೇಳುತ್ತ ಕೇಳುತ್ತ ಕೊಂಚ ನಡುಗಿದಳು. ಹೀಗೆ ಇರಬಹುದೆ ಎಂದು ಯೋಚಿಸಿದಳು. 'ಛೆ, ಅವರನ್ನು ಕೇಳಿಬಿಡಬೇಕಾಗಿತ್ತು.' ಎಂದು ಕೊಂಡಳು. ಹಾಗೇ, ' ಅವರು ಪ್ರೀತಿಸಿದರೇನು ಬಿಟ್ಟರೇನು ? ತೋರಿಸಿದ ದಾರಿ ಸರಿಯಲ್ಲವೆ? ತನಗೆ ಹೆಚ್ಚೇನು ಬೇಕು?' ಎಂದು ಸಮಾಧಾನ ಮಾಡಿ

ಕೊಂಡಳು. ' ಇಲ್ಲ. ಅಂಥ ಕೆಟ್ಟ ಎದೆಯವರಲ್ಲ—ತಮ್ಮ ಸೋಗಿಗೆ ತನ್ನನ್ನು ಉಪಯೋಗಿಸಿಕೊಳ್ಳುವಂತಹವರಲ್ಲ....ಏನಾದರೂ ತನ್ನ ಕರ್ತವ್ಯ ಸಿದ್ಧ. ಅವರು ಹೇಗಾದರೂ ಇರಲಿ, ಯೋಚಿಸಲಿ ಎಂದುಕೊಂಡು '' ಅವರು ಏನು ಮಾಡಿದರೂ ಬಿಟ್ಟರೂ ಸರಿಯೆ. ಅವರ ಸೇವೆಯೇ ನಂಗೆ ಸಾಕು." ಎಂದು ನಿರ್ಧಾರ ಹೇಳಿದಳು.

" ಹಾಗಾದರೆ ಈಗ ಇರೋ ಹಾಗೇ ಯಾಕೆ ಸೇವೆ ಮಾಡಬಾರದು ? ನಿಂಗೇನು ಇದು ಹೊಸದಲ್ಲವಲ್ಲ.''

" ..............." ಕಮಲೆ ಏರುತ್ತಿದ್ದ ಕೋಪವನ್ನು ತಡೆದುಕೊಳ್ಳುತ್ತಿದ್ದಳು.

" ಓ, ಇದು ಈಗ ರುಚಿಸೋದಿಲ್ಲವೋ? ಪ್ರೇಮ ಇಲ್ಲದೆ ಇದ್ದರೂ ಮನೆ ಸಿಕ್ಕರೆ ಸಾಕು ಅಂತೀಯೋ ? ''

" ಅವರಿಗೆ ಇಷ್ಟವಾದ ಹಾಗೆ ನನ್ನ ಉಪಯೋಗಿಸಿಕೊಳ್ಳಬಹುದು. ಯಾವಾಗಲೂ ಸಿದ್ಧವಾಗಿದೀನಿ. ಸೂಚನೆ ಅವರದ್ದೇ."

" ಇದೊಂದು ಅನುಕೂಲ—ನಿಂಗೆ. ಇದು ಬೇಡ ಅಂತ ಅವನಿಗೆ ಹೇಳಲಾರೆಯಾ ? ''

" ಯಾಕೆ? ನಂಗೂ ಗೌರವದಿಂದ ಗರತಿಯ ಹಾಗೆ ಬಾಳಬೇಕು ಅಂತ ಆಸೆ ಇರಬಾರದೇ, ಸ್ವಾಮಿ ? " ದೈನ್ಯಧ್ವನಿಯಿಂದ ಕೇಳಿದಳು.

" ಗೌರವವೆ ? ನೀನು ಏನು ಮಾಡಿದರೂ, ತಲೆಕೆಳಗಾದರೂ ಗೌರವ ಮಾತ್ರ ದೊರಕೋದಿಲ್ಲ. ತಿಳಿದುಕೊಂಡುಬಿಡು. ಬರಿ ಭ್ರಾಂತಿ. ಸಮಾಜ ಎಂದಿಗೂ ನಿನ್ನ ಇಲ್ಲೇ ಇಟ್ಟಿರುತ್ತೆ. ಇನ್ನೂ ಈಗ ಇಲ್ಲದ ದ್ವೇಷ ತಿರಸ್ಕಾರ ಎಲ್ಲ ಹುಟ್ಟುತ್ತವೆ. ಆದರ ಹಿಂಸೆ ಅವಮಾನ ಯೋಚಿಸಿಕೊಂಡರೆ ಇದೇ ಸಾವಿರ ಬಾರಿಗೆ ವಾಸಿ. ನನ್ನ ನಂಬು. ಅವನನ್ನ ಮದುವೆಯಾಗೋದರಿಂದ ನಿನ್ನ ಅಂತಸ್ತು ಮೇಲೆ ಹೋಗುತ್ತೆ ಅಂತ ತಿಳಿದುಕೊಂಡಿದ್ದರೆ ಶುದ್ಧ ತಪ್ಪು. ನನ್ನಿಂದ ತಗೊ. ನಿಜವಾಗಿ ಆಗೋದು ಅಂದರೆ ಅವನೂ ನಿನ್ನ ಮಟ್ಟಕ್ಕೆ ಇಳೀತಾನೆ ಅಷ್ಟೆ. ಇದರಿಂದ ಅವನೂ ಕುಲಗೆಟ್ಟು ಮರ್ಯಾದೆ ಕಳೆದುಕೊಂಡು ಆಸ್ತಿಪಾಸ್ತಿ ಎಲ್ಲ ಹೋಗಿ ಸಣ್ಣ ನೌಕರ—ಭಿಕಾರಿಯಾಗ್ತಾನೆ ಅಷ್ಟೆ. ಇವೇ

ನೀನು ಅವನಿಗೆ ಮಾಡೋ ಸೇವೆ— ನಿನ್ನ ಸಹವಾಸ, ಹಟದಿಂದ. ಗೊತ್ತಾಯ್ತೊ ? ಚೆನ್ನಾಗಿ ಯೋಚಿಸು. ಇದು ನಿಂಗೆ ಇಷ್ಟವೆ ? ”

ಕಮಲೆ ಕೂಡಲೇ ಉತ್ತರ ಕೊಡಲಿಲ್ಲ. ಸಾಹುಕಾರರ ಮಾತುಗಳು ನಿಜವಾಗಿಯೂ ಅವಳನ್ನು ಬೆದರಿಸಿದುವು. ಅವು ನಿಜವೆಂದು ಅವಳಿಗೆ ಹೊಳೆಯಿತು. ಗುರುವಿಗಾಗಿ ನೊಂದಳು. ತಾನು ಮಾಡುತ್ತಿರುವುದು, ಒಪ್ಪಿದುದು, ಸರಿಯೆ ಎಂಬ ಸಂದೇಹವೂ ಬಂದಿತು. ಏನು ಹೇಳಬೇಕೆಂದು ಗೊತ್ತಾಗಲಿಲ್ಲ. ಆದರೆ ನಿದಾನವಾಗಿ ಗುರುವಿನ ಮುಖ ಅವಳ ಮುಂದೆ ಬಂದಿತು. ನಸುನಕ್ಕಿತು. ಕಷ್ಟದ ಇದಿರಿನಲ್ಲಿ ಅವನ ದಿಟ್ಟತನ ಭರವಸೆ ಇವು ನೆನಪಿಗೆ ಬಂದು ಸ್ವಲ್ಪ ಉತ್ತೇಜನ ಕೊಟ್ಟುವು. ಆದರೂ ಅವಳ ಹಿಂದಿನ ಯೋಚನೆಯಿಲ್ಲದ ಭರವಸೆ, ಸರಳತೆಯ ದೃಢ ನಂಬಿಕೆ—ತಾನು ಅವನ ಹಿತದೃಷ್ಟಿಯಿಂದಲೂ ಸರಿಯಾಗಿ ನಡೆದುಕೊಳ್ಳುತ್ತಿರುವಳೆಂಬ ನಿಶ್ಚಯ, ಈ ಭಾವನೆಯ ಬೇರು ಕೊಂಚ ಸಡಿಲವಾಯಿತು. ಅದೇ ಸರಿ ಯೆಂದು ಎಷ್ಟೆಷ್ಟು ಬಾರಿ ಹೇಳಿಕೊಂಡರೂ ಹಿಂದಿನ ನಿಸ್ಸಂಶಯ ತೃಪ್ತಿ ಉಂಟಾಗಲಿಲ್ಲ. ಆದರೂ ಈ ಸಂದೇಹವನ್ನು ತಾನೇ ತನಗೆ ಒಪ್ಪಿಕೊಳ್ಳ ಲಾರಳಾದಳು; ಇದನ್ನು ಮುಚ್ಚಿ ಅದುಮಲೂ ಹೋರಾಡಿದಳು. ಇಷ್ಟಕ್ಕೂ ಗುರು ಹೆದರಿದ್ದನೆ ? ಇಲ್ಲವಲ್ಲ. ಇನ್ನು ತನ್ನ ದೋಷವೇನು ? ತನ್ನ ಬಗ್ಗೆ ಯಂತೂ ತನಗೆ ಚಿಂತೆಯೇ ಇರಲಿಲ್ಲ—ಎಲ್ಲಕ್ಕೂ ಸಿದ್ಧವಾಗಿದ್ದಳು.

“ ಅವರು ಯಾವ ಕಷ್ಟಕ್ಕೂ ಹಿಂದೆಗೆಯೋದಿಲ್ಲ. ನಾನೂ ಅಷ್ಟೆ. ಇಬ್ಬರೂ ಬಂದದ್ದನ್ನೆಲ್ಲ ಅನುಭವಿಸೋದಕ್ಕೆ ಸಿದ್ಧವಾಗಿದೀವಿ. ಅವರಿಗೆ ಇದರಿಂದ ವ್ಯಸನವಿಲ್ಲ, ಸಂತೋಷವೇ.” ಅವಳು ಸಹಜವಾದ, ಸುಲಭವಾದ, ನ್ಯಾಯವಾದ ಮಾತನ್ನೇ ಹೇಳುತ್ತಿರುವುದಾಗಿ ತಿಳಿದುಕೊಂಡರೂ, ಯಾಕೊ ಅದರ ಹಿಂದೆ ಯಾವುದನ್ನೋ ರಕ್ಷಿಸಿಕೊಳ್ಳುವ, ಸಮರ್ಥಿಸಿಕೊಳ್ಳುವ ಹೋರಾಟ, ಒಂಸೆಗಳು ಸುಳಿದಾಡಿದುವು.

“ ಓ, ಹಾಗೋ? ನೀನು ಇದೇ ಕಂಡಿರೋದು. ಕೇವಲ ಹುಡುಗತನ. ಈಗ ಹೀಗಿರಬೆ ಹೇಗಿರುತ್ತೆ, ಭಾವನೆ ? ಈಗ ತಾನೆ ಕತೆ ಮೊದಲಾಗಿದೆ. ಒಂದು ಅಂದರೆ ಒಂದು ತಿರಸ್ಕಾರದ ಭಾವನೆ, ಒಂದು ಅವಮಾನದ ಸೂಚನೆ, ಒಂದು ಕೆಟ್ಟ ಮಾತು, ಒಂದು ಕಷ್ಟದ ಛಾಯೆ, ನಿಮ್ಮಿಬ್ಬರಲ್ಲಿ ಒಂದು

ಅಸಮಾಧಾನ—ಒಂದೂ ಕಂಡಿಲ್ಲ. ಅದಕ್ಕೆ ಅವಕಾಶವಾದರೂ ಏನು ಬಂದಿದೆ? ನಾಳೆ ಸಂಸಾರ ಹೂಡಿದ ಮೇಲಲ್ಲವೆ ಗೊತ್ತಾಗೋದು? ಆಗ ಕೈಯಲ್ಲಿ ಕಾಸು ಕಡಿಮೆಯಾದಾಗ, ಬೇಕಾದ್ದಕ್ಕೆ ಇಲ್ಲದಿರುವಾಗ—ಆಗ ಹಿಂದಿರಿಗಿ ನೋಡ್ತಾನೆ, ಈಗಿನ ಸುಖವನ್ನು ನೆನೆಸಿಕೋತಾನೆ. ಅವನ ವಿದ್ಯೆ ದಿಂದ ಎಷ್ಟು ಬರುತ್ತೆ—ಈ ಕಾಲದಲ್ಲಿ? ಆಗ ಸುಮ್ಮನಿರ್ತಾನೆ—ಹೀಗೇ ಸಂತೋಷವಾಗಿ? ಶಪಿಸ್ತಾನೆ ನಿನ್ನ—ಅವನನ್ನೇ. ನಾಳೆ ಅವನ—ನಿನ್ನ ಕೀಳುಕುಲ ಬೆರಕೆಗಾಗಿ ಜನ ತಿರಸ್ಕರಿಸ್ತಾರೆ; ಒಂದು, ಎರಡು, ಹತ್ತು, ನೂರು ಬಾರಿ ತಡೆದುಕೋತಾನೆ ಅನ್ನೋಣ. ಆಮೇಲೆ? ಹಾಗೇ ಇರ್ತಾನೆ ಅಂತ ತಿಳಿದುಕೊಂಡೆಯ? ತನ್ನ ಉತ್ತಮ ಕುಲ ನೆನೆಸಿಕೊಂಡು ಹೊಟ್ಟೆ ಹೊಟ್ಟೆ ಕಿವಿಚಿಕೋತಾನೆ. ಆಗ ಗೊತ್ತಾಗುತ್ತೆ ಅವನಿಗೆ ಮನೆತನ ಅಂದರೇನು, ಅದರ ಗೌರವ ಏನು ಅಂತ. ನಿನ್ನ ಅನಾದರಿಸೋದಿಲ್ಲ ಅಂತ ಖಂಡಿತವೇ ನಿಂಗೆ? ನಂಗಂತೂ ಇಲ್ಲ. ಆಗ ನಿಂಗೆ ನೀನೇ ಬೇಡವಾಗಿರುತ್ತೀಯೆ, ಇದು ಬೇರೆ. ಇದು ಸುಳ್ಳೆ? ಇನ್ನು ಮಕ್ಕಳು ಮರಿ ಆದರಂತೂ ದೇವರೇ ಗತಿ! ಆ ಮಾತು ನೆನೆಸಿಕೊಂಡರೇ ಸಾಕು. ಆಡದೇ ಇರೋದೇ ಲೇಸು ಅನ್ನಿಸುತ್ತೆ. ಅವನ್ನು ಯಾರು ಒಪ್ಪಿಕೋತಾರೆ—ಒಳ್ಳೆ ಕುಲದೋವು ಅಂತ? ಅವಕ್ಕೂ ನಿಮ್ಮ ಗತಿಯೆ. ಇದನ್ನು ನೋಡಿ ನೀನಾದರೂ ಸಹಿಸ್ತೀಯ? ಅವನಿಗೂ ಆಗ ಖಂಡಿತವಾಗಿಯೂ ಸಮಯ ಬರುತ್ತೆ—ವ್ಯಥೆಗೆ. ನಮ್ಮನ್ನ ನಾವು ಲಕ್ಷಿಸದಿದ್ದರೂ ಮಕ್ಕಳ ಭಾಗ ನೋಡೋದು ಅನುಭವಿಸೋದು ಏನು ಅಂತ ನಂಗೆ ಗೊತ್ತಿದೆ—ತಂದೆಯಾದೋನಿಗೆ. ಅಯ್ಯೋ ದೇವರೆ, ಎಷ್ಟು ಚೆನ್ನಾಗಿ ಗೊತ್ತಿದೆ! ಎಷ್ಟು ಸಂಕಟ ಪಡುತ್ತಿದೀನಿ! ಹೊಟ್ಟೇಲಿ ಹುಟ್ಟಿದ ಮಕ್ಕಳ ಭಂಗ ನೋಡೋದು ನನ್ನ ಪರಮ ಶತ್ರುಗಳಿಗೂ ಬೇಡ, ಬೇಡ.......ಹುಂ! ನೀವೇನು ಈಗ ಘೋರಣೆಯಿಂದ ಇದ್ದರಾಯ್ತು? ನಾಳೆ ಇದೆ ತಡೆಯಲಾರದ ಹಿಂಸೆ—ನಿಮಗೇ ಕಾದಿದೆ. ಇನ್ನು ಅದನ್ನು ನಿಮ್ಮ ಮಕ್ಕಳಿಗೆ, ಮಕ್ಕಳ ಮಕ್ಕಳಿಗೆ, ಆಸ್ತಿಯಾಗಿ ಕೊಡ್ತೀರಾ? ಇನ್ನೂ ಇಷ್ಟೇಯೆ? ನೂರಾರು ರೀತಿ ಚಿತ್ರಹಿಂಸೆಗಳೆಲ್ಲ ಬರುತ್ತವೆ. ನೂರರಲ್ಲಿ ಸಾವಿರದಲ್ಲಿ ಒಂದೇ ಒಂದು ಪಾಲು ನಾನು ಹೇಳಿಲ್ಲ. ಆಗ ಎದೆಗೆಡುತ್ತಾನೆ, ಅವನು. ನಿಂಗೂ ಸುಖವಿಲ್ಲ. ಸಮಾಜದ ಬಲ—ಅದೂ ಕಿರುಕಳ ಕೊಡೋದರಲ್ಲಿ—ಎಷ್ಟಿದೆ ಅಂತ ನಿಮಗೆ

ಇನ್ನೂ ಗೊತ್ತಿಲ್ಲ. ನಿಮ್ಮನ್ನು ಕುಟ್ಟಿ ಕುಟ್ಟಿ ಹಿಟ್ಟುಮಾಡಬಲ್ಲದು. ಈಗ ಇದಿರಿಸ್ತೀವಿ ಅಂತ ಹೇಳೋದು ಸುಲಭ. ನಾಳೆ ಯಾತನೆ ಅನುಭವಿಸುವಾಗ ತಾನೆ ಗೊತ್ತಾಗೋದು? ಸರಿಯಾದ ಕಾಲ ಸಿರಿ ಎಲ್ಲ ಇರೋರಿಗೇ ನಿದ್ದೆ ಬರೋದಿಲ್ಲ. ಇನ್ನು ನಿಮ್ಮ—ಅವನ ಎಡವಟ್ಟು ಜೀವನವೇನು ನರಕ ಪ್ರಾಯವಾಗುತ್ತೆ. ಎಲ್ಲ ಆರಿಸಿಕೊಂಡು ಕೈಯಾರ ಮಾಡಿಕೊಂಡದ್ದು. ಇಷ್ಟೂ ಯಾತರಿಂದ? ನಿನ್ನಿಂದ. ಆಗ ಎಲ್ಲಕ್ಕೂ ಕಾಲ ಮೀರಿ ಹೋಗಿರುತ್ತೆ. ಇಬ್ಬರೂ ಒಳಗೊಳಗೇ ನಿತ್ಯವೂ ಕೊರಗಿ, ಹೊರಗೂ ಆಡಿ ಕಷ್ಟಪಡದಿದ್ದರೆ ಯಾಕಾದೀತು. ನನ್ನ ಮಾತು ತಗೊ. ನಾನು ಅನುಭವಸ್ಥ. ನಿಮ್ಮ ತಾಯಿಯ ಮಾತು ತಗೊ. ಅವಳೂ ಪ್ರಪಂಚ ಕಂಡಿದಾಳೆ ಅವಳಿಗೂ ಇದು ಇಷ್ಟವಿಲ್ಲ. ನಿಮ್ಮ ಅಜ್ಞಾನವನ್ನೇ ನೆಚ್ಚಿಕೊಂಡು ಖಂಡಿತವಾಗಿರಬೇಡ. ಅವನು ಈಗ ಮೂರ್ಖನಾಗಿರೋದನ್ನ ಉಪಯೋಗಿಸಿಕೊಂಡು ಸ್ವಾರ್ಥಪರಳಾಗಿ ಅವನನ್ನು ಎಲ್ಲ ತರಹದಿಂದಲೂ ಹಾಳುಮಾಡಬೇಡ........"

ಸಾಹುಕಾರರು ಬಹಳ ಹೊತ್ತು ಇದೇ ರೀತಿ ಹೇಳಿದರು. ಅವರ ಪ್ರತಿ ಮಾತನ್ನು ಕೇಳುವಾಗಲೂ 'ಇರಬಹುದೆ?-ಇರಬಹುದೆ? ತಪ್ಪು ಮಾಡುತ್ತಿದ್ದೇನೆಯೆ, ತಪ್ಪು ಮಾಡುತ್ತಿದ್ದೇನೆಯೆ?' ಎಂದು ಕಮಲೆಯ ಎದೆಯು ಹೊಳಲು ಕೊಟ್ಟಂತೆ ಕೇಳುತ್ತಿತ್ತು. ಪೆಟ್ಟುಗಳು ಒಂದೊಂದಾಗಿ ಬೇಗ ಬೇಗ ಬಿದ್ದು ಬಿದ್ದು ಅವಳ ಕನಸಿನ ಅರಮನೆಯ ಕಟ್ಟಡದ ಕಲ್ಲುಗಳು ಒಂದೊಂದೇ ಕಳಚಿ ಕೆಳಗೆ ಬೀಳುತ್ತಿದ್ದಂತೆ ತೋರಿತು ತಾನು ನಿರಪರಾಧಿ, ಬಲಿ ಎಂದು ನಿರ್ಧರಿಸಿಕೊಂಡಿದ್ದವಳು, ಹೆಜ್ಜೆ ಹೆಜ್ಜೆಯಾಗಿ ಅಪರಾಧಿಯಾಗಿ, ಬಲಿ ಕೊಳ್ಳುವ ಮಾರಮ್ಮನಾಗುತ್ತಿದ್ದಂತೆ ಭಾಸವಾಯಿತು. ಇದಕ್ಕೆಲ್ಲ ಏನು ಹೇಳಬೇಕೆಂದು ತೋರದು. ತನ್ನ ಎದೆ ತಿಳಿಯಾಗಿದ್ದು ಯಾವ ಸ್ವಾರ್ಥದ ಕೊಳೆಯಿಂದಲೂ ತುಂಬಿರದಿದ್ದು, ಸಮರ್ಥಿಸಿಕೊಳ್ಳದಿರುವುದೂ ಸಾಧ್ಯವಿರಲಿಲ್ಲ ಈ ಬಿಕ್ಕಟ್ಟಿನಲ್ಲಿ ಬಹಳ ತೊಳಲಾಡುತ್ತಿದ್ದಳು. ಸಾಹುಕಾರರು ಮುಗಿಸಿ. "ನಿಮ್ಮ ತಾಯೀನೂ ಬೇಕಾದರೆ ಕೇಳು, ನಿನ್ನ ಹಿತಸಾಧನೆಯಾಗುತ್ತೇ ಅಂತ" ಎಂದರು. ನೀಲಾಸಾನಿಗೆ ಮೊದಲೇ ಅರ್ಧ ಮನಸ್ಸು, ಈಗ ಸಾಹುಕಾರರು ಬೇರೆ ಮನೆಗೇ ಬಂದು ಹೇಳುತ್ತಿದ್ದಾರೆ. ಅವಳು ವಿರೋಧಿಸುವುದು ಕನಸಿನಲ್ಲಾದರೂ ಉಂಟೆ?

" ಅದೇ ನಾನೂ ಹೇಳ್ತಾ ಇದೀನಿ—ದಿನಾನೂ. ನಮಗೆ ಒಳ್ಳೇದು ಆಗೋದಿಲ್ಲ ಅಂತ. ಅವರಿಗಂತೂ ಹೇಳೋ ಹಾಗೇ ಇಲ್ಲ. ತೀರ ಕೆಟ್ಟು ಹೋಗ್ತಾರೆ, ಪಾಪ! " ಎಂದಳು.

ಕಮಲೆಗೆ ಇನ್ನು ಸಹಿಸದಾಯಿತು.

" ನಂಗೇನೋ ಮಾನವಾಗಿ ಬಾಳಬೇಕು ಅಂತ ಅನ್ನಿಸುತ್ತೆ, ನಿಜ. ಆದರೆ ಅವರನ್ನ ಹಾಳುಮಾಡಬೇಕು ಅಂತ ನಂಗೆ ಇಷ್ಟವಿಲ್ಲ. ಖಂಡಿತವಾಗಿ. ದೇವರಿಗೆ ಗೊತ್ತಿದೆ." ಎಂದು ನೋವಿನಿಂದ ಹೇಳಿದಳು.

" ಮತ್ತೆ, ಇದರಿಂದ ಇನ್ನೇನಾಗುತ್ತೆ? ಅದೇ." ಸಾಹುಕಾರರು ಮತ್ತೆ ಒತ್ತಿಹೇಳಿದರು.

" ಅವರು ನಂಗೆ ಹೊಸ ಹುಟ್ಟು ಕೊಟ್ಟೋರು; ಕತ್ತಲಲ್ಲಿ ಬೆಳಕು ಹಿಡಿದೋರು; ಹೊಸ ಗುರಿ, ದಾರಿ ತೋರಿಸಿದೋರು. ಕೊಳೆ-ಬಾಳನ್ನೇ ಹಸನು ಮಾಡಿದೋರು; ನಂಗೆ ನನ್ನಲ್ಲಿ ಅಭಿಮಾನ, ಹೆಮ್ಮೆ, ಬರೋ ಹಾಗೆ ಮಾಡಿದೋರು; ಇಂಥಾವರಿಗೆ ಅನ್ಯಾಯ ಮಾಡಲೆ ? ಮಾಡಿ ಯಾವ ನರಕಕ್ಕೆ ಹೋಗಲಿ ? ಇಲ್ಲ, ಅವರಿಗೆ ಒತ್ತಾಸೆಯಾಗಬೇಕು. ಸಹಾಯವಾಗ ಬೇಕು. ಹೇಗೆ ಬಿಡಲಿ ಅವರನ್ನ ?"

"ಇಂಥ ಉಪಕಾರಕ್ಕೆಲ್ಲ ಇದೇಯೆ ನಿಂದು ಪ್ರತ್ಯುಪಕಾರ ? ನಿಜವಾಗಿ ಅವನ ಹಿತ ಕೋರ್ತಾ ಇದ್ದರೆ ಅವನು ಸುಖವಾಗಿ ಮಾನವಾಗಿ ಇರೋ ಹಾಗಲ್ಲವೆ ನಡೆದುಕೋಬೇಕು ? ಇದೇ ಅಲ್ಲವೆ ಸರಿಯಾದ ಸಹಾಯ ? ಇದಕ್ಕೋಸ್ಕರ ಬಿಡಬೇಡವೆ, ಈ ಆಪತ್ತಿನ ಮದುವೆಯ ಸಂಬಂಧ ? ನೀನೇ ಹೇಳು. "

"ಅಯ್ಯೋ, ಇದು ನಿಜವಾಗಿಯೂ ಅಷ್ಟು ಕೇಡೆ, ಅವರಿಗೆ ? ಇದು ಅವರಿಗೆ ಗೊತ್ತಿಲ್ಲವೆ ? "

" ಗೊತ್ತಿಲ್ಲದೆ ಏನು. ಈ ಹುಮ್ಮಸ್ಸಿನಲ್ಲಿ ನಿಂಗಾಗಿ ಬಲಿದಾನ ಕೊಡ್ತಾ ಇದಾನೆ. ನೀನು ಅದೇ ಸಾಕು ಅಂತ...."

" ಇಲ್ಲ. ಇಲ್ಲ. ನಂಗೆ ಆ ಬಲಿದಾನ ಬೇಡ. ಖಂಡಿತವಾಗಿಯೂ ಬೇಡ. ನಾನು ಬೇಕಾದರೆ ಪ್ರಾಣ ಒಪ್ಪಿಸುತ್ತೀನಿ. ಅವರಿಗೆ ಕೆಡಕಾಗೋದು ಬೇಡ. ದೇವರೆ ! "

" ಅಷ್ಟೇನು ಬೇಡ. ಅವನ್ನ ಬಿಟ್ಟುಬಿಡು ಸಾಕು."

" ಅವರು ಒಪ್ಪುತ್ತಾರೇ ?"

" ಅವನಿಗೆ ತಿಳಿವಳಿಕೆ ಇಲ್ಲದೇ ಇದ್ದರೆ ತಪ್ಪು ಮಾಡಲಿ, ಅನುಭವಿಲಿ ಅಂತೀಯ ? ನಿಂಗೆ ಈಗ ಕಾಣೋದಿಲ್ಲವೆ ?"

" ಅವರಿಗೆ ವ್ಯಸನವಾಗದೇ ಇದ್ದರೆ...."

" ಮೊದಲು ಆಗಬಹುದು. ಆಮೇಲೆ ಸರಿ ಹೋಗೇ ಹೋಗ್ತಾನೆ. ಮುಂದೆ ಸಂತೋಷವೂ ಪಡ್ತಾನೆ. ನಿನ್ನ ವಂದಿಸಿಯೂ ವಂದಿಸ್ತಾನೆ—ಕೃತಜ್ಞನಾಗಿ, ಈ ತೊಡಕಿಗೆ ಬಿದ್ದರೆ ಹೇಗೆ ಮುಂದೆ ನೊಂದು ನಿಂದಿಸ್ತಾನೋ ಹಾಗೇ. ನೋಡ್ತಾ ಇರು ಬೇಕಾದರೆ. ನನ್ನ ಮಾತು ಕೇಳಿ ಅವನನ್ನೂ ಬದುಕಿಸು, ನೀನೂ ಬದುಕಿಕೊ."

" ಬದುಕಿಕೊ ! ಹೇಗೆ ಬದುಕಲಿ ?"

ಮಗನ ಬಗ್ಗೆ ಒಪ್ಪಿಗೆಯಾದಂತೆ ಸೂಚನೆಯನ್ನು ಕಂಡು ಸಾಹುಕಾರರು ಒಳಗೊಳಗೆ ಸಮಾಧಾನ ಹೊಂದಿದರು. ' ಇನ್ನು ಇವಳ ಪಾಡನ್ನು ವಿಚಾರಿಸುತ್ತಿದ್ದಾಳೆ; ಅದಕ್ಕೇನು?' ಎಂದುಕೊಂಡರು.

" ಅದೇನು, ಹೇಗಾದರೂ ಆಗಬಹುದು " ಎಂದು ಸಂದಿಗ್ಧವಾಗಿ ಹೇಳಿದರು.

" ಏನು ಮತ್ತೆ ಆ ಹಳೇ ಬಾಳಿಗೇ ಹೋಗೋದೆ ? " ಕಮಲೆ ಗಾಬರಿ ನೋವುಗಳಿಂದ ಕೇಳಿದಳು.

" ನಾನು ಹಾಗೆ ಹೇಳಲಿಲ್ಲ. ನಿಜವಾಗಿ ಹೇಳಬೇಕಾದರೆ, ಹಾಗೇ ನಿಶ್ಚಯಿಸಿದರೂ ಏನು ವ್ಯತ್ಯಾಸ ?"

" ಆಂ ! ನಂಗೆ ಮುಕ್ತಿಯೇ ಇಲ್ಲವೆ ? "

" ಛಿ ! ಛಿ ! ಹಾಗೆಂದೆನೆ ? ನಿಷ್ಠುರ ಸತ್ಯ ಹೇಳಿದೆ, ಅಷ್ಟೆ. ಹಾಗೆ ಮಾಡಬೇಕು ಅಂತ ಅಲ್ಲ. ತಿಳಿತೆ ? ಅಂತೂ ಕೆಟ್ಟ ಮೇಲೆ ಒಂದು ಬಾರಿಯಾದರೇನು ಹತ್ತು ಬಾರಿಯಾದರೇನು ನೂರಾದರೇನು ಜೀವನವೆಲ್ಲ ಆದರೇನು? ಎಲ್ಲ ಒಂದೇ ಕಳಂಕ ಬೇರೆ ಎಂದಿಗೂ ಹೇಗಿದ್ದರೂ ತಪ್ಪೋದು ಬೇರೆ ಇಲ್ಲವೊ. ಆಗಿಹೋಯ್ತು. ಇಷ್ಟು ಮಾತ್ರ ನಿಜ ಅಲ್ಲವೆ ? "

" ಅಯ್ಯೊ, ನನ್ನ ತಿದ್ದಿಕೊಳ್ಳೋದಕ್ಕೆ ಅವಕಾಶವೂ ಬೇಡವೇ? ಬೇರೆ ದಾರಿ ಇರಬೇಡವೇ ? "

"ಇರಬಾರದು ಅಂತ ಹೇಳೋದಿಲ್ಲ. ಯಾವ ನ್ಯಾಯ ಹುಂ. ನಿನ್ನ ಕುಲದಲ್ಲೇ ಮದುವೆ ಮಾಡಿಕೋ." ಸಾಹುಕಾರರು ಗಾಳಿಯ ದಿಕ್ಕನ್ನು ಅರಿತು ತೂರಿಕೊಂಡರು.

"ಹುಂ, ನನ್ನ ಕುಲದಲ್ಲಿ, ಬೇರೆ ಕುಲದಲ್ಲಿ, ಇನ್ನು ಯಾರೂ ಇಲ್ಲ—ಕೆಟ್ಟೋಳನ್ನ—ಮನ್ನಿಸೋರು, ಮಾನಿಸೋರು. ಅಂಥೋರು ಒಬ್ಬರೇ, ಒಬ್ಬರೇ. ನಂಗೆ ಇನ್ನು ಮದುವೆ ಎಲ್ಲಿ - ಇದು ಇಲ್ಲದ ಮೇಲೆ?"

"ನೋಡಿದೆಯಾ, ನಿನ್ನ ಕುಲವೇ ಮನ್ನಿಸದ ಮೇಲೆ ಇನ್ನು ಉತ್ತಮ ಕುಲ ಸಹಿಸೋದುಂಟೆ—ಎಲ್ಲಾದರೂ ? "

"..........."

"ಇದೊಂದು ಬಿಟ್ಟು ನಿಂಗೆ ಹೇಗೆ ತೋರುತ್ತೋ, ಇಷ್ಟವಾಗುತ್ತೋ ಹಾಗಿರು ನಿಂಗೆ ಕಷ್ಟವಾದರೆ ನಾನೇನು ಕಡಿಮೆ ಮಾಡೋದಿಲ್ಲ. ನನ್ನ ಮನೆ ಉಳಿಸಿದೋಳು ಅಂತ ನೋಡಿಕೋತೀನಿ. ಇನ್ನೂ ಹೇಳ್ತೀನಿ ಕೇಳು. ದೇವರ ಮುಂದೆ ನೀನು ನನ್ನ ಮಗಳು ಅಂತಲೇ ತಿಳಿದುಕೊಂಡು ನಡೆಸಿಕೊಂಡು ಬರ್ತೀನಿ. ಕೊಂಚವೂ ಅನ್ಯಾಯ ಮಾಡೋದಿಲ್ಲ. ನನ್ನ ಮಗನ್ನ ನಿಜವಾಗಿ ಪ್ರೀತಿಸಿದೋಳು, ಅವನ ಸುಖವನ್ನ ತನ್ನ ಸುಖಕ್ಕಿಂತ ಮೇಲೆ ಇರಿಸಿದೋಳು, ಅವನನ್ನು ಆಪತ್ತಿನಿಂದ ಕಾಪಾಡಿದೋಳು, ಕಳೆದು ಹೋದ ಮಗನ್ನ ಮತ್ತೆ ನಂಗೆ ಭಿಕ್ಷೆ ಕೊಟ್ಟೋಳು, ಅವನಿಗೋಸ್ಕರ ಸ್ವಂತ ಸುಖವನ್ನೇ ಬಲಿದಾನ ಮಾಡಿದೋಳು...."

"ಬಲಿದಾನ!"

"ಹುಂ, ಅಷ್ಟೆಲ್ಲ ಯಾಕೆ ನನ್ನ ಮನೆ ದೇವತೆ ಅಂತ ತಿಳಿದುಕೋತೀನಿ. ದಯವಿಟ್ಟು ಒಪ್ಪಿಕೊಂಡು ನಡೆಸಿಕೊಡು, ಬೇಡಿಕೋತೀನಿ -ನಾನು..ನಿನ್ನ."

"ಅದೆಲ್ಲ ಬೇಡ. ಬೇಡ....ಅಯ್ಯೋ ಹೇಗೆ ಒಪ್ಪಲಿ! ಒಪ್ಪದೇ ಇರಲಿ!"

"ನೀನು ಉತ್ತಮಳಾಗಿದ್ದರೆ, ನಿನಗೆ ಸ್ವಲ್ಪವೇ ಸ್ವಲ್ಪ ಧಾರಾಳ ಬುದ್ಧಿ ಇದ್ದರೆ ಇದು ಸಾಧ್ಯ. ನೀನು ಉತ್ತಮಳು, ಉದಾರಿ ಅಂತ ನಂಗೆ ಗೊತ್ತು.."

“ ಕಮಲ, ಸಾಹುಕಾರರು ಅಷ್ಟು ಹೇಳ್ತಾರೆ, ಏನೆಲ್ಲ ಮಾಡೋದಕ್ಕೆ ಸಿದ್ಧವಾಗಿದಾರೆ, ಕೇಳಮ್ಮ.” ತಾಯಿಯೂ ಮಾತು ಕೂಡಿಸಿದಳು.

“ ಒಪ್ಪಿಗೆಯೇ ? ” ಸಾಹುಕಾರರು ಒತ್ತಿ ಕೇಳಿದರು.

“ ........... ” ಕಮಲೆ ನಿರ್ಧರದ ತುದಿಯಲ್ಲಿದ್ದಳು. ಒದ್ದಾಡುತ್ತಿದ್ದಳು. ತೂಗಾಡುತ್ತಿದ್ದಳು.

“ಒಪ್ಪೀಕೋ ತಾಯಿ.” ಸಾಹುಕಾರರು ದೈನ್ಯದಿಂದ ಬೇಡಿಕೊಂಡರು.

“ ........... ”

“ ಏನು ? ಒಪ್ಪಿದೀ ಅಂತ ಇಟ್ಟುಕೊಳ್ಳಲೆ? ”

ಕಮಲೆಗೆ ಇನ್ನು ಹೊಯ್ದಾಟವನ್ನು ತಡೆಯಲು ಆಗಲಿಲ್ಲ. ಆಗಲಿ ಎನ್ನುವಂತೆ ತಲೆಯಾಡಿಸಿಬಿಟ್ಟಳು.

“ಓ! ಎಂಥ ಒಳ್ಳೇ ಹುಡುಗಿ! ವಿವೇಕಸ್ಥೆ!” ಸಾಹುಕಾರರು ಧಾರಾಳ ವಾಗಿ ಉಸಿರು ಬಿಟ್ಟರು. “ನೀನು ನಡೆಸಿಕೊಡದೇ ಇರೋದಿಲ್ಲ ಅಂತ, ನಂಗೆ ನಂಬಿಕೆಯಿತ್ತು. ಧನ್ಯನಾದೆ. ನಿಂಗೆ ಎಂದೆಂದಿಗೂ ಕೃತಜ್ಞ.” ಎಂದು ಹೇಳಿ “ಇದನ್ನು ಬದಲಾಯಿಸಬೇಡಮ್ಮ—ಅವನು ಕಂಡು ಹುಡುಗತನದ ಹುಚ್ಚಿನಿಂದ ಏನೇ ಹೇಳಲಿ ಬಿಡಲಿ. ಆಂ?”

ಕಮಲೆಗೆ ತನ್ನ ಮೇಲೇ – ಯಾತರ ಮೇಲೂ ಪರಿವೆಯಿರಲಿಲ್ಲ. ನಿರಾಸೆಯ ಪೆಟ್ಟು ಅವಳ ಮನಸ್ಸಿನಲ್ಲಿ ಮಂಕು ಕವಿಸಿತ್ತು. ತನ್ನ ಕಣ್ಣ ಮುಂದೇ ತನ್ನ ಬಾಳಿನ ಹೊನ್ನು ಮಣ್ಣಾಗುತ್ತಿದ್ದ ಸಂಕಟ ಅವಳ ಜಗತ್ತನ್ನೇ ಕಲಕಿ ಗೊಂದಲವೆಬ್ಬಿಸಿತ್ತು. ಅಲ್ಲದೆ ಸಾಹುಕಾರರು ಹೇಳಿದ್ದ ಬಲಿದಾನದ ಯೋಚನೆ ಈ ವಿಷಯದ ಬಣ್ಣವನ್ನು ಬದಲಾಯಿಸುತ್ತಿತ್ತು. ಈ ಸ್ಥಿತಿಯಲ್ಲಿ ಏತಕ್ಕೆ ಬೇಕಾದರೂ ಒಪ್ಪುವಳೆ, ಏನನ್ನು ಬೇಕಾದರೂ ಮಾಡುವಳೆ. ಹೀಗಿದ್ದು ಸಾಹುಕಾರರ ಎರಡನೆಯ ಪ್ರಶ್ನೆಗೂ ಹಾಗೆಯೇ ತಲೆಯಾಡಿಸಿ ಬಿಟ್ಟಳು. “ ಭಲ! ಬಂದದ್ದು ಸಾರ್ಥಕವಾಯ್ತು. ಇನ್ನು ನನ್ನಿಂದ ನಿಂಗೇನಾಗಬೇಕು? ”

“ ........ ” ಕಮಲೆಗೆ ಏನು ಬೇಕಾಗಿತ್ತು ಪ್ರಪಚದಲ್ಲಿ?

“ತಗೋ, ಈ ಹಣ ಸದ್ಯಕ್ಕೆ ” ನೋಟಿನ ಕಟ್ಟನ್ನು ಜೇಬಿನಿಂದ ತೆಗೆದು ಮೆತ್ತೆಯ ಮೇಲೆ ಇರಿಸಿದರು. ಕಮಲೆ ತೆಗೆದುಕೊಳ್ಳಲಿಲ್ಲ.

" ಯಾಕೆ? ಬೇಡವೆ? ಇದೇನು ವ್ಯಾಪಾರಕ್ಕೆ ಅಂತಲ್ಲವಲ್ಲ. ನನ್ನ ಸ್ವಂತ ಖುಷಿಯಿಂದ ಕೊಟ್ಟಿದೀನಿ. "

ಮತ್ತೂ ಹಾಗೇ.

" ಹೋಗಲಿ, ನೀನು ತೆಗೆದುಕೊಂಡು ಇಟ್ಟಿರು." ಸಾಹುಕಾರರು ನೀಲಾಸಾನಿಗೆ ಹೇಳಿದರು. ಅವಳು ಒಂದು ಹೆಜ್ಜೆಯನ್ನು ಮುಂದಿಟ್ಟಳು.

" ಅಮ್ಮ! " ಕಮಲೆ ಛಳಕು ಹೊಡೆದಂತೆ ಹೇಳಿದಳು. ತಾಯಿ ಹಾಗೇ ನಿಂತಳು. ಸಾಹುಕಾರರಿಗೆ ಅವಮಾನವಾಯಿತು. ಸಿಟ್ಟೂ ಬಂದಿತು. ಆದರೆ ತೋರಿಸದೆ ಹಾಗೇ ನುಂಗಿಕೊಂಡರು.

" ಹೋಗಲಿ, ಈಗ ಇಷ್ಟವಿಲ್ಲದೇ ಇದ್ದರೆ ಬೇಡ. ಅವಳನ್ನ ಯಾಕೆ ನೋಯಿಸಬೇಕು, ಪಾಪ. ಮುಂದೆ ನೋಡೋಣ." ಕಟ್ಟನ್ನು ಮತ್ತೆ ಕಿಸೆಗೆ ಸೇರಿಸಿ ಎದ್ದರು. "ಕೊಟ್ಟ ಮಾತು ಮಾತ್ರ ಮರೀಬೇಡ ನೆನಪಿರಲಿ. ನಿನ್ನ ಉಪಕಾರ ನಾನು ಎಂದಿಗೂ ಮರೆಯೋದಿಲ್ಲ. ಸೂಳೆಯಾದರೂ ನಿನ್ನ ಎದೆ ಧಾರಾಳವಾಗಿದೆ. ಹೇಗಾದರೂ ಸುಖವಾಗಿ ಬಾಳು! ದೇವರು ಒಳ್ಳೇದು ಮಾಡಲಿ! " ಸಾಹುಕಾರರೂ ನಂಜಪ್ಪನೂ ಹೊರಟು ಹೋದರು. ನೀಲಾ-ಸಾನಿ ಅವರನ್ನು ಹಿಂಬಾಲಿಸಿದಳು. ಕಮಲೆ ಕಂಬವನ್ನು ಒರಗಿಕೊಂಡೇ ನಿಂತಳು. ಅವಳು ಕುಸಿಯಲಿಲ್ಲ. ಕಣ್ಣೀರು ಸುರಿಸಲಿಲ್ಲ. ಬಿಕ್ಕಿ ಅಳಲಿಲ್ಲ. ಇವನ್ನೆಲ್ಲ ಮೀರಿದ ದುಃಖ, ಅವಳದ್ದು. ಮೂಕು ಯಾತನೆಯ ವೈಮರೆವು. ಎದ್ದು ಬೀಳುತ್ತಿದ್ದ ಎದೆಯೊಂದೇ ಅವಳು ಶಿಲೆಯಲ್ಲದೆ ಸಜೀವವೆಂದು ಸೂಚಿಸುತ್ತಿತ್ತು.

ನೀಲಾಸಾನಿ ಹಿಂತಿರಿಗಿದಾಗ ಕಮಲೆ ಇನ್ನೂ ಹಾಗೇ ನಿಂತಿದ್ದಳು.

" ಕಮಲಾ, ದೊಡ್ಡ ಕೆಲಸ ಮಾಡಿದೆ. ಸಾಹುಕಾರರು ಬಹಳ ಕೊಂಡಾಡಿದರು........ಮತ್ತೆ ದುಡ್ಡು ತಗೊಂಡಿದ್ದರೆ ಅವರಿಗೂ ಸಮಾಧಾನ ವಾಗಿರುತ್ತಿತ್ತು. ನಮಗೂ.... "

" ಬೇಡ–ಅವರ ಭಿಕ್ಷ....ಬೆಲೆ " ಕಮಲೆ ಚಲಿಸದೆಯೇ ಹೇಳಿದಳು.

" ಮತ್ತೆ ನಮ್ಮ ಗತಿ? "

" ನಾಳೆ....ನರ್ತನ " ಕಮಲೆ ನಿಧಾನವಾಗಿ ಹೇಳಿದಳು.

" ಅಂ! " ತಾಯಿಗೆ ಅತ್ಯಾಶ್ಚರ್ಯ.

" ಹೆಚ್ಚಿನದಿಲ್ಲ—ನಮಗೆ "

ಕಮಲೆಯ ಚೇತನ ಈಗ ತನ್ನ ಕನಿಕರದ ದುಃಸ್ಥಿತಿಗೆ ಎಚ್ಚೆತ್ತಿತ್ತು. ಮುರಿದ ಮನ, ಒಡೆದ ಎದೆಗಳಿಂದ ತಲೆ ತಗ್ಗಿಸಿಕೊಂಡು ಒಂದೊಂದು ಹೆಜ್ಜೆಯಲ್ಲಿ ತನ್ನ ಕೋಣೆಗೆ ನಡೆದಳು. ಇವಳ ವ್ಯಥೆಯ ರೀತಿ, ಸಮಾಧಾನ ಪಡಿಸುವ ವಿಧಾನ ಯಾವುವೂ ತಾಯಿಗೆ ಗೊತ್ತಾಗಲಿಲ್ಲ.

ಮನೆಗೆ ಹೋಗುತ್ತ ನಂಜಪ್ಪ "ಏನು ಭಾವ, ದೊಡ್ಡ ಕೆಲಸಾನೇ ಸಾಧಿಸಿಬಿಟ್ಟೆ, ಅದೂ ಇಷ್ಟು ಸುಲಭವಾಗಿ. ಆಶ್ಚರ್ಯ!" ಎಂದು ಮೆಚ್ಚಿಗೆ ತೋರ್ಪಡಿಸಿದ. ಅಸೂಯೆ ಪಟ್ಟ.

" ಅವಳ ರೀತಿ ತಿಳಿದ ಮೇಲೆ, ದಾರಿಗೆ ಬರೋ ಜಾತಿ ಅಂತ ನಿರೀಕ್ಷಿಸಿದ್ದೆ. ಹಾಗೇ ಗೆದ್ದೆ." ಎಂದು ಸಂತೋಷಪಟ್ಟು ಹಾಗೇ ಯೋಚಿಸುತ್ತ "ಸ್ವಲ್ಪ ತಿಳಿವಳಿಕೆ ಇದ್ದರೆ ಸಾಕು, ಯಾರು ಬೇಕಾದರೂ ನನ್ನ ಅರ್ಥಮಾಡಿಕೊಳ್ಳಬಹುದು. ಪ್ರಪಂಚವೇ ನನ್ನ ಒಪ್ಪಿಕೊಳ್ಳುತ್ತೆ–ಆ ಒಬ್ಬ ಗುರು ಬಿಟ್ಟು. ಅವನಿಗೆ ಯಾಕೆ ದೇವರು ಬುದ್ಧಿ ಕೊಡಲಿಲ್ಲವೋ. ಅವನಿಲ್ಲದೆ ನಂಗೆ ಪ್ರಪಂಚದಿಂದ ಏನಾಗಬೇಕಾಗಿದೆ? ಇದೇ ನನ್ನ ದೊಡ್ಡ ತೊಡಕು, ಹುಂ " ಎಂದುಕೊಂಡರು.

ಮಾರನೆಯ ದಿನ ಬೆಳಕು ಹರಿಯುವುದಕ್ಕೆ ಮುಂಚೆ ದಾಸ ಸಾಹುಕಾರರನ್ನು ಎಚ್ಚರಿಸಿ "ನೀಲಾಸಾನಿ ಬಂದಿದಾಳೆ" ಎಂದು ತಿಳಿಸಿದ. ಸಾಹುಕಾರರು ದಡಬಡನೆ ಎದ್ದು ಹೊರಗೆ ಹೋದರು. ನೀಲಾಸಾನಿ ಅವರನ್ನು ಕಂಡೊಡನೆ "ಅಯ್ಯೋ ಸ್ವಾಮೀ, ನನ್ನ ಮಗಳು ಹೋಗಿಬಿಟ್ಟಳು— ಬಾವಿಗೆ ಬಿದ್ದು" ಎಂದು ಎದೆ ಬಡಿದುಕೊಂಡು "ಏನು ಮಾಡಲಿ ದೇವರೇ! " ಎಂದು ಗೋಳಾಡಿದಳು. ಸಾಹುಕಾರರಿಗೆ ಗಾಬರಿಯಾಯಿತು. ವ್ಯಥೆಯೂ ಆಯಿತು. ಸ್ವಲ್ಪಕಾಲ ಮಾತೇ ಹೊರಡಲಿಲ್ಲ.

" ಛೆ! ಹೀಗೆ ಮಾಡಿಕೊಂಡುಬಿಟ್ಟಳೆ? ಏನು ಅನ್ಯಾಯವಾಯ್ತು! " ಎಂದರು.

" ಹೀಗೆ ಮಾಡುತ್ತಾಳೆ ಅಂತ ನೆನೆಸಿಕೊಂಡಿರಲಿಲ್ಲ. ಇದು ಯೋಚಿಸಿಕೊಂಡೇ ಒಪ್ಪಿರಬೇಕು, ನಿನ್ನೆ ಅಯ್ಯಯ್ಯೋ! ".

" ಹೀಗಾಗುತ್ತೆ ಅಂತ ನಾನೂ ಅಂದುಕೊಂಡಿರಲಿಲ್ಲ. ಸೂಳೆಯಾ

ದೋಳು ಇದನ್ನೆಲ್ಲ ಅಷ್ಟೊಂದು ಮನಸ್ಸಿಗೆ ಹಚ್ಚಿಕೋಬಾರದಾಗಿತ್ತು. ಛೀ! ಎಂಥ ಹುಡುಗಿ! ಶುದ್ಧ ಅವಿವೇಕಿ! ”

ಸ್ವಲ್ಪ ಕಾಲ ಮೌನ ಸಾಹುಕಾರರು ಯೋಚಿಸುತ್ತಿದ್ದರು. ಅವಳು ಬಿಕ್ಕಿ ಬಿಕ್ಕಿ ಅಳುತ್ತಿದ್ದಳು.

“ ಅಂತಸ್ತು ಬಿಟ್ಟರೆ ಆಪತ್ತು; ಬೇಡ, ದೊಡ್ಡೋರ ಸಹವಾಸ ಬಿಡು. ಎಂದಿಗೂ ಸರಿಯಾಗೋದಿಲ್ಲ ಅಂತ ಬೇಡಿಕೊಂಡೆ, ಕೇಳಲಿಲ್ಲ. ನೋಡಿ, ಈಗ ಹೀಗಾಯ್ತು, ಅಪ್ಪಾ! ”

“ ಹೌದು. ಅದೇ ತಪ್ಪಾಯ್ತು. ಮಾಡಬಾರದ್ದು ಮಾಡಿದರೆ ಆಗಬಾರದ್ದು ಆಗುತ್ತೆ ಅನ್ನೋದಕ್ಕೆ ಇದೇ ನಿದರ್ಶನ. ಹುಂ. ”

ಇನ್ನಷ್ಟು ಹೊತ್ತು ಇಬ್ಬರೂ ಮಾತಾಡಲಿಲ್ಲ.

‘‘ ಏನು ಮಾಡಲಿ ಸಾಹುಕಾರ್ರೇ? ಮಗಳು ಹೋದ ಹೊಟ್ಟೆ ಉರಿ ಬೇರೆ. ಮುಂದೆ ನನ್ನ ಗತಿಯೇನು ಅನ್ನೋ ಭಯ ಬೇರೆ ದೇವರೇ! ಅವಳೇ ಎಲ್ಲ ಆಧಾರವಾಗಿದ್ದಳು. ’

‘‘ ಅದಕ್ಕೇನೂ ನೀನು ಹೆದರಬೇಡ. ನಾನಿದೀನಿ. ಈಗ ಎಲ್ಲರಿಗೂ ಗೊತ್ತಾಯ್ತೆ? ”

‘‘ ಇಲ್ಲಾ. ಕಂಡೋಳೆ ತಮ್ಮ ಬಳಿಗೆ ಓಡಿ ಬಂದೆ. ’’

‘‘ ಹೋಗು ಪೋಲೀಸಿನೋರಿಗೆ ತಿಳಿಸು. ನಿನ್ನೆ ಯಾರು ಬಂದಿದ್ದರು ಏನು ಕತೆ ಅಂತ ಕೇಳಿಯಾರು. ಜೋಪಾನು. ಏನೋ ನಿಮ್ಮಿಬ್ಬರಿಗೂ ಜಗಳ ಆಯ್ತು ಅಂತ ಹೇಳು—ಇರುತ್ತಲ್ಲ ಮಾಮೂಲು. ಗೊತ್ತಾಯ್ತೆ? ಆಮೇಲೆ ಬಾ. ಹೋಗು—ಈಗ. ಮುಖ್ಯ....ಛೆ! ಪಾಪ ನಿಂಗೆ ತುಂಬ ಕಷ್ಟ ಬಂತು, ಹೂಂ, ಹುಟ್ಟಿದೋರು ಅಂದೋರಿಗೇ ಇರುತ್ತೆ. ಎಲ್ಲ ದೈವೇಚ್ಛೆ ” ಎಂದು ಸಮಾಧಾನದ ಮಾತುಗಳನ್ನು ಹೇಳಿ ಧೈರ್ಯ ಕೊಟ್ಟು ಆತುರದಿಂದ ಕಳುಹಿಸಿದರು. ನಂಜಪ್ಪ ಬಂದಾಗ ಅವರು “ಕೇಳಿದೆಯಾ?” ಎಂದು ‘‘ಸಾಯಬಾರದಾಗಿತ್ತು ಅಂತೇನೋ ಅನ್ನಿಸುತ್ತೆ. ಆದರೂ ಈಗ ಪೂರ್ತಿ ಧೈರ್ಯ ಬಂತು ಗುರು ಬದುಕಿದ. ” ಎಂದರು. ನಂಜಪ್ಪ ತನ್ನೊಳಗೇ ‘ಹುಂ, ಅವಳಿದ್ದರೆ ಇನ್ನೂ ಏನಾದರೂ ಆಗುತ್ತೆ, ಗುರು ಬಂದ ಮೇಲೆ. ಕಡೆಗೆ ನನ್ನ ಯೋಜನೆಗೇ ಬರಬೇಕಾಗುತ್ತೆ ಅಂತ ಆಸೆ ಇಟ್ಟುಕೊಂಡಿದ್ದೆ. ಅದೂ ಹೋಯ್ತು’

ಅಂದುಕೊಂಡು, ಮೇಲೆ ಭಾವನ ಅಭಿಪ್ರಾಯದೊಡನೆ ಸಮ್ಮತಿಯನ್ನು ವ್ಯಕ್ತ ಪಡಿಸಿದ. ಸಣ್ಣಮ್ಮ "ಆದದ್ದೇನೋ ವ್ಯಸನವೆ. ಹೆಣ್ಣು ಜೀವ, ಎಷ್ಟು ನೊಂದಿತೋ ಏನೋ, ಪಾಪ. ಏನೇನು ಆಸೆಯಿಟ್ಟುಕೊಂಡಿತ್ತೊ. ಎಲ್ಲ ಮಣ್ಣುಪಾಲಾಯ್ತು. ದೇವರ ಚಿತ್ತ ಹೇಗೆ ಹೇಗೆ ಇರುತ್ತೊ ಹಾಗೆ ಎಲ್ಲ ಆಗುತ್ತೆ. ಅಂತೂ ಅವಳ ಕಷ್ಟ ಹೇಗಾದರೂ ಈ ಮನೆ ಮರ್ಯಾದೆ ಉಳೀತು" ಅಂದಳು. ಸದಾಶಿವ "ಏನಾದರೂ ಆಗಲಿ. ಪೀಡೆ ಕಳೀತು ಅವಳ ಜೀವವೇನು ಮಹಾ. ಪೇಟೇಲಿ ಸಿಕ್ಕೋದು" ಎಂದ. ಕುಸುಮ "ಹೀಗೇ ನಾದರೂ ಆಗಲೇಬೇಕಾಗಿತ್ತು. ಅನಿವಾರ್ಯ. ಸೂಕ್ಷ್ಮದ ಜನಕ್ಕೆ ಸ್ಥಳವಿಲ್ಲ, ಈ ಸಮಾಜದಲ್ಲಿ." ಎಂದಳು. ದಾಸ ಏನನ್ನೂ ಹೇಳಲಿಲ್ಲ. ಅವನ ಕಣ್ಣು ಮಾತ್ರ ಒದ್ದೆಯಾಯಿತು.

ಅದೇ ಸಂಜೆ ಸಾಹುಕಾರರು ಸದಾಶಿವನನ್ನು ಕರೆದು "ಲೋ, ಇವತ್ತಿನಿಂದ ಅವಳ ಹೆಸರಿನಲ್ಲಿ ಒಂದು ನಂದಾದೀಪ ಮನೆಯಲ್ಲಿ ಉರಿಯಲಿ" ಎಂದರು.

"ಏನು ಸ್ವಾಮಿ! ಅವಳ ಹೆಸರಿನಲ್ಲೆ?" ಅವನ ಧ್ವನಿಯಲ್ಲಿ ಆಶ್ಚರ್ಯ, ಅಸಮ್ಮತಿ, ತಿರಸ್ಕಾರಗಳು ಕಂಡವು.

"ಹುಂ."

ಸದಾಶಿವ ಇನ್ನೂ ಹಾಗೇ ನಿಂತಿದ್ದ.

"ತಿಳೀಲಿಲ್ಲವೆ?" ಸಾಹುಕಾರರು ಸಿಡಿಗುಟ್ಟಿದರು.

"ತಿಳೀತು." ಸದಾಶಿವ ಪೆಚ್ಚಾಗಿ ಹೇಳಿದ.

"ಎಂಥೋಳಾದರೇನು, ಮನೆ ಕಾಪಾಡಿದಾಳೆ." ಸಾಹುಕಾರರು ಕಾರಣ ಹೇಳಿದರು.

ಗುರು ಬೊಂಬಾಯಿನ 'ವೆಲ್ ಕಂ' ಹೋಟಲಿನ ಕೋಣೆಯೊಂದರಲ್ಲಿ ಮಂಚದ ಮೇಲೆ ಮಲಗಿಕೊಂಡು 'ಸಂಯುಕ್ತ ಕರ್ನಾಟಕ' ಪತ್ರಿಕೆಯನ್ನು ನೋಡುತ್ತಿದ್ದ. ಹಾಳೆ ತಿರುಗಿಸಿದಾಗ "ಹುಡುಗಿಯೊಬ್ಬಳ ಆತ್ಮಹತ್ಯೆ" ಎಂಬ ಶಿರೋನಾಮೆ ಕಾಣಿಸಿತು. "ಹುಂ, ಏನು ಸಾವುಗಳೋ, ಯಾಕೋ ಓದೋಕೇ ಬೇಸರ. ಹುಟ್ಟೋದು ಸಾಯೋದು ಹುಟ್ಟೋದು ಸಾಯೋದು, ಮಧ್ಯೆ ಜೀವನವೇ ಇಲ್ಲ. ಹುಂ. ಸಾವು ಸಾವು ಒಂದಲ್ಲ ಒಂದು ತರಹ.

ರೋಗ, ಆಕಸ್ಮಿಕ, ಕೊಲೆ....ಏ ಮರುಳೂರು !" ಮುಂದೆ ಹೋಗುತ್ತಿದ್ದ ಗಮನವನ್ನು ಊರಿನ ಹೆಸರು ಹಿಡಿಯಿತು. ಓದಿದ. ಓದುತ್ತ ಓದುತ್ತ ಅವನ ಕೈ ನಡುಗಿತು. ದಿಗ್ಗನೆದ್ದು ಕುಳಿತ. ಇನ್ನೂ ಹತ್ತಿರ ನೋಡಿದ. ಕಣ್ಣುಜ್ಜಿಕೊಂಡು ನೋಡಿದ. ಹುಂ. ಅದೇ ! ಅವಳೇ ! ಕಮಲಾಸಾನಿ ! ಇನ್ನು ಯಾರು ? ತಾಯಿ ಮಗಳ ಜಗಳವೇ ಕಾರಣ ! ಅಂ ! ಕಣ್ಣು ದುರ ಗುಟ್ಟಿತು, ಬೆರಳು ಹಲ್ಲುಗಳ ಮಧ್ಯಕ್ಕೆ ಹೋಯಿತು, ಎದೆ ಹೊಯ್ದು ಕೊಂಡಿತು. ಉಸಿರು ಕಷ್ಟದಿಂದ ಆಡಿತು ಅಷ್ಟು ಹೊತ್ತು ಹಾಗೇ ಕುಳಿತಿದ್ದ. ಮಧ್ಯೆ, ಮತ್ತೆ ಮತ್ತೆ ಪತ್ರಿಕೆಯ ಕಡೆಗೆ ನೋಡಿದ. ಕಡೆಗೆ ಅದರಿಂದಲೇ ತಲೆ ಚಚ್ಚಿಕೊಂಡ. ಅದನ್ನು ಬಿಸಾಡಿದ. "ಹೀಗಾಯ್ತೆ ? ಹೀಗಾಯ್ತೆ ? ನಾನು ಮಾಡೋದೆಲ್ಲ ಹೀಗೇ....ಸತದೃಷ್ಟ ! ಆಯ್ಯೋ ಕಮಲಾ ! ನಾನೇ ಕೊಂದೆನೆ ನಿನ್ನ—ಕಾಪಾಡೋದಕ್ಕೆ ಬಾಳಿಸೋದಕ್ಕೆ ಹೋಗಿ ! ಛೆ, ಪಾಪ ! ಅಜ್ಞಾನದಲ್ಲೇ ನೀನು ಸುಖವಾಗಿದ್ದೆ. ಮೇಲೆ ಎತ್ತೋದಕ್ಕೆ ಹೋಗಿ ನಿನ್ನ ಮರಣಕ್ಕೇ ಕಾರಣವಾದೆನೆ ? ತಪ್ಪಾಯ್ತೆ— ನನ್ನಿಂದ ? ಹೇಗೆ ?....ಎಲ್ಲ ಸರಿಯಾಗಿತ್ತಲ್ಲ....ಯಾಕೆ ? ಯಾಕೆ ?.... ಕಾರಣ—ತಾಯಿ ಮಕ್ಕಳ....ಛೀ ! ಇದರ ಹಿಂದೆ ಏನೇನಿದೆಯೋ, ಅಬ್ಬಬ್ಬ ! ಯಾರು ಯಾರು....ಹುಂ ! ಅದಿಲ್ಲದೆ....ಹೀಗೆ....ಉಂಟೆ ? ಇದೆ, ಇದೆ ಇದರ ಹಿಂದೆ. ಖಂಡಿತ....ಆಗಲಿ....ಹೋದರೆ...." ತಕ್ಷಣ ಎದ್ದು ಪೆಟ್ಟಿಗೆಯನ್ನು ರಭಸದಿಂದ ತೆಗೆದು ಅಲ್ಲಿದ್ದ ಬಟ್ಟೆಬರೆಗಳನ್ನು ಮಡಿಸದೆಯೇ ತುರುಕಿ ಮುಚ್ಚಿದ, ಹಾಸಿಗೆಗೆ ಇನ್ನಷ್ಟನ್ನು ಹಾಕಿ ಸುತ್ತಿ ಬಿಗಿದ. ಆದರೆ ಹೊರಡಲಿಲ್ಲ. ಹಾಗೇ ನಿಂತ, ಕುಳಿತ, ತಲೆಯ ಮೇಲೆ ಕೈಹೊತ್ತು ಯೋಚಿಸಿದ. "ಹುಂ, ಏನು ಪ್ರಯೋಜನ ?....ಹೋಗಿ ಮಾಡೋದಾದರೂ ಏನು ?....ಎಲ್ಲ ಆಗಿ ಹೋಗಿದೆ....ಹೋಗಿರುತ್ತೆ........ಮತ್ತೆ ಅದೇ ಊರಿನಲ್ಲಿ ಅದೇ ಜಾಗದಲ್ಲಿ ಇರೋದು—ಥೂ!..ಅಥವ ಹೋಗಿ ಪತ್ತೆಮಾಡಿ..ಅವರನ್ನ....ಯಾರನ್ನ?.... ಅಂ?....ಹುಂ!....ನಾನೂ ಪಾಪಿಯಾಗಿ....ಉಹುಂ. ಬೇಡವೇ ಬೇಡ.... ದುಡುಕಿ ಏನು ಫಲ ? ಈಗ ಹೋಗೋದೇ ಸರಿಯಿಲ್ಲ....ಇಲ್ಲಿ ದೂರವಾಗಿ.... ಆ ಮನೆಗೆ."

ಗುರು ಸುತ್ತಿದ ಹಾಸಿಗೆಯನ್ನು ಮತ್ತೆ ಬಿಚ್ಚಿ ಬಿದ್ದುಕೊಂಡ. ದಿನದಿನವೂ

ಗಂಟೆಗಂಟೆಗೂ ಅವನ ತೀರ್ಮಾನ ಬದಲಾಯಿಸುತ್ತಿತ್ತು. ಆದರೆ ಮನಸ್ಸಿನ ಉದ್ವೇಗ ಸ್ವಲ್ಪ ಹತೋಟಿಗೆ ಬರುತ್ತಿತ್ತು. ಹೀಗೇ ನಾಲ್ಕಾರು ದಿನಗಳು ಕಳೆದುವು. ಕೆಲಸ ಹುಡುಕಿದ. ಸಿಕ್ಕಲಿಲ್ಲ. ಕೈಯಲ್ಲಿದ್ದ ಕಾಸೂ ಮುಗಿಯುತ್ತ ಬಂದಿತ್ತು. ಇದೇ ಸಮಯದಲ್ಲಿ ಊರಿನಿಂದ ಟೆಲಿಗ್ರಾಂ ಬಂದಿತು— 'ಚಿಕ್ಕಮ್ಮ ಕಾಹಿಲೆಯಿಂದ ಮಲಗಿದ್ದಾಳೆ. ನಿನ್ನ ನೋಡಲು ಇಷ್ಟಪಡುತ್ತಿದಾಳೆ. ಕೂಡಲೇ ಬರುವುದು' ಎಂದು. ಗುರು ಟಿಕೆಟ್ ತೆಗೆದುಕೊಂಡ.

ಇತ್ತ ಸಾಹುಕಾರರೂ ಮಗನ ವಿಷಯವಾಗಿ ಚಿಂತಿಸುತ್ತಿದ್ದರು. ಅವನಿಗೆ ಸಮಾಚಾರ ಹೇಗಾದರೂ ತಿಳಿದು ಕೂಡಲೆ ಬಂದುಬಿಟ್ಟರೆ ಏನಾದರೂ ಅನಾಹುತವಾದೀತೋ ಎಂದು ಭಯ. ಆದರೂ ಇತರ ಸಂದರ್ಭಗಳನ್ನು ನೆನೆಸಿಕೊಂಡು ಧೈರ್ಯ ತಂದುಕೊಳ್ಳುತ್ತಿದ್ದರು. ಏನಾದರೂ ನೇರವಾಗಿ ಕೇಳಿದರೆ ಏನನ್ನು ಹೇಗೆ ಹೇಳಬೇಕೆಂಬ ಪ್ರಶ್ನೆ ಬಾಧಿಸಿತು. ಚೆನ್ನಾಗಿ ಚರ್ಚಿಸಿ ತಮಗೆ ಏನೂ ತಿಳಿಯದೆಂದು ಹೇಳುವುದೇ ಸರಿಯೆಂದು ತೀರ್ಮಾನಿಸಿದರು. ಮಾತು ಕತೆಗಳನ್ನು ತಕ್ಕ ರೀತಿಯಲ್ಲಿ ತಾವೇ ಆಡಿಕೊಂಡರು. ಆದರೂ ಯಾಕೋ ತೃಪ್ತಿಯಾಗಲಿಲ್ಲ. ಮಗ ಬರದಿರುವುದೂ ಅವರಿಗೆ ಸಮಾಧಾನದ ವಿಷಯವಲ್ಲ. ಎಲ್ಲಿ ಹೇಗೆ ಒದ್ದಾಡುತ್ತಿದ್ದಾನೋ. ಮಹಲಿಗೇ ಬಂದು ಹಾಯಾಗಿದ್ದರೆ ಆದೀತಲ್ಲ. ಅವನು ಕ್ಷೇಮದಿಂದ ಕಣ್ಣ ಮುಂದೆ ಇದ್ದರೆ ಸಾಕು ಎನ್ನುವ ಹಂಬಲು ಸದಾ ಕಾಡುತ್ತಿತ್ತು. ಎಂದಿಗೆ ಬಂದಾನೋ ಎಂಬ ತವಕ, ಹಾಗೂ 'ಬಂದರೆ' ಎಂಬ ಅಂಜಿಕೆ. ಇವರೂ ಮಗನಂತೆಯೇ ಮನಸ್ಸಿನ ಅದಲುಬದಲಿನಲ್ಲಿ ಒದ್ದಾಡುತ್ತಿದ್ದರು. ದಿನಗಳು ಕಳೆದಂತೆಲ್ಲ ಸಮಾಧಾನ ಆತಂಕಗಳು ಸ್ಥಳ ಬದಲಾಯಿಸಿಕೊಂಡುವು. ಕಡೆಗೆ ಈ ಸಮಾಚಾರ ಬೊಂಬಾಯಿ ಪತ್ರಿಕೆಗಳಲ್ಲೂ ಬಂದಿರುವುದನ್ನು ಕೇಳಿ. "ಹುಂ, ಅವನೇನು ಮನಸ್ಸಿಗೆ ಹಚ್ಚಿಕೊಂಡಂಗಿಲ್ಲ. ತಾತ್ಕಾಲಿಕ ಆಕರ್ಷಣೆ. ಅವನಿಗೆ ಹೀಗೇ. ಎಲ್ಲ ವಿಷಯಗಳಲ್ಲೂ ಆತುರ, ಆದರೆ ಅವು ಹಗುರ. ಹ್ಞ! ಯಾವುದನ್ನೂ ಹಿಡಿದು ಮಾಡೋ ಸ್ವಭಾವವಲ್ಲ. ಒಳ್ಳೇದೇ ಆಯಿತು. ಇನ್ನೂ ಹೊಸ ಹೊಸ ಹುಚ್ಚಿಗೆ ಹೋಗದೆ ಇದ್ದರೆ!" ಎಂದುಕೊಂಡರು. ಈ ಸ್ಥಿತಿಯಲ್ಲಿ ಸಣ್ಣಮ್ಮನ ಕಾಹಿಲೆ ತಲೆ ಹಾಕಿ ಅವನ ಬರವನ್ನು ನಿಶ್ಚಯಿಸಿದ್ದಿತು.

೧೩

* * *

ಸಣ್ಣಮ್ಮನ ಕಾಹಿಲೆ ಅದೇ ಹಳೆಯ ಮಾತು. ಪ್ರತಿ ಸಾರಿ ಬಸುರಾದಾಗಲೂ ಜಾರಿ ದೊಡ್ಡ ಗಂಡಾಂತರವಾಗಿ ಪರಿಣಮಿಸಿ, ಅವಳು ಸತ್ತು ಸತ್ತು ಬದುಕಿದವಳಂತೆ ಉಳಿದುಕೊಂಡಿದ್ದಳು. ವರ್ಷ ವರ್ಷಕ್ಕೆ ಅವಳ ಆರೋಗ್ಯ ಇಳಿಯುತ್ತಿತ್ತು. ಈ ಸಾರಿ ಮದುವೆಯ ಓಡಾಟ, ಹೊತ್ತು ಗೊತ್ತಿಲ್ಲದ ನಿದ್ರೆ ಆಹಾರಗಳ ದೇಹದ ಆಯಾಸ, ಮನಸ್ಸಿನ ತ್ರಾಸ ಇವೂ ತಮ್ಮ ಸುಂಕವನ್ನು ತೆಗೆದಿದ್ದುವು. ಈಗ ಹೆರಿಗೆಯ ನೋವು ಬೇರೆ ಹುಟ್ಟಿದ್ದು ಕಳವಳಕ್ಕೆ ಕಾರಣವಾಗಿತ್ತು. ಮರ್ಯಾದೆಯ ಮಹಲೇ ಕಂಗೆಟ್ಟಿತ್ತು. ಲೇಡಿ ಡಾಕ್ಟರಿಗೆ ತುರ್ತಾಗಿ ಹೇಳಿ ಕಳುಹಿಸಿದ್ದಾಗಿತ್ತು.

ಡಾಕ್ಟರು ಬಂದಾಗ ಸಾಹುಕಾರರು ಆತಂಕದ ಮುಖದಿಂದ ಸಣ್ಣಮ್ಮನ ಕೋಣೆಯ ಮುಂದೆ ಶತಪಥ ತಿರಿಗುತ್ತಿದ್ದರು. ಅತ್ಯಾತುರದಿಂದ ಡಾಕ್ಟರನ್ನು ಸ್ವಾಗತಿಸಿ ಪರಿಹಾರದ ನಗೆಯನ್ನು ತೋರಿಸುತ್ತ "ಈಗ ತಾನೆ ನೋವು ಶುರು ಆದ ಹಾಗಿದೆ. ತಾವು ಬೇಗಲೇ ಬಂದಿರಿ. ಬಹಳ ಉಪಕಾರವಾಯ್ತು." ಅಂದರು. ಡಾಕ್ಟರು ಏನೂ ಹೇಳದೆ ತಲೆಯಾಡಿಸಿ ಆತುರದಿಂದ ಕೋಣೆಯನ್ನು ಹೊಕ್ಕು ಬಾಗಿಲನ್ನು ಹಾಕಿಕೊಂಡರು. ಸಾಹುಕಾರರು ಶತಪಥವನ್ನು ಮುಂದುವರಿಸಿದರು.

ಒಳಗೆ ಬಿಳಿಚಿಕೊಂಡು ಸುಟ್ಟ ಹಪ್ಪಳದಂತಿದ್ದ ಸಣ್ಣಮ್ಮನ ಮುಖ ಡಾಕ್ಟರನ್ನು ಕಂಡೊಡನೆ ಸ್ವಲ್ಪ ಕೆಂಪೇರಿತು. ಅವಳು ಧೈರ್ಯದಿಂದ ಸ್ವಲ್ಪ ನಸುನಗೆಯನ್ನು ತೋರಿಸಿದಳು.

"ಏನ್ರಮ್ಮ, ಮೊದಲೇ ಬಂದು ಪರೀಕ್ಷೆ ಮಾಡಿಸಿಕೊಳ್ಳಬೇಡವೆ?" ಪರೀಕ್ಷೆಗೆ ಸಿದ್ಧಪಡಿಸಿಕೊಳ್ಳುತ್ತ ಕೇಳಿದರು.

"ನಾಚಿಕೆ...."

"ಎಂಥ ನಾಚಿಕೆಯಮ್ಮ, ಇಂಥಾ ವಿಚಾರದಲ್ಲೆಲ್ಲ?"

“ಹೋದ ಸಾರಿಯೇ ಎಚ್ಚರಿಕೆ ಕೊಟ್ಟಿದ್ದಿರಿ, ಮುಂದಿನ ಸಾರಿ ಪ್ರಾಣಾಪಾಯವೇ ಆಗೋ ಸಂಭವ ಇದೆ ಅಂತ.”

“ಹುಂ.”

“ಆದರೂ ಮತ್ತೆ....”

“ನಿಜ, ತಪ್ಪಾಯ್ತು. ಅವರಿಗೆ ಹೇಳಲಿಲ್ಲವೆ ಆ ಮಾತು ?”

ಸಣ್ಣಮ್ಮ ಹೌದು ಎನ್ನುವಂತೆ ತಲೆಯಾಡಿಸಿದಳು.

“ಮತ್ತೆ?”

“.......”

“ಹೀಗೆ ಎಚ್ಚರಿಕೆ ತಪ್ಪೋದು ಉಂಟೇ?”

ಸಣ್ಣಮ್ಮನಿಗೆ ಸನ್ನಿವೇಶವೇ ಸಾಕಾಗಿತ್ತು. ಈ ಮರುಕ ಆಕ್ಷೇಪಣೆಗಳ ಮಾತು ಇನ್ನೂ ಚುಚ್ಚಿತು.

“ನಾವು, ಹೆಂಗಸರು ಏನು ಮಾಡೋದಕ್ಕಾಗುತ್ತೆ ಡಾಕ್ಟರರೇ?” ನಿಸ್ಸಹಾಯತೆಯಿಂದ ತನ್ನನ್ನು ಸಮರ್ಥಿಸಿಕೊಂಡಳು.

“ಹುಂ! ಹಾಗೆಂದರೇನು. ಜೀವ ಯಾರದ್ದು? ರಕ್ಷಿಸಿಕೊಳ್ಳಬೇಡವೆ?”

“ಹೇಗೆ ಹೇಳಲಿ? ಹೇಳೋದು ಸುಲಭ.”

“ಹೋಗಲಿ. ಬೇರೆ ಸಲಹೆಗಳನ್ನೂ ಕೊಟ್ಟಿದ್ದೆನಲ್ಲ.”

“ಅವೆಲ್ಲ ಪ್ರಕೃತಿವಿರುದ್ಧ.......ಪಾಪವಂತೆ.”

“ಆಂ! ಪಾಪವೆ? ಇದೇನು ಪುಣ್ಯವೆ? ಏನ್ರಮ್ಮ, ಏನು ಅಜ್ಞಾನ! ಮನುಷ್ಯನೇ ಪ್ರಕೃತಿಗೆ ವಿರುದ್ಧವಾದ ಪ್ರಾಣಿ. ಹುಂ! ಅದೆಲ್ಲ ಯಾಕೆ ಈಗ. ಏನೋ ಮನಸ್ಸು ತಡೀಲಿಲ್ಲ, ಬಂದು ಬಿಟ್ಟಿತು ನನ್ನ ಕೆಲಸ, ನನ್ನ ಕೈಲಾದ್ದು ಮಾಡೋದು........”

“ಅಷ್ಟೆ ಡಾಕ್ಟರೆ, ಮುಂದೆ ದೇವರು ಮಾಡಿಸಿದ ಹಾಗಾಗುತ್ತೆ.”

ಡಾಕ್ಟರಿಗೆ ಅವಳ ಸಹನೆ, ಸಮಾಧಾನ, ದೃಢತೆಗಳನ್ನು ಕಂಡು ಆಶ್ಚರ್ಯ ಕನಿಕರಗಳೆರಡೂ ಆದುವು.

ಪರೀಕ್ಷೆ ಮುಗಿದು ಡಾಕ್ಟರು ಹೊರಗೆ ಬಂದಾಗ ಸಾಹುಕಾರರು ಆತುರದಿಂದ “ಹೇಗಿದೆ ಡಾಕ್ಟರೆ?” ಎಂದು ಕೇಳಿದರು.

“ಇದೂ ಆಪರೇಷನ್ ಕೇಸೆ.”

"ಹಾಗೇ?"

"ಹೊಟ್ಟೆಯಾಗಲೇ ಹೊಲಿಗೆಗಳಿಂದ ತುಂಬಿಹೋಗಿದೆ."

"ಹುಂ."

"ನೋಡಬೇಕು. ದೇವರಿದಾನೆ....ಆಸ್ಪತ್ರೆಗೇ ಇವರನ್ನ ಕರೆದುಕೊಂಡು ಬರಬೇಕಾಗುತ್ತೆ."

"ಆಗಲಿ, ಆಗಲಿ. ಈಗಲೇ........"

"ನಾನೂ ಅಲ್ಲಿಗೆ ಬಂದುಬಿಡುತ್ತೀನಿ."

"ಯಾಕೆ? ತಾವು ಜತೆಯಲ್ಲಿ ಹೋಗೋದಿಲ್ಲವೆ? ಹೋಗಿದ್ದರೆ ಚೆನ್ನಾಗಿರುತ್ತಿತ್ತು."

"ಇಲ್ಲ, ನಾನು ಕೋರ್ಟಿಗೆ ಹೋಗಬೇಕಾಗಿದೆ—ಸ್ವಲ್ಪ. ಬೇಗ ಬಂದುಬಿಡುತ್ತೀನಿ." ಡಾಕ್ಟರು ಹೊರಗಡೆಗಾಗಿ ಹೊರಟರು.

"ಕೋರ್ಟಿಗೇ? ಯಾವ ಕೇಸು, ಅದೇ ಆ ಅತ್ಯಾಚಾರದ್ದೆ? ಪೇಪರಿನಲ್ಲಿ ಬಹಳ ಬಂದಿದೆಯಲ್ಲ....?" ಸಾಹುಕಾರರು ಅವರೊಡನೆ ನಡೆಯುತ್ತ ಕೇಳಿದರು.

"ಹುಂ. ಅದೇ.?"

"ಆ ಹುಡುಗಿ ಹೇಗಿದಾಳೆ?"

"ಹೋಗಿಬಿಟ್ಟಳು—ಇವತ್ತು."

"ಛೀ! ಛೆ! ಏನು ಅನ್ಯಾಯವಾಯ್ತು! ಹುಂ, ಕುರುಡು ಕಾಮುಕತೆ ಅಂದರೆ ಹೀಗೂ ಇರುತ್ತೇ?"

"ಸಣ್ಣ ಹುಡುಗಿ. ಅಂಥ ಅಕೃತ್ಯ. ಬದುಕೋದುಂಟೇ? ತಿಳಿದೇ ಇತ್ತು."

"ಆ ನೀಚನಿಗಾದರೂ ತಿಳಿಯದೆ ಇದ್ದೀತೆ—ಹೀಗಾಗುತ್ತೆ ಅಂತ? ಎಂಥ ಚಂಡಾಲ ಅವನು! ಕೊಂದೇಬಿಟ್ಟನಲ್ಲ. ಅಯ್ಯೋ ಪಾಪೀ!"

"ಹುಂ, ಇಂಥಾವೆಲ್ಲ ನಡೀತಾಲೇ ಇರುತ್ತವೆ. ಒಂದಲ್ಲ ಒಂದು ತರಹದಲ್ಲಿ" ಡಾಕ್ಟರು ಸಾಹುಕಾರರ ಮುಖವನ್ನು ನೋಡಿದರು. ಆದರೆ ಅವರು ಆವೇಶಭರಿತರಾಗಿದ್ದರು.

"ತಮಗೇನೋ ದುಃಖ ನೋಡಿ ನೋಡಿ ಎದೆ ಕಲ್ಲಾಗಿರಬಹುದು. ಇಂಥಾದ್ದೆಲ್ಲ ಸಾಧಾರಣದಂತೆ ಕಾಣಬಹುದು. ನಂಗೆ ಹಾಗೆ ಅನ್ನಿಸೋದಿಲ್ಲ

ಡಾಕ್ಟರ್. ಅವನಿಗೆ ಯಾವ ಶಿಕ್ಷೆ ಕೊಟ್ಟರೂ ಸಾಲದು ಫಾಸಿ ಅಂತೂ ಹಾಕೋದಿಲ್ಲ. ಬರಿ ಸಜ ಏನೇನೂ ಸಾಲದು. ಛಡಿ ಏಟು ಹೊಡೀಬೇಕು, ಛಡಿ ಏಟು—ನೂರು!

" ಹುಂ, ನಿಜ. ಅಂಥೋರಿಗೆಲ್ಲ ಹಾಗೇ ಮಾಡಬೇಕು " ಡಾಕ್ಟರು ಮೆಟ್ಟಿಲನ್ನಿಳಿದು ಕಾರಿಗೆ ಹೋದರು.

ಆಪರೇಷ ಆಯಿತು. ಸತ್ತ ಮಗು ಹೊರಗೆ ಬಂದಿತು. ರಕ್ತಸ್ರಾವ ಪ್ರತಿಸಲಕ್ಕಿಂತ ಬಹಳವಾಯಿತು. ನಿತ್ರಾಣ ಹೆಚ್ಚಾಯಿತು. ಪ್ರಜ್ಞೆ ಆಗಾಗ ತಪ್ಪುತ್ತಿತ್ತು. ಗಂಟೆ ಗಂಟೆಗೆ ಸಣ್ಣಮ್ಮ ಕುಗ್ಗುತ್ತಿದ್ದಳು. ಸಾಹುಕಾರರು ದಿನಕ್ಕೆ ನಾಲ್ಕಾರು ವೇಳೆ ಬಂದು ನೋಡಿಕೊಂಡು ಹೋಗುತ್ತಿದ್ದರು. ಕುಸುಮ ತಾಯಿಯ ಬಳಿಯಲ್ಲೇ ಇದ್ದಳು. ಸಣ್ಣಮ್ಮ ಆಗಾಗ ತನ್ನ ಕಣ್ಣು ಗಳನ್ನು ಹೊರಳಿಸುತ್ತ " ಗುರು ಬರಲಿಲ್ಲವೆ? " ಎಂದು ಕೇಳುತ್ತಿದ್ದಳು. ಕಣ್ಣೀರು ಸುರಿಸುತ್ತಿದ್ದಳು. ಈಗಲೇ ಟೆಲಿಗ್ರಾಮ್ ಬೊಂಬಾಯಿಗೆ ಹೋಗಿದ್ದುದು.

ರೈಲಿನಿಂದ ಇಳಿದೊಡನೆ ಗುರು ಡ್ರೈವರನ್ನು "ಚಿಕ್ಕಮ್ಮ ಹೇಗಿದಾಳೆ?" ಎಂದು ಕೇಳಿದ. ಅವನು "ಬದುಕೋದು ಕಷ್ಟ ಅಂತಾರೆ. ಆಸ್ಪತ್ರೇಲೇ ಇದಾರೆ. ಕುಟುಕು ಜೀವ ಹಿಡಿದುಕೊಂಡಿದಾರಂತೆ ನಿಮ್ಮನ್ನೇ ಕೇಳ್ತಾ ಇರ್ತಾರಂತೆ. ಇಳೀತಾ ಇದಾರಂತೆ " ಎಂದು ವ್ಯಥೆಯಿಂದ ಹೇಳಿದ. ಗುರು ವಿನ ಕಣ್ಣು ಒದ್ದೆಯಾಯಿತು. ಅವನ ಎದೆ ನೊಂದಿತು. ಮನಸ್ಸು ತವಕ ಗೊಂಡಿತು. " ಬೇಗ ನಡಿ— ಆಸ್ಪತ್ರೆಗೇ." ಎಂದು ಕಾರಿನೊಳಕ್ಕೆ ಧುಮುಕಿ ಬಾಗಿಲನ್ನು ಜೋರಾಗಿ ತಬ್ಬಿಕೊಂಡ.

ಕಾರು ಹೋಗುತ್ತ ಗುರುವಿನ ಮನಸ್ಸು ವರ್ಷ ವರ್ಷಗಳ ಹಿಂದಕ್ಕೆ ಹೋಯಿತು. ಚಿಕ್ಕಮ್ಮ ! ಎಂಥ ಸೌಮ್ಯವಾದ ಸದ್ದು ಗದ್ದಲವಿಲ್ಲದ, ಹೆಂಗಸು—ಯಾವಾಗಲೂ........ಅವಳು ಗಟ್ಟಿಯಾಗಿ ಮಾತನಾಡಿದುದೇ ನೆನಪಿಲ್ಲ. ಸಾಹುಕಾರರ ಮುಂದಂತು ಅದೆಷ್ಟು ತಗ್ಗಿ ನಡೆಯುತ್ತಿದ್ದಳು! ಅವರನ್ನು ಕಂಡರೆ ಭಯವೇ ಅವಳಿಗೆ. ಅಷ್ಟಾದರೂ ಅವಳು ಒಂದೆರಡು ಮಾತು ಹೆಚ್ಚಾಡಿದರೂ ಅವರು ಸಿಡಿಗುಟ್ಟುತ್ತಿದ್ದರು. ಅವಳಿಗೆ ಏನೂ ತಿಳಿಯ ದೆಂದು ಅವರ ಭಾವನೆ. ಹೇಳದಿದ್ದರೂ ತೋರಿಸುತ್ತಿದ್ದ ತಿರಸ್ಕಾರ.

ಆದರೆ ಇದನ್ನು ಅವಳು ಮನಸ್ಸಿಗೆ ಹಚ್ಚಿಕೊಂಡವಳಲ್ಲ. ಸುಮ್ಮನೆ ಸಹಿಸಿಕೊಂಡಿದ್ದಳು. ಎಲ್ಲರಲ್ಲೂ ಮೃದುವಾಗಿ, ನಯವಾಗಿ, ನಡೆದುಕೊಳ್ಳುತ್ತಿದ್ದಳು. ಮನೆಯ ಯಜಮಾನಿಯೆಂಬ ಹೆಮ್ಮೆಯ ಸುಳಿವು ಕೂಡ ಅವಳ ಬಳಿ ಇರುತ್ತಿರಲಿಲ್ಲ. ಇದರಿಂದ ಸದಾಶಿವನ ಯಜಮಾನಿಕೆ. ನಂಜಪ್ಪನ ಮಣೆಗಾರಿಕೆ. ಆದರೂ ಅವಳೇನು ಗೊಣಗುತ್ತಿರಲಿಲ್ಲ. ಸಮಾಧಾನವಾಗಿಯೇ ಇರುತ್ತಿದ್ದಳು. ತನಗೆ ತಿಳಿವಳಿಕೆ ಬಂದಾಗಿನಿಂದ ಅವಳು ಕಾಹಿಲೆಯಿಂದ ನರಳುತ್ತಿದ್ದುದೇ ನೆನಪಿತ್ತು. ಆದರೂ ಹೇಳಿಕೊಂಡವಳಲ್ಲ, ಸುಮ್ಮನೆ ಅನುಭವಿಸುತ್ತಿದ್ದಳು. ಅದೇ ಅವಳ ಮುಖ್ಯ ಗುಣ. ಸಹನೆ, ಸಹನೆ....ಅದರ ಮೂರ್ತ ಸ್ವರೂಪ....ಅವಳ ಪ್ರೇಮಸ್ವಭಾವವೋ? ಅದೆಷ್ಟು ಪ್ರೀತಿ ಮಕ್ಕಳಲ್ಲಿ! ಕುಸುಮ ಅವಳ ಮಗುವಾಗಿದ್ದರೂ ತನಗೇನು ಕಡಿಮೆ ಎರೆದಿದ್ದಳೇ, ತನ್ನ ಮುದ್ದು? ತಾಯಿಯಿಲ್ಲದ ಮಗುವೆಂದು ಒಂದು ಪಾಲು ಹೆಚ್ಚೇಯೋ! ಅಭಿಮಾನವಂತೂ ಕುಸುಮಳಲ್ಲಿದ್ದುದಕ್ಕಿಂತ ಒಂದು ತೂಕ ಹೆಚ್ಚೇ. ತನ್ನ ನಡೆನುಡಿಗಳನ್ನು ಯಾವಾಗಲೂ ಒಪ್ಪಿ ಪ್ರಶಂಸಿಸುತ್ತಿದ್ದಳು, ಮಗಳನ್ನೇ ಆಕ್ಷೇಪಿಸುತ್ತಿದ್ದಳು—ಅದೂ ತನ್ನ ಮುಂದೇ........ಮೊದಲಿನಿಂದಲೂ ತನ್ನಲ್ಲಿ ಹಾಗೇಯಂತೆ. ಅವಳು ಮನೆಗೆ ಕಾಲಿಟ್ಟಾಗಲೇ ತನ್ನನ್ನು ಎತ್ತಿಕೊಂಡು ಮುದ್ದಾಡಿದಳಂತೆ. ತನಗಂತೂ ಯಾವಾಗಲೂ ಅವಳ ತೊಡೆಯ ಮೇಲೆ ತಲೆಯಿಟ್ಟೇ ಮಲಗಿದ ನೆನಪು. ಅಪ್ಪನೂ ಎಷ್ಟೋ ಬಾರಿ ತನ್ನನ್ನು ತೊಡೆಯ ಮೇಲೆ ಆಡಿಸಿಸಿ ಮಲಗಿಸಲು ಯತ್ನಿಸಿದ್ದುಂಟು. ಆದರೆ ಚಿಕ್ಕಮ್ಮನ ತೊಡೆಯ ಮೇಲೇ ತನಗೆ ನಿದ್ದೆ. ಕುಸುಮಳು ಅಲ್ಲಿ ಮಲಗಿದ್ದರೆ ತನಗೆ ತಡೆಯುತ್ತಿರಲಿಲ್ಲ. ಆಗ ಅವಳನ್ನೇ ತೊಟ್ಟಿಲಿಗೆ ಹಾಕಿ ತೂಗುತ್ತ ತನ್ನನ್ನೇ ಮಲಗಿಸಿಕೊಂಡದ್ದು ತನಗೆ ನೆನಪಿರಲಿಲ್ಲವೆ? ಇಬ್ಬರಿಗೂ ತನ್ನನ್ನು ಹಂಚಿಕೊಟ್ಟೇ ಬೆಳೆಸಿದ್ದಳು. ಅವಳೇ ಮಾಡಿ ಉಡಿಸಬೇಕು, ಬಟ್ಟೆ ಹಾಕಬೇಕು, ಉಣ್ಣಿಸಬೇಕು—ಚಿಕ್ಕಮ್ಮ ಮಾಡದಿದ್ದರೆ ರಗಳೆಯೇ—ಅವಳ ಸುತ್ತುಮುತ್ತೇ, ಅವಳ ಕಾಲಿಗೆ ತೊಡರಿಕೊಂಡೇ ಮೂರು ಹೊತ್ತೂ ಓಡಾಡುತ್ತಿರಬೇಕು. ತಾನು ಎಷ್ಟೇ ತಂಟೆ ಮಾಡಲಿ, ಹಟ ಮಾಡಲಿ, ಪೀಡಿಸಲಿ ಅವಳು ಹುಬ್ಬು ಗಂಟಿಕ್ಕಿದ ದಿನವೇ ತನಗೆ ತಿಳಿಯದು. ನಸುನಗೆಯಿಂದಲೇ ಸಹಿಸುತ್ತಿದ್ದಳು, ಮುದ್ದು ಮಾತುಗಳಿಂದಲೇ ದಾರಿಗೆ ತರುತ್ತಿದ್ದಳು. ಇಂಥ

ಸಮಾಧಾನ ಮನುಷ್ಯರಿಗೆ ಹೇಗೆ ಸಾಧ್ಯವೆಂದು ತನಗೆ ಈಚೀಚಿಗೆ ಎಷ್ಟೋಸಲ ಅನ್ನಿಸಿತ್ತು. ಅವಳಿಗೆ ಅಕ್ಷರ ಕಲಿಸಲು ಬಾರದು. ಆದರೆ ಎಂಥ-ಮುತ್ತಿನಂಥ-ಕತೆಗಳನ್ನು ಹೇಳುತ್ತಿದ್ದಳು! ಎಷ್ಟು! ರಾತ್ರಿ ಕತೆ ಕೇಳುತ್ತಿದ್ದರೆ ನಿದ್ದೆಯೇ ಹತ್ತುತ್ತಿರಲಿಲ್ಲ. ಆಗ ಹಾಡಿಯೋ ತಟ್ಟಿ ಮಲಗಿಸುತ್ತಿದ್ದಳು. ಮೇಷ್ಟರೇನೋ ಮುಂದೆ ಪಾಠ ಹೇಳುತ್ತಿದ್ದರು. ಆದರೆ ತಾನು ಕಲಿತದ್ದೆಲ್ಲ ಚಿಕ್ಕಮ್ಮನಿಂದಲೇ—ಅವಳ ಕತೆ, ಮಾತು, ನೀತಿ, ನಡೆಗಳಿಂದಲೇ. ಈಗಲೂ—ಈ ಪರೀಕ್ಷೆಗಳನ್ನು ದಾಟಿದ ಮೇಲೂ ತನಗೆ ಅವಳಂತಹ ಗುರು ಸಿಕ್ಕೇ ಇರಲಿಲ್ಲ. ಅಪ್ಪ ಎಷ್ಟೇ ಮುದ್ದು ಮಾಡಲಿ—ಬೇಕಾದಷ್ಟು ಮಾಡುತ್ತಿದ್ದರು—ಅದು ಚಿಕ್ಕಮ್ಮನ ಒಂದು ಮೆಲ್ನುಡಿ, ಒಂದು ತಬ್ಬು, ಒಂದು ಕೆನ್ನೆಯ ಸೋಂಕು, ಕಡೆಗೆ ಒಂದು ನೋಟ ಇದಕ್ಕೆ ಸರಿದೂಗುತ್ತಿರಲಿಲ್ಲ. ಅದು ಅಂದಿಗಾದ ಮಾತಲ್ಲ ಇಂದಿಗೂ ಸತ್ಯವೇ. ವರ್ಷ, ಎರಡು ವರ್ಷಕ್ಕೆ—ಯಾವ ಯಾವಾಗಲೋ ಚಿಕ್ಕಮ್ಮ ಕೆಲವು ದಿನ ಮರೆಯಾಗಿರುತ್ತಿದ್ದಳು—ಆ ಮೂಲೆಯ ಕೋಣೆಯಲ್ಲಿ. ಆಗ "ಇನ್ನೊಬ್ಬಳು ಕುಸುಮ ಹುಟ್ಟುತಿದ್ದಾಳೆ" ಎಂದು ಸದಾಶಿವ ಹೇಳುತ್ತಿದ್ದ. ಆ ದಿನಗಳಲ್ಲಿ ತನಗೆ ಪ್ರಪಂಚವೇ ಎಲ್ಲೋ ಹೋದಂತಿರುತ್ತಿತ್ತು. ಯಾವುದೂ ರುಚಿಸುತ್ತಿರಲಿಲ್ಲ. ಅವಳು ಮತ್ತೆ ತನ್ನನ್ನು ಸೇರಗೊಟ್ಟ ದಿನ ಸುಗ್ಗಿಯ ದಿನದಂತೆ. ಮುಂದೆ ಕೆಲವು ದಿನಗಳಂತೂ ಅವಳು ಮಡಿಗೆ ಹೋದರೂ ಬಚ್ಚಲು ಮನೆಯ ಬಾಗಿಲಿನ ಹೊರಗೇ ನಿಂತಿರುತ್ತಿದ್ದ. ಅದು ಹೇಗೆ 'ಚಿಕ್ಕಮ್ಮ' ಅನ್ನುತ್ತಿದ್ದನೊ, ಯಾರು ಕಲಿಸಿದ್ದರೋ ಕಾಣ. ಅಮ್ಮ ಎನ್ನುವುದೇ ಸರಿಯೆಂದೆನಿಸುತ್ತಿತ್ತು. ತಾನು ದೊಡ್ಡವನಾದ ಮೇಲೆ ಅವಳು ತನ್ನ ಪ್ರೇಮವನ್ನು ಹಿಂದಿನ ರೀತಿ ಬಹಿರಂಗ ಪಡಿಸುವುದಕ್ಕಾಗುತ್ತಿರಲಿಲ್ಲ. ಸಲಿಗೆ ಕಡಿಮೆಯಾಗಿದ್ದಿತು. ಇದು ತನಗೆ ಅಷ್ಟಿಷ್ಟು ನೋವಲ್ಲ. ಆ ಪ್ರೇಮ ಅವಳಲ್ಲಿ ತನ್ನ ಬಗ್ಗೆ ಒಂದು ಹೆಮ್ಮೆಗೌರವಗಳ ಹೊರರೂಪವನ್ನು ಹೊಂದಿತ್ತು. ಆದರೂ ಅದೇ ಹಣ್ಣುಭಾವನೆಯನ್ನು ಆ ಮೃದು ಕಣ್ಣುಗಳಲ್ಲಿ, ಆ ಮಂದಹಾಸದ ಆನಂದದಲ್ಲಿ, ಆ ಒಂದೆರಡು ಮಾಮೂಲು ಮಾತುಗಳಲ್ಲಿಯೂ ಕೂಡ ಕಾಣುತ್ತಿದ್ದ. ಮನೆಯಲ್ಲಿ ಈಗಲೂ ತನಗೆ ಯಾವ ಹಿಂಸೆಯಾಗಲಿ, ವ್ಯಥೆಯಾಗಲಿ ಅವಳನ್ನು ನೋಡಿದರೆ ಮನಸ್ಸಿಗೆ ಸ್ವಲ್ಪ ಶಾಂತಿಯುಂಟಾಗುತ್ತಿತ್ತು. ಆದರೆ ಅವಳ ಈ ಎಲ್ಲ ಕಡೆಯ ಸವಿ, ಮೃದು ದೌರ್ಬಲ್ಯ—ಇದೇ ತನಗೊಂದು ಕೊರಗಾಗಿತ್ತು. ಅವಳನ್ನು ನೋಡಿ

ದಾಗಲೆಲ್ಲ ಎದೆಯನ್ನು ಕರಗಿಸುತ್ತಿತ್ತು. ಚಿಕ್ಕಮ್ಮ ಸ್ವಲ್ಪ ಸೆಡೆತು ನಿಲ್ಲಬಾರದೆ-ಆಗಾಗ ? ಅವಳಿಗೆ ಅದು ಸಹಾಯಕಾರಿಯಲ್ಲವೆ ಎಂದುಕೊಳ್ಳುತ್ತಿದ್ದ.

ಈ ಪ್ರೇಮಜೀವ, ಸಹನಶರೀರ ಈಗ ಸಂಕಟದಲ್ಲಿದ್ದುವು. ಎಂದೂ ಇದ್ದುವು. ಈಗ ಇನ್ನೂ ಹೆಚ್ಚು. ಇದರ ಪರಿಣಾಮ ಹೇಗೋ. ಗುರುವಿನ ಮನಸ್ಸು ತೀರ ಕೆಟ್ಟದನ್ನೇ ಯೋಚಿಸಿತು, ಒದ್ದಾಡಿತು, ತವಕಪಟ್ಟಿತು.

ಕಾರು ಮಹಲಿನ ಮುಂದುಗಡೆ ಬಂದಿತು. ನಿದಾನವಾಯಿತು. ಸಾಹುಕಾರರು ವರಾಂಡದಲ್ಲಿ ನಿಂತಿದ್ದುದೂ ಗುರುವಿಗೆ ಕಾಣಿಸಿತು. ಆದರೆ ಅವನು "ಆಸ್ಪತ್ರೆಗೆ'' ಎಂದು ಮತ್ತೊಮ್ಮೆ ಡ್ರೈವರನಿಗೆ ಎಚ್ಚರಿಸಿದ. ಕಾರು ಅತ್ತ ಕಡೆಗೇ ಹೋಯಿತು. ಸಾಹುಕಾರರು ಆಶಾಭಂಗದಿಂದ ಒಳಗೆ ಹೋದರು.

ಆಸ್ಪತ್ರೆಯಲ್ಲಿ ಡಾಕ್ಟರು ಮುಂದುಗಡೆಯಲ್ಲೇ ಸಿಕ್ಕಿದರು. "ನಮ್ಮ ಚಿಕ್ಕಮ್ಮ...." ಗುರು ಮುಗಿಸಲಿಲ್ಲ.

''ಓ, ಈಗ ಬಂದಿರಾ ? ಅವರು ಈಗ ತಾನೆ ಸ್ವಲ್ಪ ಮಲಗಿದಂತಿದೆ"

"ಹೇಗಿದೆ ಸ್ಥಿತಿ?"

"ದೇವರ ಕೈಯಲ್ಲಿ."

"ಆಂ !"

"ಹೌದು; ಮನುಷ್ಯ ಮಾಡೋದು, ದೇವರಿಗೆ ಒಪ್ಪಿಸೋದು. ನಾನು ಹೋದ ಸಾರಿಯೇ ಹೇಳಿದ್ದೆ. ಶುದ್ಧ ಅವಿವೇಕ—ಅನುಭವಿಸಬೇಕು ಈಗ. ಹಿಡಿತವಿಲ್ಲ ಹೋಗಲಿ ಅಂದರೆ ವಿಚಿತ್ರ ಭಾವನೆ ಬೇರೆ. ಏನು ಮಾಡೋದಪ್ಪ? ನಿಮ್ಮ ಚಿಕ್ಕಮ್ಮನ್ನ ನೋಡಿದರೆ ಹೊಟ್ಟೆ ಉರಿಯುತ್ತೆ. ಮುಂದಿನೋರು ನೀವಾದರೂ ಬುದ್ಧಿವಂತರಾಗಿರಿ."

ಗುರುವಿಗೆ ಇಷ್ಟು ಮಾತುಗಳೇ ಸಾಕಾದುವು ಅವನು ಹಿಂದಿನ ಸಂದರ್ಭಗಳನ್ನೆಲ್ಲ ನೋಡಿದ್ದವನು, ಕತೆಯನ್ನೆಲ್ಲ ಊಹಿಸಿಕೊಂಡ. "ಡಾಕ್ಟರೆ! ಡಾಕ್ಟರೆ!'' ಕುಸುಮ ಒಳಗಿನಿಂದ ಓಡುತ್ತ ಬಂದಳು, ಅಣ್ಣನನ್ನು ಕಂಡು "ಅಣ್ಣ ! ಬಂದೆಯಾ ! ಅಮ್ಮ ಹಂಬಲಿಸ್ತಾ ಇದಾಳೆ" ಎಂದಳು. ಎಲ್ಲರೂ 'ಗೌರಮ್ಮ ವಾರ್ಡಿಗೆ' ಬೇಗಬೇಗನೆ ಹೋದರು.

ಸಣ್ಣಮ್ಮನ ಮುಖ ಹೀರಿದ ನಿಂಬೆಯ ಚಟ್ಟಿನಂತಿತ್ತು. ಅರೆತೆಗೆದು ಹೊರಳುವ ಕಣ್ಣುಗಳಲ್ಲಿ ಮರಣಸಂಕಟ ಕಾಣುತ್ತಿತ್ತು. ಡಾಕ್ಟರು ಅವಳ

ಮೇಲೆ ಬಗ್ಗಿದರು. ಹುಡುಗರಿಬ್ಬರೂ ಒಂದೊಂದು ಪಕ್ಕದಲ್ಲಿ ಮಂಡಿಯೂರಿ ಕುಳಿತರು. ಸಣ್ಣಮ್ಮ ಎಲ್ಲೋ ನೋಡುತ್ತ ತಲೆಯಾಡಿಸಿದಳು. ಡಾಕ್ಟರು ಏನನ್ನೋ ತರವುದಕ್ಕೆ ಹೊರಗೆ ಬೇಗನೆ ಹೋದರು.

''ಚಿಕ್ಕಮ್ಮ!'' ಗುರು ಮೆಲ್ಲನೆ ಉಸುರಿದ.

ಸಣ್ಣಮ್ಮನ ನಿಸ್ತೇಜವಾದ ಆಳದ ಕಣ್ಣುಗಳಲ್ಲಿ ಬೆಳಕು ಹೊಳೆದಂತಾ ಯಿತು.

"ಅಮ್ಮ, ಗುರು ಬಂದಿದಾನೆ" ಕುಸುಮ ಸ್ವಲ್ಪಗಟ್ಟಿಯಾಗಿ ಹೇಳಿದಳು.

ಸಣ್ಣಮ್ಮ ಕಷ್ಟದಿಂದ ದೃಷ್ಟಿಯನ್ನು ಒಂದೆಡೆ ಇಡುವುದಕ್ಕೆ ಯತ್ನಿಸುತ್ತ ಅತ್ತಿತ್ತ ನೋಡಿದಳು. ಗುರು ಬಗ್ಗಿದ. ''ಬಂದೆಯಾ?" ಅಸ್ಪಷ್ಟ ಸ್ವರದಲ್ಲಿ ಹೇಳಿದಂತಾಯ್ತು. ಮೆಲ್ಲನೆ ಬಲಗೈ ಅವನ ತಲೆಯ ಕಡೆಗೆ ಬಂದಿತು. ಗುರು ಬಗ್ಗಿ ತನ್ನ ತಲೆಯನ್ನ ಅವಳ ಎದೆಯ ಮೇಲಿಟ್ಟ. ಕುಸುಮಳ ತಲೆಗೂ ಎಡಗೈ ಸೋಕಿಸಿದಳು. ಅವಳೂ ಅಣ್ಣನನ್ನು ಅನುಕರಿಸಿದಳು.

"ಕಾದಿದ್ದೆ..ಕಾ–ದಿ–ದ್ದೆ....''ಅವಳ ಕಣ್ಣು ಕೊನೆಗಳಿಂದ ಒಂದೊಂದು ತೊಟ್ಟು ಹರಿದು ಬಂತು. ಸವೆದ ಕೈಗಳು ನಡುಗುತ್ತಿದ್ದುವು.

ಗುರುವಿಗೆ ಏನು ಹೇಳಬೇಕು ಮಾಡಬೇಕು ಎಂದು ತೋರಲಿಲ್ಲ. ಅವನ ಎದೆ ಸಂತಾಪದಿಂದೆಷ್ಟೊ ಕೋಪದಿಂದಲೂ ಅಷ್ಟೇ ಬಿರಿಯುತ್ತಿತ್ತು. "ಅತ್ಯಾಚಾರಕ್ಕೆ ತುತ್ತು!" ಎಂದು ಕೂಗಿಕೊಂಡ.

ಸಣ್ಣಮ್ಮ ಕಣ್ಣನ್ನು ಅಗಲವಾಗಿ ಬಿಟ್ಟಳು. ಮೆಲ್ಲಗೆ ತಲೆಯಾಡಿಸಿದಳು.

"ಗಂಡ....ಹೆಂಡಿ. ..ಅತ್ಯಾ....ವೆ? ಎಲ್ಲ....ದ್ದೈ...." ಎಂದು ಕಷ್ಟದಿಂದ ಹೇಳುತ್ತ ಮೇಲುಗಡೆಗೆ ದೃಷ್ಟಿ ತಿರಿಗಿಸಿದಳು.ಕಣ್ಣು ಮುಚ್ಚಿದಳು.

ಸ್ವಲ್ಪಕಾಲ ಈ ಮೌನ ಮಿಳಿನದಲ್ಲಿ ಕಳೆಯಿತು. ಡಾಕ್ಟರು ಇಂಜಕ್ಷನ್ ತಂದು ಆ ಕೈಯಿಗೇ ಚುಚ್ಚಿದರು. ಆದರೆ ಅವಳಿಗೆ ಇದರ ಅರಿವೇ ಇರ ದಂತಿತ್ತು. ಸಣ್ಣಮ್ಮ ಇನ್ನೇನೂ ಮಾತಾಡಲಿಲ್ಲ. ಎಲ್ಲೋ ಒಂದೆರಡು ಬಾರಿ ಆಗಾಗ ಕಣ್ಣು ಹೊರಳಿಸಿದಳು ಅಷ್ಟೆ. ಹುಡುಗರೂ ಡಾಕ್ಟರೂ ಹತ್ತಿರ ಕುಳಿತು ಕಾಯ್ದರು. ಸಾಹುಕಾರರಿಗೆ ಹೇಳಿಕಳುಹಿಸಿದ್ದಾಯಿತು. ಆದರೆ ಅವರು ಬರುವುದಕ್ಕೆ ಮುಂಚೆಯೇ ಅವಳು ಕಡೆಯ ಬಾರಿಗೆ ಕಣ್ಣು ಮುಚ್ಚಿ ತಲೆಯನ್ನು ಹೊರಳಿಸಿಬಿಟ್ಟಳು. ಡಾಕ್ಟರು ಮುಖ ತಿರಿಗಿಸಿದರು.

ಕುಸುಮ “ ಅಮ್ಮಾ ! ಅಮ್ಮಾ!” ಎನ್ನುತ್ತ ತಾಯಿಯ ಎದೆಯ ಮೇಲೆ ತಲೆಯಿಡುತ್ತ, ಮುಖಕ್ಕೆ ಮುಖ ಕೊಡುತ್ತ ಹೋ ಎಂದು ಗೋಳಾಡಿದಳು. ಗುರು ತಂಗಿಯನ್ನು ಹಿಡಿದುಕೊಂಡು ತಲೆ ಸವರುತ್ತ “ ಕುಸುಮಾ ! ಕುಸುಮಾ ! ” ಎನ್ನುತ್ತ ಇನ್ನೇನನ್ನೂ ಹೇಳಲಾರದೆ ಇದ್ದ. ಡಾಕ್ಟರು ಶವದ ಮುಖದ ಮೇಲೆ ಹೊದಿಕೆಯನ್ನು ಎಳೆದರು.

ಸಣ್ಣಮ್ಮನ ಸಾವಿಗಾಗಿ ಸಾಹುಕಾರರು ಬಹಳ ವ್ಯಥೆಪಟ್ಟರು. ಮಂಕಾಗಿ ಒಂದೆರಡು ದಿನ ಹೆಚ್ಚಾಗಿ ಮಾತನ್ನೂ ಆಡಲಿಲ್ಲ. “ಹುಂ, ಇನ್ನು ಅಂಥೋಳು ಅಪರೂಪ. ಸಿಕ್ಕೋದೇ ಇಲ್ಲ. ಎಂಥ ಸಾಧುವಾದ ಪ್ರಾಣಿ! ಏನಂದರೂ ಒಂದು ದಿನ ಎದುರು ಮಾತಾಡಿದೋಳಲ್ಲ. ನನ್ನ ಇಷ್ಟಕ್ಕೆ ಚಾಚೂ ವಿರೋಧವಾಗಿ ನಡೆದೋಳಲ್ಲ. ಮಹಾ ಪತಿವ್ರತೆ. ಅವಳು ಇಲ್ಲದೆ ಇರೋದಕ್ಕೆ ಮಹಲೇ ಬಿಕೋ ಅನ್ನುತ್ತೆ. ಮಾತಾಡೋರೇ ಇಲ್ಲದೆ ಇದ್ದರೂ ಅವಳು ಇದ್ದದ್ದು ಹತ್ತು ಜನ ಇದ್ದ ಹಾಗಿತ್ತು. ಮಹಲಿಗೇ ಒಂದು ಕಳೆಯಾಗಿ ಭೂಷಣವಾಗಿದ್ದಳು. ಅಂಥವಳನ್ನು ಕಳೆದುಕೊಂಡೆನಲ್ಲ. ಹುಂ! ಮುಖ್ಯವಾಗಿ ನಂಗೆ ಯಾವಾಗಲೂ ದಾಂಪತ್ಯಸುಖವಿಲ್ಲ. ಪತ್ನಿ ಯೋಗವಿಲ್ಲ. ಛೀ ! ಛೀ ! ” ಎಂದು ಮುಂತಾಗಿ ಆಗಾಗ ಪದೇ ಪದೇ ಅದನ್ನೇ ಎಲ್ಲರೊಡನೆಯೂ ಹೇಳಿಕೊಂಡು ವ್ಯಸನಪಟ್ಟರು. “ ಹುಂ, ಅಂತೂ ಮುತ್ತೈದೆಯಾಗಿ ನನ್ನ ಕಣ್ಣು ಮುಂದೇ ಹೋದಳಲ್ಲ, ಅವಳೇ ಪುಣ್ಯವಂತೆ. ಯಾಕೆ ವ್ಯಸನಪಡಬೇಕು? ” ಎಂದುಕೊಂಡು ಸಮಾಧಾನಕ್ಕೂ ಯತ್ನಿಸುತ್ತಿದ್ದರು. ಕುಸುಮ “ ಅಪ್ಪ, ಅಮ್ಮ ಇದ್ದಾಗ ಒಂದು ದಿನವೂ ಸಮಾಧಾನವಾಗಿ ಮಾತಾಡಲಿಲ್ಲ. ಅವಳನ್ನೂ ಆಡಗೊಡಿಸ್ತಾ ಇರಲಿಲ್ಲ. ಸಿಡಸಿಡ ಅಂತಿದ್ದ. ಒಂದು ದಿನ ಸಂತೋಷಪಡಿಸಲಿಲ್ಲ—ತಾನಾಗಿ. ಏನೋ ಐಶ್ವರ್ಯ ಇತ್ತು ಅಷ್ಟೆ. ಈಗ ಸುಮ್ಮನೆ ಗೋಳಾಡ್ತಾನೆ ” ಎಂದಳು. ಗುರು “ ಏನಿದ್ದರೇನು, ಇದ್ದಷ್ಟು ದಿನವೂ ಅನಾರೋಗ್ಯ ಸಂಕಟದಲ್ಲೇ ನರಳಿದಳು. ಒಂದೊಂದು ಸಲ ಈ ದಿನದಿನದ ಸಾವಿನ ಬದಲು ಸತ್ತದ್ದೇ ಒಳ್ಳೇದಾಯ್ತೊ ಅನ್ನಿಸುತ್ತೆ. ಈ ಮನೆಗೆ ಬಂದಾಗ ಹೇಗಿದ್ದಳಂತೆ ಸಾಯೋವಾಗ ಹೇಗಿದ್ದಳು ! ” ಎಂದು ನಿಟ್ಟುಸಿರುಬಿಟ್ಟ. ಸದಾಶಿವ “ ಅಂಥಾ ಯಜಮಾಂತಿ, ಮಹರಾಯ್ತಿ. ಯಾವುದಕ್ಕೂ ಬಂದೋರಲ್ಲ. ಎಲ್ಲ ನಂಗೇ

ಬಿಟ್ಟಿದ್ದರು. ನನ್ನಲ್ಲಿ ಎಷ್ಟು ಭರವಸೆ, ವಿಶ್ವಾಸ! ಒಂದು ದಿನ ಆಕ್ಷೇಪಣೆಯೆ! ಮುಖ ಸಿಂಡರಿಸಿದ್ದೆ? ಕಂಡೇ ಕಾಣೆ. ಸ್ವರ್ಗದಲ್ಲಿ ತಣ್ಣಗಿರಬೇಕು." ಅಂದ. ದಾಸನೂ ಕೂಡ ನಾಲಿಗೆ ಬಿಚ್ಚಿ ಗುರುವಿನೊಡನೆ "ಅಪರೂಪ ಜೀವ. ಎಂಥ ಮನೆಯ ಪಾಪಾನೂ ತೊಳೆಯೋ ಅಂಥ ಪುಣ್ಯವಂತೆ---ತಾಯಿ. ಅಂಥೋರು ಒಬ್ಬೊಬ್ಬರಿಂದಲೇ ಇಂಥ ಕೆಟ್ಟ ಜಗತ್ತಿನಲ್ಲೂ ಮಳೆ, ಬೆಳೆ ಇಷ್ಟಾದರೂ ಆಗೋದು" ಎಂದು ಮರುಗಿ ಕಣ್ಣೀರು ಹಾಕಿದ. ನಂಜಪ್ಪ 'ಅವಳು ಒಂದು ಕುಣಿಕೆಯಾಗಿದ್ದಳು—ನಂಗೆ ಇಲ್ಲಿ ಹೋಗಿಬಿಟ್ಟಿಳಲ್ಲ. ಒಳ್ಳೇ ಹುಡುಗಿ!' ಎಂದುಕೊಂಡು ಈಗೇನು ಭಾವ ನನ್ನ ಮನೆ ಬಿಟ್ಟು ಹೋಗು ಅಂತಾನೆಯೆ— ಇಷ್ಟು ವರ್ಷದ ಮೇಲೆ ? ಅಷ್ಟಕ್ಕೂ ಅವನಿಗೇನು ಕಡಿಮೆ? ' ಎಂದುಕೊಂಡು ಧೈರ್ಯ ಹೊಂದಿದ. ಮತ್ತೆ ಭಾವನಿಗೆ "ನೀನು ಹೇಳಿದ್ದೆಲ್ಲ ಸರಿಯೆ. ಇಷ್ಟೊಂದು ಹಚ್ಚಿಕೊಂಡು ಕೊರಗಿದರೆ ಹೇಗೆ ಭಾವ? ಆಗಿದ್ದು ಆಗಿಹೋಯ್ತು. ಆಯುಸ್ಸು ಮುಗಿದುಹೋಗಿತ್ತು. ಯಾರು ಹಿಡಿದುಕೊಳ್ಳೋದಕ್ಕೆ ಆಗುತ್ತೆ. ? ಸ್ವಲ್ಪ ಸಮಾಧಾನ ತಗೊ" ಎಂದು ಹೇಳಿ ಸಂತೈಸಿದ. ಊರಿನ ಪ್ರಮುಖರೆಲ್ಲರೂ ಬಂದು ಸಂತಾಪ ಸೂಚಿಸಿ ಹೋದರು. ಅವರಲ್ಲೂ ಭೋಗಪ್ಪ ಬಹಳ ಹೊತ್ತು ಕುಳಿತಿದ್ದು "ತಮ್ಮೊಡನೆ ಇನ್ನೂ ಸುಖ ಪಡೋದನ್ನ ಆಕೆಯ ಹಣೇಲಿ ದೇವರು ಬರೀಲಿಲ್ಲ. ಆಕೆಯ ದುರದೃಷ್ಟ. ತಮಗೆ ಈ ವಯಸ್ಸಿನಲ್ಲೇ ಹೀಗಾದದ್ದು ತುಂಬ ಅನ್ಯಾಯ ವಾಯ್ತು." ಎಂದು ಕಡೆಯ ಮಾತನ್ನು ಹೇಳಿ ಹೋದ.

ಸಣ್ಣಮ್ಮನ ಕರ್ಮಗಳು ಬಹಳ ವಿಜೃಂಭಣೆ ವಿಚಕ್ಷಣೆಗಳಿಂದ ನಡೆದುವು. ಗೋದಾನ, ಭೂದಾನ, ಹಿರಣ್ಯದಾನಗಳು ಯಥಾಕ್ರಮ-ದಿಂದ ಆದುವು. ಶಾಸ್ತ್ರಿಗಳು "ಈ ತರಹ, ಇಷ್ಟು ಧಾರಾಳವಾಗಿ ನಡೆದದ್ದನ್ನು ನನ್ನ ಜೀವಮಾನದಲ್ಲಿ ನೋಡಿದ್ದು ಇದೇ ಮೊದಲು" ಎಂದು ಕೊಂಡಾಡಿದರು. ಸದಾಶಿವ "ಸಾಹುಕಾರರು ಏನು ಮಾಡಿದರೂ ಮಾದರಿ-ಮದುವೆಯಾಗಲಿ, ಶ್ರಾದ್ಧವಾಗಲಿ." ಎಂದ. ಗುರು "ಇದರಿಂದೆಲ್ಲ ಏನು ಪ್ರಯೋಜನ ? ಪಾಪಾನ ಹಿ ಗೆ ಎಂದಿಗೂ ತೊಳೆಯೋದಕ್ಕೆ ಆಗೋದಿಲ್ಲ" ಅಂದ. ಸಾಹುಕಾರರು ಇಷ್ಟು ದಾನ ಕರ್ಮಗಳಿಗೇ ತೃಪ್ತರಾಗಲಿಲ್ಲ. ಹೆರಿಗೆ ಆಸ್ಪತ್ರೆಯಲ್ಲಿ ಧರ್ಮಾರ್ಥವಾಗಿ ಹಿಂದೆ ತಾವೇ ಕಟ್ಟಿಸಿದ್ದ 'ಗೌರಮ್ಮ ವಾರ್ಡ್' ಜತೆಗೆ ಈಗ 'ಸಣ್ಣಮ್ಮ ವಾರ್ಡ'ನ್ನೂ ಕಟ್ಟಿಸಲು ನಿಶ್ಚಯಿಸಿದರು.

ಗುರು ಕಮಲೆಯ ಸಾವಿನ ಬಗ್ಗೆ ನೀಲಾಸಾನಿಯನ್ನು ವಿಚಾರಿಸಿದ. ಅವಳು "ಇದು ಯಾರಿಗೂ ಹೇಕೋ ಮಾತಲ್ಲ, ಆದರೆ ನೀವು ಕೇಳ್ತೀರಿ, ಅಂತ ಹೇಳ್ತೀನಿ. ಗೊತ್ತಾದರೆ ನನ್ನ ಅನ್ನಕ್ಕೇ ಕಲ್ಲು ಬೀಳುತ್ತೆ" ಎಂದು ಮೊದಲು ಮಾಡಿ ಎಲ್ಲವನ್ನೂ ವಿವರಿಸಿ "ಅವರೂ ಏನೋ ನಾಲ್ಕು ಬುದ್ಧಿಯ ಮಾತು ಹೇಳಿದರು. ಯಾರಾದರೂ ಹೇಳೋದೆ. ತಪ್ಪೇನು? ಅವಳೂ ಒಪ್ಪಿಕೊಂಡಿದ್ದಳು. ನಿಮ್ಮ ಮನೆ ಉಳೀಬೇಕು, ನಿಮ್ಮ ಸುಖ ಕೆಡಬಾರದು ಅಂತ ಅವಳಿಗೂ ಗೊತ್ತಾಯ್ತು. ಆದರೇನು ಹುಚ್ಚು ಬಂತೋ ಏನೋ ಹೀಗೆ ಮಾಡಿಕೊಂಡಳು. ಮೊದಲೇ ನಿಮ್ಮ ಜೊತೆ ಬಂದುಬಿಟ್ಟಿದ್ದರಾದರೂ ಅಂಬಲಿಯೋ ಗಂಜಿಯೋ ಕುಡಕೊಂಡು ಜೀವಸಹಿತವಾದರೂ ಇರ್‍ತಾ ಇದ್ದಳು. ಈಗ ಅದೂ ಇಲ್ಲದ ಹಾಗಾಯ್ತು. 'ಮಾಡಬಾರದ್ದು ಮಾಡಿದರೆ ಆಗಬಾರದ್ದು ಆಗುತ್ತೆ' ಅಂದರು ಸಾಹುಕಾರರು. ನಿಜವಾದ ಮಾತು. ನಾವೆಲ್ಲಿ, ನೀವೆಲ್ಲಿ? ಹೆಂಗೆ ಜೋಡಿಯಾದೀತು?" ಎಂದು ಪೂರಯಿಸಿದಳು. ಗುರು ಎಲ್ಲವನ್ನೂ ಕೇಳಿ ಬಹಳ ಹೊತ್ತು ಸುಮ್ಮನೆ ಕುಳಿತಿದ್ದ. ಕಡೆಗೆ "ಹುಂ, ಏನು ಎಳೆತನದ ಹುಚ್ಚು ಅವಳಿಗೆ. ನಾನು ಅಷ್ಟೊಂದೆಲ್ಲ ಹೇಳಿದ್ದೆ— ಅವಳಿಗಾಗಿ ಎಷ್ಟೊ, ಇದು ನಂಗಾಗಿಯೂ ಅಷ್ಟು ಅಂತ? ಸೈತಾನನೇ ಅವಳನ್ನು ಮರುಳುಗೊಳಿಸಿರಬೇಕು, ಪಾಪ! ಹೀಗಾಗುತ್ತೆ ಅಂತ ನೆನೆಸಿರಲಿಲ್ಲ. ತಿಳಿವಳಿಕೆಯೋಳು, ಈ ಕೃತ್ರಿಮ ತಡೀಬಲ್ಲಳು ಅಂತಿದ್ದೆ. ಛೀ! ಮುಖ್ಯವಾಗಿ ನನ್ನ ತಪ್ಪು. ಎಚ್ಚರಿಕೆ ತಪ್ಪಿದೆ. ತಡ ಮಾಡಿದೆ. ಸಮಾಜದ ಬುದ್ಧಿವಂತಿಕೆಯ ಅನುಭವ ಇನ್ನೂ ಇಲ್ಲ—ಸ್ವಲ್ಪವೂ. ಇನ್ನು ಏನಿದ್ದರೇನು? ಹುಂ, ನಾನೇ ಕೊಲೆ ಮಾಡಿದ ಹಾಗಾಯ್ತು. ಹುಂ, ಇನ್ನು ಯಾರೊಡನೆ ಚರ್ಚಿಸಿ, ಯಾರನ್ನು ದೂಷಿಸಿ, ಏನು ಫಲ?" ಎಂದು ಸೋತು ಸಂಕಟಪಟ್ಟು 'ಇನ್ನು ನಂಗೆ ಒಂಟಿಯಾಗಿರೋದೇ ಸರಿಯಾದ್ದು' ಎಂದುಕೊಂಡು ಸುಮ್ಮನಿದ್ದ. ಬೊಂಬಾಯಿಗೆ ಹೋಗುವ ಪ್ರಶ್ನೆ ಮತ್ತೆ ಮನಸ್ಸಿಗೆ ಬಂದಿತು. "ಇನ್ನು ಯಾತಕ್ಕೆ? ಎಲ್ಲಾದರೇನು ನಂಗೆ—ಒಬ್ಬನಿಗೆ?" ಎಂದು ತೀರ್ಮಾನಿಸಿಕೊಂಡು ಮತ್ತೆ ಶಾಲೆಯ ಕೆಲಸಕ್ಕೇ ಸೇರಿಕೊಂಡ. ಇನ್ನು ಮಹಲಿನಲ್ಲಿ ನೆಪಕ್ಕೆ ಮಾತ್ರ ಇರುತ್ತಿದ್ದ. ಊಟ ತಿಂಡಿಗಳೆಲ್ಲ ಪೂರ್ತಿಯಾಗಿ ಹೊರಗೇ ನಡೆಯುತ್ತಿದ್ದುವು. ಸದಾಶಿವನ ದೂರು ವ್ಯರ್ಥಾಲಾಪವಾಯಿತು.

ಈ ದಿನಗಳಲ್ಲಿ ಗುರುವಿನ ಕೈಗಳ ಮೇಲೆ ಗುಳ್ಳೆಗಳು ಎದ್ದುವು. ಹಾಗೇ ಮೈಗೂ ಆವರಿಸಿಕೊಂಡುವು. ಇವುಗಳ ಬಗೆಯೆಂದರೆ ಅಲ್ಲಲ್ಲಿ ರೊಟ್ಟಿ ತಟ್ಟಿದ ಹಾಗೆ ಅಷ್ಟಷ್ಟು ಅಗಲ ಇರುತ್ತಿದ್ದುವು. ಗುಲಾಬಿ ಬಣ್ಣ. ಕೀವಿಲ್ಲ, ನೀರಿಲ್ಲ. ಕ್ರಮೇಣ ಕಪ್ಪಾಗುತ್ತಿದ್ದುವು. ನೋವು ನವೆ ಯಾವುವೂ ಇಲ್ಲ. ಆದರೆ ನೋಡಲು ಅಸಹ್ಯ. ಇದು ಏನು, ತನಗೆ ಹೇಗೆ ಬಂದಿತು ಎಂದು ಅವನಿಗೆ ತಿಳಿಯಲಿಲ್ಲ. ಡಾಕ್ಟರಿಗೆ ತೋರಿಸಿದ. ಅವರು "ಇದು 'ಲೈಚೆನ್ ಪ್ಲೇನಸ್' ಅಂತ. ಕಾರಣ ಸರಿಯಾಗಿ ಗೊತ್ತಿಲ್ಲ. ಇದು 'ಷಾಕ್'ಗಳನ್ನು ಅನುಭವಿಸಿದವರಿಗೆ ಬರುತ್ತೆ ಅಂತ ಊಹಿಸಿದಾರೆ. ನರಗಳ ದೌರ್ಬಲ್ಯದಿಂದಲೂ ಹೀಗಾಗಬಹುದು" ಎಂದು ನಾಲ್ಕಾರು ಔಷಧಿಗಳನ್ನು ಬರೆದು ಕೊಟ್ಟರು. ಇದರ ಜತೆಗೆ 'ಅಲ್ಟ್ರಾವಯಲೆಟ್‌ರೇ' ಬೇರೆ ತೆಗೆದುಕೊಳ್ಳುತ್ತಿದ್ದ. ಇಷ್ಟಾದರೂ ಬಕ್ಕೆಗಳು ಸ್ವಲ್ಪವೂ ಕಡಿಮೆಯಾದಂತೆ ತೋರಲಿಲ್ಲ. ನಂಜಪ್ಪ "ಡಾಕ್ಟರು ಕಾರಣ ಗೊತ್ತಿಲ್ಲ ಅಂದರೆ ಅದು ಮೇಹರೋಗವೇ" ಎಂದ. ಗುರುವಿಗೆ ತುಂಬ ನಾಚಿಕೆ ಬೇಸರಿಕೆಗಳುಂಟಾದುವು. ಪಂಡಿತರು ರಕ್ತಶುದ್ಧಿಯಾಗಬೇಕೆಂದರು. ಅವನು ಅದಕ್ಕಾಗಿಯೂ ಔಷಧಿ ತೆಗೆದುಕೊಂಡ. ಯಾವುದೂ ಗುಣಪಡಿಸುವಂತೆ ಕಾಣಲಿಲ್ಲ. ಒಂದು ದಿನ ಇದ್ದಕ್ಕಿದ್ದಂತೆಯೇ ಎಲ್ಲ ಔಷಧಿಗಳನ್ನೂ ಬಿಟ್ಟುಬಿಟ್ಟ. ಸಾಹುಕಾರರು ಇದು ಇನ್ನೂ ಉಲ್ಬಣವಾದೀತೆಂದು ಹೆದರಿ "ಅಪ್ಪ, ಔಷಧಿ ಬಿಡಬೇಡ" ಎಂದು ಬುದ್ಧಿವಾದ ಹೇಳಿದರು. ಗುರು "ಇದರಿಂದೆಲ್ಲ ಹೋಗೋದಿಲ್ಲ. ರೋಗಗಳು ಪಾಪಶೇಷ. ಪುಣ್ಯದ ತೂಕ ಹೆಚ್ಚಾದಾಗ ಈ ಪೀಡೆಗಳೆಲ್ಲ ಹೋಗಲೇಬೇಕು. ಆ ದಾರಿಯಲ್ಲಿ ನಂಗೆ ನಂಬಿಕೆ, ಯತ್ನಿಸುತ್ತೀನಿ" ಎಂದುಬಿಟ್ಟ. ಮುಂದೆ ಔಷಧಿಗಳನ್ನು ಮುಟ್ಟಲೇ ಇಲ್ಲ. ಸಾಹುಕಾರರು "ಇವನೇನೋ ಅತೀ ಮುಂದುವರಿದೋನು ಅಂತ ಇದ್ದೆ. ಈಗ ನೋಡಿದರೆ ಪಾಪಪುಣ್ಯಗಳ ಕಂದಾಚಾರ ಬೇರೆ ಹೇಳ್ತಾನೆ. ಇವನ ವಿಚಾರ ಇದು ಅಂತ ಹೇಳೋದಕ್ಕೆ ಗೊತ್ತಾಗೋದಿಲ್ಲವಲ್ಲ. ಏನು ರಹಸ್ಯ ಇವಂದು?" ಎಂದು ಯೋಚಿಸಿಕೊಂಡು ಸೋತರು.

## ೧೪

* * *

ಮನುಷ್ಯನಿಗೆ ಹೇಗೋ ಹಾಗೆ ಮನೆಗೂ ಸುಖವಾಗಲಿ, ಕಷ್ಟವಾಗಲಿ ಒಟ್ಟೊಟ್ಟಿಗೆ ಬರುತ್ತವೆ. ಮಹಲಿನ ದುರದೃಷ್ಟದಿಂದ ಸಣ್ಣಮ್ಮ ಸತ್ತ ಸ್ವಲ್ಪ ಕಾಲದಲ್ಲೇ ಸಾಹುಕಾರರೂ ಕಾಹಿಲೆ ಬಿದ್ದರು.

ಅವರ ಆರೋಗ್ಯ ಎಂದೂ ಚೆನ್ನಾಗಿರಲಿಲ್ಲ. "ಹುಡುಗನಾಗಿ ತಂದೆಯ ಬಡತನದಲ್ಲಿ ಬೆಳೆದಾಗಲೇ ಆರೋಗ್ಯವಾಗಿ ದೃಢಕಾಯನಾಗಿದ್ದೆ. ಈಗೇನು ಬಂತೋ ಇಷ್ಟೆಲ್ಲ ಸುಖವಿದೆ ಆದರೂ ಆರೋಗ್ಯವಿಲ್ಲ. ಏನು ಪ್ರಯೋಜನ? ಇದೇನು ಗುರುಗಳು ಹೇಳಿದ ಹಾಗೆ ಒಂದು ಕೈಯಲ್ಲಿ ಸಿರಿ ಕೊಟ್ಟು ಇನ್ನೊಂದರಲ್ಲಿ ಆರೋಗ್ಯ ತಗೊಳ್ಳೋದೋ?" ಎಂದು ಹೇಳಿಕೊಳ್ಳುತ್ತಿದ್ದರು. ಆದರೂ ಸಿರಿಯ ಸೆರಗನ್ನು ಮಾತ್ರ ಬಿಡದೆ ಹಿಡಿದು ಹಿಂಬಾಲಿಸುತ್ತಿದ್ದರು.

ಗೂರಲು ಅವರ ಜನ್ಮಕ್ಕೆ ಹತ್ತಿದ ಶನಿ. ಯಾವಾಗ ಬಂದಿತೋ ಅವರಿಗೆ ಮರೆತೇ ಹೋಗಿದ್ದಿತು; ಅಷ್ಟು ಕಾಲವಾಗಿತ್ತು. ಅದು ಬಾಧಿಸದ ರಾತ್ರಿಯಿಲ್ಲ. ಮೂರು ನಾಲ್ಕು ದಿನಗಳಿಗೊಮ್ಮೆ ಸರಿಯಾಗಿ ಕೆಲವು ಗಂಟೆಗಳ ಕಾಲ ನಿದ್ರಿಸುತ್ತಿದ್ದರು. ಸ್ವಲ್ಪ ಮೋಡ ಕವಿಯಿತು, ತಂಡಿ ಗಾಳಿ ಬೀಸಿತು ಅಂದರೆ ಆಗೇ ಹೋಯಿತು. ದಿನದಲ್ಲೂ ಉಸಿರಿನ ಮೇಲು ತುಯ್ತ. ರಾತ್ರಿಯಂತೂ ಜಾಗರಣೆ. ಇದಲ್ಲದೆ ಬಿಸಿಲು ಕಾಲದಲ್ಲೂ ಹೇಳಿಕಳುಹಿಸಿದಂತೆ ತಿಂಗಳಿಗೆ ಒಂದಾವರ್ತಿಯಾದರೂ ಉಗ್ರವಾಗಿ ಎರಡು ಮೂರು ದಿನಗಳಾದರೂ ಹಿಂಸೆ ಕೊಡದೆ ಇರುತ್ತಿರಲಿಲ್ಲ. ಒಂದೊಂದು ಬಾರಿ ಬಂದರೂ ಉಸಿರೇ ಕಟ್ಟಿಕೊಂಡು ಮುಖಕ್ಕೆ ರಕ್ತ ನುಗ್ಗಿ ಈಗಲೋ ಇನ್ನೊಂದು ಗಳಿಗೆಗೋ ಸಾವು ಎನ್ನುವಂತಾಗಿ ಮರಣದ ದವಡೆಯಿಂದಲೇ ತಪ್ಪಿಸಿಕೊಂಡಂತೆ ಮತ್ತೆ ಉಸಿರಾಡುತ್ತಿದ್ದರು. ಇದೇ ಸಾಲದೋ ಎನ್ನುವಂತೆ ಸುಖದ ವ್ಯಾಧಿ ಬಹುಮೂತ್ರ ಬೇರೆ. ಎಷ್ಟು ನೀರು ಕುಡಿದರೂ ಸಾಲದು. ಆಹಾರಕ್ಕಿಂತಲೂ ಹೆಚ್ಚಾಗಿ ಟಾನಿಕ್ ಔಷಧಿಗಳೇ. ಮನೆಯ ತುಂಬ ಸೀಸೆ, ಡಬ್ಬಿಗಳು ಇಟ್ಟಾಡುತ್ತಿದ್ದುವು. "ಇಂಜಕ್ಷನ್‌ಗಳಿಂದ ಮೈಯೆಲ್ಲ ತೂತಾಗಿದೆ" ಎಂದು

ಅವರೇ ಹೇಳುತ್ತಿದ್ದರು. ಡಾಕ್ಟರು ಇಂಗ್ಲೆಂಡು ಅಮೆರಿಕಾಗಳಿಂದ ವಿಶೇಷ ಔಷಧಿಗಳನ್ನು ವಿಶೇಷ ವೆಚ್ಚದಿಂದ ತರಿಸಿಕೊಟ್ಟಿದ್ದರು, ಕೊಡುತ್ತಿದ್ದರು. ಅಲ್ಲದೆ ಸಾಹುಕಾರರೇ ಬೆಂಗಳೂರು ಮದ್ರಾಸು ಬೊಂಬಾಯಿ ಕಲ್ಕತ್ತಗಳಿಗೆ ಹೋಗಿ ಅಲೋಪಥಿಕ್, ಹೋಮೋಪಥಿಕ್, ಆಯುರ್ವೇದ, ನೇಚರ್ ಕ್ಯೂರ್ ಮಾರ್ಗಗಳ ಪ್ರವೀಣರಿಗೆ ತೋರಿಸಿಕೊಂಡು ಬಂದು ಪ್ರತಿಯೊಬ್ಬರ ಚಿಕಿತ್ಸೆಗೂ ಕಾಲ ಕೊಟ್ಟಿದ್ದರು. ದುಡ್ಡು ಹುಣಿಸೆಯ ಬಿತ್ತದಂತೆ ಕರ್ಚಾಗುತ್ತಿದ್ದಿತು. ದೇಹ ಔಷಧಕ್ಕೆ ಮದಡಾಗಿತ್ತು. ಆದರೂ ಎಷ್ಟು ಗುಣವಾಗಿದ್ದಿತೆಂದು ಸಾಹುಕಾರರಿಗೇ ತಿಳಿಯದು. ದಿನೇ ದಿನೇ ತಾವು ಸವೆದುಕೊಂಡು ಬರುತ್ತಿದ್ದುದು ಮಾತ್ರ, ತಮ್ಮ ಶಕ್ತಿ ಕುಗ್ಗುತ್ತಿದ್ದುದು ಮಾತ್ರ ಗೊತ್ತಾಗುತ್ತಿತ್ತು.

ಮೋಟಾರು ಕಾರಿನವರು ತಮ್ಮ ಕಾರಿನ ವಿಷಯ, ರೇಡಿಯೋ ಸೆಟ್ ಇದ್ದವರು ಅದರದ್ದು, ಹೆಂಗಸರು ತಮ್ಮ ಒಡವೆ ಸೀರೆಗಳದ್ದು—ಹೀಗೆ ತಮ್ಮದರ ವೈಲಕ್ಷಣ್ಯ ವಿಚಾರವನ್ನು 'ಫ್ಯಾಷನ್' ಮಾಡಿಕೊಂಡ ಹಾಗೆ ಸಾಹುಕಾರರೂ ಕಾಹಿಲೆಯವರ—ಅದರಲ್ಲೂ ಶ್ರೀಮಂತ ರೋಗಿಗಳ ಸಂಪ್ರದಾಯವನ್ನು ಅನುಸರಿಸಿ, ತಮ್ಮ ಸಿರಿ, ಬುದ್ಧಿವಂತಿಕೆಗಳ ಮಾತಾಡದಿದ್ದಾಗ ತಮ್ಮ ಕಾಹಿಲೆಗಳ 'ವೈಚಿತ್ರ್ಯ'ಗಳನ್ನೂ, ಡಾಕ್ಟರ, ಇತರರ, ತಮ್ಮ ಅಭಿಪ್ರಾಯಗಳನ್ನೂ, ಸಲಹೆಗಳನ್ನೂ, ತೆಗೆದುಕೊಂಡ ತೆಗೆದುಕೊಳ್ಳುತ್ತಲಿದ್ದ ತೆಗೆದುಕೊಳ್ಳಲಿದ್ದ ಔಷಧ ಇಂಜಕ್ಷನ್‌ಗಳನ್ನೂ, ಕಂಡಕಂಡವರೊಡನೆಲ್ಲ ಚರ್ಚಿಸುತ್ತಿದ್ದರು. ಇವರು "ಡಿಸೆಂಟ್ರಿ, ರೂಮ್ಯಾಟಿಸಂ, ಗೌಟ್, ಗ್ಯಾಸ್ಟ್ರೈಟೀಸ್ ಇತ್ಯಾದಿ ಕಾಹಿಲೆಗಳು; ಎಮಿಟೀನ್, ಸ್ಟ್ರಿಕ್‌ನೀನ್ ಇತ್ಯಾದಿ ಇತ್ಯಾದಿ ಔಷಧಿಗಳು, ಹೀಗೆ ವೈದ್ಯವಿಜ್ಞಾನವನ್ನೇ ಅಷ್ಟೊಂದು ಸುಲಭವಾಗಿ ತಳ-ಮೇಲು ಮಾಡುತ್ತ ಕಾಹಿಲೆಯನ್ನೇ ಕಲೆಯಾಗಿಸಿಕೊಂಡು ಶ್ರೇಷ್ಠ ಕಲಾವಿದನ ನೈಪುಣ್ಯದಿಂದ ಸೂಕ್ಷ್ಮ ವಿವರಗಳನ್ನು ವರ್ಣಿಸುತ್ತಿದ್ದಾಗ ಕೇಳುತ್ತಿರುವವರಿಗೆ ಇವರೇನು ಸಾಹುಕಾರರೋ ಜಗತ್‌ಪ್ರಸಿದ್ಧ ವೈದ್ಯರೋ ಎನ್ನುವ ಭ್ರಾಂತಿ-ಯುಂಟಾಗುತ್ತಿತ್ತು. ಅವರು ಇವರ ಶ್ರೀಮಂತಿಕೆ ಬುದ್ಧಿವಂತಿಕೆಗಳನ್ನು ಆಶ್ಚರ್ಯದಿಂದ ಹೊಗಳಿ ಸಂತೋಷಿಸುತ್ತಿದ್ದಂತೆ, ಕಾಹಿಲೆ ಔಷಧಿಗಳ ವರದಿಗಳನ್ನೂ ಆಶ್ಚರ್ಯದಿಂದ "ಹಾಗೇ? ಓ, ಛಿ! ಛಿ!" ಎಂದು ಕೇಳುತ್ತ, "ಅಯ್ಯೋ

ಪಾಪ! ಏನು ಅನ್ಯಾಯ!" ಎಂದು ಸಂತಾಪ ಸೂಚಿಸುತ್ತ, ಗಂಟೆಗಟ್ಟಲೆ ಕುಳಿತಿದ್ದರೆ ಸಾಹುಕಾರರಿಗೆ ಕೊಂಚ ಸಮಾಧಾನವಾಗುತ್ತಿತ್ತು.

ಹೀಗೆ ನಡೆಯುವ ಲಡ್ಡು ಯಂತ್ರ ಯಾವಾಗ ಮುರಿದು ಬಿದ್ದರೂ ಆಶ್ಚರ್ಯ ವಿಲ್ಲ. ಈಗ ಮದುವೆಯ ಮುರಿಭಾರವನ್ನೂ ಹೊತ್ತಮೇಲೆ, ಹೆಂಡತಿಯ ವಿಯೋಗ ಕುಲುಕಿದ ಮೇಲೆ, ಸಾಹುಕಾರರೂ ಕಾಹಿಲೆ ಬಿದ್ದರು. ಥಂಡಿ ಹವದ ದಮ್ಮಿನಂತೆ ಮೊದಲಾದ ಬೇನೆ ಕೆಮ್ಮು ನೆಗಡಿಗಳಲ್ಲಿ ಪರಿಣಮಿಸಿ, ತಡೆತವಿಲ್ಲದ ಈಗಿನ ದೇಹಕಟ್ಟಿನಲ್ಲಿ ನ್ಯೂಮೋನಿಯಾಕ್ಕೆ ತಿರಿಗಿ ಎಲ್ಲರಿಗೂ ಗಾಬರಿಯನ್ನುಂಟುಮಾಡಿತು. ಶ್ವಾಸಕೋಶದ ಮೇಲೆ ಕಲೆಗಳು ಕಂಡವು. ಬೆಂಗಳೂರಿಗೆ, ಅಲ್ಲಿಂದ ಮದರಾಸಿಗೆ ತಂತಿ ಕೊಟ್ಟು ಪೆನಿಸಿಲಿನ್ ತರಿಸಿದ್ದಾಯಿತು. ನ್ಯೂಮೋನಿಯಾವೇನೋ ನಿದಾನವಾಗಿ ಗುಣವಾಗತೊಡಗಿತು. ಆದರೂ ನಿಶ್ಶಕ್ತಿ ದಿನೇ ದಿನೇ ಹೆಚ್ಚುತ್ತಿತ್ತು, ರಕ್ತಹೀನತೆ ಬಲವಾಗುತ್ತಿತ್ತು. ಸಾಹುಕಾರರು ಆಗಾಗ ಮೂರ್ಛೆ ಹೋಗುತ್ತಿದ್ದರು. ಎಚ್ಚೆತ್ತಾಗ ಸಹಿಸಲಾಗದ ಸಂಕಟ. ಎದ್ದು ಕೂಡಲಾಗದ ನಿತ್ರಾಣ. ಹಾಸಿಗೆಯ ಗಾಯ. ಸಾಹುಕಾರರ ಸ್ಥಿತಿ ನಿಜವಾಗಿಯೂ ಚಿಂತಾಜನಕ, ಕರುಣಾಜನಕವಾಗಿತ್ತು. ಮಹಲಿನವರೆಲ್ಲ ಸಾಹುಕಾರರ ಸೇವೆಯಲ್ಲೇ ಇದ್ದರು. ಕುಸುಮ ಕಾಲಕಾಲಕ್ಕೆ ಔಷಧಿ ಕೊಡುವುದು, ಜ್ವರ ನೋಡಿ ಗುರುತು ಹಾಕುವುದು, ಹಣ್ಣು ಹಿಸಿಕಿ ರಸ ಕೊಡುವುದು ಮುಂತಾಗಿ ಅಲ್ಲದೆ ಒಟ್ಟಿನಲ್ಲಿ ದಾದಿಯಾಗಿದ್ದಳು ಗುರು ತಂದೆಯನ್ನು ಎತ್ತಿ ಇಳಿಸಿ ಬಟ್ಟೆ ಬದಲಾಯಿಸಿ ರಾತ್ರಿಯ ಹೊತ್ತು ಕಾದುಕೊಳ್ಳುತ್ತಿದ್ದ. ಸದಾಶಿವ ಬಿಸಿನೀರು, ಹಾಲು ಹೀಗೆ. ದಾಸ, ಮಲಮೂತ್ರ ಮುಂತಾಗಿ. ನಂಜಪ್ಪ ಮೇಲು ಉಸ್ತುವಾರಿ ನೋಡಿಕೊಳ್ಳುತ್ತಿದ್ದ. ಶಾಸ್ತ್ರಿಗಳು ಇದು ಸಾಹುಕಾರರಿಗೆ ದೊಡ್ಡ ಗಂಡಾಂತರಕಾಲವೆಂದು ಲೆಕ್ಕ ಮಾಡಿ ಹೇಳಿ ಪೂಜೆ ಶಾಂತಿಗಳನ್ನು ಮಹಲಿನಲ್ಲಿ ನಿರಂತರವಾಗಿ ನಡೆಸಿದರು. ಮನೆಯವರೆಲ್ಲ ಎಷ್ಟು ಎಚ್ಚರಿಕೆಯನ್ನು ತೋರಿಸಿದರೂ, ಡಾಕ್ಟರರು ದಿನಕ್ಕೆ ನಾಲ್ಕಾರು ಸಾರಿ ಬಂದರೂ, ಸಾಹುಕಾರರ ಸ್ಥಿತಿ ಸುಧಾರಿಸುತ್ತಿರಲಿಲ್ಲ. ಒಂದೆರಡು ರಾತ್ರಿಯಂತು ಜ್ವರ ನೂರನಾಲ್ಕನ್ನು ಮೀರಿ ಸಾಹುಕಾರರಿಗೆ ಸನ್ನಿಯೇ ಹಿಡಿಯಿತು. ಏನೇನೋ ಗೊಜಗೊಜ ಮಾತಿನಿಂದ ಹಾಸಿಗೆ ಕೇಳುವುದರಿಂದ ಮೊದಲಾಗಿ ಕಡೆಗೆ ಸಾಹುಕಾರರು ಗಟ್ಟಿಯಾಗಿಯೇ ಸ್ಪಷ್ಟ-

ವಾಗಿಯೇ "ಅಯ್ಯೋ! ಕಳ್ಳರು! ದರೋಡೆಕಾರರು! ಎಲ್ಲ ದೋಚಿಕೊಂಡು ಹೋಗ್ತಾ ಇದ್ದಾರೆ! ಹಿಡಿದುಕೊಳ್ಳಿ! ಹಿಡಿದುಕೊಳ್ಳಿ!" ಎಂದು ಕೂಗಿಕೊಳ್ಳುತ್ತ ಎದ್ದು ಓಡಲು ಯತ್ನಿಸುತ್ತಿದ್ದರು. "ಅಯ್ಯೋ ಮಹಲು ಉರೀತಾ ಇದೆ! ಮರ್ಯಾದೆಮಹಲು ಉರೀತಾ ಇದೆ! ಲೋ ದಾಸ! ಸದಾಶಿವ ಎಲ್ಲ ಬನ್ರೋ. ಹೋಯ್ತಲ್ಲೋ ಎಲ್ಲ. ಹಣವೆಲ್ಲ ಸೇಫ್‌ನಲ್ಲಿ ಸುಟ್ಟು ಹೋಗುತ್ತಲ್ರೋ. ಆರಿಸಿರೋ, ಬೇಗ ಆರಿಸಿರೋ. ನೀವೂ ಎಲ್ಲ ಬನ್ನಿ, ಬನ್ನಿ! ಊರನ್ನೆಲ್ಲ ಕರೀರಿ ಸಹಾಯ ಮಾಡಿ....ಅಯ್ಯಯ್ಯೋ ಗುರು! ಗುರು ಹೋದನಲ್ಲೋ ಉರಿಗೆ! ಇನ್ನೇನು ಗತಿ! ತಡೀರೋ ಅವನ್ನ! ಹಿಡಕೋಳ್ರೋ. ಸುಮ್ಮನೇ ನಿಂತಿದೀರಲ್ಲೋ ಕತ್ತೆಗಳ! ನನ್ನ ಸರ್ವಸ್ವ! ಅವನೇ ಹೋದನಲ್ಲ! ಹೋದ! ಹೋದ! ಅಯ್ಯಯ್ಯೋ! ಇನ್ನು ಹೇಗಿರಲಿ! ನಂಗೇನಿದೆ ಇನ್ನು! ಗುರು! ಗುರು! ಬಾರಪ್ಪ! ಹಿಂತಿರಿಗಪ್ಪ! ದಮ್ಮಯ್ಯ!" ಎಂದು ಕೈಯಾಡಿಸುತ್ತ ಕಣ್ಣೀರು ಸುರಿಸುತ್ತಿದ್ದರು. ಗುರು "ಇಲ್ಲೇ ಇದೀನಪ್ಪ ಏನೂ ಆಗಿಲ್ಲ" ಎಂದು ಹೇಳುತ್ತ ಹಿಡಿದು ಸಮಾಧಾನವನ್ನು ವ್ಯರ್ಥವಾಗಿ ಹೇಳುತ್ತಿದ್ದ. "ಕುಸುಮ, ಒಪ್ಪಬೇಕು ಕಂದ—ನನ್ನ ಮಾನ, ಮನೆ ಮರ್ಯಾದೆ ಉಳಿಸೋದಕ್ಕೆ" ಎಂದು ತಲೆ ಸವರುವಂತೆ ಗಾಳಿಯಲ್ಲಿ ಕೈ ಜಾರಿಸುತ್ತಿದ್ದರು. ಕುಸುಮ "ಅಪ್ಪ! ಅಪ್ಪ!" ಎಂದು ಅವರ ಬಾಯಿ ಮುಚ್ಚುತ್ತಿದ್ದಳು. "ಹಾವು! ಹಾವು! ಕತ್ತಿನ ಸುತ್ತ! ಅಬ್ಬಬ್ಬ, ಉಸಿರು! ಉಸಿರು.... ಇಲ್ಲ ಇಲ್ಲ ಹಾರ! ಹಾರ! ಮರ್ಯಾದೆ ಹಾರ! ಹ್ಹ! ಹ್ಹ! ಹಾ!" ಎಂದು ನಗುತ್ತ ಕುತ್ತಿಗೆಯನ್ನು ಹಿಡಿದುಕೊಳ್ಳುತ್ತಿದ್ದರು. "ಸೂಳೆ! ಸೂಳೆ! ಆದರೇನು. ಒಳ್ಳೇ ಹುಡುಗಿ. ಮನೆ ಉಳಿಸಿದಳು! ಜೀವಾನೇ ಕೊಟ್ಟಳು! ಪಾಪ! ಮನೆ ದೇವತೆ!" ಎಂದು ಕೈ ಜೋಡಿಸುತ್ತಿದ್ದರು. ಆಗ ಗುರುವಿನ ಮುಖ ನೋವನ್ನು ತಂದುಕೊಂಡು ಗಂಭೀರವಾಗುತ್ತಿದ್ದಿತು. ಹೀಗೂ ಇನ್ನೂ ಇದೇ ರೀತಿ ಕೂಗಾಡಿ ಓಡಾಡಲು ಒದ್ದಾಡುತ್ತಿದ್ದಾಗ ಇವರನ್ನು ಹಾಸಿಗೆಯಲ್ಲಿ ಹಿಡಿದಿಡುವುದು, ಶಾಂತಿಗೆ ತರುವುದು ಗುರುವಿಗೆ, ಇತರರಿಗೆ ಸಾಕುಸಾಕಾಗುತ್ತಿತ್ತು.

ಒಂದು ದಿನ ಅವರನ್ನು ಪರೀಕ್ಷಿಸಿ ಡಾಕ್ಟರು ತಲೆಯಾಡಿಸಿ ಅಸಮಾಧಾನಪಟ್ಟು, "ಇಲ್ಲಿ ಇನ್ನು ಸಾಧ್ಯವಿಲ್ಲ. ಆಸ್ಪತ್ರೆಗೇ ಸಾಗಿಸಬೇಕು. ನಾವು

ಯಾವಾಗಲೂ ನೋಡಿಕೊಳ್ಳಬೇಕಾದ ಅವಶ್ಯಕತೆಯಿದೆ" ಎಂದರು. ಸಾಹುಕಾರರು ಕೂಡಲೇ ಒಪ್ಪಲಿಲ್ಲ. "ಅಯ್ಯೋ, ಮಹಲನ್ನು ಬಿಡೋದಿಲ್ಲ. ಸತ್ತರೆ ಇಲ್ಲೇ ಸಾಯ್ತೀನಿ. ಆಸ್ಪತ್ರೆ ಬೇಡ" ಎಂದು ಒದ್ದಾಡಿದರು. ಡಾಕ್ಟರು ಬೇಕಾದಷ್ಟು ಮಾತಾಡಿ ಮಕ್ಕಳೂ ಬಲವಂತ ಮಾಡಿದ ಮೇಲೆ "ಅಲ್ಲಿಗೆ ಹೋದರೆ ಬದುಕಿಸ್ತೀರಾ, ಖಂಡಿತವಾಗಿ?" ಎಂದು ಕೇಳಿದರು. ಡಾಕ್ಟರು "ನನ್ನ ಕೈಲಾದದ್ದನ್ನೆಲ್ಲ ಮಾಡೋದು ಅಲ್ಲಿ ಸಾಧ್ಯ." ಅಂದರು. ಸಾಹುಕಾರರು "ಏನಾದರೂ ಮಾಡಿ ಉಳಿಸಿ ಡಾಕ್ಟರೇ. ಎಷ್ಟು ಬೇಕಾದರೂ ಕರ್ಚಾಗಲಿ" ಎಂದು ಮೊರೆಯಿಟ್ಟರು.

ಸಾಹುಕಾರರು ಮನೆಯಲ್ಲಿದ್ದಾಗಲೂ ಊರಿನಲ್ಲಿ ಇವರ ಕಾಹಿಲೆಯ ವಿಷಯ ಹರಡಿತ್ತು. ಪ್ರಮುಖರೆಲ್ಲ ಆಗಾಗ್ಗೆ ಬಂದು ನೋಡಿಕೊಂಡು ಹೋಗುವುದು ವಾಡಿಕೆಯಾಗಿತ್ತು. ಭೋಗಪ್ಪ 'ನಂಗೇನೋ ಪುರುಸೊತ್ತೇ ಇಲ್ಲ. ಆದರೆ ಹೋಗದಿದ್ದರೆ ಸಾಹುಕಾರರು ಏನಂದುಕೊಂಡಾರು? ಆ ಮಳಿಗೆ ನಂಜುಂಡಪ್ಪ ಎರಡು ದಿನಕ್ಕೆ ಒಂದು ಸಾರಿ ಹೋಗ್ತಾ ಇದಾನೆ. ಅವನಿಗಿರೋ ಪ್ರೇಮ ನಾನು ಕಾಣೆನೆ? ಎಲ್ಲ ತೋರಿಕೆ. ಮುಂದಿನ ವರ್ಷ ಮುನಿಸಿಪಲ್ ಅಧ್ಯಕ್ಷತೆಗೆ ಹಾದಿ ಹಾಕುತ್ತಿದ್ದಾನೆ. ನಾನು ಬಿಟ್ಟೇನೆ?' ಎಂದುಕೊಂಡು ಪೈಪೋಟಿಯಿಂದ ಹೋಗಿ ಬರುತ್ತಿದ್ದ. ಸಾಹುಕಾರರನ್ನು ಆಸ್ಪತ್ರೆಗೆ ಸಾಗಿಸಿದಾಗಲಂತೂ ಊರಿನ ಮಾತೆಲ್ಲ ಇದೇ ಆಯಿತು. ಜನರು ಹೊತ್ತುಗೊತ್ತೆನ್ನದೆ ವಿಚಾರಿಸಿಕೊಳ್ಳಲು ಬರುತ್ತಲೇ ಇದ್ದರು. ಎಲ್ಲರೂ ಸಾಹುಕಾರರನ್ನು ತಾವೇ ನೋಡಬೇಕು, ಮಾತಾಡಿಸಿ ಉಪಚಾರ ಹೇಳಬೇಕು. ಸಾಹುಕಾರರ ತ್ರಾಣ, ವಿಶ್ರಾಂತಿಯ ಮೇಲೆ ಗಮನವೇ ಇಲ್ಲ. ಕಡೆಗೆ ಡಾಕ್ಟರು ಯಾರೂ ಅವರ ವಿಶ್ರಾಂತಿಗೆ ಭಂಗ ತರಕೂಡದೆಂದು ಭೇಟಿಗಳನ್ನು ನಿಲ್ಲಿಸಿ ಮುನಿಸಿಪಲ್ ಕೌನ್ಸಿಲರ್‌ಗಳಿಂದ ಕೆಳಗಿನವರೆಗೂ ನಿಷ್ಠುರ ಕಟ್ಟಿಕೊಂಡರು. ಚಂದ್ರಶೇಖರ ಡಾಕ್ಟರಿಂದ ವರದಿಗಳನ್ನು ತೆಗೆದುಕೊಂಡು ಪ್ರಜಾತಂತ್ರದಲ್ಲಿ ನಿತ್ಯವೂ ಪ್ರಕಟಿಸುತ್ತಿದ್ದ.

ಆಸ್ಪತ್ರೆಗೆ ಸಾಗಿಸಿದ ಕೆಲವು ದಿನಗಳಲ್ಲೇ ಸಾಹುಕಾರರ ಪರಿಸ್ಥಿತಿ ಇನ್ನೂ ಕೆಟ್ಟಿತು. ಹೊರಗಿನ ರಕ್ತ ತುಂಬದಿದ್ದರೆ ಬದುಕುವುದು ಸಾಧ್ಯವಿಲ್ಲವೆಂದು ಡಾಕ್ಟರು ತೀರ್ಮಾನಿಸಿದರು. ಸಾಹುಕಾರರು ಆತಂಕದಿಂದ "ಯಾರ

ರಕ್ತ ತುಂಬ್ತೀರಿ ಡಾಕ್ಟರೆ. ಅಂಥಿಂಥಾದ್ದು ನಂಗೆ ಆಗೋದಿಲ್ಲ. ನಮ್ಮದು ರಾಜರ್ಷಿ ಬ್ರಹ್ಮರ್ಷಿ ವಿಶ್ವಾಮಿತ್ರರ ರಕ್ತ. ನಮ್ಮ ನಾಳಗಳನ್ನು ಶುದ್ಧವಾಗೇ ಈ ವರೆಗೂ ಇಟ್ಟುಕೊಂಡು ಬಿಂದಿದೀವಿ. ನನ್ನ ಮಗ ರಕ್ತ ಕೊಟ್ಟರೆ ಆಗ ಬಹುದೆ?" ಎಂದು ವಿಚಾರಿಸಿದರು. ಡಾಕ್ಟರು ನಸುನಕ್ಕು "ಅದೆಲ್ಲ ವಿಜ್ಞಾನದ ಪ್ರಕಾರ ಆಗಬೇಕಾಗುತ್ತೆ. ಸಂಬಂಧ ಸಲಕಕ್ಕೂ ಅದಕ್ಕೂ ಸಂಬಂಧವಿಲ್ಲ. ಯಾವ ರಕ್ತ ಸರಿಯಾಗುತ್ತೋ ಅದನ್ನು ತೆಗೆದುಕೊಳ್ಳ ಬೇಕಾಗುತ್ತೆ. ನೋಡೋಣ" ಅಂದರು. ಮಗನ ರಕ್ತವನ್ನೂ ಇವರದ್ದನ್ನೂ ಡಾಕ್ಟರು ಪರೀಕ್ಷೆಗೆ ತೆಗೆದುಕೊಂಡು ಹೋದಾಗ ಸಾಹುಕಾರರು "ಸರಿಯಾಗೇ ಆಗುತ್ತೆ, ಅವನೇನು ನನ್ನ ಮಗನಲ್ಲವೆ?" ಎಂದು ಭರವಸೆಯನ್ನು ತುಂಬಿ ಕೊಂಡರು. ಹಾಗೂ ಅನುಮಾನದಿಂದ "ಸದ್ಯ, ಸರಿಯಾದರೆ ಮಿಶ್ರರಕ್ತ ತಪ್ಪುತ್ತೆ. ನಮ್ಮದೇ, ಮರ್ಯಾದೆ ಮನೆತನದ್ದೇ ಉಳಿದ ಹಾಗೆ ಆಗುತ್ತೆ" ಎಂದು ಆಶಿಸಿದರು. ಆದರೆ ಡಾಕ್ಟರು ಬಂದು "ಆಗೋದಿಲ್ಲ. ತೀರ ವಿರುದ್ಧ ವಾಗಿದೆ" ಅಂದಾಗ ಸಾಹುಕಾರರ ಮುಖ ಬಿದ್ದಿತು. "ಏನು ತೀರ ವಿರುದ್ಧವೆ? ಆಗೋದೇ ಇಲ್ಲವೆ? ನೋಡಿ ಡಾಕ್ಟರೆ" ಎಂದು ಭಯದಿಂದ ಅಂಗಲಾಚಿ ದರು. ಡಾಕ್ಟರು ತಲೆಯಾಡಿಸಿದರು. ಅನಂತರ ಮುಂದೆ ಬಂದ ಕುಸುಮ ಳನ್ನು ನೋಡಿಯೇ ಡಾಕ್ಟರು "ನೀನು ರಕ್ತ ಕೊಡಲಾರೆ" ಎಂದುಬಿಟ್ಟರು. ನಂಜಪ್ಪ "ನಂಗೇನೋ ಕೊಡೋದಕ್ಕೆ ಇಷ್ಟವೆ. ಭಾವನಿಗಲ್ಲದೆ ಇನ್ನು ಯಾರಿಗೆ ಉಪಯೋಗವಾಗಬೇಕು? ಆದರೆ ನಂಗೆ ದಾನ ಮಾಡೋ ಅಷ್ಟೆಲ್ಲಿದೆ? ಎದ್ದರೆ ಕೂತರೆ ನಿತ್ರಾಣ. ನಾನು ಕೊಟ್ಟು ನಂಗೆ ಯಾರಾದರೂ ಕೊಡ ಬೇಕಾದೀತು—ಖಂಡಿತ. ಸೂಜಿ ಚುಚ್ಚಿಸಿಕೊಂಡಂತೂ ಕಂಡೇ ಅರಿಯೆ. ಎಲ್ಲಾದರೂ ಸತ್ತು ಹೋಗ್ತೀನಿ" ಎಂದು ಡಾಕ್ಟರಲ್ಲಿ ಗುಟ್ಟಾಗಿ ಹೇಳಿದ. ದಾಸ "ನಂದು ನೋಡಿ ಬುದ್ಧಿ ಆದೀತೆ?" ಅಂದಾಗ ಸಾಹುಕಾರರು "ನಮ್ಮ ದಾಯಾದಿಗಳ ಪೈಕಿ ಯಾರನ್ನಾದರೂ ಕರೆಸಿ ನೋಡೋಣ. ತಾಳಿ ಡಾಕ್ಟರೆ" ಎಂದರು. ಡಾಕ್ಟರು "ತಡಮಾಡೋದಕ್ಕೆ ಆಗೋದಿಲ್ಲ, ಅಪಾಯಕರ." ಎಂದು ಹೇಳಿ "ನಂಗೆ ಬಿಡಿ ಇವನ್ನ" ಎಂದು ದಾಸನ ರಕ್ತವನ್ನು ಪರೀಕ್ಷಿಸಿ "ಛೀ! ಇದು ತೀರ ಗಟ್ಟಿ ರಕ್ತ. ನಿಮ್ಮ ದುರ್ಬಲ ನಾಳಗಳಿಗೆ ಸರಿಯಾಗೋ ದಿಲ್ಲ." ಎಂದರು. ಮುಂದೇನು ಮಾಡಬೇಕೆಂದು ಪ್ರಶ್ನೆ ಬಂತು. ಡಾಕ್ಟರು

‘‘ತಾಳಿ, ನಮ್ಮ ಆಸಾಮಿಗಳು ಅಷ್ಟು ಜನ ಇದಾರೆ. ಪರೀಕ್ಷಿಸ್ತೀನಿ” ಎಂದು ಹೇಳಿ ಹೋದರು. ‘‘ಅವರು ಯಾರು? ಯಾವ ಜಾತಿ ? ಎಂಥೋರು? ಸ್ಥಿತಿ ಗತಿ........” ಎಂದು ಸಾಹುಕಾರರು ಕೇಳಿದರು. ಆದರೆ ಡಾಕ್ಟರು ಈ ಪ್ರಶ್ನಾವಳಿ ಕೇಳಿಸದಂತೆಯೇ ಹೋದರು. ಸ್ವಲ್ಪ ಹೊತ್ತಾದ ಮೇಲೆ ಡಾಕ್ಟರು ಒಬ್ಬನೊಡನೆ ಬಂದರು. ಅವನೊಬ್ಬ ಕಪ್ಪು ಕೊಣಪ. ಮಿಂಚುವ ಮೋಟು ಮೂಗಿನ ಮುಳ್ಳುಮುಖ, ಮಾಸಿದ ಬೊಂತೆ ತಲೆ. ಪೊದೆ ಗಡ್ಡ. ಕೇಡಿಗತನದ ಕಣ್ಣು. ಹಳದಿಯ ಉಬ್ಬ ಹಲ್ಲನ್ನು ಕಿರಿದಿದ್ದ. ಕಬ್ಬಿಣದಂತಹ ಕೈಕಾಲು. ಕೊಳೆಯ ಉಗುರು. ಖೈದಿಯ ಚಡ್ಡಿ, ಅಂಗಿ. ಅವನ ಹಿಂದೇ ಒಬ್ಬ ಪೋಲೀಸಿನವನೂ ಬಂದ. ಸಾಹುಕಾರರು ಅವನನ್ನು ನೋಡಿ ದಿಗಿಲು ಬಿದ್ದರು.

‘‘ಇವನು ಯಾರು ಡಾಕ್ಟರೇ? ” ಕಣ್ಣರಳಿಸಿ ಕೇಳಿದರು.

‘‘ರಕ್ತದಾನಿ. ”

‘‘ಇವನ ರಕ್ತವೆ? ಬೇಡ! ಬೇಡ! ’’

‘‘ಇನ್ನೇನು ಮಾಡೋಣ ಸಾಹುಕಾರರೆ. ಬೇರೆ ವಿಧಿಯಿಲ್ಲ. ನಾನು ಇನ್ನೂ ನಾಲ್ಕಾರು ಜನ–ಸಿಕ್ಕೋರ ರಕ್ತಾನೆಲ್ಲ ಪರೀಕ್ಷೆ ಮಾಡಿದೆ. ಇವನ ರಕ್ತ ಒಂದೇ ಸರಿ ಹೋಗುತ್ತೆ. ಏನು ಮಾಡೋಣ? ”

‘‘ಅಯ್ಯೋ ಡಾಕ್ಟರೆ, ಬೇರೆ ದಾರಿಯೇ ಇಲ್ಲವೆ ಉಳಿಸೋದಕ್ಕೆ?”

‘‘ಇಲ್ಲವಲ್ಲಾ. ಅದೃಷ್ಟ ನಂಬಿಕೊಂಡು ಮಾಡೋದಕ್ಕಾಗುತ್ತೇ ? ತಾವು ಒಪ್ಪಲೇಬೇಕು–ಬದುಕಬೇಕಾದರೆ. ಬೇಕಾದಷ್ಟು ರಕ್ತ ಕೊಡಬಲ್ಲ. ಕೊಂಚ ಹಣ ಕೊಟ್ಟರಾಯ್ತು. ’’

ಕ್ಷಣಕಾಲ ಮೌನ. ಸಾಹುಕಾರರು ತೀಕ್ಷ್ಣವಾಗಿ ಚಿಂತಿಸಿದರು.

‘‘ಯಾಕೆ ಬಂದಿದಾನೆ ? ಏನು ರೋಗ? ”

‘‘ರೋಗವೇನೂ ಇಲ್ಲ. ಕದ್ದ ಚಿನ್ನದ ಉಂಗುರ ನುಂಗಿದ್ದ. ಪರೀಕ್ಷೆ ಮಾಡಿ ತೆಗೆದದ್ದಾಯ್ತು. ”

‘‘ಇಂಥ ಕಳ್ಳನ ರಕ್ತ ತುಂಬುತ್ತೀರ—ನಂಗೆ? ಮರ್ಯಾದೆ ಮನೆತನಸ್ಥನಿಗೆ ? ಬೇಡ. ”

‘‘ಹಾಗಾದರೆ ತಮ್ಮ ಇಷ್ಟ. ಇನ್ನು ಯಾರೂ ರಕ್ತ ಕೊಡೋರು

ಇಲ್ಲ. ಇವನಾದರೆ ಹಣದಾಸೆಗೆ ಏನು ಬೇಕಾದರೂ ಮಾಡಬಲ್ಲ. ಇದು ಬಿಟ್ಟು ನನ್ನ ಕೈ ಮೀರಿದರೆ ನನ್ನ ಜವಾಬ್ದಾರಿಯಿಲ್ಲ. ರಕ್ತದಲ್ಲೇನಿದೆ ಸಾಹುಕಾರರೆ? ದೋಷವಿಲ್ಲ. ಹಣ್ಣು ಬೇಕಾದಾಗ ಯಾವ ಗಿಡ, ಎಲ್ಲಿ ಬೆಳೀತು, ಅಂತ ನೋಡ್ತೀವೆ ? ರುಚಿಯಾಗಿದ್ದರೆ ಸರಿ. "

ಇನ್ನಷ್ಟು ಕಾಲ ಮೌನ.

" ಇದಾದರೆ ಬದುಕೋ ಭರವಸೆ ಕೊಡ್ತೀರಾ? "

"ಹೂಂ, ಶೇಕಡ ತೊಂಬತ್ತೈದು.

" ಅಯ್ಯೋ ದೇವರೆ, ನನ್ನ ಗತಿ ಇಲ್ಲಿಗೆ ಬಂತೆ....ಹೋಗಲಿ, ಡಾಕ್ಟರೆ ಶಾಸ್ತ್ರಿಗಳನ್ನಾದರೂ ಕರೆಸೋಣವೇ ? "

" ಯಾಕೆ ? "

" ಮಂತ್ರದಿಂದಾದರೂ ಶುದ್ಧಮಾಡಲಿ, ಈ ಹಾಳು ರಕ್ತಾನ. ಆಗ ಅಷ್ಟು ಸಮಾಧಾನವಾಗುತ್ತೆ."

ಡಾಕ್ಟರರು ಚೆನ್ನಾಗಿಯೇ ನಕ್ಕರು. ಗುರು ಕುಸುಮ ಇವರೂ ತಡೆಯದೆ ನಸುನಕ್ಕರು. ಸಾಹುಕಾರರು ಸಿಡಿಮಿಡಿ ಹುಟ್ಟಿ " ನಿಮಗೆ ಇದರಲ್ಲೆಲ್ಲ ನಂಬಿಕೆಯಿಲ್ಲ. ನಂಗಿದೆ. ಅದಾಗದಿದ್ದರೆ ಬೇಡವೇ ಬೇಡ. ಬೇಕಾದ್ದಾಗಲಿ " ಎಂದು ಹಟ ಹಿಡಿದರು. ಡಾಕ್ಟರು 'ಸ್ಟರಿಲೈಸೇಷನ್" ಮುಂತಾಗಿ ಏನೇನೋ ಅಡ್ಡಿ ತಂದು ವಾದಿಸಿದರು. ಸಾಹುಕಾರರು ಜಗ್ಗಲಿಲ್ಲ. ಗುರು ಮೆಲ್ಲಗೆ ಡಾಕ್ಟರರಿಗೆ " ಏನೋ ಹಾಗೆ ಅನ್ನಿಸಿದರಾಯ್ತು. ಈ ವಿಚಿತ್ರ ತೃಪ್ತಿಯೂ ಆಗಲಿ. ಅವರು ಬಿಡೋಹಾಗಿಲ್ಲ." ಎಂದು ಡಾಕ್ಟರರಿಗೆ ಹೇಳಿದ. " ಹಾಗೇ ಆಗಲಿ ಬಿಡಿ ಸಾಹುಕಾರರೆ, ತಾವು ಬದುಕೋದು ಮುಖ್ಯ" ಎಂದು ಗುರುವಿನ ಕಡೆಗೆ ತಿರಿಗಿ "ಹೋಗಿ, ಜಾಗ್ರತೆ ಕರೆದುಕೊಂಡು ಬನ್ನಿ. ಇದಕ್ಕಾಗೇ ಕಾದಿರ್‍ತೀನಿ. ಸಾಹುಕಾರರು "ಗಂಗೆ ನೀರು—ಕಾಶಿ ಗಂಗೆನೀರು, ತುಳಿಸಿದಳ ತಗೊಂಡು ಬರಬೇಕು ಅಂತ ಹೇಳಪ್ಪ. ಎಲ್ಲ ವಿವರಿಸು" ಎಂದು ಹೇಳಿ ಕಳುಹಿಸಿದರು.

ಶಾಸ್ತ್ರಿಗಳು ಬಂದು ನೀರು ಸೋಕಿಸದೆ ದೂರದಿಂದಲೇ ಗಂಗಾ ಪ್ರೋಕ್ಷಣೆ ಮಾಡಿದ ಶಾಸ್ತ್ರವಾಗಿ ಮಂತ್ರಶುದ್ಧಿಯಾದ ಮೇಲೆ ಕೇಡಿಯ ರಕ್ತ

ಸಾಹುಕಾರರ ನಾಳಗಳನ್ನು ಸೇರಿತು. ಕಳ್ಳ ಧಾರಾಳವಾಗಿಯೇ ರಕ್ತ ಕೊಟ್ಟ; ಅವನಿಗೆ ದುಡ್ಡೂ ಧಾರಾಳವಾಗಿ ಸಿಕ್ಕಿತು.

ಇದಾದ ಮೇಲೆ ಸಾಹುಕಾರರ ಆರೋಗ್ಯ ನಿದಾನವಾಗಿ ಹಿಂದಿರಿಗಿತು.

ಇಂತಹ ದಾರುಣ ಯಾತನೆಯನ್ನು ಎಷ್ಟು ಕಷ್ಟದಿಂದ ಅನುಭವಿಸುತ್ತಿದ್ದರೂ ಈ ಕಾಹಿಲೆಯ ಕಾರ್ಮೋಡಕ್ಕೂ ಒಂದು ಬೆಳ್ಳಿಯ ಅಂಚಿತ್ತು. ಅದು ಸಾಹುಕಾರರಿಗೆ ಗುರು ಸಮಾಧಾನದಿಂದ ಮಾಡುತ್ತಿದ್ದ ಸೇವೆ. ಇದಕ್ಕೆ ಮುಂಚೆ ಕಮಲೆಯ ಅಧ್ಯಾಯ ಮುಗಿದ ಮೇಲೆ, ಗುರು ಅವರಿಗೆ ಮುಖ-ಕೊಟ್ಟು ಮಾತಾಡುವುದನ್ನೂ ಬಿಟ್ಟುಬಿಟ್ಟಿದ್ದ. ಅವರು ನಿಂತಲ್ಲಿ ನಿಲ್ಲುತ್ತಿರಲಿಲ್ಲ. ಕುಳಿತಲ್ಲಿ ಕೂಡುತ್ತಿರಲಿಲ್ಲ. ಏನಾದರೂ ತಾವೇ ಒತ್ತಿ ಕೇಳಿದರೆ ಒಂದೆರಡು ಶಬ್ದಗಳಲ್ಲೋ, ತಲೆಯಾಡಿಸುವುದರಲ್ಲೋ, ಹುಬ್ಬು ಹಾರಿಸುವುದರಲ್ಲೋ ಉತ್ತರವನ್ನು ಮುಗಿಸಿ ನಿಲ್ಲದೆಯೇ ಸರಿಯುತ್ತಿದ್ದ. ಇವನ ಈ ಬಿಗಿ, ಅನಾದರ, ಅಲಕ್ಷ್ಯ, ಸಾಹುಕಾರರಿಗೆ ನುಂಗಲಾರದ ನಿತ್ಯ ನೋವಾಗಿತ್ತು; 'ಮುಂದೇನು ಗತಿಯೋ?' ಎಂದು ಬಿಡದೆ ಬೆನ್ನು ಹತ್ತಿದ ಭಯವಾಗಿತ್ತು. ಮಗ ಒಂದು ವಿಶ್ವಾಸದ ಮಾತಾಡಿಯಾನೇ, ಎದುರಿಗೆ ನಿಂತು ನೋಡಿಯಾನೇ ಎಂದು ಅವರ ಎದೆ ಸುಮ್ಮನೆ ಒಂದೇ ಸಮನೆ ಮಿಡಿಯುತ್ತಿತ್ತು. ಅವನೇನಾದರೂ ನಾಲ್ಕು ಮಾಮೂಲು ಮಾತಾಡಿದ ದಿನವೆಲ್ಲ ಅವನ್ನು ನೆನೆನೆನೆದು ಹರ್ಷದಿಂದ ಇರುತ್ತಿದ್ದರು. ಅವನ 'ಪೊಂದತನ, ಹುಚ್ಚುತನ'ಗಳನ್ನು ಮರೆತು ಎಲ್ಲದರಲ್ಲಿಯೂ ಹೊಗಳಿಕೊಳ್ಳುತ್ತಿದ್ದರು. ಇಂತಹ ಸಂದರ್ಭಗಳಿಗಾಗಿ ಹಂಬಲಿಸುತ್ತಿದ್ದರು. ಅವನ ನಡತೆ ಅವರ ಕಾಹಿಲೆಯ ದಿನಗಳಲ್ಲಿ ಮಾರ್ಪಾಟು ಹೊಂದಿತ್ತು. ಅವನು ಅವರ ಬೇನೆ, ಬೇಗೆಗಳನ್ನು ವಿಚಾರಿಸಿಕೊಳ್ಳುತ್ತಿದ್ದ. ಡಾಕ್ಟರರಿಗೆ ವರದಿ ಮಾಡಿ ಅವರ ಸಲಹೆಗಳನ್ನು ತಮಗೆ ತಿಳಿಸುತ್ತಿದ್ದ. ಮೈಮುಟ್ಟಿ, ಕೈ ಮುಟ್ಟಿ, ಏಳಿಸಿ, ಮಲಗಿಸಿ, ಹತ್ತು ತರಹ ಸೇವೆ ಮಾಡುತ್ತಿದ್ದ. ತಾವು ಕಣ್ಣು ಮುಚ್ಚಿದಂತಿದ್ದಾಗ ಕುಸುಮಳೊಡನೆ ಪಿಸಿ ಮಾತಾಡುತ್ತಿದ್ದ, ತುದಿಗಾಲಿನಲ್ಲಿ ಸದ್ದಿಲ್ಲವೆ ನಡೆಯುತ್ತಿದ್ದ. ಕಾಲಕಾಲಕ್ಕೆ ಚಿಕಿತ್ಸೆಯನ್ನು ಚಾಚೂ ತಪ್ಪದೆ ನಡೆಸುತ್ತಿದ್ದ. ಇವುಗಳ ಅರ್ಥವನ್ನೆಲ್ಲ ಊಹಿಸಿಕೊಂಡು ಅವರು ತಮ್ಮ ಸಂಕಟದಲ್ಲಿಯೂ ಹಿಗ್ಗುತ್ತಿದ್ದರು. ಅವನು ಮೃದುವಾದ ನೋಟದಿಂದಲೇ ನೋಡುತ್ತಿದ್ದುದು ಎಂತಹ ತಾಪ

ದಲ್ಲಿಯೂ ಸ್ವಲ್ಪ ತಂಪನ್ನು ತರುತ್ತಿದ್ದಿತು. 'ಮಗ ಹೊಂದಿಕೋತಾನೆ, ಹೀಗೇ. ಅವನ ಹಿಂದಿನ ನಡತೆಯಲ್ಲಿ ಏನೂ ತಪ್ಪಿಲ್ಲ. ತಲೆಮಾರಿನ ಲಕ್ಷಣ. ಏನೋ ತೋರಿಸಿಕೊಳ್ಳದ ಒಂದು ಧೋರಣೆ ಅಷ್ಟೆ. ನಿಜವಾಗಿ ಪ್ರೀತಿಯಿದೆ. ಸಮಯ ವೆಂದರೆ ಒದ್ದಾಡುವ ಸ್ವಭಾವ. ಇಲ್ಲದಿದ್ದರೆ ಇಲ್ಲ. ಮುಂದೆಯೂ ಸರಿಯಾ-ಗುತ್ತಾನೆ. ನಾನು ಸುಮ್ಮನೆ ತಪ್ಪು ತಿಳಿದೆ. ಮೂಲದಲ್ಲಿ ಒಳ್ಳೇ ಸೌಜನ್ಯ-ವಿದೆ. ಎಷ್ಟಾದರೂ ಮಗನಲ್ಲವೇ? ಎಲ್ಲಿ ಹೋಗುತ್ತೆ ಆ ಸಳಿತ—ನನ-ಗಿದ್ದಂತೆ ದೊಡ್ಡ ಮನೆತನದ ಸಂಸ್ಕೃತಿ ಎಲ್ಲಿ ಹೋಗುತ್ತೆ ಎಂದು ತಮಗೆ ತಾವೇ ಹೇಳಿಕೊಳ್ಳುತ್ತ ಸಮಾಧಾನ ಸಂತೋಷಗಳನ್ನು ಹೊಂದುತ್ತಿದ್ದರು. ಒಂದೊಂದು ವೇಳೆ ಈ ಕಾಯಿಲೆ ಬೇನೆ ವಾಸಿಯಾಗದೆ ನಿಧಾನವಾಗಿ ಎಳೆ ದರೇ ಒಳ್ಳೆಯದು ಎನ್ನಿಸುತ್ತಿತ್ತು. ಆದರೆ ಬಂದಿದ್ದ ಬೇನೆ ಹರಿಯುತ್ತ ಬಂದಿತು. ಮಗ ಮತ್ತೆ ದೂರವಾಗುತ್ತ ಬಂದ. ಅವರ ಆಸೆ ಆಶಯಗಳು ಬಯಲಾಗುತ್ತ ಬಂದುವು. ಈ ಇನ್ನೊಂದು ಬೇನೆ ಅವರನ್ನು ಮತ್ತೆ ಆವರಿಸ ತೊಡಗಿತು.

ಸಾಹುಕಾರರು ತಾವು ಗಂಡಾಂತರದಿಂದ ಪಾರಾಗಿ ಚೇತರಿಸಿಕೊಂಡ-ದ್ದಕ್ಕಾಗಿ ಮೇ ತಿಂಗಳಲ್ಲಿ ಧರ್ಮದ ಆರು ಮದುವೆಗಳನ್ನೂ, ಹದಿನಾರು ಮುಂಜಿಗಳನ್ನೂ ನೆರವೇರಿಸಿದರು.

೧೫

* * *

ಈ ವರೆಗೆ ಮರುಳೂರಿನಲ್ಲಿ ಸಂಗತಿಗಳು ವೇಗದಿಂದ ಮುಂದುವರೆಯುತ್ತಿದ್ದುವು. ಮುನಿಸಿಪಲ್ ಚುನಾವಣೆ ಮತ್ತೆ ಸಮೀಪಿಸುತ್ತಿತ್ತು. ಭೋಗಪ್ಪ ಸಾಹುಕಾರರ ಪ್ರತಿಮೆಯ ಅನಾ-ವರಣೋತ್ಸವವನ್ನು ಅಷ್ಟರೊಳಗೇ ನಡೆಸಬೇಕೆಂದು ತುಂಬ ಹೆಣಗಿದ. ಚುನಾವಣೆಗೆ ಕೇವಲ ಕೆಲವು ದಿನಗಳ ಹಿಂದೆ ಉತ್ಸವವನ್ನು ನಡೆಸಿದರೆ ತನಗೆ ಬೇಕಾದ ಪ್ರಕಟನೆ ಸಕಾಲದಲ್ಲಿ ಸಿಕ್ಕಿ, ಇನ್ನೊಂದು ಬಾರಿ ಆಯ್ಕೆಗೆ ತುಂಬ

ಉಪಯೋಗವಾಗುವುದೆಂದು ಯೋಚಿಸಿ ತನಗೆ ಅನುಕೂಲವಾದ ದಿನವೊಂದನ್ನು ಗೊತ್ತುಮಾಡಿದ. ಆದರೆ ಇನ್ನೂ ಪ್ರತಿಮೆಯ ಕೆಲಸವೇ ಮುಗಿದಿರಲಿಲ್ಲವಾಗಿ, ತಾನೇ ಮತ್ತೆ ಕಲ್ಕತ್ತೆಗೆ ಹೋಗಿ ಹತ್ತು ದಿನವಿದ್ದು, ಕಲೆಗಾರರನ್ನು ಒತ್ತಾಯಪಡಿಸಿ ಕೆಲಸದ ವೇಗವನ್ನು ಹೆಚ್ಚಿಸಿ, ಸಕಾಲಕ್ಕೆ ಮುಗಿಯುವಂತೆ ನಿಷ್ಕರ್ಷೆ ಮಾಡಿ ಬಂದ. ಇದಲ್ಲದೆ ಪ್ರತಿಮೆ ಮುಗಿದೊಡನೆ ಅದನ್ನು ಸಾಗಿಸುವ ಪ್ರಶ್ನೆಯನ್ನು ಭೋಗಪ್ಪ ಯೋಚಿಸಿದ್ದ. ಈ ಕಾಲದಲ್ಲಿ ಸರಕಾರದವರು ಆಹಾರ ಪದಾರ್ಥಗಳ ಸಾಗಿಗೇ ಪ್ರಾಮುಖ್ಯತೆಯನ್ನು ಕೊಡುತ್ತಿದ್ದರು. ಹೀಗಿದ್ದು ಭೋಗಪ್ಪ ಸಾಹುಕಾರರ ಮೂಲಕ ಮಂತ್ರಿಗಳಿಗೆ ಹೇಳಿಸಿ, ಅವರಿಂದ ಇಂಡಿಯಾ ಸರಕಾರದ ಟ್ರಾನ್ಸ್‌ಪೋರ್ಟ್ ಮಂತ್ರಿಗಳಿಗೇ ಬರೆಯಿಸಿ, ರೇಲ್ವೆ ಇಲಾಖೆಯ ಮೇಲೆ ಒತ್ತಾಯವನ್ನು ತಂದು, ಹಾಗೂ ತೃಪ್ತನಾಗದೆ ಸ್ಥಳೀಯ ರೈಲ್ವೆ ನೌಕರರ ಕೈ ಬೆಚ್ಚಗೆ ಮಾಡಿ ಈ ಕೆಲಸವನ್ನು ಸಾಧಿಸುವ ಮಹಾ ಯತ್ನವನ್ನು ಆಗಲೇ ಕೈಕೊಂಡಿದ್ದ.

ಊರಿನಲ್ಲಿ ಅಲಂಕಾರಸಮಿತಿ, ಆತಿಥ್ಯಸಮಿತಿ, ಪ್ರತಿಮೆಸಮಿತಿ, ಮಾನಪತ್ರಸಮಿತಿ, ಮೆರವಣಿಗೆಸಮಿತಿ ಎಂದು ಉಪಸಮಿತಿಗಳನ್ನು ತನ್ನ ಅಧ್ಯಕ್ಷತೆಯಲ್ಲಿ ನಿಯಮಿಸಿಕೊಂಡು ಕೆಲಸವನ್ನು ಭರಾಟೆಯಿಂದ ಸಾಗಿಸಿದ. ಮೆರವಣಿಗೆಯ ಸಲಹೆ ಅವನಿಂದಲೇ ಬಂದದ್ದು. ಸಾಹುಕಾರರನ್ನುಮುನಿಸಿಪಲ್ ಅಧ್ಯಕ್ಷರೊಡನೆ ಈ ರೀತಿ ಸನ್ಮಾನಿಸುವುದು ಬಹಳ ಯೋಗ್ಯ, ಅವಶ್ಯಕ ಎಂದು ಹೇಳಿದ. ಇದರಿಂದ ತನಗೆ ಸಿಕ್ಕುವ ಪ್ರಶಸ್ತಿಗಾಗಿ ಒಳಗೊಳಗೇ ಹಿಗ್ಗಿದ. ಮೆರವಣಿಗೆ ಸಾಹುಕಾರರೇ ಮದುವೆಯ ಸಂದರ್ಭದಲ್ಲಿ ಹಾಕಿಕೊಟ್ಟಿದ್ದ ಮೇಲ್ಪಂಗ್ತಿಯನ್ನು ಅನುಸರಿಸಬೇಕೆಂದು ಸಮಿತಿ ತೀರ್ಮಾನಿಸಿ ಕಾರ್ಯಕ್ರಮವನ್ನು ಕೈಕೊಂಡಿತು ಮಾನಪತ್ರವನ್ನು ಚಂದ್ರಶೇಖರ ಮತ್ತು ಶಾಮಯ್ಯಂಗಾರಿ ಇಬ್ಬರೂ ಸೇರಿ ಅಧ್ಯಕ್ಷರ ಸಲಹೆಯ ಮೇರೆಗೆ ಬರೆಯಬೇಕೆಂದೂ, ಅಧ್ಯಕ್ಷರೇ ಓದಿ ಬೆಳ್ಳಿಯ ಕರಂಡದಲ್ಲಿ ಸಮರ್ಪಿಸಬೇಕೆಂದೂ ತೀರ್ಮಾನವಾಯಿತು. ಆತಿಥ್ಯಸಮಿತಿ ಅಧ್ಯಕ್ಷರ ಹೆಸರಿನಲ್ಲಿ ಕರೆಯೋಲೆಯನ್ನು ಮುದ್ರಿಸಿ, ಎಲ್ಲ ಪತ್ರಿಕೆಗಳಿಗೂ ದೇಶದ ಗಣ್ಯರಿಗೂ ಕಳುಹಿಸಬೇಕೆಂದೂ, ಬರಲಾಗದ ಕಡೆ ಸಂದೇಶಗಳನ್ನು ಕಳುಹಿಸಬೇಕೆಂದು ಪ್ರಾರ್ಥಿಸಬೇಕೆಂದೂ ಇತ್ಯರ್ಥವಾಯಿತು. ಸ್ಥಳೀಯ ಸರಕಾರದ ಮಂತ್ರಿಗಳನ್ನು

ಬೆಂಗಳೂರಿನಲ್ಲಿ ಭೇಟಿಯಾಗಿ ಅವರ ಅಮೃತಹಸ್ತದಿಂದ ಅನಾವರಣೋತ್ಸವ-ವನ್ನು ನಡೆಸಲು ಅವರನ್ನು ಒಪ್ಪಿಸುವ ಭಾರವನ್ನು ಅಧ್ಯಕ್ಷರೇ ಹೊತ್ತು ಕೊಂಡರು. ಪ್ರತಿಮೆ, ಪೀಠಸಹಿತವಾಗಿಯೇ ಬರುತ್ತಿದ್ದರೂ ಅದಕ್ಕೆ ಯೋಗ್ಯವಾದ ಮೆಟ್ಟಿಲಿನ ಜಗಲಿ, ಸರಪಳಿಯ ಕಟ ಕಟಿ, ಸುತ್ತ ಬುರುಡೆ ದೀಪಗಳು, ಇವುಗಳ ನಿರ್ಮಾಣಕಾರ್ಯದಲ್ಲಿ ಪ್ರತಿಮೆಸಮಿತಿ ತೊಡಗಿತು. ಆತಿಥ್ಯಸಮಿತಿ, ಅಧ್ಯಕ್ಷರು ವರ್ಷದ ಮೊದಲಿನಲ್ಲಿ ಏರ್ಪಡಿಸಿದ್ದ ಸಂತೋಷ ಕೂಟವನ್ನು ಅನುಸರಿಸಬೇಕೆಂದು ಗೊತ್ತಾಯಿತು. ಬೆಂಗಳೂರಿನ ಆತಿಥ್ಯ ನಿಸ್ಸೀಮರಿಗೆ ಕೂಡಲೇ ಕರೆ ಹೋಯಿತು. ಅಲಂಕಾರಸಮಿತಿಯವರು ಆ ದಿನ ಒಳ ಅಲಂಕಾರವಷ್ಟೇ ಅಲ್ಲದೆ ಟೌನ್‌ಹಾಲ್, 'ವಿಶ್ವೇಶ್ವರಯ್ಯ ಸ್ಕ್ವೇರ್' 'ವಿಶ್ವೇಶ್ವರಯ್ಯ ಸರ್ಕಲ್' ಇವಕ್ಕೆಲ್ಲ ದೀಪಾಲಂಕಾರ ಮಾಡ ಬೇಕೆಂದು ನಿರ್ಧರಿಸಿತು. ಇದೇ ಸಮಯದಲ್ಲಿ, ಉತ್ಸವದ ಅಂಗವಾಗಿ, ಆ ಮೂರನೆಯ ದಿನ ಕರ್ಣಾಟಕ ಸಂಘದ ವಸಂತ ಸಾಹಿತ್ಯೋತ್ಸವವನ್ನು, ಅದರ ಭಾಷಣ ಸಂಗೀತ, ವಿವಿಧ ವಿನೋದಾವಳಿ—ಎಲ್ಲ ಚಟುವಟಿಕೆ ಗಳೊಂದಿಗೆ ನಡೆಯಿಸುವದಾಗಿ ಶಾಮಯ್ಯಂಗಾರಿ ಅಧ್ಯಕ್ಷರಲ್ಲಿ ಹೇಳಿಕೊಂಡು ಅನುಮತಿ ಪಡೆದ.

ಈ ಏರ್ಪಾಡು, ತಾರೀಕುಗಳನ್ನೆಲ್ಲ ಭೋಗಪ್ಪ ಸಾಹುಕಾರರಲ್ಲಿ ಮೊದಲೇ ಚರ್ಚಿಸಿ ಸ್ಥಿರಪಡಿಸಿದ್ದ. ಅವರು ಅವನ ಚಟುವಟಿಕೆಗಳ ವಿವರಗಳನ್ನೆಲ್ಲ ಕೇಳಿ, ಆನಂದಿಸಿ, ಮೆಚ್ಚಿ, ಹೊಗಳಿ ಸಮ್ಮತಿಸಿದರು. ಪ್ರತಿಮೆ ಒಂಬತ್ತು ಹತ್ತು ಸಾವಿರದ್ದಾದರೂ, ಬಟ್ಟೆಗಿಂತ ದರ್ಜಿಯ ಕೂಲಿ ಹೆಚ್ಚಾದಂತೆ, ಈ ಉತ್ಸವದ ಒಟ್ಟು ಖರ್ಚು, ಮುನಿಸಿಪಾಲಿಟಿ ಕೊಟ್ಟ ಹಣ, ಸನ್ಮಾನ ಸಮಿತಿ ಕೊಡಿಸಿದ ಎಂಟು ಸಾವಿರ, ಇವನ್ನೂ ಮೀರಿ, ಸಾಹುಕಾರರಿಗೆ ಹನ್ನೆರಡು ಸಾವಿರದ ಭಾರ ತಂದಿತ್ತು. ಅವರು ಸಂದರ್ಭದ ವಿಜೃಂಭಣೆಯನ್ನೆಲ್ಲ ಯೋಚಿಸಿಕೊಂಡು ಈ ಕಾಣಿಕೆಯನ್ನು ಕೊಡಲು ಸಂತೋಷದಿಂದಲೇ ಒಪ್ಪಿದ್ದರು.. ಅದೂ ಅಲ್ಲದೆ, ಇದೇ ಸಮಯದಲ್ಲೇ ತಮ್ಮ ಧರ್ಮದ ಕೆಲಸಗಳಾದ ಗೋಮಾಳನಿರ್ಮಾಣ, ಗಣಪತಿಯ ದೇವಸ್ಥಾನ, ಸಣ್ಣಮ್ಮ ವಾರ್ಡ್ ಇವುಗಳ ಆರಂಭೋತ್ಸವಗಳನ್ನೂ ಮಂತ್ರಿಗಳಿಂದ ನೆರವೇರಿಸಿದರೆ, ಬಹಳ ಕಳೆ ಕಟ್ಟಿ, ತಮ್ಮ ಪ್ರತಿಷ್ಠೆ ಇನ್ನೂ ಅಷ್ಟು ಎದ್ದು ಕಾಣುವುದೆಂದು, ಈ ಕೆಲಸಗಳ ಪೂರೈಕೆಗೂ ಹವಣಿಸಿದರು.

ಗೋಮಾಳದ ವಿಷಯವೇನು ಕಷ್ಟವಾಗಲಿಲ್ಲ. ಊರಿನಲ್ಲಿ 'ಹೆಚ್ಚು ಬೆಳೆಯಿರಿ' ಯೋಜನೆಯ ಕೂಗು ಬಹಳ ಕೇಳಿಸುತ್ತಿತ್ತು. ಜನರು ತರಕಾರಿಗಳನ್ನು ಬೆಳೆದು ಧಾನ್ಯದ ಕರ್ಚನ್ನು ಕಡಿಮೆ ಮಾಡಬೇಕೆಂದೂ, ಫಲ ಕೊಡುವ ಮರಗಳನ್ನು ನೆಡಬೇಕೆಂದೂ ಬಹಳ ಪ್ರಚಾರ ನಡೆಯುತ್ತಿತ್ತು. ಈ ತರಕಾರಿಯ ತೋಟಗಳ, ಫಲ ವೃಕ್ಷ ಸಸಿಗಳ ರಕ್ಷಣೆಗೆ ಬೇಲಿ ಹಾಕಬೇಕಾದವರಿಗಾಗಿ ಸರಕಾರ ನಾಲ್ಕು ಟನ್ನು ಮುಳ್ಳು-ತಂತಿ ಬೇಲಿಯನ್ನು ವ್ಯವಸಾಯದ ಇನ್ಸ್ಪೆಕ್ಟರವರಲ್ಲಿಗೆ ಕಳುಹಿಸಿತು ಸಾಹುಕಾರರು ಇದನ್ನೆಲ್ಲ ಕೊಂಡುಕೊಂಡರು. ಈ ಕಾಲದಲ್ಲಿ ದೂರದಿಂದ ಮರಮುಟ್ಟುಗಳನ್ನು ಸಾಗಿಸಿಕೊಂಡು ಬರುವುದು ಸುಲಭವಾಗಿರಲಿಲ್ಲ ಕಾಲ ತಾನೆ ಎಲ್ಲಿ? ಆತುರ ಬೇರೆ. ಸಾಹುಕಾರರು ತಮ್ಮ ಹತ್ತಿರದ ಜಮೀನಿನಲ್ಲಿದ್ದ ಆರು ಮಾವಿನ ಮರಗಳನ್ನೇ ಕತ್ತರಿಸಿ ಗೂಟಗಳಾಗಿ ಕುಯ್ಯಿಸಿ ಗೋಮಾಳದ ಸುತ್ತ ನೆಡೆಸಿ ತಂತಿಯನ್ನು ಸುತ್ತಿಸಿ, ಬಾಗಿಲೊಂದನ್ನು ಮಾಡಿಸಿ, ಆರಂಭೋತ್ಸವದ ವರೆಗೂ ದನಗಳು ನುಗ್ಗದಂತೆ ಬೀಗ ಹಾಕಿಸಿದರು. ಸಮಯವೆಂದರೆ ನಷ್ಟಗಳನ್ನು ನೋಡುವವರಲ್ಲ ಸಾಹುಕಾರರು.

ಸಾಹುಕಾರರಿಗೆ ನಿಜವಾದ ಕಷ್ಟವನ್ನು ಕೊಟ್ಟದ್ದೆಂದರೆ ದೇವಸ್ಥಾನ. ಇದಕ್ಕೆ ಒಂದಾದರೊಂದು ಸಾಮಾನು, ಕೆಲಸದವರು, ಹೀಗೆ ತೊಂದರೆ ಆಗುತ್ತಲೇ ಇತ್ತು. ಹೇಗೋ ಪಟ್ಟಣದ ಹತ್ತಿರದಿಂದ ಕರಿಯ ಕಲ್ಲನ್ನು ತೆಗೆಸಿ, ರೈಲ್ವೆ ನೌಕರರಿಗೆ ಲಂಚ ಕೊಟ್ಟು, ವ್ಯಾಗನ್ ಒದಗಿಸಿಕೊಂಡು, ತರಿಸಿಕೊಂಡರು. ಗರ್ಭಗುಡಿಗೆ ಸಾಕೋ ಸಾಲದೋ ಎನ್ನುವಷ್ಟು ಮಾತ್ರ ಸಿಕ್ಕಿತು. ಅದೂ ಗೋಡೆಯ ಮುಖಕ್ಕೆ ಮಾತ್ರ. ಒಳಭಾಗಕ್ಕೆಲ್ಲ ಊರಿನ ಕಲ್ಲನ್ನೇ ಉಪಯೋಗಿಸಿದ್ದಾಯಿತು. ಇದು ಕಳೆಯಿತೆಂದರೆ ಸಾಕಾದಷ್ಟು ಸಿಮೆಂಟ್ ಇಲ್ಲ. ಇದಕ್ಕಾಗಿ ಮಂತ್ರಿಗಳವರೆಗೂ ಹೋಗಿ ವಿಶೇಷ 'ಕೋಟ' ಮಂಜೂರು ಮಾಡಿಸಿಕೊಂಡರು. ಅದೂ ಸಾಲದೆ ಬ್ಲ್ಯಾಕ್ ಮಾರ್ಕೆಟ್ಟಿನ ಸಿಮೆಂಟನ್ನೆಲ್ಲ ಲೆಕ್ಕವಿಲ್ಲದಷ್ಟು ಬೆಲೆಯನ್ನೇ ಕೊಟ್ಟು ಕೊಂಡರು. ಹಾಗೇ ಊರಿನ ಕೆಲಸಗಾರರನ್ನೆಲ್ಲ, ಒಂದಕ್ಕೆರಡು ಕೊಟ್ಟು, ಬಾಕಿ ಮನೆಯ ಕಟ್ಟಡಗಳಿಂದ ಸೆಳೆದುಕೊಂಡರು ನೆರೆಯೂರುಗಳಿಂದಲೂ ಕರೆಸಿಕೊಂಡರು. ಇತರ ಊರುಗಳಂತೆ ಇಲ್ಲಿಯೂ ಬಡಬಗ್ಗರಿಗೆ ಮಧ್ಯವರ್ಗದವರಿಗೆ ಮನೆಗಳ ಅಭಾವ ಹೇಳುವಂತಿರ

ಲಿಲ್ಲ. ಒಂದೊಂದು ಮನೆಯಲ್ಲಿಯೂ ನಾಲ್ಕಾರು ಒಕ್ಕಲು, ಬಂದ ಸಂಬಳದ ಅರ್ಧವನ್ನೆಲ್ಲ ಮನೆಯ ಯಜಮಾನರಾದ ಶ್ರೀಮಂತರಿಗೆ ಸುರಿದು, ಗೂಡಿನ ಪಾರಿವಾಳಗಳಂತೆ ಜೀವಿಸುತ್ತ, ತಮ್ಮಲ್ಲೇ ಜಗಳವಾಡುತ್ತ, ಕಾಹಿಲೆ ಬಿದ್ದು ಡಾಕ್ಟರ ದಪ್ಪ ಬಿಲ್ಲುಗಳನ್ನು ತೀರಿಸುತ್ತ, ಹೇಗೋ ಒದ್ದಾಡುತ್ತಿದ್ದರು. ಹೊಸ ಮನೆಗಳು ಹುಟ್ಟಿಯಾವೇ ಎಂದು ಆತುರದಿಂದ ನೋಡುತ್ತಿದ್ದು, ಕಟ್ಟಡ ಪೂರ್ತಿಯಾಗುವುದಕ್ಕೆ ಮುಂಚೆಯೇ ಮೂರು ನಾಲ್ಕು ತಿಂಗಳ ಬಾಡಿಗೆ, ಮೇಲೆ 'ಪಗಡಿ'ಗಳನ್ನೂ ಕೊಟ್ಟು, ಚಾತಕಗಳಂತೆ ಕಾದಿರುತ್ತಿದ್ದರು. ಈಗ ಇವರೆಲ್ಲರೂ ಈ ಧರ್ಮದ ಕೆಲಸದ ದೆಸೆಯಿಂದ ಇನ್ನೂ ಒಂದು ವರ್ಷ ಕಾಯ ಬೇಕಾಯಿತು. ಸಿಮೆಂಟಿನ, ಕೆಲಸಗಾರರ ಅಭಾವದಿಂದ ಊರಿನ ಸಣ್ಣ ಸಣ್ಣ ಮನೆಗಳೆಲ್ಲ ಕಾಲು, ಅರ್ಧ, ಮುಕ್ಕಾಲು, ಭಾಗಗಳಿಗೇ ನಿಂತವು. ಊರಿನ ಕಟ್ಟಡದ ಕೆಲಸವೆಲ್ಲ ಈ ದೇವಸ್ಥಾನ ಒಂದರಲ್ಲೇ ನಡೆಯುತ್ತಿತ್ತು. ಆದರೂ ಜನರು ಸಾಹುಕಾರರು ಹೇಳುತ್ತಿದ್ದಂತೆಯೇ 'ದೇವರ ಕೆಲಸ' ಮೊದಲಾಗಲಿ. ಶ್ರೀರಂಗ ಮೊದಲಿಯಾರ್ರು ಎರಡು ಭಾರಿ ಸಿನೇಮಾ ಕಟ್ಟಿಲಿಲ್ಲವೆ? ಬೋರಯ್ಯ, ಇಬ್ಬರಿಗೆ ಇಪ್ಪತ್ತು ಕೋಣೆ ಮನೆ ಕಟ್ಟಿಕೊಂಡಿಲ್ಲವೆ? ಅದಕ್ಕೆ ಕೇಡೆ ಇದು?" ಎಂದು ಸಮಾಧಾನದಿಂದಿದ್ದರು. ಸಾಹುಕಾರರ ದೇವಸ್ಥಾನವೆಂದರೆ ಸಾಮಾನ್ಯವೇ. ಕಲ್ಲಿನ ಗೋಡೆಯ ಮೇಲೆಲ್ಲ ದೇವರ ಸ್ತೋತ್ರ ಬರೆಯಿಸಿ ಸುತ್ತಲೂ ಚಿತ್ರದ ಕೆಲಸ ಮಾಡಿಸಿದರು. ಗರ್ಭಗುಡಿಯ ಬಾಗಿಲಿನ ಸುತ್ತ, ಅಮೃತ ಶಿಲೆಯ ಮೇಲೆ ಮಾಡಿಸಿದ್ದ ಶಿವ ಪಾರ್ವತಿ, ಬಗೆ ಬಗೆಯ ವಿನ್ಯಾಸದ ವಿನಾಯಕಗಳು, ಈ ಕೆತ್ತನೆಯ ಕೆಲಸ ಅಮೋಘವಾಗಿತ್ತು. ಹಾಗೇ ವರಾಂಡದ ಕಲ್ಲಿನ ಕಂಬಗಳ ಮೇಲೂ, ಗಂಧದ ಮರದ ಬಾಗಿಲಿಗೆ ಬೆಳ್ಳಿಯ ತಗಡನ್ನು ಹೊಡೆಸಿದರು. ಮೇಲಿನ ತಾಮ್ರದ 'ಡೋಂ'ಗೆ—ಗುಮ್ಮಟಕ್ಕೆ—ಚಿನ್ನದ ಮುಲಾಮನ್ನು ಮಾಡಿಸಿದರು. ಮುಂದಿನ 'ಗರುಡಗಂಬಕ್ಕೂ' 'ಕಮಲ ಬಲಿ ಪೀಠಕ್ಕೂ' ಹೀಗೇ. ಗರ್ಭಗುಡಿಯ ಮುಂದೆ ವರಾಂಡದಲ್ಲಿ, ಚೌಕ ಕಲ್ಲಿನ ನೆಲದಲ್ಲಿ, ಸಂದುಗಳು ಸೇರುವ ಕಡೆ, ಬೆಳ್ಳಿಯ ರೂಪಾಯಿಗಳನ್ನು ಹೊಡೆಸಿದರು. ಇವೆಲ್ಲಕ್ಕೂ ಪ್ರೇರಣೆ ಬಂದದ್ದು ಸಾಹುಕಾರರು ಹಿಂದೆ ಮಾಡಿದ್ದ ಕಾಶಿಯಾತ್ರೆಯಿಂದ. ಅಲ್ಲಿಯ ವಿಶ್ವನಾಥನ ಗುಡಿಯಲ್ಲಿ ಹೀಗೇ ಇದ್ದಿತು. ಇವರು ಅಲ್ಲಿಗೆ ಹೋಗಿ ಅಭಿಷೇಕ, ಅಷ್ಟೋತ್ತರ, ಸಹಸ್ರನಾಮ

ಮಹಾ ಮಂಗಳಾರತಿ, ಮೊದಲಾಗಿ ಕ್ರಮಬದ್ಧವಾಗಿ ಇದ್ದ ಸಕಲ ಸೇವೆಯನ್ನೂ ಸಲ್ಲಿಸಿದ ವೈಭವದ ರೀತಿಯನ್ನೂ ಕಂಡು, ಇವರ ನಿಷ್ಠೆ, ಭಕ್ತಿ, ಸೇವಾಶಕ್ತಿಗಳನ್ನು ಅರಿತು, ಬೆರಗಾಗಿ, ವಿಶ್ವನಾಥನ ಗುಡಿಯವರು ಇವರನ್ನು ಅಪಾರವಾಗಿ ಸ್ತೋತ್ರಮಾಡಿದ್ದರು. ಸಾಹುಕಾರರು ಸುಪ್ರೀತರಾಗಿ "ಈ ಸೇವಕ ಸ್ವಲ್ಪವಾದರೂ ಶಾಶ್ವತವಾಗಿ ಮಾಡಬಹುದಾದ ಯಾವುದಾದರೂ ಸೇವೆ ಇದೆಯೆ?" ಎಂದು ವಿಚಾರಿಸಿದ್ದರು. ಪೂಜಾರಿಗಳು "ಸ್ವಾಮಿ, ಈಗ ಐವತ್ತು ವರ್ಷಗಳ ಕೆಳಗೆ ದಕ್ಷಿಣದಿಂದಲೇ ಬಂದ ನಾಟುಕೋಟಿ ಚೆಟ್ಟಿಯಾರರು ನಮ್ಮ ವಿಶ್ವನಾಥನ ಗುಮ್ಮಟಕ್ಕೆ ಚಿನ್ನದ ಮುಲಾಮು ಹಾಕಿಸಿದರು, ನೆಲಕ್ಕೆ ಬೆಳ್ಳಿಯ ರೂಪಾಯಿ ಹೊಡೆಸಿದರು. ಈಗ ಮುಲಾಮು ಹೋಗುತ್ತಿದೆ. ಭಕ್ತಾದಿಗಳ ತುಳಿತದಿಂದ ರೂಪಾಯಿಗಳೂ ಸವೆದಿವೆ." ಎಂದರು. ಸಾಹುಕಾರರು ಇವೆರಡನ್ನೂ ಮಾಡಿಸಲು ಏರ್ಪಡಿಸಿದರು. ಅನಂತರ ಪೂಜಾರಿಗಳು "ಸ್ವಾಮಿ ಇನ್ನೊಂದು ಮುಖ್ಯ ವಿಚಾರ. ನಮ್ಮ ಈಶ್ವರನ ಸನ್ನಿಧಾನಕ್ಕೆ ಯಾವ ಯಾವ ಇತರ ಮತದವರೋ ಬರಲು ಯತ್ನಿಸುತ್ತಾರೆ. ಅವರನ್ನೆಲ್ಲ ಪತ್ತೆ ಹಿಡಿದು ಮತ್ತೆ ಪುಣ್ಯಾವರ್ಚನೆ ಮಾಡಿಸುವುದು ಮಹಾ ಕಷ್ಟ. ತಿಳಿಯದೆಯೇ ಹೀಗಾಗುವುದು ಹೆಚ್ಚು. ದಯಮಾಡಿ ಒಂದು ಪ್ರಕಟಿಸೆಯನ್ನು ಕಲ್ಲಿನಲ್ಲಿ ಕೆತ್ತಿಸಿ ಹೊರಗೋಡೆಗೆ ಹಾಕಿಸಿಬಿಟ್ಟರೆ ಆದೀತು" ಎಂದು ಅರಿಕೆ ಮಾಡಿಕೊಂಡಿದ್ದರ ಮೇಲೆ "ಈಶ್ವರನ ಸನ್ನಿಧಾನದಲ್ಲಿ ಅನ್ಯಮತೀಯರಿಗೆ ಪ್ರವೇಶವಿಲ್ಲ" ಎಂದು ಅಮೃತಶಿಲೆಯ ಮೇಲೆ ಚಿನ್ನದ ಮುಲಾಮಿನ ಅಕ್ಷರಗಳಲ್ಲಿ ಬರೆಸಿ ಗೋಡೆಗೆ ಸೇರಿಸಿದ್ದರು ಇದನ್ನು ಈಗಲೂ ಯಾರು ಬೇಕಾದರೂ ಅನ್ಯಮತಸ್ಥರು ನೋಡಿಕೊಂಡು ಅಚಾತುರ್ಯ ಮಾಡದೆ ಯೋಗ್ಯರೀತಿಯಿಂದ ನಡೆದುಕೊಳ್ಳಬಹುದಾಗಿದೆ. ಇಂತಹ ಸೇವೆಗಳೇ ಅಲ್ಲದೆ ಸಾಹುಕಾರರು ನಂದಾದೀಪ, ಶಿವರಾತ್ರಿ ಉತ್ಸವ, ಇವಕ್ಕೂ ಏರ್ಪಾಡು ಮಾಡಿ ಬಂದಿದ್ದರು. ಇಷ್ಟು ಅನುಭವವಿದ್ದವರು ಇಲ್ಲಿಯೂ ಮಾಡಿದುದು ಏನು ಹೆಚ್ಚು? ಅದನ್ನು ಅನುಕರಿಸಿ ಇಲ್ಲಿಯೂ ಅದೇ ಅಮೃತಶಿಲೆ, ಚಿನ್ನದ ಅಕ್ಷರಗಳಲ್ಲಿ, 'ದೇವರ ಸನ್ನಿಧಿಯಲ್ಲಿ ಇತರ ಮತಸ್ಥರಿಗೆ ಪ್ರವೇಶವಿಲ್ಲ' ಎಂದು ಪ್ರಾಕಾರದ ಗೋಡೆಗೆ ಹೊಡೆಸಿದರು. ಅಂತೂ ಸರ್ವವಿಧದಿಂದಲೂ ಅಮೋಘವಾದ,

ಮರುಳೂರಿನವರಿಗೇ ಹೆಮ್ಮೆಯಾದ ದೇವಸ್ಥಾನವು ಆಶ್ಚರ್ಯದ ವೇಗದಿಂದ ಹಗಲು ಮಾತ್ರವಲ್ಲದೆ ರಾತ್ರಿಯೂ ಪೆಟ್ರೊಮ್ಯಾಕ್ಸ್ ದೀಪದ ಬೆಳಕಿನಲ್ಲಿ ಒಂದೇ ಸಮನೆ ನಡೆಯುತ್ತಿತ್ತು; ಪೂರ್ತಿಯಾಗುತ್ತಿತ್ತು. ಬೊಂಬಾಯಿನಿಂದ ವಿಗ್ರಹ ಬರುವುದೂ ನಿಶ್ಚಯವಾಗಿತ್ತು. ಬೆಳ್ಳಿಯ ಉತ್ಸವಮೂರ್ತಿಯೂ ಪಲ್ಲಕ್ಕಿಯೂ ತಯಾರಾಗುತ್ತಿದ್ದುವು. ಸಕಾಲದಲ್ಲಿ ಮುಗಿಯುವ ಆಶಯ ವಿತ್ತು. ಶಾಸ್ತ್ರಿಗಳು ಪಂಚಾಂಗವನ್ನು ಮತ್ತೆ ಮತ್ತೆ ತಿರುವಿ ಹಾಕಿ ಮುನಸಿಪಲ್ ಉತ್ಸವದ ಹಿಂದಿನ ದಿನ ದೇವಸ್ಥಾನದ ಆರಂಭೋತ್ಸವಕ್ಕೆ ಪ್ರಶಸ್ತವಾದ ಲಗ್ನವೆಂದು ಹುಡುಕಿ ಕೊಟ್ಟಿದ್ದರು. ಶ್ರೀ ಗುರುಗಳವರಲ್ಲಿಗೆ ಸಾಹುಕಾರರ ಬೇಡಿಕೆ ಹೋಗಿತ್ತು. ಅವರು ತಮ್ಮ ದೈವ ಹಸ್ತದಿಂದ ಮೂಲ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡುವುದಕ್ಕೆ ಬಹಳ ವಿಶ್ವಾಸದಿಂದ ಒಪ್ಪಿಕೊಂಡಿದ್ದರು. ಗೋಮಾಳವನ್ನು ಆರಂಭಿಸುವುದಕ್ಕೆ ಬರಲು ಒಪ್ಪಿದ್ದ ವ್ಯವಸಾಯದ ಮಂತ್ರಿಗಳೇ ಮುಜರಾಯಿ ಇಲಾಖೆಗೂ ಒಡೆಯರಾಗಿದ್ದು, ಅವರೇ ದೇವ ಸ್ಥಾನದ ಪ್ರಾರಂಭೋತ್ಸವವನ್ನು ನೆರವೇರಿಸಲು ದಯಮಾಡಿ ಒಪ್ಪಿದ್ದರು.

ಇದರೊಂದಿಗೆ ಸಣ್ಣ ಪೈಪೋಟಿ ನಡೆಸಿದ ಕಟ್ಟಡವೆಂದರೆ 'ಸಣ್ಣಮ್ಮ ಹೆರಿಗೆ ವಾರ್ಡ್.' ಅದು ಕಡೆಗೆ ಕೈಗೆ ತೆಗೆದುಕೊಂಡ ಕೆಲಸವಾಗಿದ್ದರೂ ಹೆಚ್ಚು ಗಾತ್ರದ್ದಾಗಲೀ ಅಸಾಧಾರಣವಾದದ್ದಾಗಲೀ ಆಗದಿದ್ದು ಸುಲಭವಾಗಿ ಮುಗಿಯುವಂತೆ ಕಾಣುತ್ತಿತ್ತು. ಇದನ್ನೂ ವೈದ್ಯ ಇಲಾಖೆಯ ಅಧಿಪತಿ ಗಳಾದ ಮಂತ್ರಿವರ್ಯರೇ ಆರಂಭಿಸಲು ಒಪ್ಪಿದ್ದರು. ಈ ಮಹನೀಯರೇ ಪಿ. ಡಬ್ಲ್ಯು. ಡಿಯನ್ನೂ ನೋಡಿಕೊಳ್ಳುತ್ತಿದ್ದುದರಿಂದ ಈ ಸಂದರ್ಭದಲ್ಲೇ ದೊಡ್ಡ ತಿಟ್ಟಿನ ನಾಲೆಗೂ ನೀರನ್ನು ಬಿಡಬೇಕೆಂಬುದು ಸಾಹುಕಾರರ ಇಷ್ಟ ವಾಗಿದ್ದಿತು ಅವರು ಇಂಜನೀಯರನ್ನು ಕರೆಸಿಕೊಂಡು ಆ ಕೆಲಸದ ಮುಕ್ತಾಯವನ್ನು ಪ್ರಸ್ತಾಪಿಸುತ್ತ "ಇದೂ ಆಗಲೇ ಆಗಿಬಿಡಲಿ. ಹಾಗೇ ಆಗುತ್ತೆ ಅಂತ ಮಂತ್ರಿಗಳಿಗೆ ಸೂಚನೆ ಕೊಟ್ಟಿದೀನಿ. ಆಗುತ್ತೆ ಅಲ್ಲವೆ?" ಎಂದು ಅರ್ಧ ಪ್ರೋತ್ಸಾಹ, ಅರ್ಧ ಬಲವಂತದ ಧ್ವನಿಯಿಂದ ಕೇಳಿದರು. ಇಂಜಿನಿಯರು ಸಾಹುಕಾರರ ತೂಕ, ಸರಕಾರದಲ್ಲಿ ಅವರಿಗಿದ್ದ ಎಳೆತ, ತನ್ನ ಹಿಂದಿನವನಿಗೆ ಆಗಿದ್ದ ವರ್ಗ ಎಲ್ಲವನ್ನೂ ಅರಿತವರು. ಆಗುವುದಿಲ್ಲವೆಂದು ಹೇಗೆ, ಯಾವ ಧೈರ್ಯದಿಂದ ಹೇಳಿಯಾರು? "ಇನ್ನೇನು, ತಾವು ಹೇಳಿದ

ಮೇಲೆ— ಮಾಡೋ ಯತ್ನವನ್ನೆಲ್ಲ ಮಾಡಿ ಮುಗಿಸೇ ಬಿಡುತ್ತೀನಿ. ಮೂರು 'ಷಿಫ್ಟ್' ಕೆಲಸವಾದರೂ ಚಿಂತೆಯಿಲ್ಲ. ಹೆಚ್ಚು ಕೆಲಸಗಾರರನ್ನೂ ನೌಕರರನ್ನೂ ಕರೆಸಿಕೊಳ್ಳುತ್ತೀನಿ" ಎಂದು ಭರವಸೆ ಕೊಟ್ಟರು. ಅವರಿಗೆ ಈ ಸ್ಥಳವನ್ನು ಗೌರವದಿಂದ ಹೇಗಾದರೂ ಬಿಟ್ಟರೆ ಸಾಕೆನ್ನಿಸಿತ್ತು. ಅದಕ್ಕೆ ಜೀವವನ್ನು ಅಡುವಿಡಲು ಸಿದ್ಧರಿದ್ದರು. ಸಾಹುಕಾರರಿಗೆ ಈ ಒತ್ತಡದಲ್ಲಿ ಕೆಲಸ ಮುಗಿದರೆ ಈ ವರ್ಷದಲ್ಲೇ ಒಂದು ಬೆಳೆಯನ್ನು ತೆಗೆದುಕೊಳ್ಳ ಬಹುದೆಂಬ ಆಸೆ. ಅಂತು ಇಬ್ಬರಿಗೂ ತೃಪ್ತಿಯಾಗುವ ಏರ್ಪಾಡಾಯಿತು.

ಇವೆಲ್ಲ ತೀರ್ಮಾನವಾಗಿ, ಊರಿನಲ್ಲಿ ಮೂರು ನಾಲ್ಕು ದಿನಗಳು ಉತ್ಸವ ನಡೆಯುತ್ತಿದ್ದು ಮೂರು ಮಂತ್ರಿಗಳು, ಜಗದ್ಗುರುಗಳು ಎಲ್ಲ ದಯ ಮಾಡಿಸಿರುವಾಗ, ಇತರ ಸಣ್ಣ ಪುಟ್ಟ ಸಂಸ್ಥೆಗಳು ಈ ಮಹದವಕಾಶವನ್ನು ಕಳೆದುಕೊಳ್ಳುತ್ತವೆಯೆ? ಶಾಲೆಗಳನ್ನು ಮೊದಲುಗೊಂಡು ಸ್ಥಳೀಯ ಕಲಾ ಕ್ಷೇತ್ರಗಳು, ಸಾಮಾಜಿಕ ಸಾರ್ವಜನಿಕ ಸಮಿತಿಗಳು, ವ್ಯಾಪಾರ ಸಂಘಗಳು, ಮತ ಪಂಥಗಳು— ಎಲ್ಲ ಸಂಸ್ಥೆಗಳು ತಮ್ಮ ತಮ್ಮ ವಾರ್ಷಿಕೋತ್ಸವಗಳನ್ನು ಈ ವಾರಕ್ಕೇ ಬದಲಾಯಿಸಿಕೊಂಡು ಸಿದ್ಧತೆಗಳನ್ನು ಬಹಳ ಹುಮ್ಮಸ್ಸಿನಿಂದ ನಡೆಸಿದುವು. ಮಾಮೂಲಿನಂತೆ ಕಲಾಪ್ರದರ್ಶನ, ವ್ಯವಸಾಯಪ್ರದರ್ಶನ, ಕೈಗಾರಿಕೆಪ್ರದರ್ಶನ— ಈ ನಾಲ್ಕೂ ಪ್ರದರ್ಶನಗಳೂ ಏರ್ಪಟ್ಟವು

ಹೀಗಾಗಿ ಯುದ್ಧದಲ್ಲಿ ಮುತ್ತಿಗೆಗೆ ಸಿದ್ಧವಾಗವ ನಗರದಂತೆ ಊರಿಗೆ ಊರೆ ಗಿಜಿಗಿಜಿಗುಟ್ಟುತ್ತಿತ್ತು.

ಈಗ ಶಿವಪ ಊರಿನಲ್ಲಿ ಇದ್ದರೆ ಏನನ್ನುತ್ತಿದ್ದನೋ. ಆದರೆ ಅವನು ಆಗಲೇ ಊರನ್ನು ಬಿಟ್ಟು ಮೂರು ತಿಂಗಳಾಗಿತ್ತು. ಸಾಹುಕಾರರು ಅಂದಿದ್ದ ಮಾತು ಬರಿಯ ಬಡಾಯಿ ಆಗಿರಲಿಲ್ಲ. ಹಗುರವಾಗಿಯೂ ಇರಲಿಲ್ಲ. ನಿಜವಾದ ಬೆದರಿಕೆಯಾಗಿತ್ತು. ಬೆಲ್ಲದ ವ್ಯಾಪಾರವನ್ನು ಆಗಲೇ ಕಸಿದುಕೊಂಡು ಅವನ ವ್ಯಾಪಾರವನ್ನು ಕೆಡಿಸಿದ್ದವರು, ಆಮೇಲೆ ಅವನ ಇನ್ನೊಂದು ಕಾಲಾದ ನೂಲಿಗೆ ಕೈಹಾಕಿದರು. ಬಂದ ನೂಲನ್ನೆಲ್ಲ ಹೆಚ್ಚು ಬೆಲೆಗೆ ಕೊಂಡು ಕೂಡಿಟ್ಟರು. ಅವನೊಡನೆ ಪೈಪೋಟಿ ನಡೆಸಿ ಕಡಿಮೆಗೆ ಮಾರಿದರು. ಹೀಗಾಗಿ ಶಿವಪ್ಪ ಚೆನ್ನಾಗಿ ಮುಗ್ಗರಿಸಿದ. ಆದರೆ ಹಟ ತೊಟ್ಟು, ಪೈಪೋಟಿ ನಡೆಸಿ ಹತ್ತು ವರ್ಷಗಳಲ್ಲಿ ಕೂಡಿಟ್ಟುದನ್ನು ಒಂದೇ

ವರ್ಷದಲ್ಲಿ ಕಳೆದುಕೊಂಡ. ಕೈಯಲ್ಲಿಯ ಬಂಡವಾಳ ಇಂಗಿ, ಏನು ಗತಿ ಅನ್ನುವ ಸ್ಥಿತಿ ಬಂದಾಗ, ತನ್ನ ಮರ್ಯಾದೆಯ ಹಟವನ್ನು ಮೂಲೆಗೊತ್ತಿ, ಅಂಗಡಿ ಮನೆಗಳನ್ನು ಮಾರಿಕೊಂಡು, ಕೈಯಲ್ಲಷ್ಟು ಬಂಡವಾಳವನ್ನಿಟ್ಟು ಕೊಂಡು ಬುದ್ಧಿವಂತನಾಗಿ ಬೇರೆ ಊರಿಗೆ ತನ್ನ ಅದೃಷ್ಟವನ್ನು ಹುಡುಕಲು ಹೊರಟುಹೋದ. ಆದರೆ ಹೋಗುವ ಮುನ್ನ ಉಸ್ಸೆಂದು ಸಿಟ್ಟುಸಿರನ್ನು ಬಿಟ್ಟು "ಈ ಮರುಳೂರು ಈ ಮರುಳು ಜನಕ್ಕೇ; ಅವರನ್ನು ಮರುಳು ಮಾಡುವ ಮೋಸಗಾರರಿಗೇ ಸರಿ'' ಎಂದು ತನ್ನ ಊರನ್ನು ಶಪಿಸದೆ ಇರಲಿಲ್ಲ.

ಈ ಕಾರ್ಯಸಂಭ್ರಮದ ದಿನಗಳಲ್ಲಿ ಭೋಗಪ್ಪ ಸಾಹುಕಾರರಲ್ಲಿಗೆ ಆಗಾಗ್ಗೆ ಬಂದು ಹಿಗ್ಗುತ್ತ ಏರ್ಪಾಡುಗಳ ಮುನ್ನಡೆಯನ್ನುವರದಿ ಮಾಡಿ ಅವರ ಸಲಹೆಗ ಳನ್ನು ಕೇಳುವುದು ಸಾಮಾನ್ಯದ ರೂಢಿಯಾಗಿತ್ತು. ಹೀಗೇ ಉತ್ಸವಕ್ಕೆ ಹತ್ತು ದಿನಗಳಿದ್ದಾಗ ಒಂದು ದಿನ ರಾತ್ರಿ ಬಂದ. ಸಾವುಕಾರರು ವರಾಂಡದಲ್ಲಿ ಆರಾಮ ಕುರ್ಚಿಯ ಮೇಲೆ ಕುಳಿತಿದ್ದರು. ಈಚೆಗೆ ಅವರ ಆರೋಗ್ಯ ಚೇತರಿಸಿ ಕೊಂಡು ಸಾಧಾರಣ ಸ್ಥಿತಿಗೆ ಬಂದಿತ್ತು. ಯಾಕೆ ? ಅದೇನು ತುಂಬಿದ ರಕ್ತವೊ ಮಕ್ಕಳ, ಮನೆಯವರ ಎಚ್ಚರಿಕೆಯ ಅಕ್ಕರೆಯೋ, ಏನೋ, ಹಿಂದಿಗಿಂತಲೂ ಸ್ವಲ್ಪ ಪುಟ್ಟಿಗೆ ಹೆಚ್ಚು ಚೈತನ್ಯವೇ ಬರುತ್ತಿದ್ದಂತಿತ್ತು. ಬಂದ ಭೋಗಪ್ಪ ಇವರ ಹತ್ತರದ ಸೋಫದ ಮೇಲೆ ಕುಳಿತುಕೊಂಡ. ಅವನ ಮುಖ ಸ್ವಲ್ಪ ಜೋಲು ಬಿದ್ದಿದ್ದಂತೆ ಸಾಹುಕಾರರಿಗೆ ಕಂಡಿತು. "ಪಾಪ ! ತುಂಬ ದುಡೀತಾ ಇದಾನೆ, ಸೋತಿದಾನೆ, ಆಶ್ಚರ್ಯವಿಲ್ಲ" ಎಂದುಕೊಂಡರು. ಸ್ವಲ್ಪ ಉತ್ತೇಜನ ಕೊಟ್ಟು ಹರ್ಷತುಂಬುವಂತೆ ನಸುನಗುತ್ತ, "ಹುಂ, ಏನು ಸಮಾಚಾರ ? ಎಲ್ಲ ಸರಿ ಯಾಗಿ ನಡೆಯುತ್ತಿದೆಯೋ? " ಎಂದು ಕೇಳಿದರು.

"ತಮ್ಮ ದಯದಿಂದ " ಎಂದು ಭೋಗಪ್ಪ ಮೊದಲು ಮಾಡಿ ಅಂದಿನ ವರೆಗೆ ನಡೆದ ಚಟುವಟಿಕೆಗಳನ್ನು ಪಕ್ಷಿದೃಷ್ಟಿಯಿಂದ ಬಣ್ಣಿಸಿ ಆ ದಿನದ ಬೆಳ ವಣಿಗೆಗೆ ಬಂದು "ಈ ದಿನ ಪ್ರತಿಮೆಯನ್ನು ಪ್ಯಾಸೆಂಜರ್ ರೈಲಿಗೆ ಹಾಕಿದಾರಂತೆ. ತಾರು ಬಂತು." ಎಂದು ತಿಳಿಸಿದ.

"ಹಾಗೇ ? ಭಲೆ. ಗೆದ್ದೆ ಬಿಡು....ನೀನು." ಎಂದು ಸಂತೋಷವನ್ನು ಪ್ರಕಟಿಸಿದರು.

ಅನಂತರ ಭೋಗಪ್ಪ ಮತ್ತಷ್ಟು ಇಲ್ಲಿಯ ವಿವರಗಳನ್ನು ಮುಂದುವರಿಸಿದ. ತನ್ನ ಚಟುವಟಿಕೆಗಳಿಂದಲೇ ಪೂರ್ತಿಮಾಡಿದ.

"ಸಾಹುಕಾರ್ರೆ, ಇವತ್ತು ತಮ್ಮ ದೇವಸ್ಥಾನಕ್ಕೆ ಹೋಗಿದ್ದೆ. ಅದೆಂಥಾ ಕಟ್ಟಡ ಕಟ್ಟಸಿದಿರಿ, ಏನು ಕತೆ, ಅಬ್ಬಬ್ಬ! ಆಶ್ಚರ್ಯ, ಆಶ್ಚರ್ಯ! ಆ ಕಲಾ ವೈಭವ, ಆ ಸಂಪತ್ತು—ಅದೇನು ಎದ್ದು ಕಾಣುತ್ತವೆ ಸ್ವಾಮಿ! ತಮ್ಮ ಘನತೆಗೆ ತಕ್ಕಂತೇ ಇದೆ. ಇಂಥಾದ್ದು ಒಂದನ್ನು ಕಟ್ಟಿದರೇ ಸಾಕು–ಒಂದು ಜೀವಮಾನದ ಸಾರ್ಥಕತೆಗೆ........" ಮುಂತಾಗಿ ಹೊಗಳುತ್ತ ದೇವಸ್ಥಾನದ ಒಂದೊಂದು ಭಾಗವನ್ನೂ ಹೇಳಿ 'ದಿವ್ಯವಾಗಿದೆ, ಸೊಗಸಾಗಿದೆ' ಎಂದು ತನಗೆ ಗೊತ್ತಿದ್ದ ಗುಣವಾಚಕಗಳನ್ನೆಲ್ಲ ಉಪಯೋಗಿಸಿದ. ಹಾಗೆ ಸಣ್ಣಮ್ಮ ವಾರ್ಡ್—ಕಡೆಗೆ ಗೋಮಾಳವೂ ಬಂತು. 'ವಾರ್ಡ್ ತಮ್ಮ ಸಾರ್ವಜನಿಕ ಸೇವೆಯ ಕಿರೀಟದಲ್ಲಿ ಮತ್ತೊಂದು ರತ್ನ' ಅಂದ. "ಗೋಮಾಳ ಕಣ್ಣು ಮುಚ್ಚಿ ಬಿಡೋದರಲ್ಲಿ ಅಷ್ಟು ಸುಂದರವಾಗಿ ರಚಿಸಿಬಿಟ್ಟಿರಲ್ಲ. ತಾವಲ್ಲದೆ ಇನ್ನೊಬ್ಬರು ಇನ್ನೊಬ್ಬರಿಗಾಗಿದ್ದರೆ ಇದುಸಾಧ್ಯವಾಗುತ್ತಿತ್ತೆ?ಹುಚ್ಚು."ಎಂದ.

ಸಾಹುಕಾರರು ತಮ್ಮ ಮರ್ಯಾದೆಯ ಉತ್ಸವದ ವಿತರಣೆಯನ್ನೇ ಎಷ್ಟನೇ ಬಾರಿಗೋ ಕೇಳಿ ಆನಂದದಿಂದ ತುಂಬಿಹೋಗಿದ್ದರು. ಈಗ ಅವರ ಚಟುವಟಿಕೆಯ ಬಗ್ಗೆ ಸ್ತೋತ್ರವನ್ನು ಕೇಳಿ ಹಿಗ್ಗಿದರು, ಉಬ್ಬಿದರು. ಹಾಗೇ ದಾಕ್ಷಿಣ್ಯದಿಂದ ಮೆಚ್ಚಿಗೆಯನ್ನು ಅವನ ಕಡೆಗೂ ತಿರಿಗಿಸುತ್ತ "ನೀನೇನು ಸಾಮಾನ್ಯ ಕೆಲಸ ಮಾಡಿದೀಯ? ಒಳ್ಳೇ ಹುಲಿ." ಎಂದು ಪ್ರಶಂಸಿಸಿದರು.

ಇಂಥ ಸುಸಂದರ್ಭವನ್ನು ಕಾಯುತ್ತಿದ್ದ ಭೋಗಪ್ಪ ಈಗ ತಾನು ನಿಜವಾಗಿ ಹೇಳ ಬಂದ ವಿಷಯಕ್ಕೆ ಮೆಲ್ಲಗೆ ಕಾಲಿಟ್ಟ.

"ತಮ್ಮ ವಿಶ್ವಾಸ ಒತ್ತಾಸೆ ಅಷ್ಟೆ. ನಂದೇನಿದೆ ಸಾಹುಕಾರ್ರೆ. ಇಂಥಾದ್ದೆಲ್ಲ ತಮ್ಮ ದಯದಿಂದ ಎಷ್ಟಾದರೂ ಹೇಗಾದರೂ ಮಾಡೇನು..ಆದರೆ.." ಭೋಗಪ್ಪ ಅಪಸ್ವರ ಎತ್ತಿದ.

"ಏನು, ಆದರೆ?" ಸಾಹುಕಾರರಿಗೆ ಆಗಲೇ ದುರ್ವಾಸನೆ ಬಂದಿತು.

"ಅದೇ ದುಡ್ಡಿಂದು."

"ಯಾಕೆ ನನ್ನೇ ಸಿಕ್ಕಿಸಿದೀಯಲ್ಲ ಬಾಕಿಗೆಲ್ಲ."

"ಅದಲ್ಲ. ಆ ಕಡೆ ನಂಗೆ ಯೋಚನೆಯೇ ಇಲ್ಲ."

" ಮತ್ತೆ ?—ಏನು, ನೇರವಾಗಿ ಬಾರಯ್ಯ ವಿಷಯಕ್ಕೆ. " ಸಾಹುಕಾರರಿಗೆ ಇತರರು ಹೀಗೆ ಸುತ್ತು ಮಾತಾಡುವುದು ಸಮಾಧಾನವಿರಲಿಲ್ಲ.

" ಏನು ಹೇಳಲಿ ಸ್ವಾಮಿ, ನಾಚಿಕೆ ಆಗುತ್ತೆ. ಅವಿವೇಕ ಮಾಡಿಕೊಂಡು ಬಿಟ್ಟಿದೀನಿ. "

" ಹುಂ...." ಸಾಹುಕಾರರು ಹಣದ ದುರುಪಯೋಗವನ್ನು ಊಹಿಸಿಕೊಂಡರು.

"ಇನ್ನೇನು, ಉತ್ಸವ ಮುಗಿದ ವಾರದೊಳಗಾಗಿ ಲೆಕ್ಕಪತ್ರ ಆಗಬೇಕು."

"..........."

" ಚುನಾವಣೆಯೂ ಬರುತ್ತೆ."

"..........."

" ಏನು ಮಾಡಬೇಕೋ ದಿಕ್ಕೇ ತೋಚದ ಹಾಗಾಗಿದೆ. ಉತ್ಸವದಲ್ಲಿ ಕೂಡ ಮನಸ್ಸು ಸ್ಥಿಮಿತದಿಂದ ನಿಲ್ಲೋದಿಲ್ಲ. ಅದೇ ಭಯ, ಗಾಬರಿ....ಈ ಸಂದರ್ಭ ಕೊಡೋ ಪ್ರಕಟನೆಯುಲ್ಲ—ನಂಗೆ—ಪ್ರಯೋಜನವಾಗೋದಿಲ್ಲ. ಯಾಕೆ ತಳ ಮೇಲೇ ಆಗಿಬಿಡುತ್ತೆ....ಏನೋ ಮೂರನೇ ಸಾರಿ ಅಧ್ಯಕ್ಷತೆಗೆ ನಿಂತುಕೋಬೇಕು ಅಂತ ಇದೀನಿ ...ನಾನೇನು ತಮ್ಮ ರೆಕಾರ್ಡ್‌ವರೆಗೆ ಹೋಗವೇಕು ಅಂತಿಲ್ಲ. ಬರಿ ಭ್ರಾಂತಿ. ಆದರೆ—ಸಾಧ್ಯವಾದರೆ ಇನ್ನೂ ಒಂದೆರಡು ಸಾರಿಯಾದರೂ ನೋಡೋಣ ಅಂತ....ಅದು ಈಗ ಏನಾಗುತ್ತೋ ಅಂತ....ಇಂಥ ಸಂದರ್ಭಾನೇ ಹುಡುಕ್ತಾ ಇರೋರು ಇದ್ದೇ ಇದಾರೆ. ಆ ಶಿವಪ್ಪ ಒಬ್ಬ ತೊಲಗಿದ...."

" ಹಾಂ! ನಾನು ಏನು ಹೇಳಿದ್ದೆ ನೋಡು. ನನ್ನ ಮೇಲೆ ಕತ್ತಿ ಕಟ್ಟಿದನಲ್ಲ, ಎಷ್ಟು ಧೈರ್ಯ ! "

" ತಾವು ಮನಸ್ಸು ಮಾಡಿದ ಮೇಲೆ ಆಯ್ತು, ಅವನ ಪರಿಣಾಮ. ಆಗಲೇ ನಂಗೂ ಗೊತ್ತಿತ್ತು....ಅವನೇನೋ ನನ್ನ ದಾರೀಲಿ ಇಲ್ಲ. ಈಗ ನಂಜುಂಡಪ್ಪ ಹೊಂಚು ಹಾಕ್ತಾ ಇದಾನೆ....ತಮ್ಮ ಬಳಿಗೆ ಏನಾದರೂ ನೆಪ ಮಾಡಿಕೊಂಡು ಬರ್‍ತಾಲೇ ಇರ್‍ತಾನೆ ಅಂತ ಕಾಣುತ್ತೆ. "

" ಹುಂ, ಆಗಾಗ."

" ಅದೇ. ಈ ಮಾತಿಗೇ. ಈ ವರೆಗೇ ಎತ್ತಿರಬೇಕು. "

" ಇಲ್ಲ. "

" ಇನ್ನೇನು ಎತ್ತುತಾನೆ ಹಾಗಾದರೆ. "

"………….."

" ಅವಂದೇ ಭಯ ನಂಗೆ. ಏನಾದರೂ ಆದೀತೆ ಅಂತ ಹದ್ದಿನ ಹಾಗೆ ಕಾದಿರ್ತಾನೆ. ಸುಳಿವು ತಿಳಿದರೆ ಕಪ್ಪೆಗೆ ಕಲ್ಲೆಸೆದ ಕೆಟ್ಟ ಹುಡುಗರ ಹಾಗೆ ನನ್ನ ಮುಳುಗಿಸಿಬಿಡ್ತಾನೆ. ಶಿವಪ್ಪನಿಗಿಂತ ಬೆಂಬಲ ಜಾಸ್ತಿ ಇದೆ. ಈಗ ಏನು ಮಾಡಲಿ ಅಂತ….ತಮ್ಮನ್ನ ಮರೆಹೋಗೋದು ಒಂದೇ ದಾರಿ. ತಾವು ಕೈಹಿಡೀದೆ ಇದ್ದರೆ ಮುಳುಗೇ ಹೋಗ್ತೀನಿ. "

" ಇದೇನಯ್ಯ, ಹೀಗೆ ಮಾಡಿಕೋತೀಯೆ ? ಸ್ವಲ್ಪವೂ ಲೆಕ್ಕಾಚಾರಸ್ಥ ನಲ್ಲ ಬಿಡು. ನೀನು ಮೊದಲನೇ ಪಾರ್ಟಿ ಕೊಟ್ಟಾಗಲೇ ಅಂದುಕೊಂಡೆ. ಇವನು ಹಾಸಿಗೆಗಿಂತ ಹೆಚ್ಚು ಕಾಲು ಚಾಚ್ತಾ ಇದಾನೆ ಅಂತ. "

" ಅದಲ್ಲ ಸಾಹುಕಾರ್ರೆ. ಅದೇನು ಮೂರು ಸಾವಿರ ಆಯ್ತು. ಅದನ್ನ ಹೇಗಾದರೂ ಸರಿಹೋಗಿಸಿಕೊಂಡು ಬಿಡ್ತಿದ್ದೆ—ವರ್ಷದಲ್ಲಿ. ಆದರೆ ಇನ್ನೂ ಬೇರೆ ಬೇರೆ ಬರುತ್ತವಲ್ಲ ಕರ್ಚಿನ ಬಾಬು, ಅವೇ ಸ್ವಾಮಿ ನನ್ನ ಹಾಳು ಮಾಡೋವು. ಈ ಹೊಸ ಮಂತ್ರಿಗಳೋ ಮೂರು ಮೂರು ದಿನಕ್ಕೆ ಬರ್ತಾಲೇ ಇರ್ತಾರೆ. ಸುಮ್ಮನೆ ಸುತ್ತುತ್ತಾ ಇರೋದೆ ಇವರ ಕೆಲಸ—ಆರಂಭ, ಅನಾ-ವರಣ ಅಂತ. ಅದೇನು ಕೆಲಸ ಮಾಡ್ತಾರೋ ದೇವರೇ ಬಲ್ಲ. ಇದೇನು ಗೊತ್ತೇ ಇಲ್ಲ ಅನ್ನಬಹುದು. ಹಾಗೆಂದರೆ ಒಂದೊಂದು ಬಾರಿ ನಮ್ಮ ಉತ್ಸವ ದಂಥಾವಕ್ಕೆ, ಮುಖ್ಯವಾದುವಕ್ಕೆ, ಬರಬಾರದು ಅಂತ ಅಲ್ಲ ನನ್ನ ಅಭಿ-ಪ್ರಾಯ. ಬರಲಿ. ಆದರೆ ಹಿಂದಿನೋರಕಿಂತ ಹೆಚ್ಚು ಸತ್ಕಾರ ಆಗಬೇಕು. ಅಲ್ಲದೆ ಮರುಳೂರಿಗೆ ಬಂದ ಇತರ ಗಣ್ಯರಿಗೆಲ್ಲ—ಇದ್ದೇ ಇರ್ತಾರಲ್ಲ—ಪಾರ್ಟಿ ಕೊಡೋದಕ್ಕೆ ನಾನೇ ಹೊಣೆ—ಪುರಾಧ್ಯಕ್ಷ ಅಂತ. "

" ಕೈಯಲ್ಲಿ ಶಕ್ತಿ ಇಲ್ಲದೇ ಇರೋವಾಗ ಯಾಕೆ ಮಾಡ್ತೀಯೆ ಈ ಪ್ರದರ್ಶನ ?"

" ಏನು ಮಾಡಲಿ. ಮುನಿಸಿಪಲ್ ಅಧ್ಯಕ್ಷ ಅಂದ ಮೇಲೆ ಮೂಲೇಲಿ ಬಿದ್ದಿರೋದಕ್ಕಾಗುತ್ತೆ? ಬಂದಬಂದದ್ದಕ್ಕೆಲ್ಲ ತಲೆ ಕೊಡ್ತಾಲೇ ಇರಬೇಕು. ಇದೇನು ತಮಗೆ ಹೊಸದೇನಲ್ಲ. ಆದರೆ ತಮಗೆ ಗೊತ್ತಾಗಲಿಲ್ಲ—ದೇವರು

ಬೇಕಾದ ಹಾಗೆ ಕೊಟ್ಟಿರೋದರಿಂದ. ನನ್ನಂಥೋನ ಪಾಡು—ನಾಯಿ ಪಾಡು, ನಿಜವಾಗಿ ಈ ಹಾಳು ಗೌರವದಿಂದ."

"ಬಿಟ್ಟುಬಿಡು—ಅಂಥಾ ಕಷ್ಟಾನ."

"ಹ್ಹ! ಹ್ಹ! ಸಾಹುಕಾರ್ರು ಹಾಸ್ಯ ಮಾಡ್ತಾ ಇದಾರೋ?" ಭೋಗಪ್ಪ ಪೆಚ್ಚಾಗಿ ನಕ್ಕು "ಅದಕ್ಕಾದರೂ ಎಲ್ಲ ಸರಿಪಡಿಡಿಸಿ ತಾನೇ.... ಹಾಗೂ ಹಾಕಬೇಕಲ್ಲ ಹಣ....ಮುಂದಿನ ಸಲ ಎಚ್ಚರಿಕೆಯಿಂದ ಇರ್ತೀನಿ. ಹೀಗೆ ಖಂಡಿತ ಆಗಗೊಡಿಸೋದಿಲ್ಲ. ಈ ಸಾರಿ ಮಾನದಿಂದ ತಪ್ಪಿಸಿಕೊಂಡು ಬಿಟ್ಟರೆ........"

"..........."

"ತಾವು ಅಷ್ಟು ಬಡವನ ಮೇಲೆ ದಯಮಾಡಿದರೆ...."

"ಹೋಗಯ್ಯ, ಹೋಗಯ್ಯ, ನಿಂಗೆ ಎಷ್ಟು ತೆರಲಿ."

"ಹಾಗೆನ್ನಬಾರದು ಸಾಹುಕಾರ್ರೆ. ಇದೊಂದು ಬಾರಿ ಕಾಪಾಡಬೇಕು." ಅಂಗಲಾಚಿದ. "ಇಂಥಾದ್ದು ಎಂದೆಂದಿಗೂ........"

"ಸರಿ, ಸರಿ." ಸಾಹುಕಾರರು ನಿರಾಕರಿಸಿದರು.

"ಇಲ್ಲ ಸ್ವಾಮಿ, ನೋಡಿ ಬೇಕಾದರೆ. ನಂಗೆ ಇನ್ನು ಯಾರಿದಾರೆ ದಾತೃಗಳು—ತಮ್ಮನ್ನು ಬಿಟ್ಟರೆ? ಎಲ್ಲ ಶತ್ರುಗಳೆ. ಹಾಳು ಮಾಡೋದಕ್ಕೆ ಸಿದ್ಧವಾಗಿರೋರೆ. ತಮ್ಮ ಹಾಗೆ ಉದ್ಧಾರ ಮಾಡೋ ಉದಾರಿಗಳನ್ನು ಎಲ್ಲಿಂದ ತರಬೇಕು?"

"........"

"ತಾವೇನಾದರೂ ಇಲ್ಲ ಅಂದರೆ ನನ್ನ ಗತಿ ಆಯ್ತು. ಎಲ್ಲಾದರೂ ತಲೆ ಮರೆಸಿಕೊಂಡು ದೇಶಾಂತರ...."

"ಓಹೋ! ಏನು ಬೆದರಿಸುತ್ತೀಯೋ?"

"ಇಲ್ಲ ಸ್ವಾಮಿ, ಇರೋ ವಿಚಾರ ತಿಳಿಸಿದೆ. ಇದು ಗೊತ್ತಾದರೆ ಮಾನದಿಂದ ಮರುಳೂರಿನಲ್ಲಿ ಬಾಳಬಹುದೆ, ತಾವೇ ಹೇಳೋಣವಾಗಲಿ."

"ಏನು ಉತ್ಸವಕ್ಕೆ ಮುಂಚೆಯೇ ಓಡಿ........"

"ಉಂಟು, ಉಂಟು. ತಮ್ಮ ಸೇವೆ ಪೂರ್ತಿ ಮಾಡೇ. ತಮ್ಮಲ್ಲಿ ನಂಗೆ ಅಷ್ಟು ಕೃತಜ್ಞತೆಯಿಲ್ಲವೆ? ತಂದೆ ಹಾಗೆ ನೋಡಿಕೊಂಡು ಹಿಂದೆ ಸಲಹಿದೀರಿ, ಈಗಲೂ, ಮುಂದೂ...."

" ಹೂಂ........ಎಷ್ಟು ದೇಸಕ್ಕೊಂಡಿದೆ ?"

" ಏನೋ ಏಳೆಂಟು ಸಾವಿರ ಇರಬೇಕು—ಸರಿಯಾಗಿ ಲೆಕ್ಕಮಾಡಿಸಿ ಹೇಳ್ತಿನಿ. ಎಷ್ಟಾದರೂ ಮುಂದಿನ ವರ್ಷ ಮೊದಲು ತಮ್ಮದನ್ನು ತೀರಿಸಿ ಬಿಟ್ಟು ಎರಡನೇ ಕೆಲಸ...."

" ಓಹೋ ಇದನ್ನು ತೀರಿಸಿಕೊಳ್ಳೋದಕ್ಕೆ ಅಧ್ಯಕ್ಷತೆಗೂ ಸಹಾಯ ಮಾಡಬೇಕೋ ?"

"ಇಲ್ಲದಿದ್ದರೆ ನಂಗೇನಿದೆ ಸಾಹುಕಾರ್ರೆ ? ಇಷ್ಟಕ್ಕೂ ಅಧ್ಯಕ್ಷತೇಲಿ ಕುಂದು ಕೊರತೆಗಳು ಇಲ್ಲದ ಹಾಗೆ ನೋಡಿಕೊಳ್ತಾ ಇಲ್ಲವೆ ? ತಮಗೆ ಸಮಾಧಾನವಿಲ್ಲವೆ? ಎಲ್ಲ ತಮ್ಮ ಸಲಹೆ ಸೂಚನೆ ಹಾಗೆ ಚಾಚೂ ತಪ್ಪದೆ...."

" ಅದು ಸರಿ. ಇಲ್ಲ ಅನ್ನಲಿಲ್ಲವಲ್ಲ. "

" ಮತ್ತೆ ತಾವು ಇಷ್ಟು ಕೃಪೆ...."

" ಆಗಲಿ, ನೋಡೋಣ."

" ಧನ್ಯನಾದೆ. ಮಾನ ಪ್ರಾಣ ಎರಡೂ ಉಳಿದುವು. ಇನ್ನು ಉತ್ಸವದ ಕೆಲಸ ನೆಮ್ಮದಿಯಿಂದ ಮಾಡಬಹುದು. "

ಭೋಗಪ್ಪ ಇನ್ನೂ ಏನೇನನ್ನೋ ಮಾತಾಡಿ ಹೋದ. ನಂಜಪ್ಪ ಒಳಗಿನಿಂದ ಬಂದು "ಏನು ಭೋಗಪ್ಪ ಬಹಳ ಮಾತಾಡ್ತಾ ಇದ್ದ ಹಾಗಿತ್ತು? ಊಟಕ್ಕೂ ಬಿಡಲಿಲ್ಲ. ಎಷ್ಟು ಹೊತ್ತಾಯ್ತು. ಏನು ತುಂಬ ಸಂಭ್ರಮವೋ?" ಎಂದು ಕೇಳಿದ.

" ಹುಂ. ಆದರೆ ಅದಕ್ಕಿಂತ ಮುಖ್ಯವಾಗಿ ಅವನು ಗುಂಡಿಗೆ ಬಿದ್ದಿರೋ ದನ್ನ...."

" ಗುಂಡಿಗೆ—ಅವನು ? "

" ಹುಂ, ಬುಡವಿಲ್ಲದ ಬಡಾಯಿ. ದುಡ್ಡು ತಿಂದುಹಾಕಿ ಕಣ್ಣು ಕಣ್ಣು ಬಿಡ್ತಾ ಇದಾನೆ. "

" ಭಿಕ್ಷಕ್ಕೆ ಬಂದಿದ್ದ ಅನ್ನು. "

" ಇನ್ನೇನು " ಸಾಹುಕಾರರು ಊಟಕ್ಕೆ ಎದ್ದರು.

ಮಾರನೆ ಬೆಳಿಗ್ಗೆ ಸಾಹುಕಾರರು ಮೀಸೆಗೆ ಬಣ್ಣ ಹಾಕುತ್ತಿದ್ದಾಗ ನಂಜಪ್ಪ ಅವರ ಕೋಣೆಗೆ ಬಂದ. ಅವರು ಬಣ್ಣ ಮುಗಿಸಿ, ಹತ್ತಿರದ ಬಟ್ಟೆ-

ಲಿನ ನೀರಿನಲ್ಲಿದ್ದ ಕೃತಕ ಹಲ್ಲುಗಳನ್ನು ಸಿಕ್ಕಿಸಿಕೊಂಡು, ನಿಲುವಂಗಿಯನ್ನು ತೊಟ್ಟುಕೊಳ್ಳುತ್ತ, ನಿಲುವುಗನ್ನಡಿಯ ಮುಂದೆ ನಿಂತರು.

"ಏನು ಭಾವ, ಈಗ ಎಷ್ಟೋ ವಾಸಿ, ನೀನು. ಯೌವನವೇ ಹಿಂತಿರಿಗಿದ ಹಾಗಿದೆ."

"ಏನು ಹಾಸ್ಯವೇನೋ ?"

"ಇಲ್ಲ, ಭಾವ. ಎಷ್ಟೋ ವರ್ಷ ಹಿಂದಕ್ಕೆ ಹೋದ ಹಾಗೆ ಕಾಣ್ತೀಯೆ."

"ಹಾಗೇ ? ನಿಜವಾಗಿ ?" ದಪ್ಪ ಹೊಟ್ಟೆಯ ಮೇಲೆ ಗುಂಡಿಗಳನ್ನು ಹಾಕಿಕೊಂಡರು.

"ನಿಜವಾಗಿ."

"ನಂಗೂ ಸ್ವಲ್ಪ ಚೈತನ್ಯ ಹೆಚ್ಚಿದ ಹಾಗೇ ಕಾಣುತ್ತೆ."

"ಇರಬೇಕು. ಮುಖದಲ್ಲೇ ಕಾಣುತ್ತೆ. ಇಷ್ಟಕ್ಕೂ ನಿಂಗೂ ವಯಸ್ಸು ತಾನೆ ಎಷ್ಟು ಮಹಾ? ಐವತ್ತೆರಡೋ ಮೂರೋ ?"

"ಇಲ್ಲ, ಐವತ್ತನಾಲ್ಕು....ಹುಂ" ಸಾಹುಕಾರರು ಮೂರು ವರ್ಷ ಕಡಿಮೆ ಹೇಳಿದರು.

"ಅಷ್ಟು ತಾನೆ ವ್ಯತ್ಯಾಸ ? ಇನ್ನೂ ಯುವಕ ಅಂತ ಇಂಗ್ಲೀಷಿ ನೋರಲ್ಲಿ...."

"ಸಾಕು. ನಾಚಿಕೆಗೇಡು. ನಕ್ಕಾರು."

"ಬೇಡ ಮಧ್ಯ ವಯಸ್ಕ ಅಂದುಕೊ. ಅವರಲ್ಲೇನು ಭಾವ ಅರವತ್ತು ಎಪ್ಪತ್ತರಲ್ಲಿಲ್ಲ ಇನ್ನೂ ಮದುವೆ ಮಾಡಿಕೋತಾ ಇರ್ತಾರೆ. ನಮ್ಮ ಜನವೇ ಮೂವತ್ತಾದರೆ ಮುದುಕ ಅಂತ ಮುಗ್ಗಾಗೋದು. ಅವರ ಕ್ರಮವೇ ಸರಿ. ನಂಗೆ ಮೆಚ್ಚಿಗೆ."

"ಏನು ಅರವತ್ತಕ್ಕೆ ಮದುವೆ ಆಗೋದು ?"

"ಹುಂ. ಏನು ತಪ್ಪು ? ನಮ್ಮಲ್ಲೂ ಎಷ್ಟು ಜನ ಮಾಡಿಕೊಂಡಿಲ್ಲ ?"

"ಏನು ನಾನೂ ಮದುವೆಯಾಗಬೇಕು ಅಂತೀಯೇನು ಹ್ಹ! ಹ್ಹ! ಹಾ!

"ಯಾಕೆ ಆಗಬಾರದು ? ಅದರಲ್ಲಿ ಏನು ವಿನೋದ ? ನಂಗೇನೂ ಕಾಣಲಿಲ್ಲ. ನಿಮ್ಮ ವಂಶ ಗಟ್ಟಿ ವಂಶ. ನಿಮ್ಮ ಅಜ್ಜ ಎಷ್ಟೋ ವರ್ಷದ ವರೆಗೆ....ಎಷ್ಟು ? "

"ಎಂಬತ್ತೈದು'' ಸಾಹುಕಾರರು ಕನ್ನಡಿಯ ಎದುರಿಗೆ ನಿಂತು ಪೇಟ ಕಟ್ಟಲು ಮೊದಲು ಮಾಡಿದರು.

"ನೋಡಿದೆಯಾ, ಎಂಬತ್ತೈದರವರೆಗೆ ಅಂದರೆ ನಿಂಗೆ ಇನ್ನೂ ಮೂವತ್ತು ವರ್ಷವಾದರೂ ಇಸೆಯಲ್ಲ. ಅಲ್ಲಿಯವರೆಗೂ ಒಂಟಿಯಾಗೇ ಇರಬೇಕೆ ? – ಅದೂ ಇಷ್ಟೊಂದು ಚೈತನ್ಯ, ಅವಕಾಶ ಇರಬೇಕಾದರೆ?"

"ಯಾಕೋ ನಂಗೆ" ಸಾಹುಕಾರರು ಎಳೆದು ಹೇಳಿದರು.

"ಯಾಕೆ ಅಂದರೆ ಏನು ಭಾವ ? ಬೇಕು. ನ್ಯಾಯ. ಬೇಕು. ಅದೂ ಅಲ್ಲದೆ,ನಿನ್ನ ದೃಷ್ಟಿಯಿಂದಲೇ ನೋಡೋದು ಬೇಡ. ಮಹಲನ್ನೇ ನೋಡು. ಇಂಥ ಮಹಲಿಗೆ ಒಬ್ಬಳು ಯಜಮಾನಿ ಇಲ್ಲದೆ ಇದ್ದರೆ ಶೋಭಿಸುತ್ತೇ ?— ಕಡೇಗೆ ಅರಿಸಿನ ಕುಂಕುಮ ಕೊಡೋದಕ್ಕೆ ಅಂತ ಇಟ್ಕೊಕೊ. ನಾಳೆ ಕುಸುಮ ಗಂಡನ ಮನೆಗೆ ಹೋಗ್ತಾಳೋ ? ನಿನ್ನ ಮಗ ಮಹರಾಯ ಯಾವಾಗ ಮದುವೆ ಮಾಡಿಕೋತಾನೋ........ಮಾಡಿ ಕೊಳ್ಳೋದೇ...."

"ಹಾಗುಂಟೆ! ಮಾಡಿಕೋತಾನೆ–ಈಗ ಮೊಂಡಾಟ ಮಾಡಿದರೇನು."

"ಆಗಲಿ. ಅದು ಯಾವಾಗಲೋ ಏನೋ ನೆಚ್ಚಿಗೆಯಿಲ್ಲವೋ."

"ಹೌದು ನೆಚ್ಚಿಗೆಯೇನು ಇಲ್ಲ."

"ಮತ್ತೆ ಇನ್ನು ಯಾರಿದಾರೆ. ಈ ಮನೆ ಬಿಕೋ ಅಂತ ಇರಬೇಕೆ- ಅಮ್ಮನೋರು ಇಲ್ಲದ ಗುಡಿ ಹಾಗೆ ?"

"ನಿಜ, ನೀನು ಹೇಳೋದರಲ್ಲೇನೋ ಅಷ್ಟು ಸತ್ಯ ಇದೆ. ಇಲ್ಲ ಅಂತಲ್ಲ. ಆದರೂ...."

"ಏನು ಆದರೂ ? ಏನು ತಪ್ಪು ಅಂತ."

"ತಪ್ಪು ಇದೆ ಅಂತಲೂ ನಾನು ಹೇಳೋದಿಲ್ಲ. ಆದರೂ ಜನ ಏನಂದುಕೊಂಡಾರು ಅಂತ ನೋಡಬೇಡವೆ ?''

"ಏನಂತಾರೆ—ಈ ಮರುಳೂರು ಜನ ? ನೀನೇ ಅವರಿಗೆಲ್ಲ ಮಾದರಿ. ಮರೀಬೇಡ. 'ಅವರಿಗೇನು, ಅಷ್ಟು ಮಾಡಿಕೊಳ್ಳದ ವಯಸ್ಸಾಗಿದೆಯೆ, ಇಷ್ಟಕ್ಕೂ ಅಂಥ ಮನೆಗೆ ಬೇಡವೆ' ಅಂತಾರೆ. ಮಗನ ವಿಷಯ ಯಾರಿಗೆ ಗೊತ್ತಿಲ್ಲ—ನಿನ್ನ ದೂರೋದಕ್ಕೆ ? ನಿನ್ನ ಸ್ಥಿತೀಲಿ ಇನ್ನು ಯಾರಾದರೂ ಇದ್ದಿದ್ದರೆ ಇಷ್ಟು ಹೊತ್ತಿಗಾಗಲೇ...."

"ಛಿ, ಸುಮ್ಮನಿರೋ ಇನ್ನೂ ಅವಳು ಸತ್ತು...."

"ಆಗಲೇ ಮೂರು ತಿಂಗಳ ಮೇಲಾಯ್ತು ಭಾವ. ನಿಂಗೇನೋ ನಿನ್ನೆ ಅನ್ನೋ ಹಾಗಿರಬಹುದು. ಯಾಕೆ, ಅಷ್ಟು ಹಚ್ಚಿಕೊಂಡಿದ್ದೆಯಲ್ಲ, ಅದಕ್ಕೆ. ಆದರೆ ಕಾಲ ಅನ್ನೋದೇನು ಕುಣಿದುಕೊಂಡು ಓಡಿ ಬಂದು ಬಿಡುತ್ತೆ. ಮೂರು ತಿಂಗಳೇನು ಸ್ವಲ್ಪ ಕಾಲವೆ? ಬೇಡ ಇನ್ನೂ ಒಂದೆರಡು ತಿಂಗಳು ಬಿಟ್ಟೇ ಆಯ್ತು."

"ಹುಚ್ಚ, ನಂಗೆ ಯಾರು ಕೊಡ್ತಾರೋ ಹೆಣ್ಣು?"

"ಯಾಕೆ? ಇದೇನು ನಿನ್ನ ಭ್ರಾಂತಿಯೋ ಅಜ್ಞಾನವೊ, ಸಂಕೋಚವೋ, ಉಪಚಾರವೋ ಏನು? ನಮ್ಮ ಸಮಾಜದಲ್ಲಿ ಅದೂ ನಿನ್ನ ಸ್ಥಿತಿಗತಿಯೋರಿಗೆ–ಎಂಥೋರಿಗೂ ಹೇಗಿದ್ದರೂ ಆಗುತ್ತೆ–ಅದರಲ್ಲೂ ನಿನ್ನಂಥೋರಿಗೆ ಹೆಣ್ಣಿಲ್ಲವೆ? ಹುಚ್ಚು. ಸ್ವಲ್ಪ ಸುಳು ತಿಳಿದರೆ ನಾನು ತಾನು ಅಂತ ಮೇಲೆ ಬಿದ್ದು ಬರ್ತಾರೆ."

"ಆ ಕಾಲ ಹೋಗ್ತಾ ಬಂದಿಲ್ಲವೆ ಅಂತ."

"ಬಿಡು ಬಿಡು, ಏನು ಮಾತಾಡ್ತೀಯ. ಅದು ಎಂದೂ ಹಾಗಿರೋದೇ. ಒಪ್ಪೋರು, ಹೆಣ್ಣು, ಕೊಡೋರು, ಎಷ್ಟು ಜನ ಇಲ್ಲ ಅಂತೀಯ? ಎಷ್ಟು ಬೇಕು ಹೇಳು."

"ಯಾರಿಂದಾರೆ ಬಿಡೋ—ಅದೆಲ್ಲ ಕಷ್ಟ. ಕೇಳೋದೂ ಚೆನ್ನಾಗಿಲ್ಲ. ಕೇಳಿ ಇಲ್ಲ ಅನ್ನಿಸಿಕೊಳ್ಳೋದೆ. ಥೂ! ಅದಕ್ಕಿಂತ ಕೇಳದೇ ಇರೋದೇ ವಾಸಿ."

"ಅದು ಯಾಕೆ ನಿಂಗೆ? ನಾನು ನಿನ್ನ ಹೆಸರೇ ಎತ್ತದೆ...."

"ಎಲ್ಲ ಗೊತ್ತಾಗುತ್ತೆ ಕಣೋ."

"ಹಾಗೂ ಆಗಲಪ್ಪ. ಒಂದು ವೇಳೆ ಇಲ್ಲ ಅನ್ನದ ಕಡೆಯೇ ಕೇಳಿದರೋ?"

"ಆಂ!"

"ಹುಂ. ಈ ಭೋಗರಾಜನಿಗೇ ಬೆಳೆದ ಮಗಳಿದಾಳಲ್ಲ. ಅವನಾದರೂ ಬೇರೆ ಹೇಳೋ ಹಾಗಿಲ್ಲವೋ."

"ಅಂ... ಹೂಂ. ಅದೇನೋ ನಿಜ. ಆದರೆ.... ಇನ್ನೂ ತೊಂದರೆಗಳಿರುತ್ತವೆ. ಅದು ಯಾಕೆ ಮಾತು ಈಗ. ಮನಸ್ಸು ಮಾಡಿದಾಗ ತಾನೆ ?"

"ಆ ತೊಂದರೆಯ ಮಾತೆಲ್ಲ ಬಿಡು. ನಾನು ಸಾಧಿಸ್ತೀನಿ-ಬಿಡೋದಿಲ್ಲ. ಒಂಟಿಯಾಗಿ ಒದ್ದಾಡಬೇಡ. ಈ ಮನೆಗೂ ಸ್ವಲ್ಪ ಗೆಲುವು ಬರಲಿ. ಅವಳೂ ಅಂಥ ಐಶ್ವರ್ಯವಂತರ ಮನೆಯೋಳೀನಲ್ಲ...."

"ಸರಿ, ಅವರಿಗೇನಿದೆ ಗತಿ?"

"ಸರಿ ಮತ್ತೆ. ಅಂಥಾ ಹುಡುಗಿಯೂ ಒಳ್ಳೇ ಮನೆ ಸೇರಿಕೊಂಡ ಹಾಗಾಯ್ತು. ಅವಳಿಗೆ ದೊಡ್ಡ ಉಪಕಾರವೇ. ಭೋಗಪ್ಪನಂತೂ ಕುಣೀ-ತಾನೆ ಕೇಳಿದರೆ."

"ಹ್ಹ ! ಹಾ !"

"ಇವತ್ತೇ ವಿಚಾರಿಸ್ತೀನಿ."

"ಆಗಲಿ, ನೋಡೋಣ. ಯೋಚಿಸಿ ಹೇಳ್ತೀನಿ."

"ಯೋಚಿಸೋದು—ಗೀಚಿಸೋದು ಏನೂ ಇಲ್ಲ. ನಿರ್ಧರವಾದ ಹಾಗೇ."

"ಎಲ, ಎಲಾ ! ನಿಂದೊಳ್ಳೆ ಬಲವಂತವಾಯ್ತಲ್ಲೋ. ನಂಗೇ ಬೇಡವಾಗಿದ್ದರೂ. ಹ್ಹ ! ಹಾ !" ಸಾಹುಕಾರರು ಹೀಗೆ ಹೇಳಿದ್ದರೂ ಅವರ ಧ್ವನಿ, ನಗು ಬೇರೆಯ ಅಭಿಪ್ರಾಯವನ್ನು ಸೂಚಿಸುತ್ತಿದ್ದುವು. ನಂಜಪ್ಪನಿಗೆ ಇದು ಗೊತ್ತಾಗುವುದೇನು ಕಷ್ಟವಾಗಲಿಲ್ಲ.

"ನಾನು ಬಿಡೋದಿಲ್ಲ—ನಿನ್ನ ಹುಚ್ಚಿಗೆ. ನಾನು ಮಾಡೋದು ಮಾಡೇ ಮಾಡ್ತೀನಿ."

"ಹುಂ, ನಾನು ದೇವಸ್ಥಾನ ನೋಡಿಕೊಂಡು ಬರಬೇಕು" ಸಾಹುಕಾರರು ಆ ವಿಷಯದ ಬಗ್ಗೆ ಮೌನವಾಗಿದ್ದರು. ಆದರೆ ಅದು ಅರ್ಥಪೂರ್ಣವಾದ ಮೌನ. ಕೋಟು ಪೇಟಗಳನ್ನು ಹತ್ತನೆಯ ಬಾರಿಗೆ ಸರಿಮಾಡಿಕೊಂಡು ಹೊರಟರು.

"ನಾನೂ ಬರ್ತೀನಿ ಆಕಡೆಯೇ" ನಂಜಪ್ಪನೂ ತನ್ನ ಕೆಲಸದ ಸೂಚನೆ ಕೊಟ್ಟಂತೇ ಹೇಳಿದ.

"ಬಾ, ಮತ್ತೆ. ಬೇಗ."

ಇಬ್ಬರೂ ಹೊರಟರು.

ನಂಜಪ್ಪನಿಗೆ ಭೋಗಪ್ಪನ ಮನೆಯಲ್ಲಿ ಸುಸ್ವಾಗತ ಸಿಕ್ಕಿತು. ತಿಂಡಿ ಕಾಫಿಗಳಾದುವು. ಕಾಫಿಯನ್ನು ಭೋಗಪ್ಪನ ಮಗಳು ಶಾಂತಳೇ ತಂದು ಕೊಟ್ಟು ಉಪಚರಿಸಿದಳು. ಇದೇ ಸಮಯವನ್ನೇ ನಂಜಪ್ಪ ಉಪಯೋಗಿಸಿ ಕೊಂಡು ಹುಡುಗಿ ಮರೆಯಾದ ಮೇಲೆ. "ಶಾಂತಾಗೆ ಮದುವೆಯಾವಾಗ ?" ಎಂದು ಮೊದಲು ಮಾಡಿದ.

"ಎಲ್ಲಿ ನಂಜಪ್ಪನೋರೆ, ಗಂಡು ಸಿಕ್ಕಿದ ಮೇಲೆ ತಾನೆ? ಹುಡುಕ್ತಾ ಇದೀನಿ", ಭೋಗಪ್ಪ ಆತಂಕದಿಂದ ಹೇಳಿದ.

"ಯಾಕೆ ? ಅವಳಿಗೇನು ಗಂಡು ಸಿಗದೆ—ಝೋಕಾಗಿದಾಳೆ. ಒಳ್ಳೇ ಮನೆತನ, ಸಿರಿವಂತರ ಮನೆತನವೇ ಸಿಗುತ್ತೆ."

"ಹುಂ, ಅಂಥಾದ್ದು ಎಲ್ಲಿದೆ? ಅಂಥಿಂಥಾದ್ದಕ್ಕೆ ಕೊಡೋದಕ್ಕೆ ನಂಗೆ ಇಷ್ಟವಿಲ್ಲ. ನಮ್ಮ ಮನೆತನವೂ ಏನು ಸಣ್ಣದಲ್ಲ. ಯಾವುದಕ್ಕೂ ಕಡಿಮೆ-ಯಾದ್ದಲ್ಲ. ಕಾಶ್ಯಪರಿಗೆ ಹೋಗುತ್ತಂತೆ 'ಬೇರು. ನಮ್ಮೋರೆ ಮೊದಲು ಭೂಮಿಗೆ ಒಡೆಯರಾಗಿದ್ದದ್ದು. ನಮ್ಮ ರಕ್ತ ಹೆಸರುವಾಸಿಯಾದದ್ದು. ನಮ್ಮ ಪೂರ್ವಿಕರು ಪಾಳೇಗಾರರಲ್ಲಿ ದಿವಾನಗಿರಿ ಮಾಡಿದ್ದಾರೆ. ನಾನಾದರೂ, ಗೊತ್ತಲ್ಲ, ಭೋಗೇಶ್ವರ ದೇವರ ಪ್ರಸಾದವಾಗಿ ಹುಟ್ಟಿದೋನು. ನಮ್ಮಮ್ಮ ಹರಕೆ ಹಾಕಿಕೊಂಡಿದ್ದು. ಭೋಗರಾಜ ಅಂತಲೇ ಹೆಸರಿಟ್ಟಳು. ಈಗೇನೋ ಜನ ಭೋಗಪ್ಪ ಅಂತ ಪ್ರೀತಿಯಿಂದ ಮೊಟಕು ಮಾಡಿದಾರೆ ಅನ್ನಿ."

"ಹೌದು, ಹೌದು. ನಾ ಬಲ್ಲೆ. ಹಿಂದೇ ಹೇಳೀದೀರಲ್ಲ.

"ಮತ್ತೆ, ನೋಡಿದಿರಾ."

"ಇಂಥ ವಂಶ 'ಮರ್‍ಯಾದೆ' ವಂಶದಷ್ಟೇ ಶ್ರೇಷ್ಠ."

"ಹೌದು, ಹೌದು" ಸಾಹುಕಾರರ ಕಡೆಯವರಲ್ಲದೆ ಬೇರೆ ಯಾರಾದರೂ ಹೇಳಿದ್ದರೆ "ಆದಕ್ಕಿಂತಲೂ ಪುರಾತನ. ನನ್ನ ಬಳಿ ಸಾಕ್ಷಿ ಇದೆ" ಎಂದು ಹೇಳುತ್ತಿದ್ದ. ಆದರೆ ಈಗ ಸುಮ್ಮನೆ ಒಪ್ಪಿಕೊಂಡ.

"ಹಾಂ! ಅಂದ ಹಾಗೇ ಈ ಎರಡು ಮನೆತನವೇ ಯಾಕೆ ಕೂಡಬಾರದು ?"

" ಏನು! " ಭೋಗಪ್ಪನ ಆಶ್ಚರ್ಯ ಅವನನ್ನೇ ಮೋಸಪಡಿಸಿ ಮುಂದಕ್ಕೆ ಬಂದುಬಿಟ್ಟಿತು.

" ಹೂಂ. ಯಾಕಾಗಬಾರದು? "

" ಹೌದು, ಹೌದು. ಯಾಕಾಗಬಾರದು. ಅಂದರೆ ಅವರು ಬಹಳ ಪುಣ್ಯವಂತರು. ಅಷ್ಟೇ........ "

" ಅಂಥಾದ್ದೆ ಎಲ್ಲಿ ಸಿಕ್ಕುತ್ತೆ ಭೋಗಪ್ಪನೋರೆ ಅವರದ್ದು ಅಂದರೆ ಕೇವಲ ವಿಶೇಷ. ಇಷ್ಟಕ್ಕೂ ತಮ್ಮದು ಏನು ಕಡಿಮೆ? ಹಣವೇ ಮುಖ್ಯವೆ? "

" ಏನಿಲ್ಲ ಅನ್ನಿ. ಅವರೂ ಹಾಗೆ ನೋಡೋದಾದರೆ ನಾನು ಪುಣ್ಯವಂತನೇ ಸರಿ. "

" ನಿಮಗೂ ಮನಸ್ಸಿದ್ದರೆ ಭಾವನ ಹತ್ತಿರ.... "

" ಮನಸ್ಸಿರೋದೆ. ಧಾರಾಳವಾಗಿ. ಆದರೆ ಅವರ ಮಗನೇನೋ ವಿಚಿತ್ರವಾಗಿದಾನಲ್ಲ. ಮದುವೆ ಬೇಡ ಅಂತಾನಂತೆ? "

" ಮಗ ಇಲ್ಲದೆ ಇದ್ದರೆ ಅಪ್ಪನೇ ಆಯ್ತು. "

" ಏನೂ! ಸಾಹುಕಾರರೇ ? "

" ಹುಂ. ಯಾಕಾಗಬಾರದು ? "

" ಅವರು ಮತ್ತೆ ಮಾಡಿಕೋತಾರೇ ? "

" ಎಲ್ಲ ಮಾಡಿಕೋತಾನೆ—ಸರಿಯಾದ ಕಡೆ ಸಿಕ್ಕಿದರೆ. "

" ಈ ವಯಸ್ಸಿನಲ್ಲಿ ? "

" ಏನು ಮಹಾ ವಯಸ್ಸು ? ಎಷ್ಟು ಜನ........ "

" ಅದೇನೋ ಸರಿಯೆ ಅನ್ನಿ " ಭೋಗಪ್ಪ ಯೋಚಿಸಿದ. ನಂಜಪ್ಪನನ್ನು ಸಾಹುಕಾರರೇ ಕಳುಹಿಸಿರಬೇಕೆಂದು ಊಹಿಸಿದ. ಅವನಿಗೆ ಯಾವ ಉತ್ತರ ಕೊಡಬೇಕೆಂಬುದು ಹೊಳೆಯಲಿಲ್ಲ. ಇಷ್ಟವಿಲ್ಲವೆಂದು ತೋರಿಸಿಕೊಂಡರೆ ಹೇಗೋ. ಸಾಹುಕಾರರ ದಾಕ್ಷಿಣ್ಯದ ಹೊರೆ ಬಹಳವಿತ್ತು. ಕಡೆಯದಾಗಿ ಈಗ ಕೊಡಲು ಒಪ್ಪಿದ್ದ ಸಾಲ. ಅದಿಲ್ಲದೆ ತನ್ನ ಗತಿಯೇನು? ನೆನೆಸಿಕೊಂಡರೇ ಅವನ ಮೈ ನಡಗುತ್ತಿತ್ತು. ಅಲ್ಲದೆ ಅವರ ವಿರೋಧವೆಂದರೆ ಅಧ್ಯಕ್ಷತೆ ಸಿಕ್ಕದಿರುವುದು ಹೋಗಲಿ, ಊರಿನಲ್ಲೇ ಇರದಂತೆ ಬೇಕಾದರೂ ಆಗಬಹುದಾಗಿತ್ತು ರಾಜ ಪ್ರಜೆಯಾದವನಿಗೆ ಮಗಳನ್ನು ಕೊಡು.

ತ್ತೀರ ಎಂದು ಕೇಳಿದ ಉಪಚಾರದ ಮಾತಿನ ಹಾಗೆ ಇದು. ತಾನೇನು ಮಾಡಬೇಕು? ಅಲ್ಲದೆ ಮಗನ ಸಂಬಂಧ ಹೆಚ್ಚು ಇಷ್ಟವಾದದ್ದಾದರೂ ಇದೇನು ಬೇಡವೆನ್ನುವಂತಿತ್ತೆ? ' ಮರ್ಯಾದೆ ಮನೆಯ ಸಂಬಂಧ! ಏನು ಗೌರವ! ಇದರ ಮೇಲೆ ಅದೇನು ಸಿರಿ ವೈಭವ! ತಾನು ಬದುಕಿ ಹೋಗುವ ವಿಷಯ. ಆದರೂ ತನ್ನ ಮಗಳು, ಶಾಂತಾ? ಸಾಹುಕಾರರು ಮುದುಕರೇ? ನಂಜಪ್ಪ ಏನಂದರೇನು. ಇದೊಂದೇ ಸ್ವಲ್ಪ ಹಿಂದಕ್ಕೆ ಹಿಡಿದೆಳೆಯುತ್ತಿತ್ತು. ಎಷ್ಟಾದರೂ ತಂದೆಯಲ್ಲವೇ. ಆದರೂ ಅನುಕೂಲಗಳ ತೂಕ ಅಷ್ಟೊಂದು. ಅವನ ಮನಸ್ಸು ಸ್ಥಿರವಾಗಿ ನಿಂತಿರಲಿಲ್ಲ

" ಏನು ಯೋಚಿಸ್ತಾ ಇದೀರಿ ಭೋಗಪ್ಪನೋರೆ? "

" ಏನಿಲ್ಲ. ನನ್ನ ಮಗಳು ಎಷ್ಟಾದರೂ ಹುಡುಗಿ........"

" ಯಾಕೆ, ನಿಮ್ಮ ಮಾತಿಗೆ ಇಲ್ಲ ಅಂತಾಳೆ ಅಂತಲೇ?"

" ಛೀ! ಛೀ! ನಾನು ನಿರ್ಧರವಾಗಿ ಹೇಳಿದರೆ ಏನಂತಾಳೆ. ಕೇಳಲೇ ಬೇಕು. ನಾನು ಮಕ್ಕಳನ್ನ ಹಾಗೆ ಹೀಗೆ ಬೆಳೆಸಿಲ್ಲ. ನಯದಿಂದ ಆಗದೇ ಇದ್ದರೆ ಭಯದಿಂದಲಾದರೂ ಬಗ್ಗಿಸಬಲ್ಲೆ ಅನ್ನಿ. ಹಾಗೆ ಹುಡುಗಿ ಕೈಬಿಟ್ಟು ಹೋಗದೆ ಇರಲಿ ಅಂತಲೇ ಹೆಚ್ಚು ಓದಿಸಿಯೂ ಇಲ್ಲ. "

" ಸರಿ ಮತ್ತೆ. ಇನ್ನೇನು, ತಮಗೇ ಯೋಚನೆಯೋ ? "

" ಇಲ್ಲಾ ಅವಳ ದೃಷ್ಟಿಯಿಂದ........ "

" ಅವಳಿಗೇನು ಕಡಿಮೆಯಾಗುತ್ತೆ ಭೋಗಪ್ಪನೋರೆ? ನಿಜವಾದ ವಿಷಯ ಹೇಳಿಬಿಡಲೇನು, ಎಲ್ಲ ವೇಷಾನೂ ಕಿತ್ತೊಗೆದು? ನಮ್ಮ ನಿಮ್ಮಲ್ಲೇ ಇರಬೇಕು— ಮಾತ್ರ. ತಾವು ತಿಳಿವಳಿಕಸ್ತರು ಅಂತ........ "

" ಓಹೋ, ಅದಕ್ಕೇನು. ನನ್ನಲ್ಲಿ ಗುಟ್ಟು ಅಂದರೆ ಬ್ಯಾಂಕಿನಲ್ಲಿ ಸೇಫ್ ಡಿಪಾಜಿಟ್ ಇಟ್ಟ ಹಾಗೆ. ಹ್ಞಾ! "

" ಕೇಳಿ, ಭಾವ ನಿಜವಾಗಿಯೂ ಮುದುಕನೇ ಅನ್ನಿ. ಆಗಲೇ ಒಂದು ಸಾರಿ ಹೊರ ರಕ್ತ ಕೊಟ್ಟು ಹೇಗೋ ನಿಲ್ಲಿಸಿದಾರೆ ಹೆಚ್ಚು ದಿನ ಇರಲಾರ— ಹತ್ತೆಂಟು ಕಾಹಿಲೆ ತಾಪತ್ರಯದ ಮನುಷ್ಯ. ಆ ಹುಡುಗನೋ ಶುದ್ಧ ಪೆಂಗಿ; ಹುಚ್ಚ ಅಂತಲೇ ಅನ್ನಬಹುದು. ಅವನಿಗೆ ಯಾವುದೂ ಬೇಡ—ಮನೆ ಮಠ ಆಸ್ತಿಪಾಸ್ತಿ ಹೆಂಡತಿ ಮಕ್ಕಳು ಒಂದೂ. ಈಗಲೂ ಹೊರಗಿನೋನ ಹಾಗೇ

ಇದಾನೆ. ಮನೇಲಿ ಊಟ ಕೂಡ ಮಾಡೋದಿಲ್ಲ. ಹೆಸರಿಗೆ—ಅಪ್ಪನ ಮರ್ಯಾದೆ ಹೋಗದೆ ಇರಲಿ ಅಂತ ಅಲ್ಲೇ ಇದಾನೆ. ಅವನು ಮದುವೇನೂ ಮಾಡಿಕೊಳ್ಳೋದಿಲ್ಲ. ಸೋದರವಾವನ್ನೇ ಹೊತ್ತುಕೊಂಡಿದಾನೆ—ಇದ ರಲ್ಲಿ ಮಾತ್ರ. ಮಾಡಿಕೊಂಡರೂ—ನಮ್ಮ ತಂಟೆಗೆ ಬರೋದಿಲ್ಲ ಇದು ವಿಚಿತ್ರ. ಆದರೆ ಖಂಡಿತ. ಅವನು ಯಾವಾಗ ಏನು ಮಾಡ್ತಾನೋ ಎಲ್ಲಿ ಓಡಿಹೋಗ್ತಾನೋ, ಇರ್ತಾನೋ, ಇಲ್ಲವೋ—ಕಡೆಗೆ. ನಾ ಕಂಡು ಕೇಳಿ ಅವನ ಹತ್ತಿರ ಬಹಳ ಮಾತಾಡಿ ಈ ನಿರ್ಧರಕ್ಕೆ ಬಂದಿರೋದು. ಆಂದ ಮೇಲೇನು? ಅಷ್ಟೊಂದು ಬೆಟ್ಟದಂಥ ಆಸ್ತಿಯೆಲ್ಲ ಇನ್ನು ಯಾರ ಪಾಲು? ಅವಳು ರಾಣಿಯ ಹಾಗೆ—ರಾಣಿ, ಗೊತ್ತಾಯ್ತೆ?—ಇರಬಹುದು, ಬೇಕಾದ ಹಾಗೆ. ಅವಳಿಗೆ ಯಾತಕ್ಕೆ ಏನು ಕಡಿಮೆ? ಯಾರೇನು ಕೇಳ್ತಾರೆ? ಹೇಳ್ತಾರೆ? ಅವಳ ತಂದೆಯಾಗಿ ತಾವೂ ಬದುಕಿ ಹೋಗ್ತೀರಿ - ಕ್ಷಮಿಸಿ, ಅವವ ರ್ಯಾದೆ ಅಂತ........" "ಏನಿಲ್ಲ, ಏನಿಲ್ಲ" ಭೋಗಪ್ಪ, ನಂಜಪ್ಪ ಬಡಿಸುತ್ತಿದ್ದ ಭಕ್ಷ್ಯ ಭೋಜ್ಯದ ಔತಣವನ್ನು ಕಂಗಾಳಿಯಂತೆ ಚಪ್ಪರಿಸುತ್ತಿದ್ದ. ತನಗೆ ತಿಳಿದ ಮಟ್ಟಿಗೆ ನಂಜಪ್ಪನ ಎಣಿಕೆ ಸರಿಯಾಗಿದ್ದಂತೆ ತೋರಿತು. ಇದಿರಿಸಲಾರದ ಆಕರ್ಷಣೆಯೋ, ಭಯದ ಬಲವಂತವೋ ಅಂತೂ ಇತ್ತ ವಾಲಿದ.

"ಮತ್ತೆ, ಇನ್ನೇನು ಅಡ್ಡಿ? ಹೇಳಿ."

"ಏನಿಲ್ಲ ಏನೋ ಸ್ವಲ್ಪ ಅನುಮಾನಿಸಿದ್ದೆ ಅಷ್ಟೆ ಆದರೆ ಸಾಹು ಕಾರರು ಒಪ್ಪುತ್ತಾರೇ ಅಂತ"? ಅವನಿಗೆ ಇದು ಊಹೆಯಿಂದ ತಿಳಿದಿದ್ದರೂ ಸ್ಪಷ್ಟವಾಗಿರಲಿಲ್ಲ.

"ಅದು ನಂಗಿರಲಿ ಬಿಡಿ. ನೋಡೋಣ."

ಭೋಗಪ್ಪನ ಸಂಶಯ ಹೋಯಿತು.

"ಶಾಂತಾನ ಒಡಂಬಡಿಸ್ತೀರಿ ತಾನೆ?"

"ಅದೇನು ಆಯ್ತು ಅಂತ ಇಟ್ಟುಕೊಳ್ಳಿ. ತಂದೆಯ ಮಾತು ತೆಗೆದು ಹಾಕೋ ಹುಡುಗೀನೆ ಅಲ್ಲ. ಇಷ್ಟಕ್ಕೂ ಅವಳಿಗೇನು ತಿಳಿಯೋದಿಲ್ಲವೆ? ಅಂತೂ ನಾಳೆ ನಿಮಗೆ ತಿಳಿಸ್ತೀನಿ."

ಮಾರನೆಯ ದಿನ ಒಪ್ಪಿಗೆಯ ಸುದ್ದಿ ಬಂತು. ನಂಜಪ್ಪನ ಇಷ್ಟದಂತೆ ಭೋಗಪ್ಪನೇ ಬಂದು ವಾಡಿಕೆಯಂತೆ ಸಾಹುಕಾರರನ್ನು ಪ್ರಾರ್ಥಿಸಿಕೊಂಡ.

ಅವರು ಕೂಡಲೇ ಒಪ್ಪಲಿಲ್ಲ. ನಂಜಪ್ಪ ಭೋಗಪ್ಪ ಬೇಕಾದಷ್ಟು ಒತ್ತಾಯ ಮಾಡಿದ ಮೇಲೆ " ನಂಗೇನೋ ಸುತರಾಂ ಇಷ್ಟವಿರಲಿಲ್ಲ. ನಿಮ್ಮ ಬಲವಂತ ಕ್ಕಾಗಿ, ಹುಡುಗಿಗೆ ಒಂದು ಒಳ್ಳೇ ಮನೆ ಸಿಕ್ಕಲಿ ಅಂತ ಒಪ್ಪಿಕೋಬೇಕಾಗಿದೆ. ಹುಂ, ಇಷ್ಟಕ್ಕೂ ಮಾಡೋದಕ್ಕೆ ಬಿಡೋದಕ್ಕೆ ನಾವು ಯಾರು? ಎಲ್ಲ ಭಗವಂತನ ಕೈಯಲ್ಲಿದೆ. ಅವನು ಮಾಡಿಸಿದ ಹಾಗೆ, ಅವನ ಲೆಕ್ಕ, ಲೀಲೆ ಎಲ್ಲ. " ಎಂದರು.

ಸಂಬಂಧ ತೀರ್ಮಾನವಾದ ಮೇಲೆ ನಂಜಪ್ಪನೇ ಗುಟ್ಟಿಟ್ಟುಕೊಳ್ಳು ವವನು, ಅಥವ ಭೋಗಪ್ಪನೋ. ಮುಂದಿನ ನಿಮಿಷದಲ್ಲೇ ನಂಜಪ್ಪ ಮಹಲಿ ನಲ್ಲೆಲ್ಲ ಪ್ರಕಟಿಸಿ ಮದುವೆಯನ್ನೂ, ಮುಂದನ್ನೂ ನೆನೆದು ಕುಣಿಕುಣಿ ದಾಡಿದ. ಕುಸುಮ ಕೇಳಿ ತಲೆ ತಲೆ ಚಚ್ಚಿಕೊಂಡು " ಅಯ್ಯೋ ಅಪ್ಪನಿಗೆ ಏನು ಬುದ್ಧಿ ಬಂದಿದೆ. ಯಾರೂ ಬುದ್ಧಿ ಹೇಳೋರಿಲ್ಲವಲ್ಲ. ಇರೋನು ಒಬ್ಬ ಮಾವನೂ ಸಹಾಪರಾಧಿ ಅಥವ ಮೂಲಾಪರಾಧಿಯೋ. ಇದೇನು ಆ ಹಾಳು ಕೇಡಿಯ ರಕ್ತವೋ ? ಮಗನಿಗೆ ಮದುವೆ ಮಾಡೋದು ಬಿಟ್ಟು ನನ್ನ ವಯಸ್ಸಿನ ಹುಡುಗೀನ.... ... ಶಿವ ! ಶಿವ !.... ....ಇದನ್ನೆಲ್ಲ ಹೇಗೆ ಹೇಳೋದು ನೇರವಾಗಿ....ಅವರವರೇ ತಿಳಿದುಕೊಳ್ಳಬೇಕಾದ್ದನ್ನ " ಎಂದು ಕೊಂಡು ನೊಂದಳು. ಸದಾಶಿವ " ಹೂಂ, ಹಾಗಾದರೆ ಇನ್ನೊಬ್ಬಳು ಯಜ ಮಾನಿಕೆ ಮಾಡೋದಕ್ಕೆ ಬರ್‍ತಾಳೋ ? ಎಂಥೋಳೋ ಏನೋ! " ಎಂದು ಕೊಂಡು ಅಸೂಯೆ ಭಯಗಳನ್ನು ಹೊಂದಿದ ಗುರುವಿಗೆ ಕಾಫಿ ಕೊಡುತ್ತ " ಕೇಳಿದೆಯಾ ಮಗು ? " ಎಂದು ಸಮಾಚಾರವನ್ನು ತಿಳಿಸಿದ. ಗುರು ಗಾಬರಿಯಾದ. ಕುಡಿಯುತ್ತಿದ್ದ ಕಾಫಿ ನೆತ್ತಿಗೆ ಹತ್ತಿತು. ಬಟ್ಟಲಿನಿಂದ ಚೆಲ್ಲಿತು. " ನಿಜವೇ! ನಿಜವೇ? " ಎಂದು ನಾಲ್ಕು ಸಾರಿ ಕೇಳಿದ. ಸಂಶಯ ಹೋದ ಮೇಲೆ ತೀಕ್ಷ್ಣವಾಗಿ ಯೋಚಿಸಿದ. ಕಡೆಗೆ " ಹುಂ, ಇದೇನು ಮದುವೆಯಲ್ಲ, ಸಂಗವಲ್ಲ. ಹೆಣ್ಣನ್ನು ಕೊಳ್ಳೋದು—ತೀರ ಕೆಟ್ಟತರಹ. " ಎಂದುಬಿಟ್ಟ. ಸಾಹುಕಾರರು ಹುಬ್ಬುಗಂಟಿಕ್ಕಿ " ಯಾವುದು ? " ಎಂದು ಕೇಳಿದರು. ಸದಾಶಿವ ಮೆಲ್ಲನೆ " ಈ ಮದುವೆ " ಅಂದ. ಸಾಹುಕಾರರು ರೇಗಿ " ಈ ವಿಚಾರಕ್ಕೆಲ್ಲ ನೀನು ಯಾಕೆ ತಲೆ ಹಾಕಿಕೊಂಡು ಬರ್‍ತೀಯೆ ? ನಿನ್ನ ಕೆಲಸ ನೀನು ನೋಡು. " ಎಂದು ಗದರಿಸಿ, ಸುಮ್ಮನಿರಲಾರದೆ "ಹುಂ,

ಅವನ್ನ ಯಾರು ಕೇಳ್ತಾರೆ. ಅವನ ಬಾಳು ನೆಟ್ಟಗೆ ಮಾಡಿಕೊಂಡರೆ ಸಾಕಾಗಿದೆ. ನಾನೇನು ಸೂಳೆಗಾರಿಕೆ ಮಾಡುತ್ತಿಲ್ಲ, ಅಥವ ಸೂಳೇನ ಮದುವೆ ಮಾಡಿಕೋತಾ ಇಲ್ಲ. ಹುಂ, ಮತ್ತೆ ಅವನ ಹತ್ತಿರ ಇದನ್ನೆಲ್ಲ ಹೇಳಬೇಡ. ಹಾಳಾಗಿ ಹೋಯ್ತಲ್ಲ ಅದು. ಮತ್ತೇಕೆ ಮಾತು. ಗೊತ್ತಾಯ್ತೆ?" ಎಂದು ಪೂರೈಸಿದರು. ದಾಸ ಕಸಗುಡಿಸುತ್ತಿದ್ದಾಗ ಗುರು "ಏನು ದಾಸ, ಹೊಸ ಯಜಮಾಂತಿ ಬರ್ತಾರಂತಲ್ಲ?" ಅಂದ. ದಾಸ ಏನೂ ಹೇಳಲಿಲ್ಲ. ಕೇಳದಂತೆ ಗುಡಿಸುತ್ತಲೇ ಇದ್ದ. ಗುರು "ಏನಂತೀಯ ?" ಎಂದು ಒತ್ತಾಯಪಡಿಸಿದ. "ಅಪ್ಪ, ನಾನು ಎಷ್ಟಾದರೂ ದಾಸ, ದಣಿಯೋರ ಮಾತು ನಂಗೆ ತಡೀತವೇ ?" ಎಂದು ಮರು ಪ್ರಶ್ನೆ ಕೇಳಿದ. ಗುರು ಸುಮ್ಮನಾದ.

## ೧೬

* * *

ಮೂರು ಮಂತ್ರಿಗಳು ಪರಿವಾರದೊಡನೆ ಆರು ಕಾರುಗಳಲ್ಲಿ ಬಂದು ಸಾಹುಕಾರರಲ್ಲಿ ಬಿಡಾರ ಮಾಡಿದರು. ಆಗಲೇ ಗುರುಗಳು ಬಂದಿದ್ದರು. ಇಷ್ಟು ಮಂತ್ರಿಗಳು ಬಂದರೆ ಎಷ್ಟು ಅಧಿಕಾರಿಗಳು ಬರಬೇಕು ? ಡಿಸ್ಟ್ರಿಕ್ಟಿನ ಮುಖ್ಯಾಧಿಕಾರಿಗಳೂ ಅವರ ನೌಕರ ವರ್ಗದವರೂ ಬಂದಿಳಿದರು. ಮರುಳೂರೇ ಈಗ ಅಧಿಕಾರ ಕೇಂದ್ರವಾಯಿತು. ಹಿಂದೆ ಈ ಅಧಿಕಾರಿಗಳು ಬಂದರೆ ಮಹಲಿನಲ್ಲೇ ಉಳಿಯುತ್ತಿದ್ದರು. ಈಗ ಬೇರೆ ಬೇರೆ ಕಡೆಗಳಿಗೆ ಹಂಚಿಕೊಂಡರು. ವಸಂತ ಸಾಹಿತ್ಯೋತ್ಸವಕ್ಕೆ ಸಾಹಿತಿಗಳೂ ಬಂದರು. ಆದರೆ ಅವರು ಶಾಮಯ್ಯಂಗಾರಿಯ ಮನೆಯಲ್ಲಿದ್ದರು.

ಮಹಲು ಗಿಜಿಗಿಜಿಗುಟ್ಟುತ್ತಿತ್ತು. ಇಷ್ಟೊಂದು ಗಣ್ಯ ಮಹನೀಯರು, ಮೇಲಾಗಿ ಗುರುಗಳು ಬಂದಿರುವಾಗ ಸಾಹುಕಾರರ ಸಡಗರವನ್ನು ಕೇಳಬೇಕೆ ? ಮನೆಯವರೆಲ್ಲ ಅವರೆಲ್ಲಿ ಮತ್ತೆ ಕಾಹಿಲೆ ಬಿದ್ದುಬಿಡುತ್ತಾರೋ ಎಂದು ಬೆದರಿದರು. ಇಷ್ಟೊಂದು ಜನ ಪ್ರಮುಖರು ಏಕಕಾಲದಲ್ಲಿ ಬಂದಾಗ

ಎಲ್ಲರನ್ನೂ ಸಾಹುಕಾರರು ಒಂದೇ ರೀತಿ ನೋಡಿಕೊಳ್ಳುವುದು ಹೇಗೆ ಸಾಧ್ಯ ? ಎಲ್ಲರನ್ನೂ ಚೆನ್ನಾಗಿ ನೋಡಿಕೊಂಡರೂ ಅವರು ಪಿ. ಡಬ್ಲ್ಯು. ಡಿ. ಮಂತ್ರಿವರ್ಯ ಮಂಗೇಶಪ್ಪನವರ ಕಡೆಗೇ ಹೆಚ್ಚು ವಾಲಿದ್ದರು. ಮಂಗೇಶಪ್ಪ ನವರು ಮಂತ್ರಿಶ್ರೇಣಿಯಲ್ಲಿ ಎರಡನೆಯವರು. ಅಲ್ಲದೆ ಇವರು ಅತಿ ದಕ್ಷರಾ ಗಿದ್ದುದರಿಂದ, ಮುಖ್ಯ ಮಂತ್ರಿಗಳನ್ನೂ ಹಿಂದುಳಿಸಿ ವಿಶೇಷ ಪ್ರಸಿದ್ಧಿಗೆ ಬಂದಿ ದ್ದರು. ಸರಕಾರದಲ್ಲೆಲ್ಲ ಇವರ ಕೈವಾಡವೇ ಹೆಚ್ಚೆಂದು ಜನರು ಹೇಳಿ ಕೊಳ್ಳುತ್ತಿದ್ದರು. ಹೀಗಿದ್ದು ಸಾಹುಕಾರರು ಇವರಿಗೇ ಹೆಚ್ಚು ಗಮನ ಕೊಡು ತ್ತಿದ್ದುದರಲ್ಲಿ ಆಶ್ಚರ್ಯವಿರಲಿಲ್ಲ. ಇವರು ಇಷ್ಟೊಂದು ಕಷ್ಟಪಟ್ಟು ಮಂತ್ರಿ ವರ್ಯ, ಗುರುವರ್ಯರ 'ಆಜೂಜುವಾರಿ' ಮಾಡುತ್ತಿದ್ದರೂ, ಮಗ ಇದರಲ್ಲಿ ಸ್ವಲ್ಪವೂ ಆಸಕ್ತಿಯನ್ನು ತೋರಿಸದೆ, ತಮಗೆ ಸಹಾಯವಾಗದೆ, ಅದೂ ಬೇಡ, ಲೌಕಿಕದ ಔಚಿತ್ಯಕ್ಕಾದರೂ ಅಲ್ಲಲ್ಲಿ ಸುಳಿದಾಡದೆ ಎಲ್ಲೆಲ್ಲೋ ಇದ್ದು ಬಿಡುತ್ತಿದ್ದನೆಂದು ಸಾಹುಕಾರರಿಗೆ ದೊಡ್ಡ ಕೊರಗು. ಅವರ ಸಂತೋಷ ಉತ್ಸಾಹಗಳ ಕೊಡದಲ್ಲಿ ಇದು ದೊಡ್ಡ ತೂತು. ಹಿಂದೆ ಕಾಹಿಲೆಯ ಕಾಲ ದಲ್ಲಿ ಕಂಡಿದ್ದ ಅವನ ವಿಶ್ವಾಸ, ಆತ್ಮೀಯತೆ, ಸಲಿಗೆಗಳು ಹಾಗೇ, ಇಲ್ಲವೆ ಅಷ್ಟಿಷ್ಟಾದರೂ ಉಳಿದೀತೆಂದು ಆಶಿಸಿದ್ದರು, ಅದಕ್ಕಾಗಿ ಪ್ರಾರ್ಥಿಸಿದ್ದರು. ಆದರೆ ಇವರು ಚೇತರಿಸಿಕೊಂಡ ಹಾಗೆಲ್ಲ ಅವು ಕಳೆದು ಹೋಗುತ್ತ ಬಂದು ಈಗ ಮಾಯವೇ ಆಗಿದ್ದುವು. ಮಗ, ತೋಳು ಹತ್ತಿರದಿಂದ ಮೈಲಿಮೈಲಿಗಳ ಮೊದಲಿನ ದೂರಕ್ಕೇನೆ ಹೋಗಿಬಿಟ್ಟಿದ್ದ. ಇಂತಹ ಸಂಭ್ರಮದ ಕಾಲದಲ್ಲೂ ಅವನು ಮನೆಯನ್ನೇ ಸೇರುತ್ತಿರಲಿಲ್ಲ. 'ಊರಿಗೆ ಊರೇ ನನ್ನ ಬೆಲೆ ತಿಳಿದು ಇಷ್ಟೊಂದು ಗೌರವಿಸುತ್ತೆ; ಎಂಥೆಂಥ ಏರ್ಪಾಡು ಮಾಡುತ್ತಿದೆ. ಸರಕಾರ ದಲ್ಲಿಯೂ ನಂಗೆ ಎಷ್ಟು ತೂಕವಿದೆ. ಮಂತ್ರಿಗಳೇ ಮನೆಯಲ್ಲಿ ಇಳಿದಿದಾರೆ, ಸದರವಾಗಿ ಮಾತಾಡುತ್ತಾರೆ; ಕೇಳಿದ್ದನ್ನ ಮಾಡಿಕೊಡ್ತಾರೆ; ಇನ್ನೂ ಮಾಡೋದಕ್ಕೆ ಸರ್ವದಾ ಸಿದ್ಧವಾಗಿದಾರೆ; ಗುರುಗಳು ಕೂಡ ಎಷ್ಟು ವಿಶ್ವಾಸ ದಿಂದ ಇದಾರೆ. ನಮ್ಮಲ್ಲೇ ಆತಿಥ್ಯವನ್ನು ಸ್ವೀಕರಿಸಿದಾರೆ. ಇಂಥಾದ್ದರಲ್ಲಿ ಇವನೊಬ್ಬ—ನನ್ನ ಮಗನೇ—ನನ್ನಲ್ಲಿ, ನನ್ನ ವಿಷಯದಲ್ಲಿ ಅನಾದರ ಅನಾ ಸಕ್ತಿಗಳನ್ನು ತೋರಿಸ್ತಾ ಇದಾನಲ್ಲ. ಅಯ್ಯೋ, ನಾನು ಎಂಥ ನಿರ್ಭಾಗ್ಯ— ಈ ಸೌಭಾಗ್ಯದಲ್ಲೂ !" ಎಂದು ಒಳಗೊಳಗೇ ಬೆಂದು ಬೆಂಕಿಗೆ ಬಿದ್ದ

ಹುಳುವಿನಂತೆ ಒದ್ದಾಡುತ್ತಿದ್ದರು. ಅದೂ ಅಲ್ಲದೆ ಅವನ ಭವಿಷ್ಯದ ವಿಷಯವಾಗಿ ಮಾನ್ಯ ಮಂತ್ರಿಗಳಲ್ಲಿ ಮಾತಾಡುವುದು ಬೇರೆ ಇತ್ತು. ಇದಕ್ಕಾಗಿಯಾದರೂ ಅವರಿಗೆ ಆಗ ಈಗ ಅವನು ಮುಖ ತೋರಿಸಬೇಡವೆ? ಇಲ್ಲದಿದ್ದರೆ ಅವರಿಗೆ ತಾನೆ ಏನು ಆಸಕ್ತಿ? ತಮ್ಮ ಮಾತಿಗೇನೋ ತೂಕವಿತ್ತು. ಆದರೂ ಲಾಭ ಪಡೆಯುವವನೇ ಹೀಗಿದ್ದರೆ? ಹಾಗೂ ಸಾಹುಕಾರರು, ಅವನು ಹೊರಗೆ ಹೋಗುತ್ತಿದ್ದ ಒಂದು ವೇಳೆ ಕಾದಿದ್ದು ಕಂಡು "ಅಪ್ಪ, ಇಂಥಿಂಥ ಮಹನೀಯರೆಲ್ಲ ಬಂದಿದಾರೆ. ನಮ್ಮಲ್ಲಿ ಉಳಿದು ಗೌರವಿಸಿದ್ದಾರೆ. ನೀನೂ ಕೊಂಚ ಸಹಾಯವಾದರೆ........" ಎಂದರು. ಗುರು ಮಧ್ಯದಲ್ಲಿಯೇ ಬಾಯಿ ಹಾಕಿ "ಮಹಲಿನಲ್ಲಿ ಸೇವೆಗೇನು ಇದಾರಲ್ಲ—ಇಷ್ಟೊಂದು ಜನ" ಅಂದ. ಅವರು ಬಿಡದೆ "ಆದರೂ ನೀನು ಓಡಾಡಿಕೊಂಡು ಇದ್ದ ಹಾಗಿರುತ್ತೇ? ನನ್ನ ಬಿಟ್ಟರೆ ನೀನೇ" ಎಂದರು. ಗುರು "ಆಗಲಿ." ಎಂದು ನಿಲ್ಲದೆ ಹೊರಟೇ ಹೋದ. ಸಾಹುಕಾರರಿಗೆ ಸಿಟ್ಟೇ ಬಂತು. ಆದರೆ ಮರುಕ್ಷಣದಲ್ಲಿ ನಿಟ್ಟುಸಿರಾಗಿ ಹೊರಗೆ ಹೋಯಿತು.

ಮಂಗೇಶಪ್ಪನವರು ಸಾಹುಕಾರರ ಕೋಣೆಯಲ್ಲೇ ಉಳಿದಿದ್ದರು. ಬಂದ ರಾತ್ರಿ ಇಬ್ಬರೂ ಬಹಳ ಹೊತ್ತು ಮಾತಾಡುತ್ತಿದ್ದರು. ತಮ್ಮ ಹಿಂದನ್ನು ಅಳಿದು ಸುರಿದರು. ಇಬ್ಬರೂ ಪ್ರಜಾತಂತ್ರಕ್ಕಾಗಿ ನಡೆಸಿದ ಹೋರಾಟವೇ ಬಹಳ ಹೊತ್ತು ಹಿಡಿಯಿತು. ತಾವಿಬ್ಬರೂ ಇದ್ದ ಜೈಲುಗಳನ್ನೆಲ್ಲ—ಅಲ್ಲಿಯ ಜೀವನವನ್ನೆಲ್ಲ ನೆನೆಸಿಕೊಂಡರು. ಅದರಲ್ಲೂ ಕಡೆಯ ಸಾರಿ ತಾವಿಬ್ಬರೂ ಒಂದೇ ಕೋಣೆಯಲ್ಲಿದ್ದು ನಡೆಸಿದ ಬಾಳಿನ ಉಪಕತೆಗಳು ಬಹುವಾಗಿ ಬಂದುವು. ಸ್ವತಂತ್ರ ಗಳಿಸಿದ ಮೇಲೆ ನಡೆದ ಪೈಪೋಟಿ, ಒಳ ಕಲಹಗಳು ಸಹಜವಾಗಿಯೇ ಚರ್ಚಿಸಲ್ಪಟ್ಟುವು. ತಮಗೇ ನಾಯಕಪಟ್ಟ ಹೇಗೆ ಆಗಬೇಕಾಗಿತ್ತೆಂದೂ ಕುತಂತ್ರದಿಂದ ಹೇಗೆ ತಪ್ಪಿಹೋಯಿತೆಂದೂ ಮಂಗೇಶಪ್ಪನವರು ವಿವರಿಸಿ, ಪಕ್ಷದ ಒಳಸಂಚುಗಳಿಗಾಗಿ ಕೊರಗಿದರು. "ಹೀಗಿದ್ದರೆ ದಕ್ಷರಿಗೆ, ಯೋಗ್ಯರಿಗೆ ಸ್ಥಾನವೇ ಸಿಗೋದಿಲ್ಲ. ಸರಕಾರ ಏನಾಗುತ್ತೋ ಕಾಣೆ" ಎಂದು ಭಯವನ್ನು ಸೂಚಿಸಿದರು. ಸಾಹುಕಾರರಿಗೆ ಇದೇನು ಹೊಸ ಕತೆಯಲ್ಲ. ಪಕ್ಷದ ಚಟುವಟಿಕೆಗಳಲ್ಲಿ ಮಂಗೇಶಪ್ಪನವರ ಪ್ರಭಾವ ಅಷ್ಟಿಷ್ಟಲ್ಲವೆಂದು ಅವರು ಕಂಡಿದ್ದರು. ಆದರೂ

ಸಾವಧಾನವಾಗಿ ಕೇಳಿ ಸಹಾನುಭೂತಿ ತೋರಿಸಿ ಅನಂತರ ಮಂತ್ರಿಪದವಿ ತಮ್ಮ ಕೈಯಿಂದ ಜಾರಿಕೊಂಡ ವಿಷಯವನ್ನು ಹೇಳಿಕೊಂಡು ಪಕ್ಷ ದಿನೇ ದಿನೇ ಕೆಡುತ್ತಿರುವುದಕ್ಕಾಗಿ ಕಣ್ಣೀರು ಹಾಕಿದರು. ಮಂಗೇಶಪ್ಪನವರು ಒಳಗೊಳಗೇ 'ಯಾರು ಯಾರಿಗೆ ಅಂತ ಮಂತ್ರಿಪದವಿ ಕೋಡೋಣ. ಎಲ್ಲರಿಗೂ ಬೇಕು—ಯೋಗ್ಯತೆ ಇರಲಿ ಇಲ್ಲದಿರಲಿ. ಪಕ್ಷ ಸೈನಿಕರೇ ಇಲ್ಲದೆ ಬರಿ ಜನರಲ್‌ಗಳೇ ಇದ್ದ ಸೈನ್ಯದ ಹಾಗಿದೆ—ಎಲ್ಲರೂ ಮುಖಂಡರೇ' ಅಂದುಕೊಂಡು ಹೊರಗೆ "ಹೌದು ತಮಗೆ ಸಿಕ್ಕಬೇಕಾಗಿತ್ತು. ಆ ದಿನವೂ ಬರುತ್ತೆ. ಈಗಾಗಲೇ ನಮ್ಮ ಮುಖ್ಯ ಸಮಿತಿಗಳು ಅನೇಕದರಲ್ಲಿ ಇದೀರಿ ಅಲ್ಲವೆ? ಹಾಗು ಎರಡು ಮೂರು ಕಡೆ ಡೈರೆಕ್ಟರೂ...." "ಹೌದು ಹೌದು" ಸಾಹುಕಾರರು ಒಪ್ಪಿಕೊಂಡರು. ಆದರೆ ಇದರಿಂದ ತೃಪ್ತಿಯಾಗಲಿಲ್ಲ. ಹಾಗೇ ಮಾತನಾಡುತ್ತ ಸಾಹುಕಾರರು ತಮ್ಮ ಮಗನ ವಿಷಯಕ್ಕೆ ಬಂದು ಬೇಕಾದಷ್ಟನ್ನು ಹೇಳಿಕೊಂಡು "ನೋಡಿ, ಇವಂದೇ ನಂಗೆ ಎಲ್ಲಕ್ಕಿಂತ ಭಾರಿ ಯೋಚನೆಯಾಗಿಬಿಟ್ಟಿದೆ—ಒಂದು ದಾರೀನೂ ಹತ್ತಲಿಲ್ಲವಲ್ಲ ಅಂತ. ಅವನಿಗೆ ನೌಕರಿ ಇಷ್ಟವಿಲ್ಲದಿದ್ದರೆ ಅದನ್ನೂ ಬಿಡಲಿ. ನಾನು ಇಂಥಾದ್ದು ಅಂತ ಹೇಳೋದಿಲ್ಲ. ಯಾವುದಕ್ಕಾದರೂ ಒಂದು ಒಳ್ಳೇ ಉಪಯೋಗವಾದ, ಮರ್ಯಾದೆಯಾದ ಬಾಳಿಗೆ ಬಂದು ಮೇಲೆ ಮೇಲೆ ಹೋಗ್ತಾ ಇದ್ದರೆ ಸಾಕಾಗಿದೆ. ತಾವು ದೊಡ್ಡೋರು, ಕಂಡ ಹಾಗೇ ಬಾಳಿನಲ್ಲಿ ಜಯ ಹೊಂದಿ ಒಳ್ಳೇ ಪದವಿಯನ್ನು ಅಲಂಕರಿಸಿದೀರಿ. ತಮ್ಮ ಮಾತನ್ನು ಗಮನವಿಟ್ಟು ಕೇಳ್ತಾನೆ ಅಂತ ಕಾಣುತ್ತೆ. ಒಂದು ಮಾತು...."

"ಓಹೋ, ಆಗಲಿ ಅದಕ್ಕೇನು. ಇನ್ನೇನೂ ಇಲ್ಲ ಸಾಹುಕಾರ್ರೆ; ಅವಂದು ಕೆಲಸವಿಲ್ಲದ ಹುಚ್ಚುಗಳು. ರಾಜಕೀಯಕ್ಕೆ ಸಾರ್ವಜನಿಕ ಜೀವನಕ್ಕೆ ಕೊಂಚ ಅಂಟಿಸಿಬಿಡೋಣ. ಆಮೇಲೆ ನೋಡ್ತಾ ಇರಿ. ಅವನ ಗಮನವೆಲ್ಲ ಎಂದಿಗೆ ಮೇಲೆ ಹೋದೇನು, ಹೇಗೆ ಮೇಲೆ ಹೋದೇನು, ಅಂತ ಯಾವಾಗಲೂ ತವಕಪಡುತ್ತ ಇರುತ್ತೆ. ಬಾಕೀದು ಒಂದೂ ಅವನ ತಲೇಗೇ ಹತ್ತೋದಿಲ್ಲ."

"ಅದೇ, ಅದಕ್ಕೂ ತಮ್ಮ ಸಹಾಯ ಬೇಕು."

" ಆಗಲಿ. ಒಂದು ಅನುಮಾನವಿಲ್ಲದ ಜಾಗದಿಂದ ಪಕ್ಷದ ಪರವಾಗಿ ನಿಲ್ಲಿಸೋಣ."

" ತಾವು ನಾಮಿನೇಷ಼ರ್ಗೆ ನೆರವಾದರೆ...."

" ಆಗದೆ ಏನು."

" ಆಮೇಲೆ ಅವನ ಅಭಿವೃದ್ಧಿಯೂ ತಮ್ಮಂಥೋರಿಗೇ ಸೇರಿದ್ದು."

" ಆದರ ಯೋಚನೆ ಇಟ್ಟುಕೋಬೇಡಿ. ನಮ್ಮ ನಮ್ಮ ಸ್ನೇಹದಲ್ಲಿ ಅಷ್ಟು ಮಾಡಲಾರೆನೆ? ನಾಲ್ಕು ದಿನ ನಮ್ಮ ಪಾರ್ಲಿಮೆಂಟಿನಲ್ಲಿ ಕೂತಿರಲಿ, ಆಮೇಲೆ ನೋಡೋಣ ಮುಂದಿನ ಮಾತು."

" ಈ ವಿಷಯವನ್ನೂ ತಾವೇ ಅವನಿಗೆ...."

" ಆಗಲಿ."

" ನಂಗೇನು ಮಂಗೇಶಪ್ಪನೋರೆ, ಇವನೊಬ್ಬ, ನನ್ನ ಅಳಿಯ ಒಬ್ಬ ಇಬ್ಬರು ಸರಿಯಾಗಿಬಿಟ್ಟರೆ–ಗೊತ್ತಿಲ್ಲ ನನ್ನ ಅಳಿಯ...ಮದುವೆ ಕಾಲದಲ್ಲಿ...."

" ಹುಂ, ಹುಂ."

" ತಾವು ಸೂಚಿಸಿದ್ದ ಹಾಗೇ ನಾಲ್ಕು ತಿಂಗಳು ಇಂಗ್ಲೆಂಡಿಗೆ ಹೋಗಿ ಬಂದ. ಯಾವುದೋ ದೊಡ್ಡ ಕಂಪನೀಲಿ ತಯಾರಿ ತಗೊಂಡು ಬಂದಿದಾನಂತೆ. ಸರ್ಟಿಫಿಕೇಟ್ ಇದೆ."

" ಹೂಂ....ಆಗಲಿ. ಬೆಂಗಳೂರಿನಲ್ಲಿ ನನ್ನ ಬಂದು ಕಾಣಲಿ."

" ತಮ್ಮ ಕಾಲದಲ್ಲಿ ಅವನನ್ನ ಒಂದು ಅಂತಸ್ತಿಗೆ ತಂದು ಬಿಟ್ಟು ಬಿಟ್ಟರೆ...."

" ನನ್ನ ಕೈಲಾಗೋದನ್ನೆಲ್ಲ ಮಾಡ್ತೀನಿ."

" ತಮ್ಮ ದಯ."

ಸಾಹುಕಾರರು ಇದೇ ರೀತಿ ಗುರುಗಳವರಲ್ಲಿಯೂ ಗುರುವಿನ ವಿಷಯವನ್ನು ಹೇಳಿಕೊಂಡು, ಪೇಚಾಡಿ, ಅವರೂ ಅವನಿಗೆ ಬುದ್ಧಿ ಹೇಳಬೇಕೆಂದು ಸೂಚಿಸಿ " ಅವನ ಗ್ರಹಚಾರ ಕಳೀಲಿ ಅಂತಲೇ ಬೇಕಾದಷ್ಟು ದಾನ, ಧರ್ಮ, ವ್ರತ, ಕಥೆ, ಎಲ್ಲ ಮಾಡಿಸಿದ್ದಾಯ್ತು ಈಗ ಇಷ್ಟೊಂದು ಕರ್ಚು ಮುಟ್ಟಿಸಿ ವಿಘ್ನೇಶ್ವರನ ದೇವಸ್ಥಾನವನ್ನೂ ಕಟ್ಟಿಸಿದೀನಿ. ಎಷ್ಟರ ಮಟ್ಟಿಗೆ ಫಲಿಸುತ್ತೋ ಏನೋ. ನಂಗಂತೂ ಅವನ ಬಗ್ಗೆ ನಂಬಿಕೆಯೇ ಹೋಗ್ತಾ

ಬಂದುಬಿಟ್ಟಿದೆ. ತಮ್ಮ ದಯ ದಿಂದಲೇ ಹುಟ್ಟಿದೋನು, ತಮ್ಮ ಆಶೀರ್ವಾದ ದಿಂದಲೇ ಬೆಳೆದು ಮುಂದಕ್ಕೆ ಬಂದು ಈ ಮನೆ ಕಾಪಾಡಬೇಕು" ಎಂದು ಬೇಡಿಕೊಂಡರು. ಅವರೂ ಉಪದೇಶಿಸಲು ಒಪ್ಪಿದರು

ಮರುಳೂರಿನ ಕಾರ್ಯಕ್ರಮಗಳು ಗೋವಾಳದ ಆರಂಭೋತ್ಸವ ದಿಂದಲೇ ಮೊದಲಾದುವು. ಗೋವಾಳದ ಬಾಗಿಲಿನ ಬಳಿ ಹೊಲದಲ್ಲಿ ಪೈರನ್ನು ಕತ್ತರಿಸಿ ವಿಶಾಲವಾದ 'ಪೆಂಡಾಲ್' ಹಾಕಲ್ಪಟ್ಟಿತ್ತು. ಒಳಗೆ ದೊಡ್ಡ ಜಗಲಿ ಅದರ ಮೇಲೆ; ಪ್ರಮುಖರಿಗೆ ಮೆತ್ತೆಯ ಕುರ್ಚಿಗಳಿದ್ದುವು. ಹಸಿರು ಹೊದಿಕೆಯ ಮೇಜಿನ ಮೇಲೆ ಹೂಕಳಶ ಊದುಬತ್ತಿ ಮುಂತಾಗಿ.- ಮುಂದೆ ಮಹನೀಯರಿಗೆ ಕುರ್ಚಿಗಳು. ತುಂಬಿದ್ದ ಸಭೆಯಲ್ಲಿ ಶ್ಯಾಮಯ್ಯಂ ಗಾರಿಯ ಪ್ರಾರ್ಥನೆಯಾಗಿ ಮಂತ್ರಿಗಳಿಗೆ ಹಾರ ತುರಾಯಿ ಮತ್ತು ಮಾನ ಪತ್ರ ಸಮರ್ಪಣೆಯಾದ ಮೇಲೆ, ಸಾಹುಕಾರರು ಕರತಾಡನಗಳ ಮಧ್ಯೆ ಎದ್ದು, ಒಂದು ಗಂಟೆಯ ಕಾಲ ಭಾಷಣದಲ್ಲಿ, ಮತ್ತೆ ಮಂತ್ರಿವರ್ಯರ ಗುಣಗಾನವನ್ನು ಮಾಡಿ, ಅವರು ಸ್ವತಂತ್ರದ ಹೋರಾಟದಲ್ಲಿ ಮತ್ತು ಅನಂತರ ದೇಶಕ್ಕೆ ಮಾಡಿದ ಅಪಾರ ಸೇವೆಯನ್ನು ಪ್ರಶಂಸಿಸಿ, ಅವರು ತಮ್ಮ ಅನೇಕಾನೇಕ ಕೆಲಸಗಳಲ್ಲಿ ಇದಕ್ಕೂ ಸಮಯವನ್ನು ದೊರಕಿಸಿ ಕೊಂಡು ಬಂದುದಕ್ಕಾಗಿ ಕೃತಜ್ಞತೆಯನ್ನು ಅರ್ಪಿಸಿ, ಗೋವಾಳವೇ ದೇಶದ ಜೀವಾಳವೆಂದು ಅದರ ಮಹತ್ವವನ್ನು ವಿವರಿಸಿ, ಮಾನ್ಯ ಮಂತ್ರಿಗಳು ಗೋವಾಳದ ಆರಂಭೋತ್ಸವನ್ನು ನೆರವೇರಿಸಬೇಕೆಂದು ಪ್ರಾರ್ಥಿಸಿದರು. ಮಾನ್ಯ ಮಂತ್ರಿಗಳು ಒಂದೂವರೆ ಗಂಟೆಯ ಕಾಲ ಅಮೋಘವಾದ ಭಾಷಣ ವನ್ನು ಮಾಡಿ, ತಮಗೆ ಈ ಸಂದರ್ಭದಿಂದಾದ ವಿಶೇಷ ಗೌರವ ಸುಸಂತೋಷ ಗಳನ್ನು ವ್ಯಕ್ತಪಡಿಸಿ, ಇದನ್ನು ಒದಗಿಸಿದುದಕ್ಕಾಗಿ ತಮ್ಮ ಅನಂತ ವಂದನೆ ಗಳನ್ನು ಸಲ್ಲಿಸಿ, ಸಾಹುಕಾರರ ಮಾತೆತ್ತಿ ಆತ್ಮೀಯತೆಯಿಂದ ಅವರ ತಲೆ ಎದೆಗಳ ಗುಣಗಳನ್ನೂ, ಸಾರ್ವಜನಿಕ ಕ್ಷೇತ್ರದಲ್ಲಿ ಅವರ ಸೇವೆಯನ್ನೂ ಬಹು ವಾಗಿ ಹೊಗಳಿ, ಗೋವಾಳಗಳಿಂದ ಆಗುವ ಲಾಭಗಳು ಅವು ಇಲ್ಲದಿದ್ದರೆ ಆಗುವ ನಷ್ಟಗಳು ಇವನ್ನು ಇಪ್ಪತ್ತೈದು ಪುಟಗಳ ಭಾಷಣದಿಂದ ಓದಿ ಕಡೆಯದಾಗಿ ಮತ್ತೊಮ್ಮೆ ಇಷ್ಟು ಮಹತ್ತರವಾದ ವಿಷಯದಲ್ಲಿ ದೂರದರ್ಶಿ- ತ್ವವನ್ನು ತೋರಿಸಿ ಇಂಥ ಅಮೋಘವಾದ ಸೇವೆಯನ್ನು ಸಲ್ಲಿಸಿದುದಕ್ಕಾಗಿ

ಸಾಹುಕಾರರನ್ನು ಅಭಿನಂದಿಸಿ ಕಡೆಗೆ ಇನ್ನೊಮ್ಮೆ ತಮಗಾದ ಗೌರವಕ್ಕಾಗಿ ವಂದಿಸಿ ಕರತಾಡನಗಳ ಮಧ್ಯೆ ಮುಗಿಸಿದರು. ಮಂಗಳವಾಯಿತು. ಇದಾದ ನಂತರ ಗೋಮಾಳದ ಬಾಗಿಲಿಗೆ ದಯಮಾಡಿಸಿ ಸಾಹುಕಾರರು ಕೊಟ್ಟ ಚಿನ್ನದ ಬೀಗದ ಕೈಯಿಂದ ಬಾಗಿಲಿನ ಬೆಳ್ಳಿಯ ಬೀಗವನ್ನು ತೆಗೆದು, ಸಾಹುಕಾರ್ 'ವಿಶ್ವೇಶ್ವರಯ್ಯ ಗೋಮಾಳ' ತೆರೆದಿದೆಯೆಂದು ಘೋಷಿಸಿದರು. ಈ ಬೀಗ ಬೀಗದ ಕೈಗಳನ್ನು ಮಂತ್ರಿವರ್ಯರಿಗೆ ಅರ್ಪಿಸಿದ ಮೇಲೆ, ಈ ಕಾಲಕ್ಕಾಗಿ ಕಾದಿರಿಸಿದ್ದ ದನಗಳೂ ಅವುಗಳ ಹಿಂದೆ ಮಂತ್ರಿಗಳೂ, ಸಾಹುಕಾರರು ಮತ್ತು ಜನರು ಗೋಮಾಳವನ್ನು ಹೊಕ್ಕದ್ದಾಯಿತು. ಮಂತ್ರಿಗಳು ಅತ್ತಿತ್ತ ಅಡ್ಡಾಡಿ ಕೆಲವೊಂದು ವಿಷಯಗಳನ್ನು ದಯಮಾಡಿ ವಿಚಾರಿಸಿದ ಮೇಲೆ ಗಣ್ಯ,ಮಹನೀಯರಿಗೆಲ್ಲ ಇನ್ನೊಂದು ಪೆಂಡಾಲದಲ್ಲಿ ಎರಡೂವರೆ ಸಾವಿರ ರೂಪಾಯಿ ವೆಚ್ಚದಲ್ಲಿ ಬೆಂಗಳೂರಿನವರೇ ಬಂದು ಏರ್ಪಡಿಸಿದ್ದ 'ಸಂತೋಷಕೂಟ' ವಾಯಿತು. ಸಾಹುಕಾರರು ಮಾನ್ಯಮಂತ್ರಿಗಳಿಗೆ ಮರುಳೂರಿನ ಗಣ್ಯ ಮಹನೀಯರನ್ನೆಲ್ಲ ಸಾಲಾಗಿ ನಿಲ್ಲಿಸಿ ಪರಿಚಯ ಮಾಡಿಕೊಟ್ಟರು. ಅನಂತರ ಇವರಿಬ್ಬರೂ ಅತಿಥಿವೃಂದದ ಮಧ್ಯೆ ಸುಳಿದಾಡಿ ಬಹಳ ವಿಚಾರಿಸಿಕೊಂಡರು. ಗೋಮಾಳ ಸಮಾರಂಭ ಮುಕ್ತಾಯವಾಯಿತು.

ಕೂಡಲೇ ಎಲ್ಲರೂ 'ಮಹಾತ್ಮಾ ಗಾಂಧಿ' ನಾಲೆಯ ಆರಂಭೋತ್ಸವಕ್ಕೆ ಹೊರಟರು. ಅಲ್ಲಿಯೂ ಎಲ್ಲ ಏರ್ಪಾಡುಗಳೂ ಗೋಮಾಳೋತ್ಸವದಲ್ಲಿದ್ದಂತೆಯೇ ಅಚ್ಚುಕಟ್ಟಾಗಿದ್ದುವು. ಸಭೆ, ಪ್ರಾರ್ಥನೆ, ಹಾರ-ತುರಾಯಿ, ಮಾನ ಪತ್ರ, ಮಂಗಳ, ಕರತಾಡನ, ಎಲ್ಲ ಅದೇ ಮಾದರಿ. ಅಲ್ಲೂ ಸುತ್ತುಮುತ್ತಿನ ಊರಿನವರ ಪರವಾಗಿ ಸಾಹುಕಾರರೇ ಮಾನಪತ್ರವನ್ನು ಮಂತ್ರಿವರ್ಯರಿಗೆ ಸಮರ್ಪಿಸಿದರು. ಜನರಿಗಾಗಿ ನಾಲೆಯ ಬಗ್ಗೆ ತಮ್ಮ ಹೊಡೆದಾಟದ ಚರಿತ್ರೆಯನ್ನು ಹೇಳಿ,ಮಾನ್ಯ ಮಂತ್ರಿಗಳ ಕಾಲದಲ್ಲಿ ಇದು ಕಾರ್ಯರೂಪಕ್ಕೆ ಬಂದುದು ಪ್ರಜಾತಂತ್ರದ ಶಕ್ತಿ ಆಸಕ್ತಿಗಳನ್ನು ಸೂಚಿಸುವುದೆಂದೂ, ಇನ್ನು ಮುಂದೆ ದೇಶದ ಏಳ್ಗೆ ನೆಗೆನೆಗೆದು ಮುಂದುವರಿಯುವುದೆಂದೂ ಭರವಸೆಯನ್ನು ತಾವು ಕೊಡುವುದಾಗಿ ಹೇಳಿ, ನಾಲೆಯಿಂದ ಇತ್ತಕಡೆಯ ಜನರಿಗೇ ಆದ ಮಹೋಪಕಾರವನ್ನು ಬಣ್ಣಿಸಿ, ಇದರಿಂದ ಮಂತ್ರಿವರ್ಯರೂ ಸರಕಾರವೂ, ಈ ತಲಮಾರೇ ಅಲ್ಲದೆ ಇನ್ನೂ ಹುಟ್ಟದಿದ್ದ ಎಷ್ಟೋ ತಲೆಮಾರುಗಳ ಕೃತಜ್ಞತೆಯನ್ನು

ಸಂಪಾದಿಸಿಕೊಂಡಂತಾಯಿತೆಂದು ತಿಳಿಸಿ, ಮತ್ತೊಂದು ಭಾಷಣವನ್ನು ಮಾಡಿ ಮಂತ್ರಿಗಳ ಗುಣಗಾನದೊಂದಿಗೆ ಕಡೆಮಾಡಿದರು. ಅನಂತರ ಇಂಜಿನಿಯರು ನಾಲೆಯ ಬಗ್ಗೆ ವರದಿಯನ್ನು ಎರಡು ಪುಟದಷ್ಟು ಓದಿದಾಗ, ಮಾನ್ಯಮಂತ್ರಿಗಳು ಆಕಳಿಸಿ ಇಂಜಿನಿಯರೊಡನೆ ಏನೋ ಪಿಸಿ ಮಾತಾಡಿದರು. ಇಂಜಿನಿಯರು ತಟ್ಟನೆ ವರದಿಯ ಕಡೆಯ ಪುಟವನ್ನು ತೆಗೆದು, ಕಡೆಯ ನಾಲ್ಕು ಮಾತುಗಳನ್ನು ಓದಿ ಮುಗಿಸಿ, ಮಾನ್ಯಮಂತ್ರಿಗಳು ಮಹಾತ್ಮಾ ಗಾಂಧಿ ನಾಲೆಗೆ ನೀರನ್ನು ಬಿಡಬೇಕೆಂದು ಬೇಡಿಕೊಂಡರು. ಮಾನ್ಯ ಮಂತ್ರಿಗಳು ಎಂದಿನಂತೆ ತಮಗಾದ ಗೌರವ ಸಂತೋಷಗಳ ಮಾತಾಡಿ, ಆಹ್ವಾನಕ್ಕಾಗಿ ವಂದನೆಯನ್ನರ್ಪಿಸಿ, ವ್ಯವಸಾಯಕ್ಕೆ ನೀರಿನ ಆವಶ್ಯಕತೆ, ಪ್ರಜಾತಂತ್ರ ಸರಕಾರ ಜನರಿಗೆ ಮಾಡುತ್ತಿರುವ ಸೇವೆ, ಸ್ವತಂತ್ರದ ಹೋರಾಟ, ಅದರಲ್ಲಿ ತಮ್ಮ ಭಾಗ, ಇವೇ ವಿಷಯಗಳ ಬಗ್ಗೆ ಒಂದೂ ಮುಕ್ಕಾಲು ಗಂಟೆ ಅಮೋಘವಾದ ಭಾಷಣ ಮಾಡಿದರು. ಈ ಯೋಜನೆಯ ಬೆಳ್ಳಿ ಮಾದರಿಯೊಂದನ್ನು ಸ್ವೀಕರಿಸಿ ನಾಲೆಗೆ ನೀರನ್ನು ಬಿಟ್ಟರು. ಮತ್ತೊಂದು ಸಂತೋಷಕೂಟವಾಯಿತು — ಸಾಹುಕಾರರಿಂದಲೇ ಏರ್ಪಾಡಾಗಿದ್ದುದು. ಅದೇ ಪರಿಚಯ, ಅದೇ ವಿಚಾರಿಸುವಿಕೆ—ಎಲ್ಲ ಅದೇ ಕ್ರಮಬದ್ಧವಾದ ಮೇಲ್ಪಂಗ್ತಿಯಲ್ಲಿ.

ಈಗಾಗಲೇ ಬಹಳ ಹೊತ್ತಾಗಿತ್ತು. ಮೊದಲನೆಯ ದಿನದ ಕಾರ್ಯಕ್ರಮ ಮುಗಿಯಿತು.

ಅದೇ ರಾತ್ರಿ ಮಂಗೇಶಪ್ಪನವರು ಮಹಲಿನ ವರಾಂಡದಲ್ಲಿ ಶತಪಥ ತಿರುಗುತ್ತಿದ್ದಾಗ ಗುರು ಮೆಟ್ಟಿಲನ್ನು ಹತ್ತಿ ಬಂದ.

"ಓಹೋ, ಏನು ಸಾರ್ ನೀವು ಸಿಕ್ಕೋದೇ ಇಲ್ಲವಲ್ಲ—ಸ್ವಲ್ಪ ಮಾತುಕತೆ ಆಡೋಣ ಅಂವರೆ." ಅವರು ನಸುನಗುತ್ತ ಸ್ವಾಗತಿಸಿದರು.

"ಏನು ತಮ್ಮ ಹತ್ತಿರ ನಂಗೆ...." ಗುರು ನಮ್ರತೆಯಿಂದ ಹೇಳಿದ.

"ಹಾಗೆಂದರೆ ಏನು ಸಾರ್. ನೀವು ನಾಳೆಯ ಮುಖಂಡರು. ನೀವೇ ನಮಗಿಂತಲೂ ಮುಖ್ಯ. ನಿಮ್ಮ ಮನಸ್ಸು ಹೇಗೆ ನಡೀತಿದೆ ಅನ್ನೋದು ನಮಗೆ ಬಹಳ ಬೇಕಾದ ವಿಷಯ. ನಾವೇನೋ ಸ್ವತಂತ್ರ ಸಂಪಾದಿಸಿದೆವು,

ಆಗಿಹೋಯ್ತು. ಅದನ್ನ ಪಾಲಿಸಿಕೊಂಡು ಬರೋರು—ನೀವುಗಳು. ಬನ್ನಿ ಕೂತುಕೊಳ್ಳಿ" ಅವರು ಸೋಫದ ಮೇಲೆ ಕುಳಿತರು.

"ಅಂಥ ದೊಡ್ಡ ಕೆಲಸ ನನ್ನಿಂದೇನು ಆದೀತು—ಆ ರಾಜಕೀಯ" ಅವನೂ ಎದುರಿನಲ್ಲಿ ಕುಳಿತ.

"ಉಂಟೇ? ಉಂಟೇ? ನಿಮ್ಮಂಥೋರಲ್ಲದೆ, ಇದಕ್ಕಿಂತ ಹೆಚ್ಚಿನ ಯೋಗ್ಯತೆಯೋರು ಯಾರಿದಾರೆ ಸಾರ್? ನೀವೇನೋ ಬಹಳ ರಚನಾತ್ಮಕ ಕಾರ್ಯ, ಸಾಮಾಜಿಕ ಸುಧಾರಣೆ ಎಲ್ಲ ಮಾಡ್ತಿದೀರಂತೆ. ಬಹಳ ಸಂತೋಷ."

"ಯಾವುದೂ ಆಗಲಿಲ್ಲ. ಎಲ್ಲದರಲ್ಲೂ ಸೋತೆ ಅಷ್ಟೆ."

"ಆಂ! ಸೋಲು ಅಂದರೇನು. ಕೆಲಸ ಮಾಡೋರಿಗೆಲ್ಲ ಅದು ಅಷ್ಟು ಇಷ್ಟು ಕಟ್ಟಿಟ್ಟಿದ್ದೆ. ಇಷ್ಟಕ್ಕೂ ಕೆಲಸ ಮಾಡಬೇಕು ಅಷ್ಟೆ. ಅದು ಮುಖ್ಯ—ಹೇಗಾದರೂ ಆಗಲಿ. ಅಲ್ಲವೆ?....ಹುಂ, ನಿಮ್ಮಂಥ ತಯಾರಿ ಪಡೆದೋರು ನಮಗೆ, ನಮ್ಮ ಸರಕಾರಕ್ಕೆ ಬಹಳ ಬೆಲೆಯ ಆಸ್ತಿ—ಸಿಕ್ಕಬೇಕಲ್ಲ. ಮುಂದಿನ ಚುನಾವಣೆಯಲ್ಲಿ ಒಂದು ಒಳ್ಳೇ ಕಡೆಯಿಂದ...."

"ನಂಗೆ ರಾಜಕೀಯದಲ್ಲಿ ಆಸಕ್ತಿಯಿಲ್ಲ."

"ಯಾಕೆ?"

"ಏನೋ ಅಭಿರುಚಿಯಿಲ್ಲ."

"ಅಭಿರುಚಿ ಅಂದರೆ ಅಭ್ಯಾಸ ಮಾಡಿದ ಹಾಗೆಲ್ಲ ಬರುತ್ತೆ—ಕ್ರಮೇಣ."

"ಉಹುಂ. ನಂಗೆ ಆ ಗೊಂದಲದಲ್ಲಿ ಮೊಳಕೈಯಿಂದ ಜಾಗಾ ಮಾಡಿಕೊಂಡು ನುಗ್ಗೋದು ಇಷ್ಟವಿಲ್ಲ, ಸಾಧ್ಯವೂ ಇಲ್ಲ."

"ಗೊಂದಲವೇನಿಲ್ಲ. ನೀವೇನು ಭಯ ಪಡಬೇಕಾಗಿಲ್ಲ. ಕಷ್ಟವೂ ಪಡಬೇಕಾಗಿಲ್ಲ. ನಾವೆಲ್ಲ ನೋಡಿಕೋತೀವಿ."

"ಹಾಗೆಲ್ಲ ಸೇರದಿದ್ದರೇನು? ಆಮೇಲೂ ಅದೇ ಭಂಡಾಟ. ನಾನು ಮೇಲೆ ತಾನು ಮೇಲೆ ಅಂತ ಹಂಚಿಕೆ, ಜಗಳ—ಎಲ್ಲ ನನ್ನಿಂದ ಆಗೋದಿಲ್ಲ.'

"ಹುಂ, ಅದು ಅಷ್ಟು ಇಷ್ಟು ಇದ್ದೇ ಇರುತ್ತೆ. ಒಟ್ಟಾಗಿ ಒಳ್ಳೇಯೋರೆಲ್ಲ ಸೇರಿ ಎದುರಿಸಿದರಾಯ್ತು. ಬನ್ನಿ."

"ಇಲ್ಲ ಒಳ್ಳೇಯೋರಿಗೆ, ಸಭ್ಯಸ್ಥರಿಗೆ ಈಗ ಅಲ್ಲಿ ಸ್ಥಳವಿಲ್ಲ ಅಂತ ನನ್ನ ಅಭಿಪ್ರಾಯ."

"ಏನು!" ಮಂತ್ರಿಗಳಿಗೆ ಛಳಕು ಹೊಡೆದಂತಾಯಿತು. ಹೀಗೆ ಒರಟಾಗಿ ಯಾರೂ ಅವರ ಮುಖದಲ್ಲಿ ಮಾತಾಡಿರಲಿಲ್ಲ. ಸಿಟ್ಟು ಬಂದಿತು. "ಸಾಕು, ನಿಮ್ಮ ತಲೆಹರಟೆ" ಎನ್ನಬೇಕೆನ್ನಿಸಿತು. ಆದರೆ ತಂದೆಯ ಸ್ನೇಹವನ್ನು ನೆನೆದು ಸಿಟ್ಟನ್ನು ನುಂಗಿಕೊಂಡರು. ಎಷ್ಟಾದರೂ ರಾಜಕಾರಣಪಟುವಲ್ಲವೇ? "ಹೋ! ಹೋ! ಚೆನ್ನಾಗಿ ಹೇಳಿದಿರಿ. ನೀವು ಹೇಳುವುದರಲ್ಲಿ ತುಂಬ ಸತ್ಯವಿದೆ. ಆದರೆ ಸಾರ್ವಜನಿಕಜೀವನಕ್ಕೆ ಸೇರಿ ಹೊಡೆದಾಡಿ ಅದನ್ನು ಶುದ್ಧಗೊಳಿಸೋದು ನಮ್ಮ ಕೆಲಸವಲ್ಲವೇ ?"

"ರಾಜಕೀಯದಿಂದ ಅದು ಸಾಧ್ಯವಿಲ್ಲ ಅನ್ನಿಸುತ್ತೆ."

"ಮತ್ತೆ ? ರಾಜಕೀಯದಿಂದ ಆಗೋದಿಲ್ಲ. ಸಾಮಾಜಿಕದಲ್ಲೂ ಸೋತಿದೀರಿ—ನೀವೇ ಹೇಳಿದ ಹಾಗೆ. ಮತ್ತೆ ಯಾವುದು ದಾರಿ ಅದಕ್ಕೆ?"

"ಹೊಸ ಬೆಳಕು ಚೆಲ್ಲಿ ವ್ಯಕ್ತಿಶುದ್ಧತೆ ಸಾಧಿಸೋದು."

"ಅದರಿಂದಲೇ ಏನಾಗುತ್ತೆ ಬಿಡಿ. ಬಹಳ ನಿದಾನದ ವಿಧಾನ. ದೊಡ್ಡ ತರಹದಲ್ಲಿ ಜನರನ್ನು ಉದ್ಧಾರ ಮಾಡೋಕ್ಕೆ ನಾವೆಲ್ಲ ದುಡೀತಿರೋದು. ಒಳ್ಳೇ ಪಕ್ಷ ಕಟ್ಟಿದೀವಿ, ಒಳ್ಳೇ ರಾಜ್ಯಘಟನೆಯಾಗಿದೆ. ಬೇಕಾದರೆ ಇನ್ನೂ ಉತ್ತಮಗೊಳಿಸೋಣ. ಸಾಮಾಜಿಕ ಸುಧಾರಣೆಗೆ ಕಾನೂನು ಮಾಡೋಣ. ಹೀಗಾದರೆ ಅಷ್ಟು ರಾಜಕೀಯ ಸಾಮಾಜಿಕ ರೋಗಗಳನ್ನೆಲ್ಲ ತೊಡೆದು ಹಾಕಬಹುದು."

"ನಮ್ಮ ರೋಗ ರಾಜಕೀಯವೂ ಅಲ್ಲ. ಸಾಮಾಜಿಕವೂ ಅಲ್ಲ. ವ್ಯಕ್ತಿ ರೋಗ ಅನ್ನಿಸುತ್ತೆ ನಂಗೆ. ವ್ಯಕ್ತಿ ಮೇಲ್ಮಟ್ಟಕ್ಕೆ ಬಂದರೆ ಬಾಕೀದೆಲ್ಲ ತಾನಾಗಿ ಸರಿಹೋಗುತ್ತೆ. ವ್ಯಕ್ತಿ ಬೆಳೆಯದೆ ಮುಕ್ತಿಯಿಲ್ಲ ಇಲ್ಲದಿದ್ದರೆ ರಾಜಕೀಯಸ್ವಾತಂತ್ರ್ಯ ಪಡೆದೂ ಜನಕ್ಕೆ ಪರತಂತ್ರವೆ. ಒಳ್ಳೆ ರಾಜ್ಯಘಟನೆ ಇದ್ದೂ ಕೆಟ್ಟ ಸರಕಾರವೇ. ಒಳ್ಳೆ ಕಾನೂನು ಇದ್ದೂ ಕೆಟ್ಟ ಸಮಾಜವೇ— ಈಗ ಇರೋ ಹಾಗೆ"

"ಹೂಂ...." ಮಂತ್ರಿಗಳಿಗೆ ಇನ್ನು ಸಾಕಾಯಿತು. ಅವರು "ಒಂದೇ ಗುರಿಗೆ ನಮ್ಮ ದಾರಿಗಳು ಬೇರೆ ಬೇರೆ ಅಂತ ಕಾಣುತ್ತೆ. ಇದನ್ನು ಯಾರಾದರೂ ಮಾಡಬೇಕಲ್ಲ. ನಿಮ್ಮ ಅಭಿಪ್ರಾಯ ಬದಲಾಯಿಸಿದರೆ ನಮ್ಮ ಸಹಾಯ ಇದ್ದೇ ಇರುತ್ತೆ" ಎಂದು ಅಸಮಾಧಾನದಿಂದ ಪೂರ್ತಿ ಮಾಡಿದರು.

"ಆಗಲಿ ವಂದನೆಗಳು" ಗುರು ಎದ್ದ.

ಮಂತ್ರಿಗಳು ಸಾಹುಕಾರರಿಗೆ "ನಿಮ್ಮ ಮಗ ತೀರ ವಿಚಿತ್ರ ಅಭಿಪ್ರಾಯ ಗಳನ್ನು ಇಟ್ಟುಕೊಂಡಿದ್ದಾನೆ. ಇನ್ನೂ ಅನುಭವದಿಂದ ಹಣ್ಣಾಗಬೇಕು. ಅವನಿಗೆ ನಾವು, ನಮ್ಮ ಸರಕಾರವೆಂದರೆ ತಿರಸ್ಕಾರವೇ ಇದೆ. ಅಂಥಾವನು ನಮ್ಮ ದಾರಿಗೆ ಹೇಗೆ ಬಂದಾನು ?" ಎಂದುಬಿಟ್ಟರು.

ಮಾರನೆಯ ದಿನ ಬೆಳಿಗ್ಗೆ ದೇವಸ್ಥಾನದ ಆರಂಭೋತ್ಸವ. ಎಲ್ಲ ನಿನ್ನೆಯ ಮಾದರಿಯೆ. ಮತ್ತೆ ಅದೇ ಪ್ರಾರ್ಥನೆ ಹಾರ, ತುರಾಯಿ ಮಾನ ಪತ್ರ, ಸಾಹುಕಾರರಿಂದ ಮಂತ್ರಿಗಳ ಗುಣಗಾನ; ಸೇವಾಪ್ರಶಂಸೆ; ಅನೇಕಾ ನೇಕ ತೊಂದರೆಗಳಿದ್ದರೂ ಅವಕಾಶ ಮಾಡಿಕೊಂಡು ಬಂದು ಗೌರವಿ ಸಿದ್ದದಕ್ಕಾಗಿ ಕೃತಜ್ಞತೆ—ಒಂದು ಗಂಟೆ ಭಾಷಣ. ಮಂತ್ರಿವರ್ಯರು ಮತ್ತೆ ತಮಗಾದ ಗೌರವ ಸಂತೋಷ; ಅದಕ್ಕಾಗಿ ವಂದನೆ; ಅದಕ್ಕಾಗಿ ಆಧ್ಯಾತ್ಮಿಕ, ಧಾರ್ಮಿಕ ಜೀವನದ ಅತ್ಯಾವಶ್ಯಕತೆ; ನಮ್ಮ ಪುರಾತನ ಸಂಸ್ಕೃತಿ; ಸ್ವಾತಂತ್ರ್ಯ ದಿಂದ ಅದರ ಪುನರುಜ್ಜೀವನ; ಸಾಹುಕಾರರ ಆಧ್ಯಾತ್ಮಿಕ ಧಾರ್ಮಿಕ ಜೀವನ, ಸೇವೆ; ಈ ದಾರಿಯಲ್ಲಿ ಅವರ ಮಾದರಿಯನ್ನು ಅನುಸರಿಸಿ ಇನ್ನೂ ಆಸ್ತಿಕ ಮಹಾಜನರು ಮುಂದೆ ಬರಬೇಕಾದ ಅಗತ್ಯ; ಮತ್ತೊಮ್ಮೆ ವಂದನೆ—ಅದೇ ಚೌಕಟ್ಟಿನ ಎರಡು ಗಂಟೆಗಳ ಭಾಷಣ. ಬೆಳ್ಳಿ ಬೀಗ, ಚಿನ್ನದ ಕೈ, ಸಂತೋಷ ಕೂಟ. ಕಾಫಿ ಕುಡಿಯುತ್ತ ಶೀನಪ್ಪ "ಏನಪ್ಪ, ನಮ್ಮ ಮಂತ್ರಿಗಳು ಸಾಹು ಕಾರರು ಎಂಥ ಪ್ರತಿಭಾವಂತರು! ಯಾವ ವಿಷಯವಾಗಲಿ. ನೀರು ಕುಡಿದ ಹಾಗೆ ಗಂಟೆ ಗಂಟೆಗಳ ಕಾಲದಲ್ಲಿ ಮಾತಾಡಬಲ್ಲರಲ್ಲ. ಏನು ಶೈಲಿ, ಏನು ಕತೆ! ಮುಕ್ಕಾಲು ಪಾಲೆಲ್ಲ ಕಂಠಪಾಠವೇ ಆಗಿ ಹೋಗಿದೆ ಅಂತ ಕಾಣುತ್ತೆ— ಸ್ಕೂಲು ಹುಡುಗರಿಗೆ ಆಗೋಹಾಗೆ. ಆ ಸ್ವತಂತ್ರದ ಹೋರಾಟದ ವಿಷಯ ಅಂತೂ ಹೇಗೆ ವರ್ಣಿಸ್ತಾರೆ ಯಾವಾಗಲೂ—ನನ್ನ ಮೈ ಈಗಲೂ ಜುಂ ಅನ್ನುತ್ತೆ. ಬೇಕಾದಾಗ ಬೇಕಾದ ವಿಷಯಕ್ಕೆ ಅಲ್ಲಲ್ಲಿ ಚಾತುರ್ಯದಿಂದ ದಾಟಿಕೋತಾರೆ. ಆಶ್ಚರ್ಯವಾಗುತ್ತೆ" ಎಂದು ಪ್ರಶಂಸಿಸಿ "ಆಹಾ! ಒಳ್ಳೇ ಕಾಫಿ. ಈ ಉತ್ಸವಗಳಲ್ಲಿ ಈ ಪಾರ್ಟಿಗಳು ಕಣಕದ ಒಳಗಿನ ಹೂರಣದ ಹಾಗೆ. ಅವು ಕೊಡೋ ಶೋಭೆ ಅಷ್ಟಿಷ್ಟಲ್ಲ. ಅದಕ್ಕೆ ಪ್ರತಿಯೊಂದರಲ್ಲೂ ಇದಿಲ್ಲದೆ ಮಾತೇ ಇಲ್ಲ." ಎಂದು ಸೊರ್ರೆಂದು ಕಾಫಿಯನ್ನು ಹೀರಿದ. ನಂಜಪ್ಪ

ದವಡೆ ತುಂಬ ಹಲ್ವ ತುಂಬಿಕೊಂಡು "ಪಾರ್ಟಿಯಿಲ್ಲದೆ ಸಮಾರಂಭವೆ? ವಧು ಇಲ್ಲದ ಮದುವೆಯ ಹಾಗೆ ? " ಎಂದು ನುಂಗಿ ಕಾರದ ಅವಲಕ್ಕಿ ಯನ್ನು ಮುಕ್ಕಿದ. ಹೈಸ್ಕೂಲಿನ ಮುಖ್ಯೋಪಾಧ್ಯಾಯರು "ಇದಿಲ್ಲದೆ ಇದ್ದರೆ ಸಮಾರಂಭಗಳಿಗೆ ಯಾರು ಬರುತ್ತಿದ್ದರು ಅಂದುಕೊಂಡಿದೀರಿ? ದಿನವಹಿ ಪತ್ರಿಕೆಗಳ ತುಂಬ ಇಂಥ ಒಂದೇ ಅಚ್ಚಿನ ಸಮಾರಂಭಗಳ ವರದಿಯೇ ಇರುತ್ತೆ. ಓದಿ ತಿಳಿದಿಲ್ಲವೇ ಒಂದರ ಹಾಗೇ ಇನ್ನೊಂದನ್ನು ಊಹಿ ಸೋದು ಸಾಧ್ಯವಿಲ್ಲವೇ ? ಇಷ್ಟಕ್ಕೂ ನಾಳೆ ಇದೂ ಬರುತ್ತೆ—ಚಿತ್ರಗಳೊ ಡನೆ, ಚಂದ್ರಶೇಖರ ಇದಾನಲ್ಲ" ಅಂದರು. ಶೀನಪ್ಪ "ಸಾಹುಕಾರರು ಸರಿ, ಎಲ್ಲೆಲ್ಲೂ ಬೆಳ್ಳಿ ಬೀಗ ಹಾಕ್ತಾರೆ; ಚಿನ್ನದ ಕೈಯಿಂದ ತೆಗೆಸ್ತಾರೆ" ಎಂದ. ಶಾಮಯ್ಯಂಗಾರಿ "ಸಿರಿವಂತರ ಬುದ್ಧಿವಂತರ ಲಕ್ಷಣ. ಜಗತ್ತನ್ನೇ ಗೆಲ್ಲೋ ದಾರಿ" ಎಂದು ಒಟ್ಟು ಮಾತು ಹೇಳಿದ.

ವಿಶ್ವೇಶ್ವರನ ಪ್ರತಿಷ್ಠಾಪನೆಯು ಅಪೂರ್ವವೈಭವ ಸಂಭ್ರಮಗಳಿಂದ, ಗುರುವರ್ಯರ ದಿವ್ಯಹಸ್ತದಿಂದ ನಡೆಯಿತು. ಮರುಳೂರಿನ ಗಣ್ಯ ಆಸ್ತಿಕ ಮಹನೀಯರು ಮಹಿಳೆಯರೆಲ್ಲ ಗುಡಿಯ ವರಾಂಡದಲ್ಲಿ, ಪ್ರಾಕಾರದ ಆವರಣದಲ್ಲಿ, ಎಲ್ಲ ಕಡೆಯಲ್ಲಿಯೂ ಕಿಕ್ಕಿರಿದು ತುಂಬಿದ್ದರು. ಗುಡಿಯೆಲ್ಲ ಬಾಳೆ ಕಂದು, ತಳಿರು, ಹೂ, ತೋರಣಗಳಿಂದ ಶೋಭಿಸುತ್ತಿತ್ತು. ಹೊರಗೆ ತಂಜಾವೂರಿನ ಜೋಡಿವಾಲಗ, ಒಳಗೆ ಗಂಟೆಯ ನಾದ, ಸುವಾಸಿನಿಯರ ಹಾಡು, ಹತ್ತಾರು ಕಂಠಗಳ ದಿವ್ಯ ಮಂತ್ರೋಚ್ಚಾರಣೆ. ಗರ್ಭಗುಡಿಯಲ್ಲಿ ತುಪ್ಪದ ನೀಲಾಂಜನಗಳ ಸಾಲುದೀಪಗಳ ಜ್ಯೋತಿ ಬೆಳಗುತ್ತಿತ್ತು. ನೂರಾರು ಬೆಳ್ಳಿಯ ತಟ್ಟೆಗಳಲ್ಲಿ ಹೂ, ಪತ್ರೆ ಹಣ್ಣು ಕಾಯಿ, ವೀಳ್ಯ ಕರ್ಪೂರ, ವಿವಿಧ ಆರತಿ ಮೊದಲಾದ ಪೂಜಾಸಾಮಗ್ರಿಗಳು ತುಂಬಿ ಸೂಸುತ್ತಿದ್ದುವು. ಯಾವು ದಕ್ಕೂ ಕೊರತೆಯಿರಲಿಲ್ಲ. ಗರ್ಭಗುಡಿಯ ಮುಂಭಾಗದಲ್ಲಿ ಸಾಹುಕಾರರೂ ಮಂತ್ರಿಗಳೂ ರೇಷ್ಮೆ ಜರತಾರಿಗಳ ಮಡಿಯುಟ್ಟು ಕೈ ಜೋಡಿಸಿ ಎರಡು ಸಾಲಿನಲ್ಲಿ ನಿಂತಿದ್ದರು. ಇವರ ಹಿಂದೆ ಇವರನ್ನನುಸರಿಸಿ ತಮ್ಮ ತಮ್ಮ ಸ್ಥಾನಕ್ಕನುಗುಣವಾಗಿ ಊರಿನ ಗಣ್ಯರು ಸಾಲುಸಾಲಾಗಿ ನಿಂತಿದ್ದರು. ಒಳಗೆ ಅತಿ ಸುಂದರವಾದ ಅಮೃತಶಿಲೆಯ ವಿಶ್ವೇಶ್ವರನ ವಿಗ್ರಹದ ಮುಂದೆ, ಕಾವಿಯುಟ್ಟು, ರತ್ನಖಚಿತ ಕಿರೀಟವನ್ನು ಧರಿಸಿ, ತಮ್ಮ ರಜತ ಆಸನದ

ಮೇಲೆ ಮಂಡಿತರಾಗಿ ವಿರಾಜಮಾನರಾದ ಗುರುಗಳು ಶಿಷ್ಯವರ್ಗದಿಂದ ಸಹಾಯ ಹೊಂದುತ್ತ ಪ್ರತಿಷ್ಠಾಪನೆಯ ಪೂಜಾ ವಿಧಿಗಳಲ್ಲಿ ಮಗ್ನರಾಗಿದ್ದರು. ಗಂಗಾ ಯಮುನಾ ಮೊದಲಾದ ದಿವ್ಯತೀರ್ಥಗಳಿಂದ ಮತ್ತು ಪಂಚಾಮೃತದಿಂದ ಅಭಿಷೇಕವಾಗಿ, ವಿವಿಧ ಪತ್ರ ಪುಷ್ಪಗಳ ರಾಶಿಯಿಂದ ಪೂಜೆ ಅಷ್ಟೋತ್ತರ ಸಹಸ್ರನಾಮಗಳಾಗಿ, ದಿವ್ಯ ಭಕ್ಷ್ಯಭೋಜ್ಯಗಳ ನೈವೇದ್ಯವಾಗಿ, ಮಹಾ ಮಂಗಳಾರತಿಯಾದ ಮೇಲೆ ಎಲ್ಲರೂ ಮಂಗಳಾರತಿಯನ್ನು ಕಣ್ಣಿಗೊತ್ತಿಕೊಂಡು ಕಾಣಿಕೆ ಕೊಟ್ಟು ಗುರುಗಳವರ ವರಹಸ್ತದಿಂದ ತೀರ್ಥ ಪ್ರಸಾದಗಳನ್ನು ಹೊಂದಿದರು. ಶಾಸ್ತ್ರಿಗಳು ನಿತ್ಯಪೂಜಕರಾಗಿ ನೇಮಿಸಲ್ಪಟ್ಟರು. ದೊಡ್ಡ ತಿಪ್ಪೆನಲ್ಲಿ ಮಹಾತ್ಮ ಗಾಂಧಿ ನಾಲೆಯ ಕೆಳಗಿನ ನಾಲ್ಕು ಎಕರೆ ಗದ್ದೆಯನ್ನು ಸಾಹುಕಾರರು ದೇವಸ್ಥಾನದ ಪೂಜಕರಿಗೆ ವಂಶ ಪಾರಂಪರ್ಯವಾಗಿ ದತ್ತಿಯಾಗಿ ಕೊಟ್ಟರು. ಗುಡಿಯ ಮುಂದಿನ ದೊಡ್ಡ ಚಪ್ಪರದಲ್ಲಿ ಮಹಾ ಸಮಾರಾಧನೆಯಾಗಿ ಸಮಾರಂಭವು ಮುಕ್ತಾಯವಾಯಿತು.

ಸಮಾರಾಧನೆಯಲ್ಲಿ ನಂಜುಂಡಪ್ಪನವರು ಖೀರಿನ ದೊನ್ನೆಯನ್ನು ಎತ್ತಿ ಹಿಡಿದುಕೊಂಡು "ಅಂತೂ ಸುತ್ತುಮುತ್ತ ಯಾವುದೂ ಸರಿಗಟ್ಟದ ಇಂಥಾ ಘನವಾದ ದೇವಸ್ಥಾನವನ್ನು ಕಟ್ಟಿಸಿ, ಇಂಥಾ ಪವಿತ್ರ ರೀತಿಯಲ್ಲಿ ಪ್ರತಿಷ್ಠಾಪನೆ ನಡೆಸಿ, ಸಾಹುಕಾರರು ಊರಿಗೇ ದೊಡ್ಡ ಹೆಸರು ತಂದರು" ಎಂದು ಸಾಹುಕಾರರಿಗೆ ಕೇಳುವಂತೆಯೇ ಹೇಳಿದರು. ಭೋಗಪ್ಪ ಚಿರೋಟಿ ಮುರಿಯುತ್ತ "ಸಾಹುಕಾರರು ಇದು ಒಂದರಲ್ಲೇ—ಊರಿಗೆ ಹೆಸರು ತಂದಿರೋದು? ಅವರಿಂದಲೇ ಮರುಳೂರು. ಇಲ್ಲದಿದ್ದರೆ ಎಲ್ಲಿ?'' ಎಂದು ಪೈಪೋಟಿ ನಡೆಸಿದ. ಮಂತ್ರಿಗಳು ಎಡಗೈಯಿಂದ ಹೊಟ್ಟೆ ಸವರಿಕೊಳ್ಳುತ್ತ "ಇಂಥ ಸತ್ಪ್ರಜೆ, ನಾಯಕರು ನಿಮಗೆ ನಮಗೆ ಸಿಕ್ಕಿರೋದು ನಮ್ಮ ಸೌಭಾಗ್ಯ. ಇವರು ನಡೆಸಿರೋ ದಾನಧರ್ಮಗಳು ನಿಮ್ಮ ಸುಕೃತ. ಇವರ ನಿಷ್ಠೆಯ ಶ್ರೇಷ್ಠ ನಡವಳಿಕೆ ಎಲ್ಲರೂ ಅನುಸರಿಸಬೇಕಾದದ್ದು. ನಾಳೆ ನೀವು ಗೌರವದ ಉತ್ಸವವನ್ನು ಇಟ್ಟುಕೊಂಡಿರೋದು ಉಚಿತವಾಗಿದೆ. ಒಂದು ದಿನವೂ ಮುಂಚೆಯಲ್ಲ" ಎಂದು ಲಾಡು ತುಂಬಿದ ಬಾಯಿಂದ ಬಾಯಿತುಂಬ ಹೊಗಳಿದರು ಸಾಹುಕಾರರು "ಎಲ್ಲ ತಮ್ಮ ಅಭಿಮಾನ. ನಂಗೆ ತಿಳಿದ ಸೇವೆ ಮಾಡ್ತಾ ಇದೀನಿ.

ಮರ್‍ಯಾದೆ ಅಂತ ಕಂಡ ಹಾಗೆ ನಡೀತಾ ಇದೀನಿ ಅಷ್ಟೆ" ಎಂದು ನಮ್ರತೆ ಯಿಂದ ಹೇಳಿ ಹಿಗ್ಗಿದರು. ಇದು ಎಷ್ಟೇ ಹೆಚ್ಚಾದರೂ ಇದಕ್ಕಿಂತಲೂ ಹೆಚ್ಚಾಗಿ ಅವರಿಗೆ ಬೇಕಾದುದೊಂದು ದೊರೆತಿರದೆ ಅವರ ಉತ್ಸಾಹ ಕುಂದಿತ್ತು, ಹಿಗ್ಗು ಕುಗ್ಗಿತ್ತು. ಸಂತೋಷದ ಹೊದಿಕೆಯೊಳಗೆ ಕೊರಗೊಂದು ಕೊರೆಯುತ್ತಿತ್ತು. ಅದು ಮಗನ ಮುಖ, ಅವನ ಒಂದು ನಸುನಗು. ಬೇಡ, ಅವನು ಹೇಗಾದರೂ ಬಂದು ಗುರುಗಳ ಪ್ರಸಾದ ತೆಗೆದುಕೊಂಡು ಹೋಗಿದ್ದರೂ ಸಾಕಾಗಿತ್ತು. ಮನೆಯಿಂದ ಹೊರಡುವಾಗಲೇ "ಅಪ್ಪ, ಇದಕ್ಕಾದರೂ ಬಾರಪ್ಪ" ಎಂದು ಅಂಗಲಾಚಿದ್ದರು. ಗುರು "ಆಗಲಿ" ಎಂದಿದ್ದ. ಸಮಾರಂಭ ಮೊದಲಾದ ಗಳಿಗೆಯಿಂದ ಸುತ್ತುಮುತ್ತು ಆಗಾಗ ತಿರುಗುತ್ತ ಅವನಿಗಾಗಿ ನೋಡುತ್ತಿದ್ದರು. ಈಗ ಆಗ ಬಂದಾನೆಂದು ಆಶಿಸಿದ್ದರು. ತಡೆಗೆ ಏನೇನೋ ಕಾರಣಗಳನ್ನು ಊಹಿಸಿಕೊಂಡಿದ್ದರು. ಕಡೆಗೆ ನಂಜಪ್ಪನನ್ನು ಮನೆಗೂ ಕಳುಹಿಸಿದ್ದರು. ಗುರು ಅವನಿಗೆ ಸಿಕ್ಕಿರಲಿಲ್ಲ. ಇನ್ನೂ ಬಂದಿರಲೂ ಇಲ್ಲ. ಅವರ ನಿರಾಶೆ ಬೆಳೆಯುತ್ತ ಸಂತೋಷವನ್ನು ನಂಗುತ್ತಿತ್ತು. 'ಅಯ್ಯೊ, ನಂಗೆ ಏನಿದ್ದರೇನು, ನಾನು ಏನು ಮಾಡಿದರೇನು? ದುರದೃಷ್ಟವಂತ' ಎಂದುಕೊಂಡು ಒಂದು ಬಾರಿ ನಿಟ್ಟುಸಿರನ್ನು ಬಿಡುತ್ತಿದ್ದರು. 'ನನ್ನ ಮಗನೇ ನಂಗೆ ಅವಮಾನ ಮಾಡಿ ಇಷ್ಟೊಂದು ಸಾಗರದಂಥ ಮರ್‍ಯಾದೆಯನ್ನೂ ಆಪೋಶನ ತಗೋತಾನಲ್ಲ—ಮೂರ್ಖ! ಅವಿಧೇಯ. ತಂದೆ ಅಂತಾದರೂ ಅಷ್ಟು ಲೌಕಿಕ ಬೇಡವೆ? ನನ್ನ ನೋಯಿಸಬೇಕು ಅಂತ ಹಟತೊಟ್ಟ ಹಾಗಿದೆ,' ಎಂದು ಇನ್ನೊಂದು ಬಾರಿ ಸಿಟ್ಟಾಗುತ್ತಿದ್ದರು. 'ಇವಂದು ಏನು ಶ್ರೇಷ್ಠ. ಯಾಕಾಗಿದಾನೆ ಹೀಗೆ? ಬಾಕಿಯೋರದೆಲ್ಲ ಏನು ತಪ್ಪು? ಯಾವಾಗ ಸರಿಯಾಗ್ತಾನೆ?' ಎಂದು ಮತ್ತೊಂದು ಬಾರಿ ಒದ್ದಾಡುತ್ತಿದ್ದರು. 'ದೇವರೇ! ಅವನನ್ನ ಹೇಗಾದರೂ ಬೇಗ ದಾರಿಗೆ ತಾರಪ್ಪ' ಎಂದು ಮಧ್ಯೆ ಮಧ್ಯೆ ಪ್ರಾರ್ಥಿಸುತ್ತಿದ್ದರು. 'ಯಾರಾದರೂ ಮಗ ಯಾಕೆ ಬರಲಿಲ್ಲ? ಎಂದು ಕೇಳಿಬಿಟ್ಟರೆ ಏನು ಹೇಳೋದು' ಎಂದುಕೊಂಡು ಯಾವಾಗಲೂ ಭಯ ಪಡುತ್ತಿದ್ದರು. ಆದರೆ ಯಾರೂ ಕೇಳಲಿಲ್ಲ. ಈವರೆಗೆ ಎಲ್ಲರಿಗೂ ಗುರುವಿನ ವಿಚಾರ ಗೊತ್ತಾಗಿತ್ತು. ಅವನಿಗೆ ಸ್ವಲ್ಪ ಬುದ್ಧಿ ಕೆಟ್ಟಿತ್ತೆಂದೇ ಅವರೆಲ್ಲರ ತೀರ್ಮಾನವಾಗಿತ್ತು. ಭೋಗಪ್ಪ "ನೋಡಿ, ಆ ಮಗ ಅನ್ನಿಸಿಕೊಂಡೋನು

ಬರಬೇಡವೆ? ಸಿಂಹದ ಹೊಟ್ಟೇಲಿ ನಾಯಿ ಹುಟ್ಟಿದ ಹಾಗಾಯ್ತು ಎಂದು ನಂಜಪ್ಪನೊಡನೆ ಪಿಸಿಗುಟ್ಟಿದ. ನಂಜಪ್ಪ "ಇಷ್ಟೆಲ್ಲ ಅವನಿಗಾಗಿ ಅಂತ. ನೋಡಿ ಹೇಗಿದೆ, ವಿಚಿತ್ರ!....ನಾನು ಹೇಳಲಿಲ್ಲವೇ" ಎಂದು ನಸುನಕ್ಕ.

ಈ ಕಾಲದಲ್ಲಿ ಗುರು ದೊಡ್ಡ ತಿಕ್ಕಿಸ ಮೇಲೆ ಮರ ಒರಗಿಕೊಂಡು ಕಾಲು ಚಾಚಿಕೊಂಡು ಕುಳಿತಿದ್ದ.

ಮಧ್ಯಾಹ್ನ 'ಸಣ್ಣಮ್ಮ ವಾರ್ಡಿನ' ಆರಂಭೋತ್ಸವವೂ ಪ್ರಾರ್ಥನೆಯಿಂದ ಗತ್ಯಂತರವಿಲ್ಲದ ಸಂತೋಷಕೂಟದವರೆಗೂ ಜರುಗಿತು. ಹೈಸ್ಕೂಲಿನ ಮುಖ್ಯೋಪಾಧ್ಯಾಯರು ಹೇಳಿದಂತೆ ಇದರ ವಿವರಗಳನ್ನು ಊಹಿಸಿಕೊಳ್ಳುವುದು ಸುಲಭ.

ಅದೇ ರಾತ್ರಿ ಗುರು ಮನೆಗೆ ಬಂದ ಮೇಲೆ ಗುರುಗಳ ಶಿಷ್ಯನೊಬ್ಬನು ಇವನಲ್ಲಿಗೆ ಬಂದು "ಶ್ರೀ ಶ್ರೀ ಗುರುಗಳವರು ತಾವು ಸ್ವಲ್ಪ ದಯಮಾಡಬೇಕು ಅಂತ ಅಪ್ಪಣೆ ಕೊಡಿಸಿದಾರೆ" ಎಂದು ಹೇಳಿದ. ಗುರು ಸ್ವಲ್ಪ ಯೋಚಿಸಿ 'ಬಂದೆ' ಎಂದು ಹೇಳಿ ಅವನನ್ನು ಹಿಂಬಾಲಿಸಿದ. ಗುರುಗಳು ದೇವರ ಮುಂದಾಸನದ ಮುಂದೆ ತಮ್ಮ ಪೀಠದ ಮೇಲೆ ಕುಳಿತಿದ್ದರು. ಗುರು ನಮಸ್ಕರಿಸಿದ ಮೇಲೆ ಆಶೀರ್ವದಿಸಿ "ಕೂತುಕೋಪ್ಪ" ಎಂದು ಎದುರಿನಲ್ಲಿ ದೂರದಲ್ಲಿದ್ದ ಮಣೆಯನ್ನು ತೋರಿಸಿದರು. ಗುರು ಕುಳಿತುಕೊಂಡ. ಶಿಷ್ಯ ಬಾಗಿಲನ್ನು ಮುಂದೆ ಮಾಡಿಕೊಂಡು ಹೊರಟುಹೋದ.

"ನಿನ್ನ ಕಂಡು ಮಾತಾಡಬೇಕು ಅನ್ನಿಸಿತು. ಕರೆಸಿದೆ" ಗುರುಗಳು ಮೊದಲು ಮಾಡಿದರು.

"... ........"

"ಪೂಜೆಗೇಕಪ್ಪ ಬರಲೇ ಇಲ್ಲ? ನಿನ್ನ ಉದ್ದಿಶ್ಯವಾಗೇ ಆಗಿತ್ತು."

"ಪಾಪವಿಲ್ಲದೇ ಇದ್ದರೆ ಪೂಜೆ ಯಾಕೆ ಅನ್ನಿಸಿತು."

"ಏನು! ಪಾಪವಿಲ್ಲವೆ? ಅಷ್ಟು ನಿಶ್ಚಯವಾಗಿರೋದಕ್ಕಾಗುತ್ತೇ? ನಾವು ಮುಕ್ತರಲ್ಲ. ಬಂಧನದಲ್ಲಿರೋರು. ತಿಳಿದು ತಿಳಿಯದೆ ಪಾಪ ಮಾಡ್ತಾಲೇ ಇರುತ್ತೀವಿ."

"ತಿಳಿಯದೆ ಮಾಡೋದಕ್ಕೆ ನಾವು ಜವಾಬ್ದಾರರಲ್ಲ. ಆದರೂ ಜ್ಞಾನ ಹೆಚ್ಚಿಸಿಕೊಂಡು ಕಡಿಮೆ ಮಾಡಬಹುದು. ಇನ್ನು ತಿಳಿದಿರೋ ತಪ್ಪನ್ನು

ಮಾಡದೇ ಇರೋ ಹಾಗೆ ಪ್ರಯತ್ನ ಪಡಬೇಕು; ಪೂಜೆಯಿಂದ ಪಾಪವನ್ನು ತೊಡೆಯೋದಕ್ಕೆ ಆಗೋದಿಲ್ಲ ಅಂತ ನಂಗೆ ಅನ್ನಿಸುತ್ತೆ"

"ನಿಜ; ಅದು ಉತ್ತಮ ಮಾರ್ಗ. ಆದರೆ ಆಸ್ತಿಕಜೀವನದಲ್ಲಿ ಪೂಜೆ ಪ್ರಾರ್ಥನೆಗಳಿಗೆ ಒಂದು ವಿಶಿಷ್ಟ ಸ್ಥಾನವಿದೆ. ದೇವರು ಒಬ್ಬ ಇದಾನೆ ಅಂತ........"

"ಆ ದೇವರ ಪ್ರಶ್ನೆಯ ಗೋಜಿಗೇ ನಾನು ಹೋಗೋದಿಲ್ಲ. ಬುಡ ಕೊನೆಯಿಲ್ಲದ ಪ್ರಶ್ನೆ, ನಮ್ಮಿಂದ ಬಿಡಿಸೋದಕ್ಕೆ ಆಗೋದಿಲ್ಲ ಅಂತ ಇಷ್ಟಕ್ಕೂ ಆ ವಿಷಯದಲ್ಲಿ ಒದ್ದಾಡದೆಯೇ ಜೀವನದಲ್ಲಿ ಮಾಡಿ ಮುಗಿಸದಷ್ಟು ಕೆಲಸ ಗಳಿವೆಯಲ್ಲ ನಮಗೆ. ಯಾಕೆ ಆ ಭಾರ ಬೇರೆ ಅಂತ ಅಂದುಕೊಂಡು ದೂರ ವಾಗಿದೀನಿ."

"ಹಾಗಲ್ಲಪ್ಪ. ಅದು ತಿಳಿಕೋಬೇಕಾದ ವಿಚಾರ. ಅದನ್ನ ತಿಳಿದು ಕೊಂಡೋರೂ ಇದಾರೆ."

"ದೇವರು ಇದ್ದರೂ ಈ ಪೂಜೆ ಪ್ರಾರ್ಥನೆಗಿಂತ, ಒಳ್ಳೆ ಬಾಳೇ ಅವನಿಗೆ ನಿಜವಾದ ಪೂಜೆಯಾಗೋದಿಲ್ಲವೆ ?"

"ಅದೂ ಬೇಕು. ಈ ಪೂಜೆ ಪ್ರಾರ್ಥನೆಗಳೂ ಆವಶ್ಯಕ—ಅವು ನಮಗೆ ಶಕ್ತಿ ಕೊಡುತ್ತವೆ"

"ಏನು, ಹೆಚ್ಚು ಪಾಪ ಮಾಡೋದಕ್ಕೆ?"

"ಅದು ಯೋಗ್ಯವಾದ ಮಾತಲ್ಲ. ಹೆಚ್ಚು ಸಾಧಿಸೋದಕ್ಕೆ ಶಕ್ತಿ.

"........"

"ಅದು ಹೋಗಲಿ. ಒಳ್ಳೇ ಬಾಳು ನೀನು ಅಂತೀಯಲ್ಲ, ನಡೆಸ್ತಿದೀಯ?"

"ತಕ್ಕಮಟ್ಟಿಗೆ."

ಅದರಲ್ಲಿ ತಂದೆ-ತಾಯಿಗಳ ಬಗ್ಗೆ ವಿಧೇಯತೆ ಪ್ರೇಮಗಳಿಂದ ನಡೆದು ಕೊಳ್ಳೋದೂ ಒಂದು ಅಂಶವಲ್ಲವೆ ?"

"ನಿಜ. ಅವರು ಅವಕ್ಕೆ ಅರ್ಹರಾದರೆ."

"ಅರ್ಹರಾದರೆ !" ಜನ್ಮಕೊಟ್ಟೋರು, ಪಾಲಿಸಿದೋರು !"

"ಅಷ್ಟೇ ಸಾಲದು ಗುರುಗಳೇ ಜನ್ಮಕೊಡೋದು, ಪಾಲಿಸೋದು ಎಲ್ಲ ಸಹಜವಾದ ವಿಷಯ—ನಮ್ಮ ಬಾಳನ್ನು ಯೋಗ್ಯವಾಗಿ ನಡೆಸೋದು ನಮ್ಮ

ಕರ್ತವ್ಯವಾಗಿರೋ ಹಾಗೆ. ಹಾಗೆಂದರೆ ಪ್ರೇಮ ವಧೇಯತೆಗಳನ್ನ ಕುರುಡ ರಂತೆ ಮಕ್ಕಳು ಸಲ್ಲಿಸಬೇಕು ಅಂತಲ್ಲ. ಯೋಗ್ಯತೆಯಿದ್ದಲ್ಲಿ ಅವು ಸಂದೇ ಸಲ್ಲುತ್ತವೆ. ಕೇಳೋ ಅಗತ್ಯವೇನಿದೆ ? ''

" ನೀವೆ ಅವರ ಬೆಲೆ ಹಚ್ಚೋರು ? "

'' ಯೋಚನೆ ವಿವೇಚನೆ ಇರೋವರಿಗೂ ಇದು ಮಾಡದೆ ಇರೋದು ಯಾವ ವ್ಯಕ್ತಿಗೆ ತಾನೆ ಸಾಧ್ಯ? ಎಲ್ಲ ತಮ್ಮತಮ್ಮ ಶಕ್ತಿಯಂತೆ ತಿಳಿವಳಿಕೆ ಯಂತೆ ನೋಡದೆ, ಅದರಂತೆ ಮಾಡೋದೆ. ಹಿರಿಯರಾದರೂ ಕಿರಿಯರ ಬಗ್ಗೆ ಮಾಡೋದು ಅಷ್ಟೆ. ''

'' ಇದೇನಪ್ಪ ಹೀಗೆಂದರೆ ! ಹಿಂದಿನ ಕಾಲದಲ್ಲಿ....''

" ಕಾಲಕಾಲಕ್ಕೆ ನೀತಿ ಬದಲಾಯಿಸುತ್ತೆ. "

'' ಹೋಗಲಿ ಬಿಡು. ಚರ್ಚಾಸ್ಪದವಾದ ವಿಷಯ ಬೇಡ. ನಿಮ್ಮ ತಂದೆ ಮತ್ತು ನಿನ್ನ ಸಂಬಂಧದ ಮಾತು ಆಡಬೇಕು ಅಂತ ಇಷ್ಟೂ ಹೇಳಿದ್ದು. ಅವರು ನಿಂಗಾಗಿ ಏನೇನು ಮಾಡಿದಾರೆ, ಎಷ್ಟು ನಿಂಗಾಗಿ ಒದ್ದಾಡ್ತಾರೆ. ನಿನ್ನ ಪ್ರೇಮಕ್ಕಾಗಿ, ನಿನ್ನ ಒಂದು ನೋಟ, ಒಂದು ಮಾತಿಗಾಗಿ ಎಷ್ಟು ಹಾತೊರೆಯುತ್ತಾರೆ ಅಂತ ನಿಂಗೇನಾದರೂ ಗೊತ್ತಿದೆಯೆ? ಅದನ್ನೆಲ್ಲ ತಿಳಿದೂ ಹೀಗೆ ನಡೀತಾ ಇದೀಯ ? "

" ಅವರ ಪ್ರೇಮಭಾವನೆಗೆ ಕೃತಜ್ಞನಾಗಿದೀನಿ. ನಾನೂ ಪ್ರೀತಿಸದೆ ಇಲ್ಲ. ಆದರೆ ಅದೆಲ್ಲ ಅಳಿಸಿ ಹೋಗೋ ಸಂದರ್ಭಗಳಿವೆ. ಅವರ ಪ್ರೀತಿ ನನ್ನ ಬಿಟ್ಟು, ಅವರ ಮನೆ ಬಿಟ್ಟು, ದಾಟದಿದ್ದರೆ ಅಂಥ ಪ್ರೀತಿಗೆ ಹೆಚ್ಚು ಬೆಲೆಯಿಲ್ಲ. ''

'' ಹಾಗಲ್ಲ, ಹಾಗಲ್ಲ. ಅವರದು ವಿಶೇಷ. ಎಂಥೆಂಥ ಸಂದರ್ಭ ಗಳನ್ನೂ ಕೂಡ ಮುಚ್ಚಿಕೊಳ್ಳೋ ಅಂಥ ಪ್ರೀತಿ. ನಿನ್ನ ಹುಟ್ಟಿನ ವಿಚಾರ ಒಂದನ್ನ ತೆಗೆದುಕೊಂಡರೇ ಸಾಕು—ಗೊತ್ತಿದೆಯಲ್ಲ ? '

'' ಅಂಥಾದ್ದೇನು ? ಎಲ್ಲರಂತೆ...."

"ಅದೇ. ನಾವು ಅಂದುಕೊಂಡಿದ್ದೆವು. ಅಪ್ಪ, ಎಷ್ಟು ಯಾತ್ರೆ ತೀರ್ಥ, ದಾನ ಧರ್ಮ ವ್ರತ ಕತೆ, ದೇವರ ದೈವಜ್ಞರ ಸೇವೆ ಮಾಡಿ ನಿನ್ನ ಪಡೆದಿದಾರ

ಅಂತೀಯೆ. ಪ್ರೇಮದ ಮಡದಿ ಇದ್ದರೂ, ನಿಂಗಾಗಿ ನಿನ್ನ ತಾಯಿಯನ್ನು ಮದುವೆ ಮಾಡಿಕೊಂಡು ಪಡೆದರು.

" ಹುಂ. "

" ನಿಂಗಾಗಿ ಎಷ್ಟು ಸಹಿಸಿದಾರೆ ಅಂತ ತಿಳಿದಿದೀಯೆ? ಇದರಿಂದ ನಿಮ್ಮ ದೊಡ್ಡಮ್ಮ ಅಚ್ಚಾನಿ, ಬಲಿಯೇ ಆದಳು, ಆತ್ಮಹತ್ಯ ಮಾಡಿಕೊಂಡು ಹುಚ್ಚಿ ತನ್ನನ್ನು ಯೋಚಿಸಿಕೊಂಡಳೇ ಹೊರತು ನಿಮ್ಮ ತಂದೆಯ ಹಾಗೆ ವಂಶವನ್ನು ಯೋಚಿಸಲಿಲ್ಲ. ನಿನ್ನ ತಂದೆ ಈ ಪೆಟ್ಟನ್ನು ಹೇಗೊ ಸಹಿಸಿಕೊಂಡರು."

" ಏನು, ಹಾಗಾಯ್ತು ? "

" ಹುಂ, ಇನ್ನೂ ಏನಂತೀಯ, ಪಾಪ. ನೀನು ಹುಟ್ಟುವಾಗ ನಿಮ್ಮ ತಾಯಿಯ ಜೀವಾನೋ ನಿನ್ನ ಜೀವಾನೋ ಒಂದನ್ನು ಆಯ್ದುಕೊಳ್ಳಬೇಕಾದ ಪ್ರಸಂಗ ಬಂತು........"

" ಹಂ!....ನನ್ನ ಆಯ್ದುಕೊಂಡರು, ತಾಯೀನ ಬಲಿ ಕೊಟ್ಟು!"

" ಹೌದು, ನೋಡಿದೆಯಾ. ಇದನ್ನೂ ಹೇಗೆ ಸಹಿಸಿರಬೇಕು ? ಎಲ್ಲ ನಿಂಗಾಗಿ. "

ಗುರುವಿಗೆ ಸ್ವಲ್ಪ ಹೊತ್ತು ಮಾತೇ ಹೊರಡಲಿಲ್ಲ. ಗುರುಗಳೂ ಸುಮ್ಮ ನಿದ್ದರು. " ಹಾಗಾದರೆ ನಾನು ಎರಡು ಕೊಲೆಯಿಂದ ಹುಟ್ಟಿದೋನು— ಎರಡು ಕೊಲೆಯಿಂದ ! ಅಬ್ಬಬ್ಬ ! ನನ್ನ ಬಾಳು ಇಷ್ಟು ಶೋಚನೀಯ ವಾಗಿರೋದರಲ್ಲಿ ಆಶ್ಚರ್ಯವಿಲ್ಲ, ಇಲ್ಲಿ."

" ಕೊಲೆ ಅನ್ನಬೇಡಪ್ಪ. ವಂಶದಲ್ಲಿ ಪುತ್ರಾಭಿವೃದ್ಧಿಯಾಗಲೇಬೇಕು. ಅದಕ್ಕೆ ಕೊಟ್ಟ ಬೆಲೆ ಅಂತ ಇಟ್ಟುಕೋ. ಹಿಂದೆ ಇದಕ್ಕಾಗಿ ಯಜ್ಞ ಯಾಗಾದಿ...."

" ಸಾಕು ಗುರುಗಳೇ, ಕೇಳಲಾರೆ ಇನ್ನು. ಇದು ನನ್ನ ಅಭಿಪ್ರಾಯ ವನ್ನು ಸಮರ್ಥಿಸುತ್ತೆ." ಗುರು ಎದ್ದುಬಿಟ್ಟ.

" ಇದೇನಪ್ಪ, ತಪ್ಪುತಿಳಿದುಕೊಂಡಿದೀಯ. ಬಾ ಇಲ್ಲಿ. ಕೂತುಕೋ ಹೇಳ್ತೀನಿ.

" ಕ್ಷಮಿಸಿ. " ಗುರು ಹೊರಟೇ ಬಂದುಬಿಟ್ಟ ಹೊರಗೆ.

ಗುರುಗಳು ಭ್ರಾಂತರಾಗಿ ಸುಮ್ಮನೆ ನೋಡಿದರು. "ಇವನು ನನ್ನ ವರದಿಂದ ಹುಟ್ಟಿದೋನೆ ?" ಎಂದುಕೊಂಡರು. ತಮಗಾದ ಅಪಮಾನ ದಿಂದ ಸಿಟ್ಟಾದರು.

ಗುರು "ಅಯ್ಯೋ ! ನಾನು ಎರಡು ಖೂನಿಯ ಕೂಸು ! ಎರಡು ಖೂನಿಯ, ಕೂಸು ! ಹೀಗೇ ! ಹೀಗೇ ! ಇದೊಂದು ಸಾಲದಾಗಿತ್ತು ! ನಿಜ ವಾದ ಪಾಪದಲ್ಲಿ ಹುಟ್ಟಿದವನೆಂದರೆ ನಾನೇ....ಇದು ಕಿರೀಟಪ್ರಾಯ—ಈ ಅಕೃತ್ಯಗಳಿಗೆಲ್ಲ...." ಎಂದುಕೊಳ್ಳುತ್ತ ತನ್ನ ಹಾಸಿಗೆಯ ಮೇಲೆ ದೊಪ್ಪನೆ ಬಿದ್ದು ಹೊರಳಾಡಿದ. ತನ್ನ ಎದೆಯಲ್ಲಿ ಆಗ ತಾನೆ ಶೂಲವನ್ನು ನೆಟ್ಟಂತಾಗಿತ್ತು. ಅವನು ಯಾತನೆಯಿಂದ ನರಳುತ್ತಿದ್ದ. ಇದು ಕ್ರಮಕ್ರಮವಾಗಿ ಅವನ ಪಟ್ಟಿಗೆ ಸೇರಿಕೊಂಡಿತು ಹಿಂದಿನವೆಲ್ಲ ಇದರ ಜತೆಗೆ ಅವನ ಮನಸ್ಸಿನ ಮುಂದೆ ದೃಶ್ಯದೃಶ್ಯವಾಗಿ ಸಿದಾನವಾಗಿ ಹಾಯ್ದುಹೋದುವು. 'ದೊಡ್ಡಮ್ಮ........ ಅಯ್ಯೋ ಎಷ್ಟು ನೊಂದಳೋ ಶಪಿಸಿದಳೋ, ಪಾಪ !........ಅಮ್ಮ!....ತನ್ನ ಬಲಿ ತನಗೇ ತಿಳಿದಿರಲಾರದು........ಕುಸುಮ... ಪೆಚ್ಚುಹುಡುಗಿ!....ಹೇಗೆ ಎಷ್ಟು ಮೋಸ ಹೋದಳು ! ಏನೇನು ಸಹಿಸಿದಳು! ಸಹಿಸುತ್ತಿದಾಳೆ........ ಚಿಕ್ಕಮ್ಮ!....ನಿರಪರಾಧಿ, ಅಜ್ಞಾನಿ....ಕಾಮಕ್ಕೆತುತ್ತು..ಆದರೂ ಸಮಾಧಾನ ದಿಂದಲೇ ಸತ್ತಳು.....ಕಮಲೆ !....ಕೃತ್ರಿಮದ ಕಗ್ಗೊಲೆ........ತನ್ನ ಕತ್ತನ್ನು ತಾನೇ ಕುಯ್ದುಕೊಳ್ಳೋ ಮೋಡಿಗೆ ಸಿಕ್ಕಿದಳು........ದಾಸ ! ....ಸ್ವತಂತ್ರ ರೈತ, ಈಗ ದಾಸ !....ಈ ಮುದಿ ವಯಸ್ಸಿನಲ್ಲಿ ಮಗನನ್ನೂ ಕಳೆದುಕೊಂಡು ಮೂಗಿಗೆ ಕವಡೆ ಕಟ್ಟಿಕೊಂಡು ಗಾಣ ಸುತ್ತುತ್ತಾ ಇದಾನೆ........ಆ ದೊಡ್ಡ ತಿಟ್ಟಿನ ಬಡ ಜನರೋ?....ಸದಾಶಿವ ನಿತ್ಯವೂ ಹೇಳೋ ಆ ಕತೆಗಳೋ— ಒಂದೇ ಎರಡೇ....ಎಷ್ಟೊಂದು ! ಎಂಥವು ! ಶಿವಪ್ಪನೋ—ಮನೆ ಮಾರಿ ಕೊಂಡು ಹೋದ....ಎಂಥೆಂಥ ವ್ಯಾಪಾರ, ವ್ಯವಹಾರ ! . ದೇವರೇ !....' ಈ ಶೂಲಗಳು ಅವನನ್ನು ಇರಿದುವು, ಕೊರೆದುವು. ಅವನು ಚಿತ್ರಹಿಂಸೆಗೆ ಒಳಗಾದ ವ್ಯಕ್ತಿಯಂತೆ ಒದ್ದಾಡಿದ. ಗಂಟೆಗಳು ಹೋದುವು. ನಿದ್ದೆಯಿಲ್ಲ. ತಲೆ-ಚಿಟ್ಟು, ಕಣ್ಣುರಿ. ಆದರೂ ಪರಿಹಾರವಿಲ್ಲ. ಹಾಗೇ ನೋವು ಮನಸ್ಸನ್ನು ಇನ್ನೊಂದು ದಾರಿಗೆ ಎಳೆಯಿತು. 'ಹುಂ !....ಇಂಥಾದ್ದೆಲ್ಲ....ಮರ್ಯಾದೆ ಯಿಂದಲೇ........ಮರ್ಯಾದೆಯಿಂದ ! ಅದೇ ಹೊದಿಕೆಯಲ್ಲೇ, ಅದೇ ನಂಬಿಕೆ

ಯಲ್ಲಿ ಹ! ಅಯ್ಯೋ ನಾಚಿಕೆಯೇ! ವ್ಯಂಗ್ಯವೇ!' ಈ ನೋವಿನಲ್ಲೂ ಅವನ ತುಟಿ ತಿರಸ್ಕಾರದಿಂದ ಸೊಟ್ಟಾಯಿತು. 'ಇನಕ್ಕೆಲ್ಲ ಉಪಶಾಂತಿ ಗಳು ಬೇರೆ........ಗೋವಾಳ........ಗೋಪಾಳ!........ಗೌರಮ್ಮ ವಾರ್ಡ್, ಸಣ್ಣಮ್ಮ ವಾರ್ಡ್, ದೇವಸ್ಥಾನ, ಮದುವೆ ಮುಂಜಿ....ಅಯ್ಯೋ ಏನು ಅಜ್ಞಾನ! ಕೂಲಿಕೊಟ್ಟು ತಿಪ್ಪೆ ಹೊರಿಸಿ ಕಳಿಸಿದ ಹಾಗೆ ದಾನ ಮಾಡಿ ಕಳೆದುಕೊಳ್ಳೋದು ಸಾಧ್ಯವೆ?—ಅದೂ ಪಾಪದ ಸಂಪಾದನೆಯಿಂದಲೇ.... ಹುಂ!....ಈ ಸಂದರ್ಭದಲ್ಲಿ ನನ್ನ ಕರ್ತವ್ಯವೇನು? ಏನು ಮಾಡಲಿ?.... ಏನು? ಯಾವಾಗ?' ಗುರು ತನ್ನ ತಲೆಯನ್ನು ಕೆರೆದುಕೊಂಡ, ಕೂದಲನ್ನು ಹಿರಿದುಕೊಂಡ—ತೀಕ್ಷ್ಣವಾಗಿ ಯೋಚಿಸಿದ. ಏನಾದರೂ ಮಾಡದಿದ್ದರೆ ತನಗೆ ಶಾಂತಿ ದೊರಕದೆಂದು ಅವನಿಗೆ ಗಟ್ಟಿಯಾಯಿತು. ತಕ್ಷಣ ಎದ್ದ 'ಉಹುಂ, ಈ ಹೊತ್ತಿನಲ್ಲಿ....ಎಷ್ಟು ಗಂಟೆ?....' ಗಡಿಯಾರ ಎರಡು ಹೊಡೆಯಿತು. 'ಎರಡು! ಈಗೇನು ಮಾಡೋದು ಬೆಳಗಾಗಲಿ. ಬೆಳಿಗ್ಗೆ.... ಏನು? ಹೇಗೆ?' ಮತ್ತೆ ಅದೇ ಬಗೆ ಹರಿಯದ ಯೋಚನೆ. 'ಇಲ್ಲ, ಇಲ್ಲ ನಾಳೆ ಸಂಜೆ! ಹುಂ ಸಂಜೆ! ಆ ಮರ್ಯಾದೆ ಉತ್ಸವದಲ್ಲಿ! ಈ ಮರುಳೂರಿನ ಜನರ ಮಧ್ಯದಲ್ಲಿ—ಎದುರಿಗೆ!....ಹುಂ....ಛೀ ಗುಟ್ಟಿದರೆ!.... ಎಲ್ಲ ಒದರಿ ಬಿಟ್ಟರೆ! ......ಅದೇ ಸರಿ....ಆಗ ಗೊತ್ತಾಗುತ್ತೆ—ಈ ಜನಕೆ ತಮ್ಮ ಮರುಳುತನ ಎಷ್ಟು ಅಂತ........ಮರ್ಯಾದೆ ಟೊಳ್ಳು ಗೊತ್ತಾಗುತ್ತೆ ಆಗಲಾದರೂ ಕಣ್ಣು ಬಿಟ್ಟು ಕಲೀತಾರೆ....ಹೌದು, ಅದೇ ಸರಿ........ಅದೇ ಸರಿ. ಹೇಗೆ ಯಾವ ಮಾತಿನಲ್ಲಿ ಯಾವ ಗಳಿಗೇಲಿ ಮಾಡಬೇಕು? ಮಾನ ಪತ್ರವಾದ ಮೇಲೆ........ಅವರಂತೇ ತಾನೂ ದೊಡ್ಡ ಭಾಷಣ ಮಾಡಿ ಬಿಡೋದು....ಅವರ ಕಪಟ ಭಾಷಣಕ್ಕೆ, ಸೋಗಿನ ನಡತೆಗೆ, ಅನ್ಯಾಯಕ್ಕೆ ಎಷ್ಟು ವಿರುದ್ಧವಾಗಿರುತ್ತೆ, ನನ್ನದು! ಜನ ಏನೆಂದಾರು! ತಡೆದಾರೆ? ನನ್ನೇ ಹೀಯಾಳಿಸುತ್ತಾರೋ, ಮಾತಾಡಲೇ ಬಿಡೋದಿಲ್ಲವೋ. ಹೇಳೋಹಾಗಿಲ್ಲ. ಭ್ರಾಂತ ಜನರ ವಿಚಾರ. ಆದರೇನು ನಾನು ಬಿಡಬೇಕಲ್ಲ........ಹೇಳೀ ಬಿಡೋದು ಎಲ್ಲ. ಹೌದು........ಹೌದು........' ಈ ಚಿಕಿತ್ಸೆ ಅವನ ಬೆಂದ ಬುದ್ಧಿಗೆ, ನೊಂದ ಎದೆಗೆ ಸ್ವಲ್ಪ ಸಮಾಧಾನ ತಂದಂತಾಯಿತು. ಅವನು ತನ್ನ ಮುಂದಿನ ಭಾಷಣವನ್ನು ತನ್ನಲ್ಲೇ ತಯಾರಿಸಿಕೊಂಡು ತಿರಿತಿರಿವಿ

ಕೊಂಡ. ತನ್ನ ಮಾತುಗಳು ಎಷ್ಟು ತಡೆದರೂ, ಒಂದು ಕ್ರಮದಲ್ಲಿ ಏರ್ಪಡಿಸಲು ಎಷ್ಟು ಯತ್ನಿಸಿದರೂ ರಭಸದಿಂದ ಒಟ್ಟೊಟ್ಟಿಗೆ ನುಗ್ಗಿ ನುಗ್ಗಿ ಬಂದು ಗೊಂದಲ ಮಾಡುತ್ತಿದ್ದುವು. ಮಹಾ ಪ್ರಯತ್ನದಿಂದ ವಿಂಗಡಿಸಿ ತನ್ನ ಭಾವನೆ, ಮಾತು-ಗಳನ್ನು ಹಿಡಿತಕ್ಕೆ ತರುತ್ತಿದ್ದ. ಯಾವಾಗ, ಎಷ್ಟು, ನಿದ್ದೆಯ ಜೊಂಪು ಹತ್ತಿತೋ ಅವನಿಗೆ ಗೊತ್ತಾಗಲಿಲ್ಲ.

ಬೆಳಿಗ್ಗೆ ಎದ್ದಾಗ ಗುರುವಿನ ತಲೆ ಸಿಡಿಯುತ್ತಿತ್ತು, ಮೈ ಕೈ ನೋಯುತ್ತಿತ್ತು, ಕಣ್ಣು ಭಗಭಗ ಉರಿಯುತ್ತಿತ್ತು. ಆದರೆ ಈ ಬಾಧೆ ದೊಡ್ಡ ಬಾಧೆಯಲ್ಲಿ ಮುಳುಗಿತ್ತು. ಈಗಲೂ ಅವನ ಮನಸ್ಸು ಅದೇ ಚಿಂತೆಯಲ್ಲೇ, ಸಿದ್ಧತೆಯಲ್ಲೇ. ಹೇಗೆ ಬಾಕಿಯ ನಿತ್ಯ ಕರ್ಮಗಳನ್ನು ಮಾಡಿದನೋ! ಕೋಣೆಯಲ್ಲಿ ಶತಪಥ ತಿರುಗುತ್ತ ತನ್ನ ಭಾಷಣವನ್ನು ಮತ್ತೆ ಮತ್ತೆ ಹೇಳಿಕೊಂಡ. ಅದು ಭಾಷಣವಾಗದೆ ಭಾವೋದ್ವೇಗದ ಒಂದು ಅರ್ಧ ಮಾತಿನ ಉದ್ಗಾರ, ತಡೆತಡೆದು ಅಷ್ಟಿಷ್ಟು ಬಂದ ಅಡ್ಡಾದಿಡ್ಡಿಯ ಸರಪಳಿಯಾಯಿತು. ಅತೃಪ್ತಿಯಿಂದ, ಬರೆಯಲು ತೀರ್ಮಾನಿಸಿದ. ಆದರೆ ಅದು ತನ್ನ ಇಷ್ಟದಂತೆ ಮಾರ್ಮಿಕವಾಗಿರದೆ ಅತಿ ಕಠಿಣ ಮತ್ತು ಒರಟಾಯಿತು. ಇದು ತನ್ನ ಗುರಿಯನ್ನೇ ಸೋಲಿಸುವಂತೆ ಕಂಡಿತು. ಹರಿದುಬಿಟ್ಟ. ಇನ್ನೊಂದನ್ನು ಬರೆದ. ಅದನ್ನೂ ಹರಿದ. ಕಡೆಗೆ ಸಮಯದ ಸ್ಫೂರ್ತಿಯನ್ನೇ ನೆಚ್ಚಿಕೊಂಡ. ಅಂತೂ ಅದೇ ಧ್ಯಾನದಲ್ಲಿದ್ದು ವಿಷಯದಲ್ಲಿ ತನ್ನನ್ನು ಅದ್ದಿ ಚೆನ್ನಾಗಿ ನೆನೆಸಿಕೊಂಡ. 'ಈಗ ಯೋಚನೆ ಹರುಕುಮುರುಕಾಗಿದೆ. ಮನಸ್ಸಿನಲ್ಲಿ ಅಧೈರ್ಯವಿದೆ. ಆದರೆ ಅಲ್ಲಿ ಸಯದಲ್ಲಿಮುಎಲ್ಲ ಸರಿಯಾಗುತ್ತೆ. ಕಾಲೇಜು ಚರ್ಚೆಗಳಲ್ಲೂ ಹೀಗೇ ಆಗುತ್ತಿರಲಿಲ್ಲವೇ ?' ಎಂದುಕೊಂಡು ಸ್ವಲ್ಪ ಸಮಾಧಾನ ತಂದುಕೊಂಡ. ಹೊತ್ತಾಗುತ್ತ ಬಂದಿತು. ಅವನು ಟೈಮ್‌ಬಾಂಬ್‌ನಂತೆ ಆಗಿದ್ದ.

ಮಹಲು ಬೆಳಗಿನಿಂದಲೂ ಗುಜುಗುಟ್ಟುತ್ತ ಗಲಭೆಯಿಂದ್ದುದು ಈಗ ಶಾಂತವಾಗಿತ್ತು, ನಿಶ್ಶಬ್ದವಾಗಿತ್ತು. ಕೋಣೆಯಿಂದ ಹೊರಗೆ ಬಂದ. ಎಲ್ಲರೂ ಉತ್ಸವಕ್ಕೆ ಹೊರಟುಹೋಗಿದ್ದರು—ಗುರುಗಳೂ ಕೂಡಿ. ದಾಸ ಒಬ್ಬನೇ ಮನೆಯಲ್ಲಿದ್ದ. "ಏನಪ್ಪ, ನೀನು ಹೋಗೋದಿಲ್ಲವೆ?—ಅಂಥ ಉತ್ಸವವಂತೆ?" ಎಂದು ಕೇಳಿದ. ಗುರು ಚೇಷ್ಟೆಯ ನಗುವಿನಿಂದ

" ಹೋಗ್ತೀನಿ. ಹೋಗದೇ ಇದ್ದರೆ ಆಗುತ್ತೇ? " ಎಂದ. ಇವನ ರೀತಿ ದಾಸನಿಗೆ ವಿಚಿತ್ರವಾಗಿ ಕಂಡಿತು. ಗುರು ನಸುನಕ್ಕಿದುದನ್ನು ದಾಸ ಕಂಡು ಬಹಳ ಕಾಲವಾದಂತಿತ್ತು. ಗಂಭೀರಮುದ್ರೆಯೆ, ವ್ಯಥೆಯೆ ಅವನಿಗೆ ಸಹಜ ವಾಗಿತ್ತು. ಈಗ ಈ ನಗು ಭಯವನ್ನೇ ತರುವಂತಿತ್ತು. ಅಂತೂ ಗುರು ಎರಡು ದಿನದ ಗಡ್ಡವಿದ್ದರೂ ತಲೆ ಬಾಚಿಕೊಂಡು ಬೇರೆ ಬಟ್ಟೆಗಳನ್ನು ಹಾಕಿ ಕೊಂಡು ಬಹಳ ಲಗುಬಗೆಯಿಂದಲೇ ಹೊರಟ.

ಇಷ್ಟು ದಿನ ಮರುಳೂರು ಕಾದಿದ್ದ ಈ ಮಹೋತ್ಸವಕ್ಕೆ ಟೌನ್ ಹಾಲ್ ಸಾಲದಾಗುವದೆಂದು ತೀರ್ಮಾನವಾಗಿ, ಪ್ರತಿಮೆಯ ಜಾಗವನ್ನು ಒಳಗೊಂಡು ವಿಶಾಲವಾದ ಒಟ್ಟೆಯ ಚಪ್ಪರ ಹಾಕಲ್ಪಟ್ಟಿತ್ತು ಮಂಟಪದ ಅಲಂಕಾರ-ಸಮಿತಿಯವರು ತಮ್ಮ ಕೆಲಸವನ್ನು ಬಹಳ ಚೆನ್ನಾಗಿ ಮಾಡಿದ್ದರು. ಮಂಟಪ ವೆಲ್ಲ ಹೂಮಾಲೆಗಳು, ಎಲೆ ತೋರಣ, ಬಣ್ಣದ ಕಾಗದ, ಇವುಗಳಿಂದ ಶೋಭಿಸುತ್ತಿತ್ತು. ಜಗಲಿಯ ಮಧ್ಯಗಲ್ಲಿ ಪ್ರತಿಮೆಯು ರೇಷ್ಮೆಯ ಹೊದಿಕೆ ಯಿಂದ ಮುಚ್ಚಲ್ಪಟ್ಟಿತ್ತು. ಇದರ ಎರಡು ಪಕ್ಕಗಳಲ್ಲಿಯೂ ಗಾಂಧಿ, ನೆಹರು, ಪಟೇಲ್, ತಿಲಕ್ ಮೊದಲಾದ ದೇಶಭಕ್ತರ ಚಿತ್ರಗಳು ಮಾಲೆಗಳ ಭಾರದಿಂದ ಬಾಗಿ ತೂಗುತ್ತಿದ್ದುವು. ರತ್ನಗಂಬಳಿ ಮುಚ್ಚಿದ ಜಗಲಿಯ ಮೇಲೆ ಸಾಹು ಕಾರರು, ಮೂವರು ಮಂತ್ರಿಗಳು, ಗುರುಗಳು, ಭೋಗಪ್ಪ ಇಷ್ಟು ಜನಕ್ಕೇ ಎತ್ತರವಾದ ಸಿಂಹಾಸನದ ಮಾದರಿಯ ಕುರ್ಚಿಗಳು; ಕಸೂತಿ ಕೆಲಸದ ಬಟ್ಟೆ ಮುಚ್ಚಿದ ದೊಡ್ಡ ಗುಂಡುಮೇಜೊಂದು. ಇದರ ಮೇಲೆ ಧ್ವನಿವರ್ಧಕಗಳು ಎರಡು. ಮುಂದೆ ಮಂಟಪದಲ್ಲಿ ಗಣ್ಯರು ಬರುವದಕ್ಕೆ ದಾರಿ. ಒಂದು ಕಡೆ ಮಹನೀಯರು ಇನ್ನೊಂದು ಕಡೆ ಮಹಿಳೆಯರು. ' ಮುನಸಿಪಲ್ ಸದಸ್ಯರು ಮತ್ತು ಸನ್ಮಾನಸಮಿತಿ ' ' ಅತಿಥಿಗಳು ' ' ಮಹನೀಯರು ' ' ವಿದ್ಯಾರ್ಥಿಗಳು ' ' ಮಹಿಳೆಯರು ' ' ವಿದ್ಯಾರ್ಥಿನಿಯರು ' ಮುಂತಾಗಿ ಬೋರ್ಡುಗಳು ತೂಗಾಡು ತ್ತಿದ್ದವು. ಮಕ್ಕಳಿಗೆ ಮುಂದೇ ಅರ್ಧಚಂದ್ರಾಕಾರವಾಗಿ ಜಮಖಾನದ ಮೇಲೆ ಸ್ಥಳವಿತ್ತು. ಚಿತ್ರವಿಚಿತ್ರ ರೇಶ್ಮೆ ಬ್ಯಾಡ್ಜುಗಳನ್ನು ತಗಲಿಸಿಕೊಂಡು ತಮ್ಮ ಅತ್ಯುತ್ತಮ ವೇಷಭೂಷಣಗಳಲ್ಲಿ ಎತ್ತೆತ್ತಲೂ ಅತಿ ಚಟುವಟಿಕೆಯಿಂದ ಸ್ವಯಂಸೇವಕರು ಓಡಾಡುತ್ತಿದ್ದರು. ಬಂದ ಗಣ್ಯರಿಗೆ ಅವರವರ ಸ್ಥಳ-ಗಳನ್ನು ತೋರಿಸುತ್ತ, ತಮ್ಮಲ್ಲೇ ಕೂಗಾಡುತ್ತ ಸಭೆಯ ಗಮನವನ್ನು ತಮ್ಮ

ಕಡೆಗೆ ಸೆಳೆದುಕೊಳ್ಳುತ್ತಿದ್ದರು. ಸಂಜೆ ಐದು ಗಂಟೆಯ ಸಭೆಗೆ, ಜನರು ಎರಡು ಗಂಟೆಯಿಂದಲೇ ಬಂದು ಸೇರುತ್ತ, ನಾಲ್ಕು ಗಂಟೆಯ ಹೊತ್ತಿಗಾಗಲೇ ಕಾದಿರಿಸಿದ ಸ್ಥಳಗಳನ್ನು ಬಿಟ್ಟು ಬಾಕೀದನ್ನೆಲ್ಲ ಆಕ್ರಮಿಸಿಕೊಂಡಿದ್ದರು. ಇನ್ನೂ ಜನರು ಬರುತ್ತಲೇ ಇದ್ದರು. ಈಗ ಇವರನ್ನು ತಡೆದು ಹೊರಭಾಗದಲ್ಲಿ ಇರುವಂತೆ ನೋಡಿಕೊಳ್ಳುವುದು ಸ್ವಯಂಸೇವಕರಿಗೆ ಕಷ್ಟವಾದ ಕೆಲಸವಾಯ್ತು. ಇನ್ನೊಂದು ಗಂಟೆಯೊಳಗಾಗಿ ಚಪ್ಪರದ ಹೊರಗೂ ಜನರು ಸುತ್ತಲೂ ಕಿಕ್ಕಿರಿದು ಸೇರಿ ನಿಂತಿದ್ದರು, ತುದಿಗಾಲಿನ ಮೇಲೆ ತೂರಾಡುತ್ತಿದ್ದರು, ಒತ್ತುತ್ತಿದ್ದರು, ತಳ್ಳುತ್ತಿದ್ದರು, ಜಗಳವಾಡುತ್ತಿದ್ದರು. ಹಾಗೇ ಅವರಿವರ ಸಂಧಾನದಿಂದ ಸಮಾಧಾನ ಹೊಂದುತ್ತಿದ್ದರು.

ಭೋಗಪ್ಪ ಮುಂದಾಗಿ ಗುರುಗಳು, ಸಾಹುಕಾರರು, ಮಂತ್ರಿಗಳು, ಹಸಿಲೆರೆಯ ಕಂಬಗಳ ಮಧ್ಯೆ ಹೂವಿನ 'ಸುಖಾಗಮನ' ಕಮಾನಿನ ಕೆಳಗೆ ಹಾಯ್ದು ಸಭೆಯನ್ನು ಪ್ರವೇಶಿಸಿ ಉದ್ದವಾದ ಮಧ್ಯ ದಾರಿಯಲ್ಲಿ ನಡೆದು ಬರುತ್ತಿದ್ದಾಗ ಸಭೆಗೆ ಸಭೆಯೇ ಎದ್ದು ಮರ್‍ಯಾದೆ ತೋರಿಸಿತು, ಸಂತತವಾಗಿ ಎರಡು ನಿಮಿಷಗಳ ಕಾಲ ಚಪ್ಪಾಳೆಯ ಸುರಿಮಳೆಯಾಯ್ತು. ಇವರು ತಮ್ಮ ಪೀಠಗಳನ್ನು ಅಲಂಕರಿಸಿದ ಮೇಲೆ ಸಭೆಯು ಮತ್ತೆ ಕುಳಿತಿತು. ಬಾಲಕಿಯರಿಂದ 'ಒಂದೇ ಮಾತರಂ' ನಂತರ ಹಾರತುರಾಯಿಗಳಾದುವು. ಸಾಹುಕಾರರಿಗೆ ಊರಿನಲ್ಲಿದ್ದ ಗ್ರಾಮೋದ್ಧಾರಕ ಸಮಿತಿ, ಕರ್ಣಾಟಕ ಸಂಘ ಇವೇ ಮುಂತಾಗಿ ಸಾಮಾಜಿಕ, ರಾಜಕೀಯ, ಕಲಾ, ವ್ಯಾಪಾರಿಕ ಸಂಸ್ಥೆಗಳೆಲ್ಲ ಒಟ್ಟು ಇಪ್ಪತ್ತೆಂಟು ಅರ್ಪಿಸಿದ ಹಾರಗಳು ಮೇಜಿನ ತುಂಬ ರಾಶಿಯಾಗಿ ಬಿದ್ದುವು. ಕಡೆಗೆ ಅವನ್ನೆಲ್ಲ ತೆಗೆದು ಕೆಳಗೆ ಇರಿಸಬೇಕಾಯಿತು. ಹಾಗೂ ಸಾಹುಕಾರರು ಕೆಲವು ಹಾರಗಳನ್ನು ಹಾಕಿಕೊಂಡೇ ಕುಳಿತಿದ್ದರು.

ಸನ್ಮಾನಸಮಿತಿಯ ಕಾರ್ಯದರ್ಶಿ ಚಂದ್ರಶೇಖರ ಸಾಹುಕಾರರ ಪ್ರಶಂಸಾ ಪೂರಿತವಾದ ವರದಿಯನ್ನು ಓದಿದ ಮೇಲೆ, ಭೋಗಪ್ಪ ಎದ್ದು "ಮರುಳೂರು ಜನರಿಗೆ ತಂದೆಯಂತಿರುವ ಸಾಹುಕಾರ್ ವಿಶ್ವೇಶ್ವರಯ್ಯನವರ ಪ್ರತಿಮೆಯನ್ನು ನೋಡಲು ಸಭಿಕರೆಲ್ಲರೂ ಅತ್ಯಾತುರದಿಂದ ಇರುವದರಿಂದ, ಅನಾವರಣವನ್ನು ಮೊದಲು ಮಾಡುವ ಕೃಪೆ ಮಾಡಬೇಕು." ಎಂದು ಅಧ್ಯಕ್ಷರನ್ನು ಪ್ರಾರ್ಥಿಸಿಕೊಂಡ. ಸಭಿಕರು ಕೈ ತಟ್ಟಿ ತಮ್ಮ ಒಪ್ಪಿಗೆಯನ್ನು ವ್ಯಕ್ತಪಡಿಸಿ

ದರು. ಮಾನ್ಯ ಮಂತ್ರಿಗಳು ಸಾಹುಕಾರರ ಗುಣ, ಕಾರ್ಯ, ಸೇವೆಗಳ ಪ್ರಶಂಸೆ ಮಾಡಿ, ಸತ್ಪ್ರಜೆಗಳನ್ನು ಈ ರೀತಿ ಸತ್ಕರಿಸುವ ಅಗತ್ಯ, ಔಚಿತ್ಯದ ವಿಷಯ ವಾಗಿ ಒಂದು ಗಂಟೆ ಕಾಲ ಆರಂಭಭಾಷಣ ಮಾಡಿ, ಪ್ರತಿಮೆಯ ಅನಾವರಣ ದಲ್ಲಿ ತಮಗಿರುವ ಸಂತೋಷವನ್ನು ಬಣ್ಣಿಸಿ, ಪ್ರತಿಮೆಯ ಬಳಿಗೆ ಹೋಗಿ ತಮ್ಮ ಕೈಗೆ ಕೊಟ್ಟ ದಾರವನ್ನು ಎಳೆದರು. ಕೂಡಲೇ ಪ್ರತಿಮೆಯ ಮುಸುಕು ಕಳಚಿ ಬಿತ್ತು. ಪ್ರತಿಮೆಯ ಮೇಲೆ ಹೂಗಳು ಉರುಳಿದುವು. ಅದ್ಭುತ ಕಲಾ-ವೈಭವದಿಂದ ಕೂಡಿದ ಕಂಚಿನ ಕಪ್ಪು ಪ್ರತಿಮೆಯು ಎದೆ ಚಾಚಿ ಎದ್ದು ನಿಂತಂತೆ ಕಂಗೊಳಿಸಿತು. ಜನರು ಕುತ್ತಿಗೆಗಳನ್ನು ಕೊಕ್ಕರಿಸಿಕೊಂಡು ಅತ್ತಿತ್ತ ವಾಲುತ್ತ ಇತರರ ಭುಜಗಳ ಮೇಲಿಸಿಂದ ಪ್ರತಿಮೆಯನ್ನು ನೋಡಿ ನೋಡಿ ಸಂತೋಷಿಸಿದರು, ಮೆಚ್ಚಿದರು, ಸಾಹುಕಾರರನ್ನು ತಮ್ಮತಮ್ಮಲ್ಲೇ ಕೊಂಡಾ ಡಿದರು. ಅಧ್ಯಕ್ಷರು ಮೇಲಕ್ಕೆ ಮತ್ತೆ ಎದ್ದು ಗಂಟೆ ಬಾರಿಸಿದ ಮೇಲೆ ಸಭೆಯು ಮತ್ತೆ ಸುಮ್ಮನಾಯಿತು. "ಮುಂದಿನ ಕಾರ್ಯಕ್ರಮ ಮಾನಪತ್ರ ಸಮ-ರ್ಪಣೆ—ಮುನಸಿಪಲ್ ಅಧ್ಯಕ್ಷರಿಂದ" ಎಂದು ಅಧ್ಯಕ್ಷರು ತಿಳಿಸಿದ ಮೇಲೆ ಭೋಗಪ್ಪ ಲಗುಬಗೆಯಿಂದ ಎದ್ದು ಮೇಜಿನ ಮೇಲಿದ್ದ ರಜತ ಕರಡದಿಂದ ಮಾನಪತ್ರದ ಸುರುಳಿಯನ್ನು ತೆಗೆದು ಮೆಲ್ಲನೆ ಬಿಚ್ಚಿ ಗಂಭೀರವಾಗಿ, ನಿದಾನ ವಾಗಿ ಓದಲು ಮೊದಲು ಮಾಡಿದ.

ಈ ಹೊತ್ತಿಗೆ ಗುರು ಸಭೆಗೆ ಬಂದ. ಸಾಹುಕಾರರ ಮಗನನ್ನು ಹೆಬ್ಬಾಗಿ ಲಿನ ಬಳಿಯಲ್ಲೇ ಕಂಡ ಸ್ವಯಂಸೇವಕ ಕೋಟೆ ಕಟ್ಟಿದ್ದ ಜನರಲ್ಲಿ ದಾರಿ ಬಿಡಿಸುತ್ತ ಬಹಳ ಮರ್ಯಾದೆಯಿಂದ ಸಭೆಯೊಳಕ್ಕೆ ಕರೆದುಕೊಂಡು ಹೋಗಿ ಮುಂದಿನ ಸಾಲಿನಲ್ಲಿ ಕುರ್ಚಿಯನ್ನು ತಂದು ಹಾಕಿ ಕುಳ್ಳಿರಿಸಿದ. ಬೇರೆಯ ದಿನವಾಗಿದ್ದರೆ ಗುರು ಸಭೆಗೇ ಬರುತ್ತಿರಲಿಲ್ಲ. ಬಂದಿದ್ದರೂ ದೂರದಲ್ಲಿ ಎಲ್ಲೋ ಜನರೊಂದಿಗೆ ಬೆರೆದಿರುತ್ತಿದ್ದ. ಆದರೆ ಈ ದಿನ ಅವನು ಮುಂದೆ ಇರಬೇಕಾದ ಅಗತ್ಯವಿತ್ತು. ಮಗ ಬಂದಾಗ ತಂದೆಯ ಗಮನ ಸಭೆಯ ಗಮನದಂತೆ ಅವನ ಕಡೆ ಹೋಯಿತು. ಹೊತ್ತಾಗಿ ಬಂದುದಕ್ಕೆ ಅವರು ಕೊಂಚ ಬೇಸರಿಸಿದರೂ ಇದರಿಂದಲೇ ಅವನು ವಿಶೇಷ ಗಮನವನ್ನು ಸೆಳೆ-ದುದಕ್ಕಾಗಿ ಸಮಾಧಾನ ಹೊಂದಿದರು. ಈ ಸಭೆಗಾದರೂ ಬಂದನಲ್ಲ. ಗುರು-ಗಳ ಮಾತು ಹಾಗೆ ಕೊನೆಗಂಡಿದ್ದರೂ ಕೊಂಚ ಪರಿಣಾಮಕಾರಿಯಾಗಿರ-

ಬೇಕೆಂದುಕೊಂಡರು. ಈ ಸಭೆ, ಈ ಗೌರವ, ಅದೇ ಪರಿಣಾಮವನ್ನು ಹೆಚ್ಚಿಸುವುದರಲ್ಲಿ ಸಂದೇಹವಿಲ್ಲವೆಂದುಕೊಂಡು ಒಳಗೊಳಗೆ ಸಂತೋಷಿಸಿ-ದರು. ಮುಂದೆ ಎಲ್ಲವೂ ಸರಿಯಾದೀತೆಂದೂ ಆಶಿಸಿ ಕನಸು ಕಂಡರು. ಈ ಉತ್ಸವದ ಆನಂದ ಮಗನ ಸಮ್ಮುಖದಲ್ಲಿ ಅವರಿಗೆ ಇಮ್ಮಡಿಯಾಯಿತು. ಗುರು ಬಂದಾಗ ಜನರಲ್ಲಿ, ದೂರದ ಸಮುದ್ರದ ಶಬ್ದದಂತೆ, 'ಸಸಸಸ' ಶಬ್ದ ವಾಯಿತು. ಭೋಗಪ್ಪ ಕ್ಷಣಕಾಲ ಓದುವುದನ್ನು ಕೂಡ ನಿಲ್ಲಿಸಿ ಜನ ಸುಮ್ಮನಾದ ಮೇಲೆ ಮತ್ತೆ ಮುಂದುವರಿಸಿದ. ಈ ಮಾನಪತ್ರವೆಂದರೇನು ಸಾಮಾನ್ಯವೇ. ಚಂದ್ರಶೇಖರ, ಶಾಮಯ್ಯಂಗಾರಿ ಕೂಡಿ ಬರೆದದ್ದು. ಭೋಗಪ್ಪ ಅಲ್ಲಲ್ಲಿ ತಿದ್ದಿ ಹೆಚ್ಚಿಸಿ ಒಪ್ಪಿದ್ದುದು. ಅದರ ಉದ್ದವೂ ಸಾಮಾನ್ಯ ವಲ್ಲ. ಗುರುವಿಗೆ ತಂದೆಯ ಗುಣಪ್ರಶಂಸೆಯನ್ನು ಕೇಳುತ್ತ ಕೇಳುತ್ತ ಒಳಗೆ ಕಿರಿಕಿರಿ ಹೆಚ್ಚುತ್ತ ಹೋಯಿತು. "ಇದಕ್ಕೆ ಈ ವೋಸಕ್ಕೆ, ಯಾವಾಗ ಕೊನೆ? ಕೊನೆಯಿಲ್ಲವೇ?" ಎಂದುಕೊಂಡು ಒದ್ದಾಡಿದ. ಭೋಗಪ್ಪ ಅದೇ ಗಂಭೀರ ಗತಿಯಿಂದ ಓದುತ್ತ "........ತಾವು ನಮ್ಮೆಲ್ಲರ ಮುಂದಾಳು, ಪ್ರೇಮಬಂಧು, ಮರುಳೂರಿನ ಕಳಶ, ಅದರ ಜೀವಾಳ.... ಇಂದಿನ ಮುಂದಿನ ತಲೆಮಾರಿಗೆ ಉತ್ಕೃಷ್ಟವಾದರಿ...." ಎಂದು ಹೊಗಳುತ್ತ "ತಾವು ಸಲ್ಲಿಸಿರುವ ಸಲ್ಲಿಸುತ್ತಿರುವ ಅಪಾರ ಸೇವೆ ಒಂದೊಂದೇ?.... ಅಧ್ಯಕ್ಷರಾಗಿ ಈ ಮುನಸಿ-ಪಾಲಿಟಿಗೆ ಕೀರ್ತಿ ತಂದಿರಿ; ಟೌನ್ ಹಾಲ್ ಕಟ್ಟಿಸಿದಿರಿ; ಒಳ್ಳೆಯ ಆಸ್ಪತ್ರೆ ಭಾರದ ಮೇಲೆ ನಿಲ್ಲಿಸಿದಿರಿ, ಇಂದಿಗೂ ಹಿರಿಯರಾಗಿ ಉಪದೇಶಿಸುತ್ತ ಸಲಹೆ ಕೊಡುತ್ತ, ಆಸಕ್ತಿ ತೋರಿಸುತ್ತ, ನಮ್ಮ ಮುನಸಿಪಾಲಿಟಿಯ ಸುವ್ಯವಸ್ಥೆಗೆ, ಅತ್ಯುಚ್ಚ ಸ್ಥಿತಿಗೆ ಕಾರಣರಾಗಿದ್ದೀರಿ.... ಈ ಸಣ್ಣ ಆವರಣದಲ್ಲೇ ಅಲ್ಲದೆ ದೊಡ್ಡ ರಾಜ-ಕೀಯ ರಂಗದಲ್ಲೂ ತಮ್ಮ ಪ್ರತಿಭೆ, ದಕ್ಷತೆಗಳನ್ನು ಬೀರಿ ಪ್ರಜಾರಂಜನೆಯನ್ನು ಸಂಪಾದಿಸಿ, ಎಂ. ಎಲ್. ಎ ಆಗಿ, ಸುತ್ತಮುತ್ತಿನ ಅಭಿವೃದ್ಧಿಗೆಲ್ಲ ಕಾರಣ ರಾದಿರಿ; ನಮ್ಮ ಧ್ವನಿ ಸರಕಾರದಲ್ಲಿ ಕೇಳುವಂತೆ ಮಾಡಿದಿರಿ; ಬಡಜನರಿ ಗಾಗಿ ಹೊಡೆದಾಡಿ ಮಹಾತ್ಮಾ ಗಾಂಧಿ ನಾಲೆಯ ನೀರನ್ನು ತರಿಸಿ ರೈತ ಜನ ರನ್ನು ಉದ್ಧಾರ ಮಾಡಿದಿರಿ; ತಮ್ಮ ಚುನಾವಣೆಯನ್ನು ಸಾರ್ಥಕಪಡಿಸಿದಿರಿ.... ಇಷ್ಟಕ್ಕೇ ತೃಪ್ತರಾದಿರ, ದಣಿದರ? ಇಲ್ಲ. ಊರಿನಲ್ಲಿ ಗ್ರಾಮೋದ್ಧಾರ ಸಂಘ; ಹರಿಜನ ಸೇವಾ ಸಮಿತಿ, ಗೋಸೇವಾ ಸಮಿತಿ.... ಸಮಾಜ ಸುಧಾರಕ ಸಂಘ

ವಾಣಿಜ್ಯ ಸಂಘ........ಕರ್ನಾಟಕ ಸಂಘ........ಇವೇ ಮುಂತಾಗಿ ಹತ್ತಾರು ಸಂಘಗಳನ್ನು ಅಧ್ಯಕ್ಷರಾಗಿಯೇ ನಡೆಸಿಕೊಂಡು ಕಾಪಾಡಿಕೊಂಡು ಬಂದು ಸಮಾಜಿಕ, ಕಲಾ, ರಾಜಕೀಯ, ವ್ಯಾಪಾರ ಕ್ಷೇತ್ರಗಳಲ್ಲೆಲ್ಲ ಅವಿಶ್ರಾಂತವಾಗಿ ದುಡಿದು, ಮಹೋಪಕಾರ ಮಾಡಿ, ಮಾರ್ಗದರ್ಶಕರಾಗಿದ್ದೀರಿ........ ಇವೆಲ್ಲ ತಮ್ಮ ಅಸಾಧಾರಣ ವ್ಯಕ್ತಿ ಶಕ್ತಿ ಮಿಗಿಲಾದುವಾದರೆ ತಮ್ಮ ಸ್ವಂತ ದಾನಧರ್ಮದ ಮೂಲಕ ಮಾಡುತ್ತಿರುವ ಸೇವೆಯೇನು ಸಾಮಾನ್ಯವೇ? ಅದನ್ನು ಇಂಥ ಸಣ್ಣ ಮಾನಪತ್ರಗಳಲ್ಲಿ ಬಣ್ಣಿಸುವುದು, ಕಡೆಗೆ ಬರಿಯ ಪಟ್ಟಿ ಮಾಡುವುದಾದರೂ ಸಾಧ್ಯವೆ? ಊರಿಗೇ ಭೂಷಣಪ್ರಾಯವಾದ 'ವಿಶ್ವೇಶ್ವರಯ್ಯ ಸ್ಕ್ವೇರ್,' 'ವಿಶ್ವೇಶ್ವರಯ್ಯ ಸರ್ಕಲ್,' ತಮ್ಮ ಹೃದಯದಂತೆಯೇ ವಿಶಾಲವಾದ ಗಾಂಧಿ ಗೋಮಾಳ, ತಮ್ಮ ಧಾರ್ಮಿಕ ಜೀವನವೇ ಮೂರ್ತಿವೆತ್ತಂತಿರುವ ಮರುಳೂರಿನ ಹೆಮ್ಮೆ-ವಿಶ್ವೇಶ್ವರನ ದಿವ್ಯಮಂದಿರ, ತಮ್ಮ ಆಶ್ಚರ್ಯ ಔದಾರ್ಯದ ಚಿಹ್ನೆಗಳಾದ ಧರ್ಮದ ವಿವಾಹ ಉಪನಯನಗಳು, ತಮ್ಮ ಸಂತಾಪ ಅನುಕಂಪಗಳ ಸ್ಮಾರಕವಾಗಿ ಊರಿನ ಮಹಿಳಾಜೀವನಕ್ಕೇ ಆಸರೆಯಾದ ಗೌರಮ್ಮವಾರ್ಡ್..ಸಣ್ಣಮ್ಮ ವಾರ್ಡ್..ಒಂದೇ ಎರಡೇ ಹೇಳುತ್ತ ಹೋದರೆ.. ಹಿಂದಿನ ಕಾಲವಾಗಿದ್ದರೆ 'ಧರ್ಮ ಪ್ರಕಾಶ' ಬಿರುದು ಬಂದು ಯಾವುದೋ ಕಾಲವಾಗಿರುತ್ತಿತ್ತು. (ಜನಗಳ ಕರತಾಡನ)....ಈ ಸಾಧನೆಗಳನ್ನು ನೆನೆಯುವಾಗ, ಮಹೋದಯರೆ, ತಮ್ಮ ಒಂದು ವಿಚಿತ್ರ ದುರದೃಷ್ಟ ನಮ್ಮನ್ನು ಬಾಧಿಸುತ್ತದೆ ತಮಗೆ ಪತ್ನಿಯೋಗದ ಸೌಖ್ಯವನ್ನು ಪರಮಾತ್ಮನು ಯಾಕೋ ಕಡಿಮೆ ಮಾಡಿದ. ಆದರೆ ಆ ದುಃಖವನ್ನೂ ಕೂಡ ಈ ರೀತಿ ತಮ್ಮ ಸೇವಾರೂಪಕ್ಕೇ ತಿರುಗಿಸಿಕೊಂಡು ಅದರಲ್ಲಿಯೇ ಸಮಾಧಾನಕ್ಕೆ ಯತ್ನಿಸುತ್ತಿರುವುದು ತಮ್ಮ ಅಸಾಮಾನ್ಯ ಸಂಸ್ಕೃತಿಯ ಕುರುಹಾಗಿದೆ...." ಇಲ್ಲಿ ಭೋಗಪ್ಪ ಓದನ್ನು ಸ್ವಲ್ಪ ನಿಲ್ಲಿಸಿ "ಬಂಧುಗಳೆ, ಈ ಸಂದರ್ಭದಲ್ಲಿ ತಮಗೆ ಒಂದು ಸಂತೋಷದ ಸಮಾಚಾರವನ್ನು ತಿಳಿಸಿದರೆ ತಪ್ಪಾಗಲಾರದು. ನಮ್ಮ ಪ್ರಿಯ ಸಾಹುಕಾರರ ವಿಯೋಗ ಸದ್ಯದಲ್ಲೇ ನಿವಾರಣೆಯಾಗಿ ಅವರು ಮತ್ತೆ ಸುಖವಾಗಿ ಬಾಳುವ ಶುಭ ಸೂಚನೆಗಳಿವೆ" ಎಂದು ಹಿಗ್ಗುತ್ತ ಹೇಳಿದ. ಸಭೆಯೇ ಸಂತೋಷದಿಂದ ಉಬ್ಬಿ ಕೈತಟ್ಟಿತು. ಭೋಗಪ್ಪ ಮಾನಪತ್ರವನ್ನು ಮುಂದುವರಿಸಿದ.

ಗುರುವಿಗೆ ಇನ್ನು ತಡೆಯಲಾಗಲಿಲ್ಲ. ಭೋಗಸ್ಪ ಓದಿದ ಒಂದೊಂದು ಸಾಲೂ ಅವನನ್ನು ಕಾದ ಸೂಜಿಯಂತೆ ಚುಚ್ಚುತ್ತಿತ್ತು. ಹುಣ್ಣಿನ ಮೇಲೆ ಉಪ್ಪು ಉಜ್ಜುತ್ತಿತ್ತು. ತಾಳ್ಮೆಯ ಹಗ್ಗ ಒಂದೊಂದು ಎಳೆಯಾಗಿಯೇ ಕಿತ್ತು ಕಡೆಗೆ ತುಂಡಾಯಿತು. ಎದ್ದು ಕೂಗಿಕೊಂಡು ಮಾನಪತ್ರವನ್ನು ನಿಲ್ಲಿಸಬೇಕೆಂದು ಆಗಲೇ ನಾಲ್ಕಾರು ಬಾರಿ ಅಂದುಕೊಂಡ ಆದರೂ 'ಆಗಲಿ, ಆಮೇಲೆ ಆಮೇಲೆ' ಎಂದು ಹೇಗೋ ತಡೆದುಕೊಂಡಿದ್ದ. ಈಗ ಏಳಲೇಬೇಕೆನ್ನಿಸಿತು. ಏಳಲು ಯತ್ನಿಸಿದ. ಅರ್ಧ ಎದ್ದೂ ಎದ್ದ ಆದರೆ ಆ ಕ್ಷಣದಲ್ಲಿ ತಂದೆಯ ಕಣ್ಣು ಇವನ ಕಣ್ಣನ್ನು ಸಂಧಿಸಿತು. ಯಾಕೋ, ಏನೋ, ಕಾಲು ನಡುಗಿತು, ತಲೆ ಗೊಂದಲ ಗೆಟ್ಟು ಹೋಯಿತು. ಆಡಹೋದ ನಾಲಿಗೆ ಉಡುಗಿಹೋಯಿತು. ಮುಖ ಕೆಂಪಾಗಿ ಬೆವರಿತು ಕಲಿತಿದ್ದ ಪಾಠವೆಲ್ಲ ಒಮ್ಮೆಯೇ ಮರೆತುಹೋದಂತಾಯಿತು. ತನಗೆ ತಿಳಿಯದಂತೆಯೇ ಕುಸಿದುಕೊಂಡ ಇದ್ದಕ್ಕಿದ್ದಂತೆಯೇ ತನ್ನ ಬಾಲ್ಯ, ತಂದೆಯ ತೊಡೆಯ ಮೇಲಿನ ಪ್ರೇಮ ಇವು ಕವಿದು ಬಂದುವು—ಮಿಕ್ಕದ್ದೆಲ್ಲ ಮುಚ್ಚಿ ಹೋದಂತಾಯಿತು. ಗುರು ತನ್ನೊಳಗೇ ಹೋರಾಡುತ್ತ ತನ್ನ ಮೃದುತನ ವನ್ನು ಕಿತ್ತೊಗೆಯಲು ಯತ್ನಿಸಿದ. ಆದರೂ ಅದು ಎಲ್ಲೆಲ್ಲೂ ಮತ್ತೆ ಮತ್ತೆ ಸುತ್ತಿ ಕೊಳ್ಳುತ್ತಿತ್ತು. ಸ್ವಲ್ಪ ಹೊತ್ತು ನೆಲವನ್ನೇ ನೋಡುತ್ತ ತನ್ನ ಕದಲಿದ ಮನ ಸ್ಸನ್ನು ಮೊದಲಿನ ನಿರ್ಧಾರಕ್ಕೆ ಹಿಂತಿರಿಗಿಸಲು ಒದ್ದಾಡಿದ. ಆದರೆ ಅದೇನು ತನಗೇ ತಿಳಿಯದ ಪ್ರೇಮ ತಡೆಯೋ, ತನ್ನ ಅನುತಾಪ ತಡೆಯೊ, ದೌರ್ಬಲ್ಯ ತಡೆಯೋ, ಎದುರಿನಲ್ಲಿ ಸುತ್ತಲೂ ಕಂಡ ಸಭೆಯ ಅವ್ಯಕ್ತ ವಿರೋಧವೋ, ತನ್ನ ಏಕಾಕಿತನದ ಹೆದರಿಕೆಯೋ, ಅಂತೂ ಅವನಿಗೆ ಸಾಧ್ಯವಾಗಲಿಲ್ಲ. 'ಇಲ್ಲ, ಇಲ್ಲ ಈ ಬಾರಿ ಸೋಲೋದಿಲ್ಲ. ಉಹುಂ' ಎಂದು ತನಗೆ ತಾನೇ ಉತ್ತೇಜನ ಕೊಟ್ಟುಕೊಂಡು ಹಟದಿಂದ ತನ್ನ ಶರೀರವನ್ನು ಮತ್ತೊಂದು ಬಾರಿ ಬಲವಂತವಾಗಿ ಹೊಡೆದು ಎಬ್ಬಿಸಿದ ಆದರೇನು ಅದೇ ಕಾಲು ನಡುಕ, ನಾಲಿಗೆ ತೊದಲು. ಮಾತು ಹೊರಡಲಿಲ್ಲ. ಗುರು ನಿಲ್ಲಲಾರದೆ, ಆದರೆ ಮತ್ತೆ ಕುಳಿತುಕೊಳ್ಳದೆ ಮಾನಪತ್ರದ ನಡುವೆಯೇ ಸಭಾತ್ಯಾಗ ಮಾಡಿದ. ಇದೇ ಅವನಿಗೆ ಮಹಾ ಪ್ರಯಾಸವಾಯಿತು. ಕಾಲಿನಲ್ಲಿ ಶಕ್ತಿಯಿಲ್ಲದಂತೆ ಎಳೆದುಕೊಂಡು ಹೊರಗೆ ಬಂದು ಸಭಿಕರ ನೋಟವನ್ನು ಎದುರಿಸ ಲಾರದೆ ತಲೆತಗ್ಗಿಸಿಕೊಂಡು ಅವಮಾನಿತನಂತೆ ಹೀನಾಯದಿಂದಲೇ

ನಡೆದ. ತಾನು ಏನೋ ಅತಿ ದಿಟ್ಟ ಅತಿ ಕೆಟ್ಟ ಸಾಹಸವನ್ನು ಜಗತ್ತಿನ ಎದುರಿಗೇ ಹೇಸಿಕೆಯಿಲ್ಲದೆ ಮಾಡುತ್ತಿದ್ದಂತೆ ಭಾಸವಾಯಿತು. ಹೇಗೆ ಆ ಹೆಜ್ಜೆಗಳನ್ನಿಡುತ್ತಿದ್ದನೋ ಹೊರಗೆ ಬಂದನೋ ಅವನಿಗೇ ಆಶ್ಚರ್ಯ.

ಇದರಿಂದ ಸಭೆಯಲ್ಲಿ ಗುಜುಗುಜು ಉಂಟಾಯಿತು. ಕ್ಷಣಕಾಲ ಮಾನಪತ್ರ ಎಲ್ಲರಿಗೂ ಮರೆಯಿತು. ಅಧ್ಯಕ್ಷರು ಗಂಟೆ ಬಾರಿಸಿದ ಮೇಲೆ ಸಭೆ ಮತ್ತೆ ಅತ್ತ ತಿರಿಗಿತು. ಮಾನಪತ್ರ ಮುಂದುವರಿಯಿತು.

ಸಾಹುಕಾರರ ಸ್ಥಿತಿ ಅತ್ಯಂತ ಶೋಚನೀಯವಾಗಿತ್ತು. ಮೊದಲು ಬಾರಿ ಮಗ ಎದ್ದು ಕುಸಿದಾಗಲೇ ಅವರು ದಿಗಿಲುಬಿದ್ದಿದ್ದರು. ಈಗ ಈ ನಡತೆಯಿಂದ, ತನಗಾದ ಅವಮಾನದಿಂದ ಅವರ ಮನಸ್ಸು ಹಿಂಡಿ ಹೋಗಿತ್ತು. ಎದೆಯ ನೋವಿನ ತಳಮಳವಂತೂ ಹೇಳತೀರದು. ಅವರೂ ಕ್ಷಣಕಾಲ ತಲೆಯೆತ್ತಲಾರದೆ ಇದ್ದರು. 'ಅಯ್ಯೋ ಬಂದು ಹೀಗೆ ಮಾಡಿದನಲ್ಲ. ಬರದಿದ್ದರೇ ಎಷ್ಟು ಚೆನ್ನಾಗಿತ್ತು. ಚಿತ್ರಕ್ಕೆ ಮಸಿ ಎಸೆದನಲ್ಲ. ಜನ ಏನೆಂದುಕೊಂಡಾರು ? ನನ್ನನ್ನೇ ಹೀಯಾಳಿಸುತ್ತಾರೋ ಅವನನ್ನೇ ಹುಚ್ಚ ಅಂತಾರೋ ? ನಿಜವಾಗಿಯೂ ಹುಚ್ಚನೇ ? ನನ್ನದೇನು ಪ್ರಾರಬ್ಧ! ಇನ್ನೂ ಹರಿಯಲಿಲ್ಲ' ಎಂದುಕೊಂಡು ಒಳಗೊಳಗೇ ಬೆಂದರು. 'ಹುಂ ಇಷ್ಟಕ್ಕೂ ಅವನು ಒಬ್ಬನ ಮಾತೇನು, ಇಷ್ಟೊಂದು ಜನರಲ್ಲಿ" ಎಂದು ಸಮಾಧಾನ ತಂದುಕೊಳ್ಳಲು ಹೆಣಗಿದರು. ಆದರೂ 'ಅವನೊಬ್ಬನೂ—ಅವನೊಬ್ಬ ಸರಿಯಾಗಿದ್ದರೆ ! ಆಹಾ !' ಎಂದು ವ್ಯಥೆಪಟ್ಟರು. ಆದರೆ ಸಭೆಯ ಉತ್ಸಾಹ ಕ್ರಮೇಣ ಅವರನ್ನು ಗೆದ್ದಿತು. ಕಾರ್ಯಕ್ರಮದಲ್ಲಿ ಅವರು ಮತ್ತೆ ಆಸಕ್ತಿ ಹುಟ್ಟಿಸಿಕೊಂಡರು.

ಏನೋ ಮಾಡಿಕೊಂಡು ಬಂದಂತಿದ್ದ ಗುರುವಿಗೆ ಹೊರಗೆ ತನ್ನ ಕನಿಕರದ ಸ್ಥಿತಿಯ ಅರಿವಾಯಿತು. 'ಅಯ್ಯೋ ಏನು ಮಾಡಿದೆ ? ನಾನೇ ನನ್ನನ್ನೇ ಹೊರಗೆ ಹಾಕಿಕೊಂಡೆ ಅಷ್ಟೆ....ಇದನ್ನೇ ನಾನು ಮಾಡೋದಕ್ಕೆ ಹೋಗಿದ್ದುದು ? ಛೀ ! ಛೀ ! ಹೇಡಿ....ಹೇಡಿ ! ಸೋತೆ ! ಮತ್ತೆ ಸೋತೆ ! ಅಯ್ಯೋ! ಸೋತೇ, ಸೋಲು—ಅದೇ ನಂಗೆ ಯಾವಾಗಲೂ ಎಲ್ಲೆಲ್ಲೂ ಕಾದಿರೋದು' ಗುರು ತಲೆ ಚಚ್ಚಿಕೊಂಡ. ಸೋಲು ಅವನನ್ನು ಮುರಿದು ಹಿಂಡಿತು. ತನ್ನ ಹೆದರಿಕೆಗಾಗಿ ಅವನಿಗೆ ನಾಚಿಕೆಯಾಯಿತು. ಆದರೂ

ಹಿಂತಿರಿಗಲು ಧೈರ್ಯವಿಲ್ಲ. ಜಗತ್ತಿನ ಅತೃಪ್ತಿಯೆಲ್ಲ ತನ್ನಲ್ಲಿ ತುಂಬಿಕೊಂಡಂತಾಗಿ ಬೇಸರವಾಯಿತು. ಜಿಗುಪ್ಸೆಯಾಯಿತು. ಇದರಿಂದ ಅವನು ಒಡೆಯುವಂತಿದ್ದ, ಸಿಡಿಯುವಂತಿದ್ದ. ಇದನ್ನು ತಾಳಲಾರದೆ ಸೋಲಿನ ಜಾಗದಿಂದ ದೂರವಾಗಿ ಆದಷ್ಟು ಬೇಗ ನಡೆದ – ಮಹಲಿನ ಕಡೆಗೆ. ಈ ನಾಚಿಕೆಯ ಸೋಲು ಬರಬರುತ್ತ ಅವನೊಳಗೆ ಕುದಿಕುದಿದು ಪರಿವರ್ತನೆ ಹೊಂದಿ ಕಿಡಿ ಕಿಡಿಯ ಕೋಪವಾಯಿತು—ನಿಸ್ಸಹಾಯದ ಕೋಪ, ನಿರ್‍ವೀರ್‍ಯ ಕೋಪ ತನ್ನನ್ನೆಲ್ಲ ಆವರಿಸಿ ಉರಿಯಿತು. ಅಂಕುಶದಂತೆ ತಿವಿದೆಬ್ಬಿಸಿತು, ರೇಗಿಸಿತು 'ಏನು ಮಾಡಲಿ ! ಏನು ಮಾಡಲಿ !' ಎಂದು ಒದರಿದ. ಹಾಗೇ ಹಿಂದಿನ ರಾತ್ರಿಯ ಯೋಚನೆಗಳೆಲ್ಲ ಕಂಡ ದೃಶ್ಯಗಳೆಲ್ಲ ಮತ್ತೆ ಕಣ್ಣಮುಂದೆ ಹಾಯ್ದು ಹೋದುವು. ಒಂದೊಂದೂ ಮುಂದೆ ಬಂದು ನಿಂತು 'ಆಹಾ ! ನಿನ್ನ ಜನ್ಮವೇ' ಎಂದು ಅಣಕಿಸಿ 'ಹೋಗು ! ಹೋಗು ! ಸತ್ವವಿದ್ದರೆ ಏನಾದರೂ ಮಾಡು ! ಮಾಡು ! ಇಷ್ಟೇಯೆ ನಿನ್ನ ಧೈರ್‍ಯ ! ನಿನ್ನ ಶಕ್ತಿ ! ಸೋತೂ ಸುಮ್ಮನಿರುತ್ತೀಯೆ ? ಇನ್ನೂ ?' ಎಂದು ಉದ್ರೇಕಿಸುತ್ತ ಹೋಗುತ್ತಿದ್ದುವು. ಬಲಿಯಾದ ಆತ್ಮಗಳು 'ಗುರು, ನಮ್ಮ ಹಗೆಯನ್ನು ತೀರಿಸೋದಿಲ್ಲವೆ? ಕೈಬಿಟ್ಟು ಬಿಡುತ್ತೀಯ ? ನೀನೂ ಅದೇ ಗುಂಪಿಗೆ ಸೇರಿಬಿಡುತ್ತೀಯ ?' ಎಂದು ಚೀರುತ್ತಿದ್ದುವು. ಗುರು 'ಇಲ್ಲ. ಇಲ್ಲ. ಮಾಡ್ತೀನಿ. ಮಾಡ್ತೀನಿ. ಏನಾದರೂ ಮಾಡ್ತೀನಿ. ಜಗತ್ತಿಗೇ ತೋರಿಸ್ತೀನಿ, ನನ್ನ, ಒಳಗನ್ನು, ನಿಮ್ಮ ಸ್ಥಿತಿಯನ್ನು' ಎಂದು ಮತ್ತೆಮತ್ತೆ ಹಟ ತೊಟ್ಟ. ತಾನೇ ಒಂದು ಹಟದ ಮುದ್ದೆಯಾದಂತೆ ಅವನಿಗೆ ಕಂಡಿತು. ಏನೋ ಒಂದು ಸೇಡಿಗಾಗಿಯೇ ತಾನು ಜನ್ಮವೆತ್ತಿದ್ದಂತೆ, ಅದೊಂದೇ ತನ್ನ ಬಾಳಿನ ಗುರಿಯಂತೆ ಭಾಸವಾಯಿತು. ಆದರೆ ಏನು ಮಾಡಬೇಕೆಂದು ಮಾತ್ರ ತೋರದು. ನಿಸ್ಸಹಾಯತೆಯಿಂದ ಎರಡು ಕೈಗಳಿಂದಲೂ ತಲೆ ಹಿಡಿದು ಮೇಲೆತ್ತಿದ. ಹಾಗೇ ಸಭೆ ಮತ್ತೆ ಅವನ ಕಣ್ಣ ಮುಂದೆ ಸುಳಿಯಿತು. ಕಣ್ಣನ್ನು ಮುಚ್ಚಿದ. ಮಾನಪತ್ರದ ಮಾತುಗಳು ಮತ್ತೆ ಕೇಳಿದುವು. ಎರಡು ಕೈಗಳಿಂದಲೂ ಕಿವಿ ಮುಚ್ಚಿಕೊಂಡ. ಹಾಗೇ ನಾಲ್ಕು ಹೆಜ್ಜೆಯಿಟ್ಟ. ರಸ್ತೆಯಲ್ಲಿ ಮುಗ್ಗರಿಸಿದ, ಕಣ್ಣು ಬಿಟ್ಟ. ಮಹಲು ಹತ್ತಿರವಾಗಿತ್ತು, ಅಗೋ ಅಲ್ಲೇ ಕಾಣುತ್ತಿತ್ತು — ಆ ಮರಗಳ ಮಧ್ಯೆ, ಉನ್ನತವಾಗಿ ಎದ್ದು—ಪ್ರಕೃತಿಯ ಮಧ್ಯೆ ವಿಕೃತ ರೂಪ

ದಿಂದ '… …. ಆ ಎತ್ತರವಾದ ಬಿಳಿ ಗೋಡೆಗಳು—ಬೆಳ್ಳಗೆ, ಕಪ್ಪನ್ನು ಒಳಗೆ ಮುಚ್ಚಿಕೊಂಡು ! ಆ ಗಾಜಿನ ಕಿಟಕಿಗಳು ಎಳೆ ಬೆಳದಿಂಗಳಿನಲ್ಲಿ ಥಳುಕು ತೋರಿಸುತ್ತ. ಆ ದೊಡ್ಡ ಗುಮ್ಮಟ–ಮರದ ಗುಮ್ಮಟ. ಮಹಲಿಗೆ ಕಿರೀಟ. ಅದರ ಮೇಲೆ ಯಾರು ? ಯಾರು ?……..ತಾನೇ……..ತಾನೇ……..ಕಳಶ ವಾಗಿ ! ಮರ್ಯಾದೆ ಮಹಲಿನ ಕಳಶವಾಗಿ ತಾನು ! ಮೈ ಪರಚಿಕೊಳ್ಳುವಂತಾ ಯಿತು. ಆ ಮಹಲಿನ ಮೇಲೆ, ತನ್ನ ಮೇಲೆ ಹಿಡಿಸಲಾರದ ಹಗೆತನ ಹೊಗೆಯಾಡಿತು. ' ಹೌದು, ಇದೇ ಅಪ್ಪ ಕಟ್ಟಿದ ಮಹಲು, ಸುತ್ತಲೂ ಹೆಸರಾದ ಮಹಲು, ಮರ್ಯಾದೆ ಮಹಲು ! ಮರ್ಯಾದೆಯ ಪ್ರತೀಕ ! ಇಂಥ ಮರ್ಯಾದೆಯ ಪ್ರತೀಕ ! ಹುಂ, ಹೌದು, ಇದೇ ತನ್ನ ಹಗೆತನದ ಗುರಿ. ಇದು ಹೋಗಬೇಕು ! ಇರಬಾರದು ! ಕಳ್ಳ ಮರ್ಯಾದೆ—ಅದಷ್ಟು ಸುಳ್ಳು— ಇದರೊಂದಿಗೆ ಹೋಗುತ್ತದೆ. ಹುಂ ! ಹುಂ ! '

ಗುರು ಉದ್ವೇಗದಿಂದ ಬೇಗ ಬೇಗ ಹೆಜ್ಜೆಯಿಟ್ಟ. ಓಡಿಯೇ ಓಡಿದ. ಈಗ ಅವನಿಗಿದ್ದ ಯೋಚನೆಯೊಂದೇ. ಮಹಲಿನ ನಾಶ. ಮಹಲಿಗೆ ಹೋದಾಗ ದಾಸ ಬಂದು ಬಾಗಿಲು ತೆಗೆದ. ಗುರು ಜಾಗ್ರತೆಯಾಗಿ ಒಳಗೆ ಹೋದ. ದಾಸ " ಎಲ್ಲ ಮುಗೀತೇನಪ್ಪ ? " ಎಂದು ಕೇಳಿದ ಗುರು " ಹು, ಹುಂ. ಇನ್ನೇನು ಮುಗಿಯುತ್ತೆ. ಎಲ್ಲ ಮುಗಿದು ಹೋಗುತ್ತೆ " ಎಂದು ಗೂಟದ ಮೇಲೆ ಇದ್ದ ಬೀಗದ ಕೈ ಗೊಂಚಲನ್ನು ಕಿತ್ತುಕೊಂಡು, ಅಡಿಗೆಯ ಮನೆಯಿಂದ ಕಡ್ಡಿಪಟ್ಟಣ ತೆಗೆದುಕೊಂಡು ಹಿತ್ತಲ ಕಡೆ ಮೋಟಾರು 'ಗರಾಜ್'ಗೆ ಹೋದ. ದಾಸ ' ಏನು ಅವಸರವೋ, ನಂಗೆ ಯಾಕೆ' ಎಂದುಕೊಂಡು ಮುಂಬಾಗಿಲನ್ನು ಹಾಕಿಕೊಂಡು ಹಾಸಿಗೆ ಹಾಸುವು ದಕ್ಕೆ ಹೋದ. ಗುರು ಗರಾಜಿನಿಂದ ಪೆಟ್ರೋಲ್ ಡಬ್ಬಿಯನ್ನು ತಂದು ಮಹಲಿನ ಹಿಂಭಾಗದ ಕಂಬ, ತೀರು, ತೊಲೆ, ಕಿಟಕಿ, ಬಾಗಿಲುಗಳಿಗೆಲ್ಲ ಚೆಲ್ಲಿ ಹತ್ತಿಸಿದ. ಉರಿ ಎದ್ದೊಡನೆ ಮತ್ತೆ ಗರಾಜಿಗೆ ಬಂದು ಮತ್ತೂ ಅಷ್ಟು ಡಬ್ಬಿಗಳನ್ನು ತಂದು ಹಾಗೆ ಹಾಗೇ ಉರಿಗೆ ಎಸೆದ. ಅವು ಬಾಂಬುಗಳಂತೆ ಸಿಡಿದುವು, ಮನೆಯನ್ನೆಲ್ಲ ಭುಗ್ಗನೆ ಹತ್ತಿಸಿದುವು. ಪೆಟ್ರೋಲ್ ಡಬ್ಬಿಗಳು ಬೇಕಾದಷ್ಟಿದ್ದುವು. ಮಂತ್ರಿಗಳ ಆರು ಕಾರು, ಸಾಹುಕಾರರದ್ದು ಒಂದು ಅಂದ ಮೇಲೆ ಅದಕ್ಕೇನು ಕಡಿಮೆ. ಅಲ್ಲದೆ ಸಾಹುಕಾರರ ದಾಸ್ತಾನವೇನು

ಸ್ವಲ್ಪವೆ? ದಾಸ ಹೊಗೆ ಸುತ್ತಿಕೊಂಡ ಕೂಡಲೇ ಹೊರಗೆ ಓಡಿ ಬಂದ. ಗುರು ಹುಚ್ಚನ ಹಾಗೆ ಮತ್ತೆ ಮತ್ತೆ ಎಲ್ಲೆಲ್ಲೂ ಎಣ್ಣೆ ಸುರಿಯುತ್ತ ಹತ್ತಿಸುತ್ತ ಡಬ್ಬಿಗಳನ್ನು ಎಸೆಯುತ್ತಿದ್ದ. ದಾಸ ಅವನನ್ನು ಕಂಡೊಡನೆ "ಗುರಪ್ಪ! ನನ್ನಪ್ಪ! ಇದೇನು ಮಾಡ್ತಾ ಇದೀಯೆ? ಏನಾಯ್ತು? ನಿನ್ನ ಮನೆ! ಸಾಹುಕಾರರ ಮನೆ!" ಎಂದು ಕೂಗಿಕೊಂಡು ಹಿಡಿದುಕೊಳ್ಳಲು ಹೋದ. ಗುರು "ಬಿಡು! ಬಿಡು! ಬರಬೇಡ!" ಎನ್ನುತ್ತ ತಪ್ಪಿಸಿಕೊಂಡು, ಅಲ್ಲಲ್ಲಿ ಓಡುತ್ತ ತನ್ನ ಕೆಲಸವನ್ನು ಸಾಗಿಸುತ್ತಿದ್ದ. ದಾಸನಿಗೆ ನೀರೆರೆದು ಆರಿಸಬೇಕೋ ಗುರುವನ್ನು ಹಿಡಿಯಬೇಕೋ ಎಂದು ಕ್ಷಣಕಾಲ ಗೊತ್ತಾಗಲಿಲ್ಲ. ಈಗಾಗಲೇ ಉರಿಯು ಭುಗಿಭಗಿಲೆಂದು ಮೇಲೆಮೇಲೆ ಹತ್ತುತ್ತಿತ್ತು. ಪಶ್ಚಿಮದಿಂದ ಜೋರಾಗಿ ಬೀಸುತ್ತಿದ್ದ ಗಾಳಿ 'ಸೋ' ಎಂದು ಒಳಗೆಲ್ಲ ನುಗ್ಗಿ ಉರಿಯನ್ನು ಎಲ್ಲೆಲ್ಲೂ ನುಗ್ಗಿಸಿ ಮುಂದಿನ ಮನೆಯನ್ನೂ ಹತ್ತಿಸಿಬಿಟ್ಟಿತು. ಉರಿಯು ಹಬ್ಬದೂಟವನ್ನು ಸವಿಯುವ ನಾಲಿಗೆಯಂತೆ ತನ್ನ ಸಹಸ್ರ ಕೆನ್ನಾಲಿಗೆಗಳನ್ನು ಎಲ್ಲೆಲ್ಲೂ ಚಾಚಿ, ಹಲ್ಲು ಅಗಿದು ತಿಂದಂತೆ 'ಚಟಚಟ, ಫಟಫಟ'ಗಳೊಡನೆ ಎಲ್ಲವನ್ನೂ ಉರಿಸಿ, ಗಳಿಗೆ ಗಳಿಗೆಗೂ ಹೆಚ್ಚು ಹೆಚ್ಚಾಗಿ, ಹತ್ತೆಂಟು ಕಾಮದಹನ ಒಂದೇ ಕಾಲದಲ್ಲಿ ಆದಂತೆ ನಲಿದಾಡುತ್ತಿತ್ತು. ಮಹಲಿನ ಆವರಣವೇಕೆ, ಈ ಕಡೆಯ ಆಕಾಶವೇ ಇನ್ನೊಂದು ಚಂದ್ರೋದಯದ ಬೆಳಕನ್ನು ಹೊಂದಿತ್ತು.

ಗುರುವಿಗೆ ಮಹಲು ಇನ್ನು ಉಳಿಯಲಾರದೆಂದು ಕಂಡ ಮೇಲೆ ಅವನು ಒಂದು ಕಡೆ ನಿಂತು ತನ್ನ ಕೆಲಸದ ಪರಿಣಾಮವನ್ನು ಮೌನವಾಗಿ ನೋಡುತ್ತಿದ್ದ.

ಈ ವರೆಗಾಗಲೇ ಶತ್ತಿರದಿಂದ ಊರಿನ ಜನಗಳು ಕೆಲವರು ಓಡಿ ಬಂದು ಸೇರಿದ್ದರು; ಇದ್ದ ಅಲ್ಪಸ್ವಲ್ಪ ನೀರನ್ನೆಸೆದು ಉರಿಯನ್ನು ಆರಿಸಲು ಹೋರಾಡುತ್ತಿದ್ದ ದಾಸನೊಡನೆ ಸೇರಿಕೊಂಡಿದ್ದರು. ಆದರೆ ಅವರ ಯತ್ನ ನಿಷ್ಫಲವಾಗಿತ್ತೆಂದು ಹೇಳಬೇಕಾಗಿಲ್ಲ ಮೆರವಣಿಗೆಯಲ್ಲಿ ಭಾಗವಿಲ್ಲದ ಮಂತ್ರಿಗಳೂ ಬಂದರು, ದಿಗಲು ಬಿದ್ದರು. ಯಾರು ?.... ಯಾಕೆ?... ಏನಾಯ್ತು? ಎಂಬ ಕೂಗುಗಳು ಕೇಳಿಸಿದುವು ಈವರೆಗೂ ಸುಮ್ಮನೆ ನಿಂತು ನೋಡುತ್ತ ಜ್ವಾಲೆಯ ಆಟದಲ್ಲಿಯೇ ಮಗ್ನನಾಗಿದ್ದ ಗುರುವಿನ ಬಾಯಿ ಈಗ ಬಿಚ್ಚಿತು. ಗುಂಪಿನ ಕಡೆಗೆ ಬಂದು ಎದುರಿಸಿ ಎದೆ ತಟ್ಟಿಕೊಳ್ಳುತ್ತ "ಯಾರೇ? ನಾನು. ನಾನೇ

ಹಚ್ಚಿದೆ—ಇದಕ್ಕೆ ಬೆಂಕಿ! ನೋಡಿ, ಹೇಗೆ ಉರೀತಿದೆ! ಈ ಮಹಲು ಎಷ್ಟು ಚೆನ್ನಾಗಿ ಉರೀತಿದೆ— ಈ ಮಹಲು! ಮರ್ಯಾದೆ ಮಹಲು! ಹ್ಹ! ಹ್ಹ! ನಮ್ಮ ತಂದೆಯ ಹೆಮ್ಮೆ...ನಿಮಗೆಲ್ಲ ಘನವಾದದ್ದು. ಈ ಸುತ್ತಿನಲ್ಲೇ ಮರ್ಯಾದೆಯ ಸಂಕೇತ....ಯಾಕೆ ಉರಿಸಿದೆ?....ಯಾಕೆ? ಅದರ ತಳಹದಿಯೇ ಸುಳ್ಳು.... ಅದರ ಕಟ್ಟಡವೆಲ್ಲ ಕಳ್ಳತನದ್ದು....ಇಟ್ಟಿಗೆ ಇಟ್ಟಗೆಯೂ ಕೂಡ....ಮೇಲೆ ಬಳಿದ ಸುಣ್ಣ ಮರ್ಯಾದೆಯ ಸೋಗು ಅಷ್ಟೆ....ಇದನ್ನು ಅರ್ಥ ಮಾಡಿ ಕೊಂಡಿಲ್ಲ ನೀವು—ಓ ಮರುಳೂರಿನ ಜನರೆ! ಮರುಳು ಜನರೆ! ಮೋಸ ಹೋಗಿದೀರಿ. ನಿಮ್ಮ ಮರ್ಯಾದೆಯ ಒರೆಯೇ ತಪ್ಪು. ಅಳತೆಗೋಲು ನೀತಿ ಯಲ್ಲ—ಕಾನೂನು ಮಾತ್ರ. ಕಾನೂನಿನ ಒಳಗೆ ನಡೆದದ್ದನ್ನೆಲ್ಲ ಒಪ್ಪು ತ್ತೀರಿ. ನೀವೇ ಈ ಸುಳ್ಳಿನ ಸೌಧವನ್ನು ಬೆಳಸಿದೋರು—ನಿಮ್ಮ ಅಜ್ಞಾನ ದಿಂದ. ಇದು ಹೇಗೆ, ಇಷ್ಟು ಎತ್ತರವಾಗಿ, ಒಂದೇ ಬೆಳೀತು? ಎಷ್ಟು ಜನರ ಸುಖ, ಎಷ್ಟು ಬಾಳುಗಳನ್ನು ಬಲಿಗೊಂಡು, ಎಷ್ಟು ನೋವು ನಿಟ್ಟುಸಿ ರನ್ನು ಒಳಗೊಂಡು ಇಷ್ಟು ಘನವಾಯಿತು ಯೋಚಿಸಿದೀರ? ಒಳಗೆ ನಡೆದ ಅಕೃತ್ಯಗಳೆಷ್ಟು ಕಂಡಿದೀರ? ಈ ಸುಳ್ಳುಮರ್ಯಾದೆ ಉಳಿಸಿಕೊಳ್ಳೋದಕ್ಕೆ, ಬೆಳಿಸಿಕೊಳ್ಳೋದಕ್ಕೆ ಇಲ್ಲಿ ನಡೆದ ನಟನೆಯೆಷ್ಟು, ಕೃತ್ರಿಮದ ಹಂಚಿಕೆ ಎಷ್ಟು ತಿಳಿದಿದೀರ? ನಾನಷ್ಟು ಬಲ್ಲೆ. ಎಲ್ಲ ಇಲ್ಲ. ಆದರೂ ಅಷ್ಟೇ ಸಾಕಾಯ್ತು ನಂಗೆ. ಚೆನ್ನಾಗಿ ನೋಡಿ. ಅದಕ್ಕೆ ಆಗಬೇಕಾದ ಗತಿ—ನಾನು ಮಾಡಿರೋದು. ಈಗಲಾದರೂ ತಿಳೀತೆ? ಅಯ್ಯೋ ಹುಚ್ಚರೆ! ತಿರಸ್ಕರಿಸಬೇಕಾದ ಕಡೆ ಪುರಸ್ಕ ರಿಸಿ ಪಾಪವನ್ನು ಹೆಚ್ಚಿಸಿದೀರಿ. ಜಾತಿ ಕೆಟ್ಟವನನ್ನು ಹೊರಗೆ ಹಾಕುತ್ತೀರಿ; ನೀತಿ ಕೆಟ್ಟವನನ್ನು ಕರೆದು ಸನ್ಮಾನಿಸುತ್ತೀರಿ, ಒಲೈಸುತ್ತೀರಿ, ಮೆರೆಯ ಗೊಡುತ್ತೀರಿ, ನೀವೇ ಮೆರೆಯಿಸುತ್ತೀರಿ—ನೀವೇ, ಬಲಿಯಾದವರೇ. ನೀವೇ ಆಕರ್ಷಣೆ—ಅವರಿಗೆ. ಅವರ ತಪ್ಪಿಗೆ ಕಾರಣರು ನೀವೇ. ಅವರ ಪಾಪ ನಿಮ್ಮದೇ. ಈ ರೀತಿ ಕಟ್ಟೋದೇನು—ನೀವು? ಜಳ್ಳು ಸಮಾಜ! ಸುಳ್ಳು ಸಮಾಜ! ಈಗಲಾದರೂ ಈ ಮರ್ಯಾದೆಯ ಉರಿ ಹೊಸ ಬೆಳಕನ್ನು ಚೆಲ್ಲಲಿ! ನಿಮ್ಮ ಮುಚ್ಚಿದ ಕಣ್ಣನ್ನು ತೆರೆಯಲಿ! ಇದರ ಮೇಲೆ ಬೀಸಿದ ಗಾಳಿ ನಿಮ್ಮನ್ನು ನಿದ್ದೆಯಿಂದ ಎಚ್ಚರಿಸಲಿ! ನೋಡಿ, ನೋಡಿ ಪ್ರಕೃತಿಯ ಕೋಪ—ಅನೀತಿಯ ಮಾನವನ ಮೇಲೆ, ಏನು ಗಾಳಿ! ಏನು ಉರಿ!

ನಂಗೆ ಪ್ರೇರಣೆ ಆವೇ. ನಾನು ಉಪಕರಣ ಮಾತ್ರ....ಹುಂ....ಇದೇನು ಮಹಾ ಮಾಡಿದಹಾಗಾಯ್ತು, ಹುಚ್ಚು, ಅಂತೀರ? ನಿಜ. ಇಷ್ಟಪಟ್ಟಷ್ಟು ಸುಟ್ಟಿಲ್ಲ ಅದು ಸಾಧ್ಯವಿಲ್ಲ....ವ್ಯಥೆ!....ಆಗಬೇಕಾದದ್ದೆಲ್ಲ ನಾಶವಾಗಿಲ್ಲ. ಇದು ಕೇವಲ ಚಿನ್ಹೆ....ಇನ್ನೂ ಬಹಳ ಇವೆ....ನಿಮಗೆ ಬಿಟ್ಟಿದೀನಿ.... ...ನಿಮಗೆ? ಗೊತ್ತಾಯ್ತೆ ?.. ಇನ್ನೇನಿದೆ ನಾನು ಮಾಡೋದು ?... ಹುಂ! ಹುಂ!.... ಇನ್ನೊಂದು....ನಾನೂ ಎರಡು ಕೊಲೆಯಿಂದ ಹುಟ್ಟಿದೋನು .. ಎರಡು ಕೊಲೆಯಿಂದ....ಅಯ್ಯೋ!....ನನ್ನ ಸ್ಥಳವೂ ಅಲ್ಲಿ! ಅಲ್ಲಿ!" ಈ ಕಡೆಯ ಕೂಗು ಹೊರಬೀಳುವ ಹೊತ್ತಿಗಾಗಲೇ ಗುರು ಮಹಲಿನ ಬಳಿಗೆ ಓಡಿ ಹೋಗಿದ್ದ. ಏನಾಯಿತೆಂದು ಜನರಿಗೆ ತಿಳಿಯುವಷ್ಟರಲ್ಲೇ ಗುರು ಉರಿಯನ್ನು ಹೊಕ್ಕುಬಿಟ್ಟ. ಹಾಹಾಕಾರವಾಯಿತು. ಅಷ್ಟು ಜನ ತಾವೂ ಓಡಿಹೋಗಿ ಉರಿಯಲ್ಲಿ ನುಗ್ಗಲು ನೋಡಿ, ಸಾಧ್ಯವಾಗದೆ ನಿಂತರು. ಇತರರು ದಿಗ್ಭ್ರಮೆಯಿಂದ ನೋಡುತ್ತಿದ್ದರು. ದಾಸ ಒಬ್ಬನೇ ಮುಂದುವರಿದ. ಹತ್ತಿರದ ಒಬ್ಬಿಬ್ಬರು ಹಿಡಿದುಕೊಂಡರು. ಮುದುಕನಿಗೆ ಆವೇಶ ಬಂದಿತ್ತು, ಆದರ ಶಕ್ತಿ ಬಂದಿತ್ತು. "ಅಯ್ಯೋ ಬಿಡಿ! ಬಿಡಿ! ಈ ಮನೆ ಉಪ್ಪು ತಿಂದು, ಮನೆ ಮಗ ಉರಿದು ಹೋಗ್ತಿದ್ದರೂ ನೋಡ್ತಾ ನಿಂತಿರಲೆ? ಬಿಡಿ! ಅವನ್ನ ತರ್‍ತೀನಿ ಇಲ್ಲದೇ ಇದ್ದರೆ ದಣಿಯೋರಿಗೆ ಯಾವ ಮುಖ ತೋರಿಸಲಿ?" ಎಂದು ಕೊಡಹಿಕೊಂಡು ಗುರುವನ್ನು ಹಿಂಬಾಲಿಸಿಬಿಟ್ಟ. ಇಬ್ಬರೂ ಹಿಂತಿರಿಗಲಿಲ್ಲ.

ಮಂಟಪದಿಂದ ಮಂತ್ರಿಗಳು ಹಿಂತಿರಿಗಿದಾಗ ಸಾಹುಕಾರರ ಮೆರೆವಣಿಗೆ ಹೊರಟಿತ್ತು. ತಂಜಾವೂರಿನ ಜೋಡಿವಾಲಗ, ಬ್ಯಾಂಡು, ಎಲೆಕ್ಟ್ರಿಕ್ ದೀಪದ ಸಾಲು, ಹೂವಿನ ಮಂಟಪದ ಮೋಟಾರು, ಎರಡು ಪಕ್ಕಗಳಲ್ಲೂ, ಹಿಂದೆ ಮುಂದೆಯೂ, ಮನೆಯ ಜಗಲಿಗಳ ಮೇಲೆ, ಕಿಟಕಿಯ ಬಾಗಿಲುಗಳಲ್ಲಿ, ಜನಸಂದಣಿ. ಜಯಕಾರ. ಮೆರೆವಣಿಗೆ ಕುಸುಮಳ ಮದುವೆಯ ಮೆರೆವಣಿಗೆಯನ್ನು ನಾಚಿಸಿತ್ತು. ಆದರೆ ಅದು ಅರ್ಧ ಫರ್ಲಾಂಗ್ ಹೋಗುವುದರೊಳಗಾಗಿ ಮಹಲಿನ ಉರಿ ಕಂಡಿತು. ಇನ್ನೊಂದು ಕ್ಷಣದಲ್ಲಿ ಹತ್ತು ಜನರಿಂದ ಸುದ್ದಿಯೂ ಮುಟ್ಟಿತು. ಹಾಹಾಕಾರ ಇಲ್ಲಿಯೆ ಮೊದಲಾಯ್ತು. ಮೆರೆವಣಿಗೆ, ನಿಂತಿತು. ಸಾಹುಕಾರರು "ಮಹಲಿಗೆ!

ಮಹಲಿಗೆ! ಬೇಗ!" ಎಂದು ಕೂಗಿಕೊಂಡರು. ಮೋಟಾರುಕಾರು ಹಾಗೆಯೇ ಮಹಲಿಗೆ ಧಾವಿಸಿತು. ಕುಸುಮ, ನಂಜಪ್ಪ ಇತರ ನಂಟರು ಇಷ್ಟರು ಇವರನ್ನು ತುಂಬಿಕೊಂಡು ಹತ್ತಾರು ಕಾರುಗಳು ಹಿಂಬಾಲಿಸಿದುವು. ಉಳಿದಿದ್ದ ಮರುಳೂರೂ ಮಹಲಿಗೆ ಓಡಿತು.

ಕಾರು ಮಹಲಿನ ಬಳಿ ನಿಂತಾಗ, ಮಹಲು ಉಳಿಸಲಾಗದಂತೆ ಉರಿಯುತ್ತಿತ್ತು. ಗುಮ್ಮಟ, ಛಾವಣಿಗಳು, ಉರಿದು ಕುಸಿದು ಒಳಗೆ ಬಿದ್ದು ಬೂದಿಯಾಗಿದ್ದುವು; ತೊಲೆಗಳು, ಕಿಟಕಿ ಬಾಗಿಲುಗಳು, ಅಲ್ಲಲ್ಲಿ ಕಪ್ಪಾಗಿ, ಕೆಂಡವಾಗಿ, ಉರಿಯಾಗಿ ಕಾಣುತ್ತಿದ್ದುವು. ಮಸಿ ಹತ್ತಿದ ಬೋಳುಗೋಡೆಗಳು ಮಾತ್ರ ನಿಂತು ಸಾಹುಕಾರರನ್ನು ಅಣಕಿಸಿದುವು. ಈ ದೃಶ್ಯವನ್ನು ಕಂಡು ಅವರ ಕೈಕಾಲುಗಳೇ ಉಡುಗಿಹೋದುವು. ಕುಳಿತಿದ್ದಂತೆಯೇ "ಆರಿಸಿ! ಆರಿಸಿ! ಅಯ್ಯೋ! ಮರ್ಯಾದೆ ಮಹಲು— ನನ್ನ ಮರ್ಯಾದೆ ಮಹಲು ಉರಿದು ಹೋಗ್ತಿದೆಯಲ್ಲ! ಕಾಣೋದಿಲ್ಲವೇ?" ಎಂದು ಕೂಗಿಕೊಂಡರು. "ಯಾರು? ಯಾವ ದುರಾತ್ಮರು?........" ಮುಂದೆ ಅವರ ಬಾಯಿ ಹೊರಡಲಿಲ್ಲ. ಯಾರೂ ಉತ್ತರ ಕೊಡಲಿಲ್ಲ. "ಯಾರು, ಏನಾಯ್ತು?" ಮತ್ತೆ ಮತ್ತೆ ಕೇಳಿದರು. "ಗುರಪ್ಪನೇ...." ಸುತ್ತ ನೆರೆದಿದ್ದ ಗುಂಪಿನಲ್ಲಿ ಯಾರೋ ಹೇಳಿದರು! "ಯಾರು!....ಆ!.... ನನ್ನ ಮಗನೇ?....ನನ್ನ ಮಗನೇ ಉರಿ ಹಾಕಿದನೆ? ನಿಜವೆ?....ಆಂ! ಆಂ! ಅಯ್ಯೋ ಗುರು! ಗುರು! ಗುರು! ಎಲ್ಲಿ ಅವನು? ಎಲ್ಲಿದೀಯಪ್ಪಾ ಬಾ!" ಸಾಹುಕಾರರು ಯಾತನೆಯಿಂದ ಚೀರಿದರು. ಆದರೆ ಉತ್ತರ ಬರಲಿಲ್ಲ. ಕ್ಷಣದಲ್ಲಿ ಅವರ ಭಯ ಇಮ್ಮಡಿಸಿತು. "ಎಲ್ಲಿ, ನನ್ನ ಮಗ? ಕರೆತನ್ನಿ!" ಎಂದು ಮತ್ತೆ ಕೂಗಿದರು. ಇನ್ನೂ ಉತ್ತರ ಬರಲಿಲ್ಲ. "ಏನಾಯ್ತು? ಏನಾಗಿದೆ? ಹೇಳಿ! ಅವನೂ ಉರಿದು ಹೋದನೇ ಹೇಳಿ! ಹೇಳಿ!" ಎಂದು ಅನುಮಾನ ಭಯಗಳಿಂದ ಮತ್ತೂ ಕೇಳಿದರು. ಮೌನವೇ ಅವರಿಗೆ ಉತ್ತರ ಕೊಟ್ಟಿತು. ಸಾಹುಕಾರರು ಇನ್ನು ಕೂಗಿಕೊಳ್ಳಲಿಲ್ಲ. 'ಆಂ! ನನ್ನ ಮಗನೂ ಉರಿದುಹೋದ! ನನ್ನ ಮರ್ಯಾದೆ ಮಹಲೂ ಉರಿದು ಹೋಯ್ತು! ನನ್ನ ಮರ್ಯಾದೆ ಮನೆತನ ಕೊನೆಯಾಯ್ತು ನನ್ನ ಕಣ್ಣು ಮುಂದೇ....ಇನ್ನು ಈ ಬಾಳೇ?....ಬೇಡ!" ಸಾಹುಕಾರರು ತಮಗೇ

ಕುಗ್ಗಿದ ಒಳಧ್ವನಿಯಲ್ಲಿ ಹೇಳಿಕೊಂಡರು. ಎದೆ ಹಿಡಿದುಕೊಂಡರು, ಹಿಂದ-ಕ್ಕೊರಗಿದರು, ಸುಮ್ಮನಾದರು. ಕ್ಷಣ ಹೊತ್ತಾಯಿತು. ಇನ್ನೂ ಒಂದು ಕ್ಷಣವಾಯಿತು. ಅದೇ ಮೌನ. ಪಕ್ಕದ ಭೋಗಪ್ಪ ಸಾಹುಕಾರರ ಕಡೆಗೆ ನೋಡಿದ, ಗಾಬರಿಯಾದ. "ಸಾಹುಕಾರ್ರೆ! ಸಾಹುಕಾರ್ರೆ!" ಎಂದು ಕೂಗಿದ, ಅಲುಗಿಸಿದ. ಫಲವಿಲ್ಲ—ಎದೆಯೊಡೆದು ಹೋಗಿತ್ತು.

ಸಾಹುಕಾರರು ಇನ್ನೂ ಹಾಗೆಯೇ ಕುಳಿತಿದ್ದರು—ವೈಭವದ ಮೆರೆವಣಿಗೆಯಲ್ಲೇ ಸನ್ಮಾನದ ಮಾಲೆಗಳನ್ನು ಹಾಕಿಕೊಂಡೇ, ತಮ್ಮ ಎಂದಿನ ಘನತೆಯಿಂದಲೇ, ತಮ್ಮದೇ ಮರ್ಯಾದೆ ಮಹಲಿನ ಉರಿಯ ಹಿನ್ನೆಲೆಯ ಬೆಳಕಿನಲ್ಲಿ.

